# ಜಾರುವ ದಾರಿಯಲ್ಲಿ

ಶಿವರಾಮ ಕಾರಂತ

1952

ಬೆಲೆ: 4-0-0

ಹರ್ಷ ಮುದ್ರಣ, ಪ್ರಕಟಣಾಲಯ, ಪುತ್ತೂರು. ದ. ಕ.

# ಮುಮ್ಮಾತು

ಈ ಕಾದಂಬರಿ ಕೊಡಲೆಳಸುತ್ತಿರುವ ಸಾಮಾಜಿಕ ಚಿತ್ರವು-ಮಹಾಯುದ್ಧದ ಕಾಲದ--ನಮ್ಮ ನಾಡಿನ 'ಕಾಳೂರೆಂ'ಬ ಕಾಲ್ಪನಿಕ ನಗರದ್ದು. ವಾಸ್ತವಿಕವಾಗಿ ಅಂಥ ಊರಿಲ್ಲ; ಅದು ಇಲ್ಲಿ ಚಿತ್ರಿಸಿದಂತೆ ಉತ್ತರ ಕನ್ನಡದ ಪಟ್ಟಣವೂ ಅಲ್ಲ. ಈ ಕಥಾವಸ್ತುವಿನ ಮಟ್ಟಿಗೆ, ಭಾರತದ ಎಲ್ಲ ನಗರಗಳೂ, ನೆರೆಕರೆಗಳೂ ಯುದ್ಧಕಾಲದಲ್ಲಿ ಹೊಂದಿದ ನೈತಿಕ ಪತನದ ದಾರಿಗಿಳಿದುವು. ಇಲ್ಲಿ ಚಿತ್ರಿಸಿರುವ ವ್ಯಕ್ತಿಗಳು ಎಲ್ಲೆಲ್ಲಿಯೂ ಕಾಣಸಿಗುವ ಜನಸಾಮಾನ್ಯರು. ವಾಸ್ತವಿಕ ಊರ ಪಾತ್ರಗಳನ್ನು ಹೆಸರಿಸಿದಲ್ಲಿ-'ಅವರು-ಇವರು' ಎಂದೆನ್ನಬಾರದೆಂದು, ಕಾಲ್ಪನಿಕ ಹೆಸರನ್ನು ಕೊಟ್ಟುದಾಗಿದೆ: ಕಾರವಾರದಿಂದ ದಕ್ಷಿಣ ಕನ್ನಡದ ಕಾಸರಗೋಡಿನ ತನಕ ಇರುವ ಕಡಲ ಕರಾವಳಿ, ರೇವುಗಳೆಲ್ಲ ಒಂದೇ ತೆರನಾದುವು. ಇಲ್ಲಿನ ಬಣ್ಣನೆ ಅಲ್ಲೆಲ್ಲಿಗೂ ಅನ್ವಯಿಸಬಹುದು.

ಮಾನವನ ಅತಿಯಾಸೆ, ಲಾಭಕೋರತನಗಳು--ಎರಡನೆಯ ಯುದ್ಧಕಾಲದಲ್ಲಿ ಹೇಗೆ ಉಲ್ಬಣಿಸಿ ನಮ್ಮ ಜನಜೀವನದ ನೈತಿಕ ನೆಲೆಯನ್ನು ಕುಸಿದುವು-ಎಂಬುದು ಇಲ್ಲಿನ ಮುಖ್ಯಪ್ರಶ್ನೆ. ಜನ ನಡೆಯುವ ದಾರಿ-ನಯವಾಗಿ, ಜಾರತೊಡಗಿತು; ವಿವಿಧ ರೀತಿಯ ಸಾಮಾಜಿಗಳಿಂದ ತುಂಬಿತು. ಲಾಭಕಾಂಕ್ಷೆಯ ಓಟವು ನಿರಾತಂಕವಾಗಿ ಸಾಗಿತು. ಅಲ್ಲಿ ಚಲಿಸತೊಡಗಿದವನ ವೇಗವು ಮಿತಿಮೀರಿದಂತೆ ನೈತಿಕ ತೋಲವೂ ಕಳೆಯುತ್ತ ಬಂದಿತು. ಇಂತಹ ನೆಲದಲ್ಲೂ ಧೃತಿಗೆಡದೆ, ನೈತಿಕ ತೋಲ ಕೆಡಿಸಿಕೊಳ್ಳದೆ ನಡೆಯಲು ಯತ್ನಿಸಿದ ಡಾಕ್ಟರು ಶಿವಪ್ಪನವರ ಚಿತ್ರ-ಅಪೂರ್ವವಾದರೂ ಅಲಭ್ಯವಲ್ಲ. ಗಂಪು ಸರದಾರನ ಚಿತ್ರ ಇನ್ನೊಂದು ಬಗೆಯದು. ಅವನ ಶೀಲದಲ್ಲಿ ಹುದುಗಿದ ನಿಷ್ಕಾಪಟ್ಯ, ಸರಳತೆ, ಉದಾರ ಗುಣಗಳು ಅವನನ್ನು ಉಳಿದವರಿಂದ ಬೇರೆಯಾಗಿ ಎತ್ತಿತೋರಿಸುತ್ತವೆ.

ಈ ಕಥಾವಸ್ತುವಿಗೆ ಅವಶ್ಯವಾದಷ್ಟೇ ಅಂಶವನ್ನು 'ಗುಲಾಬಿ'ಯನ್ನು ಚಿತ್ರಿಸುವಾಗ ಕೊಟ್ಟಿದೆ. ಅವಳ ಮಾನಸಿಕ ಲೋಕವು ಸ್ವತಂತ್ರವಾದೊಂದು ಕಾದಂಬರಿಗೇನೆ ವಸ್ತುವಾಗಬಲ್ಲುದು.

ಈ ಕಾದಂಬರಿಯನ್ನು ನಮ್ಮ ಗೆಳೆಯರಾದ ಶ್ರೀ ಜಿ. ಎಂ. ಮಂಜುನಾಥಯ್ಯನವರ ಶುಂಠಿಕೊಪ್ಪದ ಮನೆಯಲ್ಲಿ ಕುಳಿತು, ಹದಿನೆರಡು ದಿನಗಳಲ್ಲಿ ಬರೆದೆ. ಕೊನೆಯ ಆರು ದಿನಗಳಲ್ಲಿ ನನ್ನನ್ಯೈಯ್ಯ್ಯೂ ಜ್ವರದಿಂದ ಕಾವುಗೊಂಡಿತ್ತು. ಮುಂದೆ ಅದು ನಿಮೋನಿಯಾ ರೂಪಕ್ಕೆ ತಿರುಗಿತು. ಹಾಗಿದ್ದ ಮೇಲೆ—ಅಲ್ಲಿನ ವೈದ್ಯರ ಪಾಲಿಗೆ ನಾನು ರೋಗಿಯಾದಂತಾಯಿತು. ಈ ಕಾದಂಬರಿಯ ವೈದ್ಯರು ನಾನು ಕಂಡ ಒಬ್ಬ ವೈದ್ಯರಲ್ಲ-ನಾಲ್ಕಾರು ವೈದ್ಯರಿಂದ ಸೃಷ್ಟಿಸಿದ ವ್ಯಕ್ತಿ. ವೈದ್ಯನಲ್ಲದ ನಾನು, ವೈದ್ಯಕೀಯ ಅನುಭವವಿಲ್ಲದೆ ತಪ್ಪಿ ಬೀಳುವುದೂ ಸಹಜ. ವೈದ್ಯನ ಮಾನವತೆಯ ದೃಷ್ಟಿಯನ್ನು ಇಲ್ಲಿ ನಾನು ಚಿತ್ರಿಸಿದ್ದೇನೆಯೇ ಹೊರತು, ವೈದ್ಯ ಶಾಸ್ತ್ರಜ್ಞನನ್ನು ಚಿತ್ರಿಸುವ ಯೋಗ್ಯತೆ ನನಗೆ ಬಾರದು.

ಬರೆದು ಮುಗಿಸಿದಾಗ ಇದು ಇಷ್ಟೊಂದು ಗಾತ್ರಕ್ಕೆ ಬೆಳೆದೀತೆಂದು ನಾನು ಎಣಿಸಿರಲಿಲ್ಲ. ಬರೆದ ಮೇಲೆ-ಕಾಗದದ ಮುಗ್ಗಟ್ಟಿಗೆ ತಕ್ಕಂತೆ ಪುಟಗಳನ್ನು ಕಡಿಯದೆಯೆ ತಮ್ಮ ಮುಂದಿರಿಸಿದ್ದೇನೆ. ಇದು ನನ್ನ ಈ ವರ್ಷದ ಕಾಣಿಕೆ-ಕಾದಂಬರಿ ಪ್ರಿಯರಿಗೆ.

ಪುತ್ತೂರು. ದ. ಕ.]
28 - 3 - 52 ]

ಇತಿ,
**ಶಿವರಾಮ ಕಾರಂತ**



# ಜಾರುವ ದಾರಿಯಲ್ಲಿ

## ಅಧ್ಯಾಯ ೧.

ಕಾಳೂರು ಎಂಬ ಹೆಸರಿನಲ್ಲಿಯೆ ಭವ್ಯತೆಯಿಲ್ಲ, ಚೆಲುವೂ ಇಲ್ಲ. ಆದರೆ ಬಹು ಕಾಲದಿಂದಲೂ ಬಳಕೆಗೆ ಬಂದಿರುವ ತಮ್ಮ ಊರಿನ ಹೆಸರಿನ ವಿಚಾರದಲ್ಲಿ ಯಾವ ಊರವರಾದರೂ ತಾಳ್ಮೆಯಿಂದ ಇರುವುದೇ ಹೆಚ್ಚು. ಹೆಸರಿನಲ್ಲೇನಿದೆ?-ಎಂಬ ವೇದಾಂತ ಬೇರೆ ಇದೆಯಲ್ಲ. ಹೀಗಾಗಿ ಕಾಳೂರಿನ ಜನರಿಗೆ ತಮ್ಮ ಊರಿನ ಹೆಸರಿನ ವಿಚಾರದಲ್ಲಿ ಯಾವೊಂದು ಚಿಂತೆ ಬೇಸರಗಳೂ ಇರಲಿಲ್ಲ. ಊರಿನ ಹೆಸರಿನ ವಿಚಾರ ಬೇಸರ ಪಡುವುದಂತಿರಲಿ— ನಮ್ಮ ನಮ್ಮ ಹಿರಿಯರು ನಮಗೇನೆ ಇರಿಸಿದ ಹಲವಾರು ಒರಟು, ನಿರಾಕರ್ಷಕ, ಅಸಹ್ಯವಾದ ಹೆಸರುಗಳ ವಿಷಯದಲ್ಲೂ, ನಾಮಧಾರಿಗಳಾದವರು ಏನುಮಾಡಲು ಬರುತ್ತದೆ? ಮೇಲಿಂದ ಮೇಲೆ ಕರೆದು, ಕೇಳಿ, ರೂಢಿಯಾಯಿತೆಂದರೆ-ಹೆಸರಿನ ಚೆಲುವು, ಅಸಹ್ಯಗಳೆರಡೂ ಮರವೆಯಾಗುತ್ತವೆ. ನಿತ್ಯ ರೂಢಿಯಿಂದ ಕಾಣುವ ಮಿತ್ರನೊಬ್ಬನ ಡೊಂಕು ಮೂಗೂ ಸಹ ಮನಸ್ಸಿಗೆ ಬೇಸರ ಹುಟ್ಟಿಸುವುದಿಲ್ಲ. ಅಲ್ಲದೆ "ಕಾಳೂರು" ಎಂಬುದಕ್ಕಿಂತ ಸೊಟ್ಟ ಹೆಸರಿನ ಹಳ್ಳಿ, ಪಟ್ಟಣಗಳು ಭಾರತಲ್ಲೆಷ್ಟಿಲ್ಲ! ಇರುವ ಕೋಟ್ಯಂತರ ಗ್ರಾಮಗಳಿಗೆ ಚೆಲುವಿನ ಹೆಸರನ್ನು ತಂದುಕೊಡುವುದಾದರೂ ಎಲ್ಲಿಂದ? ಒಂದು ಕಾಲದಲ್ಲಿ ಕಾಳೂರಿಗೂ ಭವ್ಯ ಹೆಸರೊಂದಿತ್ತು—ಅಂತೆ. ನಿತ್ಯ ಜೀವನದಲ್ಲಿ 'ನಮ್ಮ ಕಾಳೂರು ಚಿಂತೆಯಲ್ಲಿ, ಎಷ್ಟೋ ಊರುಗಳಿಗಿಂತ ಬೇಕು; ಇದೇ ಚಂದ' ಎಂದು ಹಿಗ್ಗುವ ಪ್ರಜೆಗಳೂ ಇದ್ದಾರೆ.

ಕಾಳೂರು ಪೇಟೆಯ ಊರು. ಅರಮನೆ, ಉದ್ಯಾನ, ಅಲಂಕಾರಗಳಿಲ್ಲದೆ ಹೋದರೂ, ಅಸಹ್ಯವೂ ಇಲ್ಲ. ಜನರು ಸರಳರು, ಅಲ್ಪ ತೃಪ್ತರು. ಶ್ರೀಮಂತರು ತುಂಬಿ ತುಳುಕಾಡುವ ಊರಲ್ಲ; ಶ್ರೀಮಂತಿಕೆಯುಳ್ಳ ನಾಲ್ಕೆಂಟು ಮಂದಿಯೂ ತಮ್ಮ ದುಡ್ಡಿನ ಜಂಬ ಮೆರೆಯಿಸುವವರಲ್ಲ. ಬಡತನವೇ ಊರಿನ ಮುಖಮುದ್ರೆಯೆಂದರೂ ತಪ್ಪಿಲ್ಲ. ಬಡವರಾದವರ ಮನಸ್ಸಿನಲ್ಲಿ ಶ್ರೀಮಂತರ ವಿಷಯದಲ್ಲಿ ಗೌರವವಿತ್ತೇ ಹೊರತು, ಅಸೂಯೆಯಿರ

ಲಿಲ್ಲ. ಇದಕ್ಕೆ ಪರಂಪರೆಯಿಂದ ಬಂದ ವೇದಾಂತ ಸಹಾಯವಾಗಿತ್ತು. 'ಎಲ್ಲವೂ ಪಡೆದು ಬಂದದ್ದು, ಅದೃಷ್ಟ' ಎಂಬಿವೇ ರೂಢಿಯ ನಾಣ್ನುಡಿಗಳು ಶಾಸನದಂತೆ ಮನಸ್ಸಿನ ಮೇಲೆ ಪರಿಣಾಮಕಾರಿಯಾಗಿದ್ದುವು. ಅಲ್ಲದೆ ತಮ್ಮ ಊರಿನಲ್ಲಿ ನವಕೋಟಿ ನಾರಾಯಣರಿಲ್ಲವಾದರೂ, ಬೆರಳಿಟ್ಟು ತೋರಿಸಲು ಒಬ್ಬಿಬ್ಬರು ಶ್ರೀಮಂತ ವರ್ಗದಾರರೋ, ವ್ಯಾಪಾರಿಗಳೋ ಇದ್ದಾರೆ. ತಮ್ಮ ಊರಿನಲ್ಲಿ ಶ್ರೀಮಂತರಿದ್ದಾರೆ–ಎಂಬುದೂ ಆ ಹೆಮ್ಮೆಗೆ ಕಾರಣ. ನಮ್ಮ ಊರಲ್ಲಿ ಉದ್ಯಾನವಿದೆ, ಸರಸ್ಸಿದೆ, ದೇವಾಲಯವಿದೆ— ಎಂದರೆ ಸಂತೋಷ ಪಡಲು, ಅವು ನಮ್ಮದೇ ಆಗಬೇಕಿಲ್ಲವಷ್ಟೆ?

ಹೀಗೆ ಕಾಳೂರಿನ ಸಿರಿವಂತರಲ್ಲಿ ಊರ ಜನಗಳಲ್ಲಿ ಮನ್ನಣೆ ಗೌರವ ಸಂಪಾದಿಸಿರುವ ಜನಗಳಲ್ಲಿ, ಇಬ್ಬರು ಮುಖ್ಯ ವ್ಯಕ್ತಿಗಳನ್ನಾದರೂ ನಾವು ಹೆಸರಿಸಬಹುದು. ಅವರಲ್ಲಿ ಸಾಹುಕಾರ ವಾಸಪ್ಪಯ್ಯನವರೊಬ್ಬರು; ಜಮೀನುದಾರ ಶ್ರೀಪತಿ ರಾಯರು ಮತ್ತೊಬ್ಬರು. ಹೆಚ್ಚಾಗಿ ಊರಿಗೆ ಹೊಸಬರಾಗಿ ಬರುವ ಸರಕಾರಿ ನೌಕರರನ್ನು ಕರೆದು, ಅವರ ಯೋಗ್ಯತೆಗೆ ತಕ್ಕ ಮರ್ಯಾದೆ ಸಲ್ಲಿಸುವ ಶಕ್ತಿಯಿದ್ದವರೆಂದರೆ ಅವರಿಬ್ಬರೇ. ಹೊಸಬರಾಗಿ ಬಂದವರು-ವಸತಿಗೆ, ಊಟಕ್ಕೆ ಎಲ್ಲಿಗೆ ಹೋಗಲಿ–ಎಂದು ತಲೆ ತುರಿಸುವ ಮುಂಚೆಯೇ, ಊರಿನ ಒಬ್ಬನಲ್ಲ ಒಬ್ಬ–'ಶ್ರೀಪತಿ ರಾಯರಲ್ಲಿಗೊ? ವಾಸಪ್ಪಯ್ಯನವರಲ್ಲಿಗೋ' ಎಂದು ಸೂಚನೆ ಕೊಡುವಂಥ ಪ್ರಶ್ನೆ ಕೇಳುತ್ತಾನೆ. ಬಂದವನ ಯೋಚನೆ ಕಡಿಮೆಯಾಗಿಯೇ ಆಗುತ್ತದೆ. ಕಾಳೂರಿನಲ್ಲಿ-ಹೆಸರಾದ ಹೋಟೇಲುಗಳೇ? ಮತ್ತೊಂದೇ? ಹೀಗಾಗಿ ಹೊರಗಿಂದ ಯಾವ ಗಣ್ಯ ವ್ಯಕ್ತಿ ಬಂದರೂ, ಆತ ಯಾರೇ ಇರಲಿ, ಮೊದಲಿಗೆ ಅರಸಿಕೊಂಡು ಕೊಂಡು ಹೋಗುವ ಮನೆಯಾಗಲಿ, ವ್ಯಕ್ತಿಯಾಗಲಿ—ವಾಸಪ್ಪಯ್ಯನವರದು, ಇಲ್ಲದೆ ಹೋದರೆ ಶ್ರೀಪತಿ ರಾಯರದು. ಇದು ಕಾಳೂರಿನ ಮತ್ತು ಸುತ್ತುಮುತ್ತಲಿನ ಹಳ್ಳಿಗಳಲ್ಲಿ ಬಹುಕಾಲದಿಂದ ನಡೆದು ಬಂದ ಸಂಪ್ರದಾಯ. ಹಾಗೆಯೇ ಊರಲ್ಲಿ, ಥಟ್ಟನೆ ಆಪತ್ತಿಗೆ ನಾಲ್ಕು ವರಹ ಬೇಕಾದರೆ, ತಂತಮ್ಮಲ್ಲಿನ ಒಳಜಗಳಕ್ಕೊಂದು ತೀರ್ಪು ದೊರೆಯಬೇಕಾದರೆ--ಊರವರು ಹೋಗುತ್ತಿದ್ದುದೂ ಅಲ್ಲಿಗೇನೆ. ಹಾಗೆಂದು ಊರಿನ ಒಳಜಗಳಗಳಲ್ಲಿ ಕೈತುರುಕಿ, ಅದರಿಂದ ಸ್ವಪ್ರತಿಷ್ಠೆ ಬೆಳೆಸಿಕೊಳ್ಳುವ ಇಚ್ಛೆ ಅವರಿಬ್ಬರಿಗೂ ಇಲ್ಲ. ಅವರಿಗೆ ದೊರೆಯುತ್ತಿರುವ ಗೌರವ ಸಿರ್ವಂಚನೆಯಿಂದ ಬರುತ್ತಿರ

ವಾಗ, ಕೃತಕ ದಾರಿಗಳೇತಕ್ಕೆ? ಹೀಗಾಗಿ ಈ ಎರಡು ಮನೆತನಗಳೂ ಮರ್ಯಾದೆ, ಸಿರಿವಂತಿಕೆಗಳಿಂದಲೇ ಮೆರೆದು ಬಂದವುಗಳು.

ಕಾಳೂರಿನ ಜನಸಂಖ್ಯೆ ಸುಮಾರು ೫೦೦೦ದಷ್ಟಿರುವಾಗ, ಅಂಥ ಒಂದು ಊರಲ್ಲಿ 'ಬೆರಳು ತೋರಿಸಬಹುದಾದ ಜನ ಒಬ್ಬಿಬ್ಬರೇ?' ಎಂದು ಕೇಳಿದರೆ, ಅದಕ್ಕೆ ಪ್ರತ್ಯುತ್ತರ-ಅಲ್ಲಿ ಅಗಣ್ಯರು ಯಾರೂ ಇಲ್ಲ. ಹೆಸರಿದ್ದೂ ಇಲ್ಲದಂಥ ಪ್ರಜೆಗಳಿರುವ ಊರು ಅದಲ್ಲ. ತಾನೊಬ್ಬ ಕಸ—ಎಂದು ಯಾರೂ ತಿಳಿಯಬೇಕಾದ ಕಾರಣವಿಲ್ಲ. "ಓ ಆ ಹುಡುಗನು ಯಾರು?" ಎಂದು ಒಬ್ಬನನ್ನು ಅರಿಯದೆ ಕೇಳಿದರೆ "ಅವನೇ—ಇವನ ಮಗನಲ್ಲವೇ" ಎಂಬ ಸಂಬಂಧ, ಸಮೀಪತನವನ್ನು ಜನ ಹೇಳುತ್ತಾರೆ. ಪ್ರತಿಯೊಬ್ಬನ ವಿಷಯದಲ್ಲೂ ಒಬ್ಬರ ಪರಿಚಿತಿ ಇನ್ನೊಬ್ಬರಿಗಿದ್ದೇ ಇದೆ. ಅಂಥ ಊರಲ್ಲಿ —'ನನ್ನ ಗುರುತು ನಾಲ್ಕು ಮಂದಿಗಿದೆ, ನಾಲ್ಕು ಜನಕ್ಕೆ ಬೇಕಾದವನಾಗಿ ಬಾಳುವುದು ಕಷ್ಟವಲ್ಲ' ಎಂಬ ವಿಶ್ವಾಸ ಪ್ರಜೆಯಲ್ಲುಂಟಾಗುತ್ತದೆ. ಊರಿನ ರೈತರು, ಕೂಲಿಗಳು, ಕಸಬುದಾರರು—ನಿರಕ್ಷರರಿರಲಿ, ಬಡವರರಿರಲಿ-- ಕಾಳೂರಿನಲ್ಲಿ ಪರಿಚಿತ ವ್ಯಕ್ತಿಯಾಗಿದ್ದಾರೆಯೇ ಹೊರತು, ಕಸವಾಗಿಲ್ಲ; ಕ್ಷುಪದಾರ್ಥವೆನಿಸಿಲ್ಲ.

ಊರಿನ ಗಣ್ಯವ್ಯಕ್ತಿಗಳಲ್ಲಿ ಹೆಸರಿಸಬಹುದಾದ ಮೂರನೆಯ ಮನುಷ್ಯ ರೆಂದರೆ ಡಾಕ್ಟರ್ ಶಿವಪ್ಪನವರು. ಅವರು ಹೆಸರಿಗೆ ಬಂದುದು ದುಡ್ಡಿನ ಬಲದಿಂದಲ್ಲ. ಅವರು ವೈದ್ಯವಿದ್ಯೆ ಪಾಸಾಗಿ ಬಂದು ಬರಿಯ ಎರಡು ವರ್ಷ ಗಳು ಸಂದಿವೆಯಷ್ಟೆ. ಅಂಥ ಒಬ್ಬ ಹೆಸರಾದ ಡಾಕ್ಟರೆನಿಸುವ ಮೊದಲೇನೆ ನಾಲ್ಕು ಜನಗಳ ಬಾಯಲ್ಲಿ 'ನಮ್ಮ ಡಾಕ್ಟರರು' ಎನ್ನುವ ಹೆಸರನ್ನು ಗಳಿಸಿ ದ್ದಾರೆ. ಅವರ ವಿಷಯದಲ್ಲಿ ಹೆಮ್ಮೆಯುಂಟಾಗಲು, ತಮ್ಮ ಊರಿಗೆ ಒಬ್ಬ ಡಾಕ್ಟರರಿದ್ದರಾಗದೇ-ಎಂಬ ಜನಗಳ ಬಯಕೆ ಕಾರಣವೆನ್ನಬೇಕು. ಅವರ ತಂದೆ ಬಡ ಶಾಲಾಮಾಸ್ತರ ಕಿಟ್ಟಪ್ಪನವರು. ಹುಡುಗನ ಬಾಲ್ಯ ಕಾಳೂರಿ ನಲ್ಲಿಯೇ ಕಳೆಯಿತು. ಊರಿನ ಮುಲ್ಕಿ ಓದು ಶಾಲೆಯಲ್ಲಿ ಮುಗಿಸಿದ್ದಾದ ಮೇಲೆ, ಅವನ ತಂದೆ 'ನೀನೂ ನನ್ನಂತೆಯೇ ಉಪಾಧ್ಯಾಯನಾಗು; ಉಪಾ ಧ್ಯಾಯರ ತರಬೇತಿ ಪಡೆದು ಬಾ' ಎಂದು ಬಯಸುವ ವೇಳೆಗೆ ಸಮನಾಗಿ, ಊರಿನಲ್ಲಿ ಒಂದು ಹೈಸ್ಕೂಲನ್ನು ತೆರೆದರು. ಅದು ಊರ ಹಿರಿಯರಾದ ಶ್ರೀಪತಿರಾಯರ ಮತ್ತು ವಾಸಪ್ಪಯ್ಯ ಮೊದಲಾದವರ ವರ್ಚಸ್ಸಿ

ಜಿಲ್ಲಾ ಬೋರ್ಡಿನ ಮೇಲೆ ಬಿದ್ದುದರ ದೆಸೆಯಿಂದೆನ್ನಬಹುದು. ಇದರಿಂದ ಊರಿಂದ ಊರಿಗೇ ಸಂತೋಷವಾಯಿತು. ಊರಿನ ಮಕ್ಕಳ ಶಿಕ್ಷಣ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಲ್ಲೇ ಕೊನೆಗೊಂಡು, ಅವರು ತಮ್ಮ ಹಿರಿಯರಂತೆ ಹಳ್ಳಿಗರಾಗಿ ದಿನ ಕಳೆಯುವ ಯೋಗ ಕೆಲವರ ಮಟ್ಟಿಗಾದರೂ ತಪ್ಪಿತು. ಊರಲ್ಲಿ ಕುಳಿತು ವ್ಯಾಪಾರ ಮಾಡುತ್ತಲೋ, ಬೇಸಾಯಮಾಡುತ್ತಲೋ ಇರುವ ಜನಕ್ಕೆ—ಸರಕಾರಿ ನೌಕರಿ, ವಕೀಲಿ ಉದ್ಯೋಗ, ಮೊದಲಾದ ಗೌರವಸ್ಥ ಉದ್ಯೋಗಗಳ ಕನಸುಕಾಣುವುದಕ್ಕೆ ಇದರಿಂದ ಸಹಾಯವಾಯಿತು. ಅಂಥ ವೇಳೆಯಲ್ಲಿ ಕಿಟ್ಟಪ್ಪ ಮಾಸ್ತರರಿಗಿರುವ ಒಬ್ಬನೇ ಗಂಡು ಹುಡುಗನು ಇಂಥ ಕನಸು ತೊಟ್ಟುದರಲ್ಲಿ ಸೋಜಿಗವೇನಿಲ್ಲ. ಊರಲ್ಲಿ ಹೊಸತಾಗಿ ತೆರೆಯುವ ಶಾಲೆಗೆ ಆದಷ್ಟು ಹೆಚ್ಚಿಗೆ ವಿದ್ಯಾರ್ಥಿಗಳನ್ನು ಸೇರಿಸಿ ಯಶಸ್ವಿಯಾಗಿ ಮಾಡಬೇಕೆಂಬ ಒತ್ತಾಸೆಗೆ ಇದು ಅನುಕೂಲವೂ ಆಗಿತ್ತು.

ಶಿವಪ್ಪ ಹೀಗಾಗಿ, ಹೈಸ್ಕೂಲನ್ನೇನೋ ಸೇರಿದ. ಸೇರಿದ ಮಾತ್ರದಿಂದ ಅವನ ಹಾಸುಗೆ ಹೂವಿನ ಹಾಸುಗೆಯಾಗಲಿಲ್ಲ, ಹತ್ತಿಯ ಹಾಸುಗೆಯೂ ಆಗಿರಲಿಲ್ಲ. ಕಾರಣ—ಕಿಟ್ಟಪ್ಪನವರ ಬಡತನ. ಅವರಿಗೆ ಹುಡುಗ ಒಬ್ಬನೇ; ಹಡೆದ ಹೆಣ್ಣುಮಕ್ಕಳ ಸಂಖ್ಯೆ ಐದಾರು ಇತ್ತು. ಪ್ರಾಥಮಿಕ ಶಾಲೆಯ ವೇತನ ಸಂಸಾರ ನಿರ್ವಹಣಕ್ಕೆ ಸಾಲದು; ಹಿರಿಯರಿಂದ ಬಂದ ಆಸ್ತಿಯ ತುಣುಕು ಚಿಕ್ಕದು. ಸ್ವಂತ ಗೈಮೆ ಮಾಡಲಾರದ ಭೂಮಿಯಿಂದ ಬರುವ ವರಮಾನ ಸಾಲದಾಗಿತ್ತು. ಹುಡುಗ ಮುಂದೆ ಓದುವುದೆಂದರೆ ಪುಸ್ತಕಕ್ಕೆ, ಸಂಬಳಕ್ಕೆ ನಾಲ್ಕೆಂಟು ರೂಪಾಯಿಗಳಾದರೂ ಬೇಕು. ಆ ಅನುಕೂಲತೆಯು ಕಿಟ್ಟಪ್ಪನವರಿಗಿಲ್ಲ. ಅವರೇನೆ ಬಿಡುವಿನ ಸಮಯದಲ್ಲಿ, ವಾಸಪ್ಪಯ್ಯನವರ ಅಂಗಡಿಗೆ ಹೋಗಿ ಕುಳಿತು, ಅವರ ಹಳೆಯ ಲೆಕ್ಕಗಳನ್ನು ನಕಲು ತೆಗೆಯುವುದಕ್ಕೊ, ವರ್ಗ, ಊಳಿಗಗಳನ್ನು ಇರಿಸುವುದಕ್ಕೊ ಸಹಾಯಮಾಡುತ್ತಿದ್ದರು. ಅದರಿಂದ ತಿಂಗಳಿಗೆ ಬರಿಯ ಮೂರು ರೂಪಾಯಿಗಳ ವೇತನ ದೊರೆತರೂ, ಸಾಹುಕಾರರ ಅಂಗಡಿಯಾದುದರಿಂದ-ಬೇಳೆ, ಮೆಣಸು, ಉಪ್ಪು, ಕೊತ್ತಂಬರಿಗಳಂತಹ ದಿನಸುಗಳು ಧರ್ಮಾರ್ಥವಾಗಿ ಒದಗುತ್ತಿದ್ದುವು. ಆದರೂ ಮಗನನ್ನು ಹೈಸ್ಕೂಲಿಗೆ ಕಳುಹಿಸುವುದಕ್ಕೆ ಅನುಮಾನಿಸಿದರು. ತಮ್ಮ ಸಾಹುಕಾರರನ್ನು ಕೇಳೋಣವೆಂದು ಬಾಯಿ ತೆರೆದರು. "ಯಾಕೆ, ಅನುಮಾನ ಕಿಟ್ಟಪ್ಪನವರೆ? ನಮ್ಮೂರಿನ ಶಾಲೆ,

ಹೊಸತಾಗಿ ತೆರೆದದ್ದು, ಹುಡುಗರಿಲ್ಲದೆ ಮುಚ್ಚಬಾರದಲ್ಲ! ಅಲ್ಲದೆ ನಿಮ್ಮ ಶಿವನೂ ಚುರುಕಿನ ಹುಡುಗ. ನಮ್ಮ ಮನೆಯ ಮಕ್ಕಳೂ ಸೇರುತ್ತಾರೆ ಇವನೂ ಸೇರಲಿ. ಪುಸ್ತಕಕ್ಕೊ, ಸಂಬಳಕ್ಕೊ ಕಡಿಮೆಯಾದರೆ ನಾನಿಲ್ಲವೆ? ನಿಮಗಿರುವವನು ಒಬ್ಬನೇ ಹುಡುಗ" ಎಂದು ಆಸೆಗೆ ಬೆಂಬಲಕೊಟ್ಟುದರಿಂದ, ಶಿವ ಶಾಲೆಗೆ ಹೋಗಿ ವಿದ್ಯಾಭ್ಯಾಸ ಮುಗಿಸುವುದು ಸಾಧ್ಯವಾಯಿತು. ಶಿವನೂ ವಾಸಪ್ಪಯ್ಯನವರ ಮಗ ವೈಕುಂಠನೂ ಜತೆಯಲ್ಲಿ ಓದಿದವರು. ವೈಕುಂಠನಿಗೆ ಮಾತ್ರ ಶಿವನ ಚುರುಕುತನವಿರಲಿಲ್ಲ. ಅಂತೂ ಇಬ್ಬರೂ ಮೆಟ್ರಿಕ್ ಪರೀಕ್ಷೆ ಪಾಸಾದರು.

'ಅನಂತರ ಏನು?' ಎಂಬುವ ಪ್ರಶ್ನೆಯು ಬಂದೇ ಬಂದಿತು. ಆ ಪ್ರಶ್ನೆ ವೈಕುಂಠನಿಗೆ ಕಷ್ಟವಾದುದಲ್ಲ. ಧಾರವಾಡಕ್ಕೆ ಹೋಗಿ ಕಾಲೇಜು ವಿದ್ಯಾಭ್ಯಾಸ ಮಾಡಬೇಕೆಂಬ ಅವನ ಆಸೆಗೆ ತಂದೆಯ ಅನುಕೂಲತೆಯಿತ್ತು. ಅಲ್ಲದೆ ಸಾಹುಕಾರರಿಗೆ ಮನೆ ತುಂಬ ಮಕ್ಕಳಿದ್ದುದರಿಂದ, ಒಬ್ಬೊಬ್ಬರು ಒಂದೊಂದು ಉದ್ಯೋಗವನ್ನು ಹಿಡಿಯಬೇಕಾದದ್ದು ಅನಿವಾರ್ಯವಾಗಿತ್ತು. ಅದೇ ವರ್ಷ ಶ್ರೀಪತಿರಾಯರ ಮಗ, ಈ ಹುಡುಗರ ಸಹಪಾಠಿ, ಚಲಪತಿಯೂ ಕಾಲೇಜನ್ನು ಸೇರುವವನು. ತನ್ನ ಇಬ್ಬರು ಗೆಳೆಯರೂ ಕಾಲೇಜನ್ನು ಸೇರುತ್ತಾರೆ—ಎಂದು ಕೇಳಿದಾಗ ಶಿವನಿಗೆ ಮಾತ್ರ ಕಂಗಾಲೆನಿಸಿತು. ತನ್ನ ಮುಂದಿನ ದಾರಿ ಕಾಣದಾಯಿತು. ತಂದೆ ಇಷ್ಟು ದಿನ ಕಷ್ಟದಿಂದಲೇ ತನ್ನ ವಿದ್ಯಾಭ್ಯಾಸಕ್ಕೆ ನೆರವಾಗಿದ್ದಾನೆ. ಕಾಲೇಜಿಗೆ ಕೊಡುವಷ್ಟು ಹಣ ಆತನಲ್ಲಿ ಇಲ್ಲ ಎನ್ನುವುದನ್ನು ಬಲ್ಲ. ಅಲ್ಲದೆ ಮನೆಯಲ್ಲಿ ಸೋದರಿಗೆ ಲಗ್ನವಾಗುವ ವೇಳೆಯೂ ಬಂದಿತು. ಮತ್ತೂ ಮದುವೆಯಾಗುವವರಿದ್ದಾರೆ. ಒಂದೊಂದು ಮದುವೆಯೆಂದರೆ ಐದೈದು ವರ್ಷಗಳ ಜೀವನದ ಹೊರೆ. ಆ ಹೊರೆಗಳನ್ನು ಹೊರುವುದರೊಳಗೆ ತಂದೆ ನುಗ್ಗು ನುರಿಯಾಗುತ್ತಾನೆ. ತಂದೆಗೆ ವಯಸ್ಸೂ ಆಯಿತು. ಉದ್ಯೋಗದಿಂದ ನಿವೃತ್ತರಾಗುವ ವೇಳೆ ಬಹುದೂರವಿಲ್ಲ. ಅವರ ದುಡಿಮೆಯಿಂದ ಅವನ ವಿದ್ಯಾಭ್ಯಾಸಕ್ಕೆ ತಿಂಗಳಿಗೆ ಬೇಕಾಗಬಹುದಾದ ನಾಲ್ವತ್ತು ಐವತ್ತು ರೂಪಾಯಿಗಳನ್ನು ಚೆಲ್ಲುವಷ್ಟು ತ್ರಾಣ, ಧೈರ್ಯ ಯಾವುದೂ ಇರಲಿಲ್ಲ. ಆದುದರಿಂದ "ಶಿವ, ಮೆಟ್ರಿಕ್ ಆಯಿತು. ಇದೇ ಹೈಸ್ಕೂಲಿನಲ್ಲಿ ಮಾಸ್ತರಿಕೆಯೊಂದು ಖಾಲಿ ಇದೆಯಂತೆ. ನೀನೊಂದು ಅರ್ಜಿಯನ್ನು ಹಾಕು" ಎಂದು ಉಪದೇಶಿಸಿದರು. ಅದರಿಂದ ಮಗನ

ಮನಸ್ಸು ನೊಂದಿತೆಂದು ಬೇಗನೆ ಅನುಭವವಾಯಿತು. ತನ್ನಲ್ಲಿ ಹೇಳದಿದ್ದ ರೂ, ತಾಯಿಯಲ್ಲಿ ಮಗ ತೋಡಿಕೊಂಡ ಹಂಬಲ ಅವರಿಗೆ ತಿಳಿಯಿತು. "ಮಗೂ, ಎಲ್ಲ ಒಟ್ಟು ಸೇರಿಸಿದರೂ ತಿಂಗಳಿಗೆ ಐವತ್ತು ರೂಪಾಯಿಯ ದುಡಿಮೆಯಿಲ್ಲ. ನಾನು ಯಾವ ಧೈರ್ಯದ ಮೇಲೆ ನಿನ್ನನ್ನು ಧಾರವಾಡಕ್ಕೆ ಕಳುಹಿಸಲಿ!" ಎಂದು ತಂದೆ ಹೇಳಬೇಕಾಯಿತು.

ಹಿರಿಯರ ಮಾತುಕತೆ ಹೀಗಿದ್ದರೆ, ಹುಡುಗನ ಆಸೆ ಉತ್ಸಾಹಗಳು ಬೇರೆ ತೆರನಾಗಿದ್ದುವು. ವೈಕುಂಠ, ಚಲಪತಿಯರು ಮಾತ್ರ ಶಿವಪ್ಪನಿಗೆ ಗಾಳಿ ಹಾಕುತ್ತಲೇ ಇದ್ದರು. "ಏನೇ ಆಗಲಿ, ನೀನು ಬಾ" ಎನ್ನುತ್ತಿದ್ದರು. ಅವರಲ್ಲಿ ವೈಕುಂಠನು ಇನ್ನೂ ಧೈರ್ಯಸ್ಥ. ಅವನ ಮಾತೊಂದೇ-"ನೀನು ತಂದೆಯನ್ನೊಪ್ಪಿಸಿ ಬಂದು ಬಿಡು. ಮುಂದಿನದು ಮುಂದೆ. ನಾನಿದ್ದೇನಲ್ಲ." ಇದು ಬರಿಯ ಪೊಳ್ಳು ಮಾತಾಗಿರಲಿಲ್ಲ. ತನಗೆ ತಂದೆಯಿಂದ ಬರುವ ಹಣದಿಂದ ಗೆಳೆಯನಿಗೆ ಸಾಕಷ್ಟು ಸಹಾಯ ಮಾಡಬಹುದು ಎಂಬ ಧೈರ್ಯ ಅವನದು. ಚಲಪತಿಯೂ ಅನುಕೂಲವಂತರ ಮಗ. ಅವನೂ ಹಾಗೆ ಮಾಡಬಹುದು—ಎಂಬ ನಿರೀಕ್ಷೆಯನ್ನೂ ಮಾಡಿದ್ದ. ಆ ವಿಚಾರದಲ್ಲಿ ಸ್ನೇಹಭಾವದಿಂದ ಚಲಪತಿಯನ್ನೂ ಮಾತನಾಡಿಸಿದ್ದ. ಆದರೆ ಕಿಟ್ಟಪ್ಪ ಮಾಸ್ತರರು ಪೊಳ್ಳು ಸಾಹಸಕ್ಕೆ ಕೈಯಿಕ್ಕುವವರಲ್ಲ. ತನಗೇನು ಕಂಡರೂ ಬಲ್ಲವರಿಂದ ಉಪದೇಶ ಕೇಳಿಯೇ ಮುಂದುವರಿಯುವವರು. ಹಾಗಾಗಿ ವಾಸಪ್ಪ ಸಾಹುಕಾರರ ಬಳಿಗೋಡಿ "ಮಗನ ಹಟಕ್ಕೇನು ಮಾಡಲಿ" ಎಂದು ಮದ್ದನ್ನು ಕೇಳಿದರು. ಪ್ರಪಂಚವನ್ನು ಬಲ್ಲ ಅವರು "ಮಾಸ್ತರರೇ, ಕಾಲೇಜು ಗೀಲೇಜು ಎಂದರೆ ತುಂಬ ಖರ್ಚಿನ ಸಂಗತಿ. ನಮ್ಮಂಥವರಿಗೇ ಪೂರೈಸು ವುದು ಕಷ್ಟ" ಎಂದರು. ಆ ದೃಷ್ಟಿ ಕಿಟ್ಟಪ್ಪನವರಿಗೆ ಸರಿಯೆಂದು ಕಂಡು, ಅವರು ಅದೇ ತೀರ್ಮಾನವನ್ನು ಮಗನಿಗೆ ತಿಳಿಸಿದರು. ಮಗನು ಮಾತ್ರ ಚಿಂತೆಯಿಂದ ಸಮನಾಗಿ ಊಟಮಾಡುವುದನ್ನೂ ಬಿಟ್ಟ.

ಗೆಳೆಯರ ಪ್ರೇರಣೆಯಿಂದ ಆತ ಕಾಲೇಜಿಗೆ ಅರ್ಜಿಯನ್ನು ಸಲ್ಲಿಸಿ ಯಾಗಿತ್ತು. ಪರೀಕ್ಷೆಯಲ್ಲಿ ವೈಕುಂಠ, ಚಲಪತಿಯರಿಗಿಂತ ಚೆನ್ನಾಗಿ ಮಾರ್ಕು ಗಳಿಸಿದ್ದನಾದುದರಿಂದ ಕಾಲೇಜಿನಲ್ಲಿ ಪ್ರವೇಶ ದೊರೆಯುವ ವಿಚಾರದಲ್ಲಿ ಅವನಿಗೆ ಭೀತಿ ಇರಲಿಲ್ಲ. ಆದರೆ ತನ್ನಿಬ್ಬರು ಗೆಳೆಯರು ತಮಗೆ ಬರುವ ಹಣದಿಂದ ತನ್ನ ಹೊರೆಯನ್ನು ಹೊತ್ತಾರು, ಹೊರುವುದು ಸಾಧ್ಯ—ಎಂಬ

ನಂಬಿಕೆ ಮಾತ್ರ ಅವನಿಗೂ ಉಂಟಾಗಲಿಲ್ಲ. ನಾಲ್ಕು ದಿನ ಕಳೆದು, ಐದನೆಯ ದಿನ ಅವರು ಕೈಬಿಟ್ಟರೆ ತನ್ನ ಗತಿ ಏನು—ಎಂಬ ಭೀತಿ ಸ್ಪಷ್ಟವಾಗಿ ಕಾಣುತ್ತಿತ್ತು. ಹೀಗಾಗಿ ಚಿಂತೆ ಕವಿಯಿತು. ಊರಲ್ಲಿ ಇರಲಾರ; ಒತ್ತಾಯಿಸುವ ಸಹಪಾಠಿಗಳಿಗೆ ಮಾತು ಕೊಡಲಾರ. ಒಂದು ದಿವಸ ಅಜ್ಜಿಯ ಮನೆಗೆ ಹೋಗಿ ಬರುವೆನೆಂದು ಹೇಳಿ, ಮನೆಯಿಂದ ಅದೃಶ್ಯನಾದ.

ಮಗನ ವಿಚಾರವಾದ ಚಿಂತೆಯು ಕಿಟ್ಟಪ್ಪ ಮಾಸ್ತರಿಗೆ ತೀರ ಸಹಜವಾಗಿತ್ತು. ಮಗನನ್ನೆಂದೂ ಬೆದರಿಸಿ ಬೆಳೆಯಿಸಿದ ತಂದೆ ಅವರಲ್ಲ. ಮುದ್ದಿನಿಂದ, ವಾತ್ಸಲ್ಯದಿಂದ ಹಿತೋಪದೇಶ ಮಾಡಿ ಬೆಳೆಯಿಸಿದವರು ಅವರು. ಇದ್ದಕ್ಕಿದ್ದ ಹಾಗೆ ಅಜ್ಜಿಯ ಮನೆಗೆ ಹೊರಟುಹೋದ ಹುಡುಗನ ವಿಚಾರದಲ್ಲಿ ಅವರಿಗೂ ಚಿಂತೆ ಕವಿಯಿತು. ಅವರು ಮೊದಲಿಗೆ ಮಾಡಿದ ಕೆಲಸವೆಂದರೆ—ಮಗನ ಜಾತಕವನ್ನು ಹಿಡಿದುಕೊಂಡು, ಮಿತ್ರರಾದ ರಾಮಾ ಜೋಯಿಸರಲ್ಲಿಗೆ ಹೋದದ್ದು. ರಾಮಾ ಜೋಯಿಸರು ಜ್ಯೋತಿಷ್ಯ ಹೇಳುವುದರಿಂದ ಜೋಯಿಸರಾದದ್ದೇ ಹೊರತು 'ಇನ್ನೇತರಿಂದಲೂ ಅಲ್ಲ. ಹಾಗೆಂದು ಜ್ಯೋತಿಷ್ಯ ಅವರ ವಿರಾಮದ ಆಟ; ಸಂಪಾದನೆಯ ದಾರಿಯಲ್ಲ. ಕಾಳೂರಿನ ಬಳಿಯೇ ಅವರಿಗೆ ತಕ್ಕಮಟ್ಟಿಗೆ ಜಮೀನಿದೆ. ಅದರಿಂದ ಅವರ ಜೀವನ ಸಾಗುತ್ತದೆ. ಜ್ಯೋತಿಷ್ಯದಿಂದ ಬರುವ ಪುಡಿಕಾಸು ಅವರ ನಸ್ಯ, ವೀಳೆಯಕ್ಕೂ ಸಾಲದು. ಒಮ್ಮೆಂದೊಮ್ಮೆಗೆ ಮನೆಗೆ ಬಂದು, ಅಪೂರ್ವಕ್ಕೆ ಭೇಟಿ ಕೊಟ್ಟ ಕಿಟ್ಟಪ್ಪ ಮಾಸ್ತರನ್ನು ಕಂಡು ಜೋಯಿಸರಿಗೆ ಆಶ್ಚರ್ಯ ಆನಂದಗಳೆರಡೂ ಆದುವು. ಸ್ವಾಗತಿಸಿದರು. "ಏನು ಬಂದಿರಿ ಮಾಸ್ತರರೇ?" ಎಂದು ಉಪಚರಿಸಿದರು. ಉತ್ತರವಾಗಿ—ಮಾಸ್ತರರು ಮಗನ ಜಾತಕವನ್ನು ಹೊರತೆಗೆದು, ಮುಂದೆ ನೀಡಿದರು. ಜಾತಕ ನಿರೀಕ್ಷಣೆಯಲ್ಲಿ ಸದಾ ಆಸಕ್ತಿಯುಳ್ಳ ಜೋಯಿಸರು, ಕನ್ನಡಕವನ್ನು ಮೂಗಿಗೇರಿಸಿಕೊಂಡು "ಇದು ನಿಮ್ಮ ಶಿವೂ ಜಾತಕವಲ್ಲವೆ? ನೋಡುವ, ನೋಡುವ" ಎಂದು ಪರಿಶೀಲನೆಗೆ ತೊಡಗಿದರು. ನೋಡುತ್ತ ಹೋದ ಹಾಗೆ ಕುತೂಹಲ ಹೆಚ್ಚಿತು. ಒಂದು ಗಳಿಗೆಯ ತನಕವೂ ತದೇಕಚಿತ್ತರಾಗಿ ಅದದನ್ನೆ ನೋಡಿದರು. ಅವರು ಎಷ್ಟು ಹೆಚ್ಚುಹೆಚ್ಚಾಗಿ ಅದನ್ನು ನೋಡುತ್ತಿದ್ದರೋ ಅಷ್ಟಷ್ಟು ಕುತೂಹಲ, ಚಿಂತೆ ಮಾಸ್ತರರ ತಲೆಗೇರಿತು. ಇನ್ನೂ ಏನನ್ನೂ ಹೇಳುತ್ತಲಿಲ್ಲ. ಜೋಯಿಸರ ಮುಖವೂ ಒಂದು ತೆರನಾಗಿದೆ. ಅದಕ್ಕೆ ಅರ್ಥ ಕಟ್ಟಿಕೊಳ್ಳಬೇಕು. ಆ

ಮುಖದಲ್ಲಿ ವಿಸ್ಮಯ ಕುತೂಹಲಗಳು ಹೆಚ್ಚಾಗಿವೆಯೇ ಹೊರತು ನಗುವಿಲ್ಲ –ಎಂಬುದು ಮಾಸ್ತರರ ಚಿಂತೆ. ಹೀಗಾಗಿ ಕಾದು, ಬೇಸರಗೊಂಡು, "ಏನು ಮಹಾರಾಯರೆ? ಮಾತನ್ನೇ ಆಡುವುದಿಲ್ಲ" ಎಂದರು.

"ಮಾತನಾಡಬೇಕೆ? ಮಾತನಾಡಿದರೆ ನೀವು ನಂಬಲಿಕ್ಕಿಲ್ಲ."

"ಅಂಥಾದ್ದೇನಿದೆ? ಹಾಳು ಸಮಾಚಾರವಾದರೆ ಹೇಳಲೇಬೇಡಿ. ಈ ವಯಸ್ಸಿನಲ್ಲಿ ಚಿಂತೆ ಹೊತ್ತು ಕಂಗಾಲಾಗಲಾರೆ. ಬರುವುದು ಬರುತ್ತದೆ. ಹಿಂದೆ–ಎರಡು ಹೆಣ್ಣು ಮಕ್ಕಳ ಜಾತಕವನ್ನು ತೋರಿಸಿದ್ದೆ. ನಂಟುತನ ಕೂಡಿ ಬಂದುವು, ನೀವು ಜಾತಕವನ್ನು ನೋಡಿ. ಅವೆರಡೂ ಅವವುಗಳ ಗಂಡಸ ಮನೆಯಲ್ಲಿ ಸುಖವಾಗಿದ್ದಾವೆ. ಇವನಾದರೂ ಅವನ ಪಾಲಿಗೆ ಸುಖವಾಗಿ ದ್ದರೆ ಸಾಕು ಎಂದು ನನ್ನ ಯೋಚನೆ."

"ಮಾಸ್ತರರೇ, ಸುಖವೆಂಬುದು ಏನೆನ್ನುತ್ತೀರಿ? ಇದಕ್ಕಿಂತಲೂ ಸುಖ ಏನು ಬೇಕು ನಿಮಗೆ? ನಿಮ್ಮ ಮಗ ಹಣಕಾಸು ಕೂಡಿಸಬಾರ. ಶ್ರೀಪತಿ ರಾಯರ ಯೋಗವೂ ಅವನ ಜಾತಕದಲ್ಲಿ ಬರೆದಿಲ್ಲ; ವಾಸಪ್ಪಯ್ಯನವರ ಯೋಗವೂ ಬರೆದಿಲ್ಲ. ಹಾಗೆ ದುಡ್ಡಿಲ್ಲವೆಂಬುದರಿಂದ ಜಾತಕವು ಕೆಟ್ಟದಾಗ ಬೇಕಿಲ್ಲವಷ್ಟೆ. ಜಾತಕ ಉತ್ತಮವಾದದ್ದೇ. ನಿಮ್ಮ ಮಗ, ಒಳ್ಳೆಯ ವಿದ್ಯಾ ವಂತನೂ ಗುಣವಂತನೂ ಆಗುತ್ತಾನೆ."

"ಒಳ್ಳೆಯ ವಿದ್ಯೆ ಎಂದರೇನಪ್ಪ? ನನ್ನ ಯೋಗ್ಯತೆಗೆ ಮೀರಿದ ವಿದ್ಯೆ ಅವನಿಗಾಗಿದೆ. ಈಗ ಮೆಟ್ರಿಕ್ ಆಗಿದ್ದಾನೆ. ಒಳ್ಳೆ ನಂಬರೂ ಸಿಕ್ಕಿದೆ. ನನ್ನ ಪಾಲಿಗೆ ಅಷ್ಟು ಸಾಕೆನಿಸುತ್ತಲೂ ಇದೆ. ಆದರೆ ಅವನಿಗೆ ಹಟ– ಇನ್ನು ಮುಂದೆಯೂ ಕಲಿಯಬೇಕಂತೆ; ಕಾಲೇಜಿಗೆ ಹೋಗಬೇಕಂತೆ – ದೊಡ್ಡ ವರ ಮಕ್ಕಳ ಹಾಗೆ. ನಾನು ಒಂದು ವಿಚಾರವನ್ನು ಹೇಳಿಬಿಡುತ್ತೇನೆ– ನಿಮ್ಮಲ್ಲಿ ಮುಚ್ಚುಮರೆಯೇನಿಲ್ಲ. ಅವನ ತಾಯಿಯ ಮನಸ್ಸಿಲ್ಲಿ–ಇರುವವ ಒಬ್ಬ ಹುಡುಗ; ಮನೆಗೆ ಬರುವ ಐವತ್ತು ಮಾನಿಗೆ ಭೂಮಿಯನ್ನು ಅಡವು ಮಾಡಿಯಾದರೂ ಅವನು ಕೇಳಿದಷ್ಟು ವಿದ್ಯೆ ಕೊಡಿಸಬೇಕೆಂದಿದೆ. ಐವತ್ತು ಮುಡಿ ಅಕ್ಕಿ ಮಾರಿದರೆ ಇವತ್ತಿಗೆ ಇನ್ನೂರು ರೂಪಾಯಿ ಸಿಕ್ಕುವುದು ಕಷ್ಟ. ಇದು ಅವನ ನಾಲ್ಕು ತಿಂಗಳುಗಳ ಖರ್ಚಿಗೆ ಸಾಲದು. ಅದರಿಂದ ಪ್ರಯೋಜನವಾದರೆ ಹಾಗೇ ಮಾಡಬೇಕೆನ್ನುತ್ತಾಳೆ. ನನಗೆ ಮಾತ್ರ ಅದರಲ್ಲಿ ವಿಶ್ವಾಸವಿಲ್ಲ."

"ನಾನೇನ್ನಲಿ ಮಾಸ್ತರರೇ? ಹಣಕಾಸಿನ ವಿಚಾರದಲ್ಲಿ ನಿಮ್ಮಷ್ಟೇ ಹುಷಾರು ನಾನು. ಆದರೆ ಅದು ಬೇರೆ; ಇದು ಬೇರೆ. ಇವನ ಜಾತಕದಲ್ಲಿ ವಿದ್ಯೆಯ ಯೋಗ ಬಹು ಚೆನ್ನಾಗಿದೆ. ಇನ್ನು ನಾಲ್ಕಾರು ವರ್ಷಕಾಲ ಓದಿ ಬುದ್ಧಿವಂತನಾಗುತ್ತಾನೆ. ಅದಕ್ಕಿಂತ ದೊಡ್ಡ ಸಂಗತಿಯೆಂದರೆ, ನಾಲ್ಕು ಮಂದಿಗೆ ಉಪಕಾರಕ್ಕೆ ಬೀಳುವವನಾಗುತ್ತಾನೆ. ಆದರೆ ಒಂದು ವಿಷಯ ದಲ್ಲಿ ಮಾತ್ರ ತುಸು ಸಂದಿಗ್ಧ; ಅನುಮಾನ."

"ಯಾವ ವಿಷಯ?"

"ದಾಂಪತ್ಯಯೋಗ ಹೇಗಾಗುತ್ತದೆ ಅನ್ನಲಾರೆ. ಅದೇನೆ ತುಸು ಕಷ್ಟವಿದ್ದ. ಆದರೆ ನೀವು ನನಗೆ ಜಾತಕ ತೋರಿಸದೆ ಮದುವೆ ಮಾಡುವವ ರಲ್ಲವಲ್ಲ. ಒಳ್ಳೆಯ ಜಾತಕವನ್ನು ನೋಡಿಯೇ ಲಗ್ನಮಾಡಿದರೆ ಆ ಕಷ್ಟವೂ ತಪ್ಪೀತು. ಆದರೆ ಒಟ್ಟಿಂದ ಅನ್ನುತ್ತೇನೆ—ಅವನು ಮುಂದೆ ಹೋಗುವು ದಾದರೆ, ಬೇಡ ಅನ್ನಬೇಡಿ. ಓದಲಿ. ಅವನಿಂದ ನಾಲ್ಕು ಜನಗಳಿಗೆ ಉಪಕಾರವಾದರೆ ಅವನಿಗೂ ಒಂದು ಹೆಸರು; ಊರಿಗೂ ಒಂದು ಹೆಸರು; ಹಡೆದ ತಾಯಿತಂದೆಗಳಿಗೂ ಒಂದು ಕೀರ್ತಿ."

ಕಿಟ್ಟಪ್ಪ ಮಾಸ್ತರರು ಮನೆಗೆ ಮರಳುವಾಗ, ತಾನು ಹಿಗ್ಗಬೇಕೋ ಕುಗ್ಗಬೇಕೋ-ಎಂದು ತಿಳಿಯದಾಗಿಯೆ ಮರಳಿದರು. ಮಗನ ಸಲುವಾಗಿ ತ್ಯಾಗಕ್ಕೆ ಅವರ ಮನಸ್ಸು ಒಪ್ಪುತ್ತಿದ್ದರೂ, ಅದು ಅವರನ್ನು ಮೀರಿದ ತ್ಯಾಗವಾಗಬಾರದಷ್ಟೆ. ಅವರನ್ನು ಕಾಡುತ್ತಿದ್ದುದು ಹಣದ ಚಿಂತೆ. ಮಗನು ಐದಾರು ವರ್ಷಗಳ ಕಾಲ ಓದುವುದಾದರೆ, ಅಷ್ಟಕ್ಕೆ ಅವರು ತ್ರಾಣಿಗಳಲ್ಲ. ಎಲ್ಲಿಂದಲಾದರೂ ಅನಿರೀಕ್ಷಿತ ಸಹಾಯ ಬಂದೇ ಆಗಬೇಕು. ಹಾಗೆ ಬರುವ ದಾರಿಯು ಮಾತ್ರ ಕಾಣಿಸುತ್ತಲಿಲ್ಲ. ಮನೆಯವಳ ಉಪದೇಶದಂತೆ, ಮಗನ ಭವಿಷ್ಯವನ್ನು ನಂಬಿ, ಇದ್ದ ಭೂಮಿಯನ್ನು ಮಾರಾಟಮಾಡಿದರೆ, ಇಲ್ಲವೆ ಅಡವು ಮಾಡಿದರೆ, ಮುಂದೆ ಬರಬಹುದಾದ ಕಷ್ಟಕ್ಕೆ ಯಾರು ಹೊಣೆ? ಹಾಗೆ ಬೇಡಲು ಹೋದರೂ, ಅಡವಿನ ಸಾಲವನ್ನು ಕೊಡುವವರು ಕಣ್ಣಿಗೆ ಕಾಣಿಸಬೇಕಲ್ಲ. ಕಾಣಿಸುವವರೆಂದರೆ ತಮ್ಮ ಸಾಹುಕಾರರು ಮಾತ್ರ. ಅಲ್ಲಿಗೆ ಹೋದರೆ ಏನು ಉತ್ತರ ಬಂದೀತೆಂದು ಮೊದಲೇ ಊಹಿಸಬಹುದು. 'ಇದ್ದ ಒಂದು ಚೂರು ಭೂಮಿಯನ್ನು ಮಾರಿ, ನಾಳೆ ಕರಟ, ಕೋಲು ಹಿಡಿ ಯುತ್ತೀರಾ? ಶಾಲೆಯ ಕೆಲಸ ಮುಗಿದ ಮೇಲೆ ನಿಮ್ಮ ಗತಿಯೇನು?"ಎಂದ

ಕೇಳಿಯಾರು. ಒಪ್ಪುವ ಮಾತೇ. ಹಾಗೆಂದು ಬೇರೊಬ್ಬರ ಹತ್ತಿರ ಹೋಗು ವಂತಿಲ್ಲ. ಹೋದರೂ ತನ್ನ ಹಿತವಂದಿಗರಾದ ಸಾಹುಕಾರರಿಗೆ ಅದು ತಿಳಿದೇ ತಿಳಿಯುತ್ತದೆ. ಅದೇ ಚಿಂತೆಯಿಂದ ಅವರು ಮನೆಗೆ ಮರಳಿದರು. ಮಡದಿಯೊಡನೆ ಕುಳಿತು ಯೋಚಿಸಿದರು. ಏನೊಂದೂ ತೀರ್ಮಾನವಾಗ ಲಿಲ್ಲ. ಆಕೆ ಹೇಳಿದ ಮಾತೆಂದರೆ "ಯಾವುದಕ್ಕೂ ಅಜ್ಜಿಯ ಮನೆಗೆ ಹೋದ ಅವನು ಬರಲಿ. ಅವನಿಗೆ ಅಲ್ಲದುದು ನಮಗಲ್ಲ. ನಾಳೆಗೆ ನಾವು ಮುದುಕ ರಾಗಿ ದುಡಿಯಲು ತ್ರಾಣವಿಲ್ಲದವರಾದರೆ ಸಾಕಬೇಕಾದವನು ಅವನೇ. ಅಲ್ಲದೆ ಅವನು ಹಾಳು ಹರಟೆಗೆ ಹಣ ಬೇಡುತ್ತಲಿಲ್ಲ. ಅವನೆಂದ ಹಾಗೆ ಮಾಡುವ" ಎಂದಳು.

ಅದಕ್ಕೆ ತಂದೆ "ಅಷ್ಟೆಲ್ಲ ನಾಳಿನ ಯೋಚನೆ ಮಾಡಿ ತೀರ್ಮಾನಿ ಸುವ ಪ್ರಾಯ, ಬುದ್ಧಿ, ಅವನಿಗಿದೆಯೆ? ಅವನ ಹದಿನಾರು ವರ್ಷಕ್ಕೆ ಅವನ ಚುರುಕು ಸಾಕಾದರೂ, ಇಂತಹ ಸಂಗತಿಗಳಲ್ಲಿ ಅದು ಪ್ರಯೋಜನಕ್ಕೆ ಬೀಳಲಾರದು" ಎಂದರು.

ಒಂದೆರಡು ದಿವಸಗಳಲ್ಲಿ ಅಜ್ಜಿಯ ಮನೆಗೆ ಹೋದ ಶಿವ ಮರಳಿದ. ಅಲ್ಲಿಗೆ ಹೋದದ್ದೆಂದರೆ—ಸೋದರ ಮಾವನಲ್ಲಿ ಮೊರೆಯಿಡುವುದಕ್ಕೆ. ಸೋದರಮಾವ ಶಿವನ ತಂದೆಯಷ್ಟು ಗರೀಬರಲ್ಲವಾದರೂ ಬಹು ಶ್ರೀಮಂತ ರೂ ಅಲ್ಲ. ನಾಲ್ಕು ಮಕ್ಕಳನ್ನು ಕಟ್ಟಿಕೊಂಡು ಸ್ವಂತ ಗೈಮೆಮಾಡುತ್ತ, ಹಳ್ಳಿಯ ಒಬ್ಬ ಮಧ್ಯಮ ತರದ ವರ್ಗದಾರರಾಗಿ, ಮಾನವಂದಿಗರಾಗಿ, ಜೀವನ ಕಳೆಯುತ್ತಿದ್ದಾರೆಂಬುದೇ ಅವರ ಹಿರಿಮೆ. ಅವರ ಮಕ್ಕಳಲ್ಲಿ ಇಂಗ್ಲಿಷು ಓದಿದವರಿಲ್ಲ; ತಮ್ಮ ಸೋದರಳಿಯ, ತಮ್ಮ ಕುಲದ ಒಂದು ಬೀಜ, ಹಾಗೆ ಓದಿ ಮುಂದೆ ಹೋದರೆ ತಮ್ಮ ಮನೆಗೂ ಒಂದು ಗೌರವ ಎಂಬುದರಿಂದ ಅವರು ಶಿವನ ಆಸೆಯನ್ನು ಪುಷ್ಟೀಕರಿಸಿದರು. "ಮಗೂ, ನನ್ನಿಂದ ಹೆಚ್ಚಿಗೇನು ಆಗದೆ ಹೋದರೂ ತಿಂಗಳಿಗೆ ಇಪ್ಪತ್ತು ಮೂವತ್ತು ರೂಪಾಯಿ ಸಾಲವಾಗಿ ಕೊಡುತ್ತೇನೆ. ಧರ್ಮಕ್ಕೆ ಕೊಡಲು ನನ್ನಲ್ಲಿ ತ್ರಾಣ ವಿಲ್ಲ. ನೀನು ಬಡ್ಡಿಯನ್ನು ಕೊಡಬೇಕಾಗಿಲ್ಲ. ಕಲಿತು, ಓದಿ, ನಿನಗೆ ಕೆಲಸ ವಾಗಿ ಕೊಡುವ ತ್ರಾಣ ಬರುತ್ತಲೇ ಕೊಟ್ಟರೆ ಸಾಕು. ಕೊಡಬೇಕೆಂಬ ಮನಸ್ಸು ನಿನಗಿದ್ದರೆ ಸಾಕು. ಒಂದು ಕಾಲಕ್ಕೆ ಅದನ್ನು ಕೊಡುವುದೇ ಆಗದೆ ಹೋದರೂ ನನಗೆ ಬೇಸರವಿಲ್ಲ" ಎಂದು ನುಡಿದು, ಹರಸಿ ಕಳುಹಿಸಿದ್ದರು.

ಆ ಮಾತನ್ನು ಶಿವು ತಾಯಿಯ ಮುಂದೆ ಹಿಗ್ಗಿನಿಂದ ಹೇಳಿದನು. "ನೀನು ಏನು ಮಾಡುತ್ತೀ ಹೇಳು? ಅಪ್ಪ ತಿಂಗಳಿಗೆ ಇಪ್ಪತ್ತು ರೂಪಾಯಿ ಸಾಲ ತೆಗೆಯಿಸಿಕೊಟ್ಟರೂ ಸಾಕು" ಎಂದಾಗ "ಅವರು ಅಲ್ಲವೆನ್ನಲಾರರು" ಎಂಬ ಭರವಸೆಯನ್ನು ಆಕೆ ನೀಡಿದಳು.

ಕಿಟ್ಟಪ್ಪ ಮಾಸ್ತರಿಗೆ 'ಅಹುದು' ಎನ್ನುವ ಧೈರ್ಯ ಸುಲಭವಾಗಿ ಬಂದೊಗಲಿಲ್ಲ. ಸ್ವಲ್ಪ ಹಣ ಸಾಲಮಾಡಬಹುದು, ಅದನ್ನು ತಮ್ಮ ಸಾಹುಕಾರರೇ ಒಂದೆರಡು ವರ್ಷಗಳ ಮಟ್ಟಿಗೆ ನಿಬಡ್ಡಿಯಿಂದಲೇ ಕೊಟ್ಟಾರು. ಆದರೆ ಸಾಲ ಸಾಲವೇ. ಎಲ್ಲವೂ ಸೇರಿ ವರ್ಷಕ್ಕೆ ಐನೂರು ರೂಪಾಯಿಗಳ ಎಣಿಕೆ ಹಿಡಿದರೆ, ಇಂಟರ್ ಮುಗಿಯುವಾಗ ಸಾವಿರವಾಗುತ್ತದೆ. ಬಿ. ಎ. ಆಗುವಾಗ ಎರಡು ಸಾವಿರ. ನಮ್ಮ ರಾಮಾ ಜೋಯಿಸರ ಹೇಳಿಕೆಯಂತೆ ಐದಾರು ವರ್ಷಗಳ ತನಕ ಓದು ಮುಂದುವರಿವರೆ, ಸಾಲದ ಹೊರೆ ಮೂರು ನಾಲ್ಕು ಸಾವಿರಗಳಿಗೂ ಮೀರಬಹುದು. ಮೇಲಕ್ಕೆ ಹೋದ ಹಾಗೆಲ್ಲ ವೆಚ್ಚದ ಮಿತಿ ಹೆಚ್ಚೀತೆಂದು ತಿಳಿದೇ ಇರುವ ಅಂಶ. ಅವನು ಕಲಿತು, ಬಂದು, ತನ್ನದೇ ಆದ ಸಂಸಾರ ಮಾಡಿಕೊಂಡು, ಅದೂ ಆಗಬೇಕಲ್ಲ. ಮುದಿಯರಾಗುವ ಹಿರಿಯರ ಸಂಸಾರದ ಹೊರೆಯನ್ನೂ ಹೊತ್ತು, ಈ ಸಾಲಗಳನ್ನು ತೀರಿಸುವ ಕಾಲ ಬರುವುದುಂಟೇ?—ಎಂಬ ವಿಚಾರದಲ್ಲಿ ಉತ್ತರ ದೊರೆಯಲಿಲ್ಲ. ಆದರೆ ಮಗನ ನಮ್ರವಾದ, ಆಶಾಪೂರಿತವಾದ, ಮುಖವನ್ನು ನೋಡುತ್ತ ಹೋದಂತೆ "ತಂದೆಯಾದವನ ಋಣ ಮಕ್ಕಳಿಗೆ ಸಲುವುದಿದೆ. ಅದಕ್ಕೆ ತಾನು ಹಿಂದಾಗಬಾರದು" ಎಂಬ ಕರ್ತವ್ಯ ನಿಷ್ಠೆ, ಅದರ ಜತೆಗೆ ವಿಧಿಯ ಮೇಲಿನ ವಿಶ್ವಾಸ, ಇಷ್ಟರಿಂದ ಮಗನನ್ನು ಓದಿಗೆ ಕಳುಹಿಸಿದರು.

ಇಷ್ಟೆಲ್ಲ ಎಂದಿನ ಮಾತು? ಎಂಟು ಹತ್ತು ವರ್ಷಗಳ ಹಿಂದಿನ ಕಥೆ. ಅವರು ಹಾಗೆ ಮಾಡದೆ ಹೋಗಿದ್ದಲ್ಲಿ ಶಿವು, ಕಾಳೂರಿನ ಶಿವು, ಇಂದು ಡಾಕ್ಟರನಾಗಲು ಅವಕಾಶವಿದ್ದಿರಲಿಲ್ಲ. ಆದರೆ ತಾನು ಬರಿಯ ಇಷ್ಟರಿಂದಲೇ ಡಾಕ್ಟರನಾದುದಲ್ಲ ಎಂಬುದು ಶಿವನ ಅಂತರಂಗಕ್ಕೆ ಚೆನ್ನಾಗಿ ಗೊತ್ತು.

ಶಿವನ ಇಂಟರ್ ಪರೀಕ್ಷೆಯು ಮುಗಿಯುವ ತನಕ, ಅವನಿಗೆ ಯಾವ ಚಿಂತೆಯೂ ಬರಲಿಲ್ಲ. ಧಾರವಾಡದಲ್ಲಿ ಕಳೆದ ಮೊದಲನೆಯ ಎರಡು ವರ್ಷಗಳು ನಿಶ್ಚಿಂತೆಯಿಂದ ಸರಿದುವು. ಗೆಳೆಯರಾದ ಚಲಪತಿ ವೈಕುಂಠ

ರು ತಮ್ಮ ಮಾತಿನಂತೆ, ತಮ್ಮ ಹಿರಿಯರಿಗೆ ತಿಳಿಸದೆಯೆ, ತಿಂಗಳಿಗೆ ಎಂಟು ಹತ್ತು ರೂಪಾಯಿಗಳ ಸಹಾಯವನ್ನು ಒದಗಿಸಿಕೊಟ್ಟು, ಶಿವನ ಮತ್ತು ಅವನ ತಂದೆಯ ಚಿಂತೆಯ ಭಾರವನ್ನು ತಗ್ಗಿಸಿದ್ದರು. ಆತ ಓದುವುದರಲ್ಲೂ ಜಾಣನೆನಿಸಿಕೊಂಡ. ಈ ಎರಡು ವರ್ಷಕಾಲ ಗೆಳೆಯರ ಸ್ನೇಹ ಸಹಾಯ ಗಳಿಂದಾಗಿ ಧಾರವಾಡದ ಅವನ ವಾಸವೂ ಅಭ್ಯಾಸವೂ ಸುಖಮಯ ವಾಗಿಯೆ ಸಾಗಿತು. ಪರೀಕ್ಷೆಯನ್ನು ಕೊಟ್ಟು ಊರಿಗೆ ಮರಳಿದ ಬಳಿಕ, ಇನ್ನೊಮ್ಮೆ ಮುಂದಿನ ಯೋಚನೆ ಆತನಿಗೆ ಬರುವಂತಾಯಿತು. 'ಮುಂದೆ ಲ್ಲಿಗೆ?' ಎಂಬುದೇ ಆ ಪ್ರಶ್ನೆ. ಇಷ್ಟು ದಿನ ಆ ಪ್ರಶ್ನೆ ಅವನನ್ನು ಕಾಡಲಿಲ್ಲ ವೆಂದಲ್ಲ. ಇತರರ ಹಣದ ಋಣದಲ್ಲಿ ತನ್ನ ಓದು ಸಾಗುತ್ತಿದೆ; ಅದನ್ನು ತೀರಿಸುವ ಹೊಣೆ ಹೆಚ್ಚಿನದು—ಎಂಬುದನ್ನು ಅರಿತಿದ್ದ. ಅದರ ಜತೆಗೆ ತನ್ನ ಹುಟ್ಟೂರಿನ ವ್ಯಾಮೋಹವೂ ಸೇರಿತ್ತು. ಆ ವ್ಯಾಮೋಹ ಒಂದು ರೀತಿಯಿಂದ ಅವನ ಚಿಂತೆಗೂ ಕಾರಣವಾಯಿತು. ತನ್ನ ಮುಂದಿನ ಓದು ಕಳೆದ ಬಳಿಕ, ತಾನು ಯಾವುದಾದರೂ ಚಾಕರಿಯನ್ನು ಹಿಂಬಾಲಿಸಿಕೊಂಡು, ಊರನ್ನು ಬಿಟ್ಟು ಬಾಳಲೇ—ಎಂಬ ಯೋಚನೆ ಬರುತ್ತಲಿತ್ತು. ತಾನು ತನ್ನ ತಾಯಿ ತಂದೆಯರಿಗೆ ಸಮೀಪವಾಗಿರಬೇಕು ಎಂಬ ಆಸೆ ಒತ್ತಟ್ಟು; ಆ ಆಸೆಯ ಜತೆಗೆ ಇನ್ನೊಂದು ಅಭಿಲಾಷೆ ಹೆಚ್ಚಿನದಿತ್ತು. ಊರಿನಲ್ಲಿಯೆ ಇದ್ದು ನಾಲ್ಕು ಜನರಿಗೆ ಪ್ರಯೋಜನವಾಗುವಂತೆ ಬಾಳಿ ಹೆಸರು ಗಳಿಸಿಯೇನೆ ಎಂಬ ಆಸೆ ಯದು. ಈ ಆಸೆ ಸ್ಫುರಿಸುವುದಕ್ಕೆ ಊರಿನ ಮೇಲಣ ಮಮತೆ ಮಾತ್ರ ವಲ್ಲ, ರಾಮಾ ಜೋಯಿಸರು ಹೇಳಿದ ಜ್ಯೋತಿಷ್ಯದ ಸೂಚನೆಯು ಕಾರಣ ವಾಗಿರಬಹುದು. ಹೇಗೂ ಇರಲಿ, ಇಂತಹ ಎರಡು ಬಗೆಯ ಹುಚ್ಚು ಗಳಿಗೆ ಸಮನಾದ ದಾರಿಯೊಂದು ಅವನಿಗೆ ಹೊಳೆದಿತ್ತು. ಅದು ವೈದ ಕೀಯ ವಿದ್ಯೆ; ಮುಂಬಯಿಗೆ ಹೋಗಿ ಡಾಕ್ಟರನಾಗಿ ಬರಬೇಕೆಂಬ ಉತ್ಕಟ ವಾದ ಹಂಬಲ. ಆ ಹಂಬಲವನ್ನು ಕುರಿತು ತನ್ನ ಗೆಳೆಯರೊಡನೆ ಚರ್ಚಿ ದ್ದಾನೆ. ಅವರಿಬ್ಬರೂ ಅವನನ್ನು ಅಷ್ಟೊಂದು ಪ್ರೋತ್ಸಾಹಿಸದೆ ಹೋ ರೂ 'ಅದು ನಿನ್ನಿಂದಾಗುವ ಕೆಲಸವಲ್ಲ!' ಎಂದು ತಣ್ಣೀರೆರಚಿದವರಲ್ಲ.

ಇತ್ತ ಪರೀಕ್ಷೆಯ ಮಾರ್ಕುಗಳು ಬಂದುವು. ದುರ್ದೈವದಿಂ ವೈಕುಂಠ ತೇರ್ಗಡೆಯಾಗಲಿಲ್ಲ. ಅವನ ತಂದೆ 'ಯಾಕೆ ಮಗು, ಓ ಮಗು! ಬಿ. ಎ. ಆಗುವುದು?' ಎಂದು ಮಾತೆತ್ತಿದರು. ವೈಕುಂಠನ ಮೇ

ಮಮತೆ ಹೆಚ್ಚು. ಅವನು ಅಂಗಡಿಯಲ್ಲಿದ್ದು ತನಗೆ ನೆರವಾಗಬೇಕೆಂಬ ಆಸೆಯೂ ಜತೆಗೆ ಸೇರಿತ್ತು. ಚಲಪತಿಯು ತೇರ್ಗಡೆಯಾದ. ಬಿ. ಎ. ಇಲ್ಲವೆ ಎಮ್. ಎ. ಓದುವೆನೆಂದು ತನ್ನ ಅಭಿರುಚಿಯ ದಾರಿ ಹಿಡಿದ. ಅಭಿರುಚಿ, ಧೈರ್ಯಗಳೆರಡನ್ನೂ ಹಿಂಬಾಲಿಸುವೆನೆಂದು ಹೊರಟವ ಶಿವು ಮಾತ್ರ. ಅದಕ್ಕೆ ಹೊಂದದೆಹೋದುದು ಅವನ ಸಾಂಪತ್ತಿಕ ಸ್ಥಿತಿ. ಸೋದರ ಮಾವನ ಮನೆಯವರು 'ಬಿ. ಎ. ಮಾಡು' ಎಂದರು; 'ಮೆಡಿಕಲ್'ನ ವಿಚಾರ ದಲ್ಲಿ 'ಹೇಸಿ ಸಿಗಿಯುವ ಕೆಲಸವೆ!' ಎಂದು ಜಿಗುಪ್ಸೆಯನ್ನು ತೋಡಿಕೊಂ ಡರು. ತಂದೆಯಿಂದ ಬೇಕಾದ ಬೆಂಬಲ ದೊರೆಯಲಾರದು — ಎಂಬುದು ಅವನಿಗೆ ತಿಳಿದೇ ಇತ್ತು. 'ಮುಂದೇನು, ಮುಂದೇನು?' ಎಂಬ ಪ್ರಶ್ನೆಯು ಬೇತಾಳವಾಗಿ ಕಾಣಿಸತೊಡಗಿತು. ಕಿಟ್ಟಪ್ಪ ಮಾಸ್ತರರೂ ಹಲುಬುತಿದ್ದಾರೆ. ಮಗನೂ ಹಲುಬುತಿದ್ದಾನೆ.

ಆದರೆ ಪರೀಕ್ಷೆಯ ಫಲಿತಾಂಶ ಪ್ರಕಟವಾಗಿ, ಮೊದಲ ಶ್ರೇಣಿಯಲ್ಲಿ ಶಿವು ಪಾಸಾದನೆಂದು ತಿಳಿದೊಡನೆಯೆ, ಧಾರವಾಡದಿಂದ ಅವನಿಗೊಂದು ತಂತಿ ಬಂದಿತು. 'ಕೂಡಲೆ ಬಾ' ಎಂಬ ತಂತಿಯದು. ತಂತಿಯನ್ನು ಕಳುಹಿಸಿ ದವರು ಸಣ್ಣಕಲ್ಲು ರಂಗರಾಯರೆಂಬವರು. ತಂತಿಯ ವಾರ್ತೆಯನ್ನು ತಂದೆ ಕೇಳಿದರು. ತಂತಿಯನ್ನು ಕೊಟ್ಟವರಾರೆಂದೂ ವಿಚಾರಿಸಿದರು. ಶಿವು ಅದಕ್ಕೆ "ಅಪ್ಪಾ, ಅವರು ನಮ್ಮ ಕಾಳೂರಿನವರೇ, ಕಾಳೂರಿನ ಸಣ್ಣಕಲ್ಲು ತಾವಿಗೆ ಸೇರಿದವರು. ಬಹು ಹಿಂದೆಯೆ ಈ ಊರಿನಿಂದ ಧಾರವಾಡ ಸೀಮಗೆ ಹೋಗಿ ಸೇರಿಕೊಂಡರು. ಅಲ್ಲಿ ವ್ಯಾಪಾರದಲ್ಲಿ ಹೆಸರು ಗಳಿಸಿದರು. ಸಣ್ಣ ಕಲ್ಲು ಸಾಹುಕಾರರ ಜವುಳಿ ಅಂಗಡಿಯೆಂದರೆ ಧಾರವಾಡದಲ್ಲಿ ಎಲ್ಲರಿಗೂ ಗೊತ್ತು. ಒಳ್ಳೆಯ ವ್ಯಕ್ತಿಗಳು; ನಾಲ್ಕು ಮಂದಿಗೆ ಬೇಕಾದವರು. ವಾರಕ್ಕೆ ರಡಾವರ್ತಿ ನಾನು ಅವರ ಮನೆಯಲ್ಲಿ ವಾರಾನ್ನಕ್ಕೆ ಇರುತಿದ್ದೆ. ಪರೀಕ್ಷೆಯ ವೇಳೆ, ಅವರ ಮನೆಯಲ್ಲೇ ಇದ್ದು ಓದುತ್ತಿದ್ದೆ. ಅವರಂಥವರ ಸಹಾಯ ದಿಂದಾಗಿ ಮಾವನಿಂದಲೂ ಹೆಚ್ಚಿಗೆ ಹಣ ತರಿಸಿಕೊಳ್ಳಲಿಲ್ಲ. ಹೆಚ್ಚಿನ ದಿನ ವಾರಾನ್ನದಿಂದ ಕಳೆಯುತ್ತಿತ್ತು. ವಾರಕ್ಕೆ ಎರಡು ದಿನ ಹೋಟೆಲಿನಲ್ಲಿ ಊಟಮಾಡಿಕೊಂಡು ಇರುತ್ತಿದ್ದೆ" ಎಂದು ವಿವರಿಸಿದ.

"ತಂತಿಯನ್ನೇತಕ್ಕೆ ಕೊಟ್ಟರು!"

"ಪಾಸಾದುದಕ್ಕೆ ಅಭಿನಂದನೆ ತಿಳಿಸಿದ್ದಾರೆ. ಅದರ ಜತೆಯಲ್ಲಿ ಬೇಗನೆ

ಹೊರಟು ಬಾ ಎಂದೂ ತಿಳಿಸಿದ್ದಾರೆ. ಅದರ ಅರ್ಥ ತಿಳಿಯದು. ಕರೆದ ಮೇಲೆ ಹೋಗಿ ಬರಬೇಕಲ್ಲ."

"ಏನಾದರೂ ಮುಂದಿನ ವಿದ್ಯಾಭ್ಯಾಸದ ವಿಷಯದಲ್ಲಿ ಅವರೊಡನೆ ಮಾತನಾಡಿದ್ದೀಯಾ?"

"ನನ್ನನ್ನು ಆಗಾಗ ಕೇಳುತ್ತಿದ್ದರು—ಮುಂದೇನು ಮಾಡುತ್ತೀ ಶಿವು—ಎಂದು. 'ಏನೋ ನನಗೆ ತಿಳಿಯದು; ಕಲಿಯಬೇಕೆಂದಿದೆ. ತ್ರಾಣವಿಲ್ಲ' ಎಂದಿದ್ದೆ."

"ಆಗಲಿ, ಹೋಗಿ ಬಾ. ಸಂಗತಿಯೇನೆಂದು ತಿಳಿದುಕೊಂಡು ಬಾ" ಎಂದರು. ಹುಡುಗ ಆತುರ, ಉತ್ಸಾಹಗಳಿಂದಲೇ ಹೊರಟು ಧಾರವಾಡ ವನ್ನು ಸೇರಿದ. ರಂಗರಾಯರು ಅವನನ್ನು ಸ್ವಾಗತಮಾಡಿದ ಸಂಭ್ರಮ ಅಷ್ಟಿಷ್ಟಲ್ಲ. ತುಂಬ ಪ್ರೀತಿಯಿಂದ ಬರಮಾಡಿಕೊಂಡು "ನೀನು ನಮ್ಮ ಕಾಲೇಜಿನಲ್ಲೇ ಮೊದಲನೆಯವನಾಗಿ ಪಾಸಾಗಿದ್ದೀಯಂತ. ಮುಂದೇನು ಮಾಡುತ್ತೀಯ—ಎಂದು ಕೇಳುವುದಕ್ಕೇನೆ ಕರೆಯಿಸಿದೆ; ಬರಿದೆ ಕರೆಯಿಸಿ ದ್ದಲ್ಲ. ನನ್ನವಳಿಗಾದರೂ ಸರಿಯೆ; ನನಗಾದರೂ ಸರಿಯೆ; ನಿನ್ನಂಥವನಿಗೆ ಸಹಾಯ ಮಾಡಬೇಕೆಂಬ ಯೋಚನೆ. ನೀನು ಅದಕ್ಕೆ ತಕ್ಕವನು. ನೋಡು ನಮಗೆ ಗಂಡು ಮಕ್ಕಳಿಲ್ಲ" ಎಂದರು.

ಮುಂದೆರಡು ದಿನಗಳಲ್ಲಿ ಅವನ ಭವಿಷ್ಯತ್ತಿನ ತೀರ್ಮಾನವಾಯಿತು. ಶಿವು ತನ್ನ ಪ್ರೀತಿಯ ವಿಷಯವಾದ ವೈದ್ಯಕೀಯ ವಿದ್ಯಾಭ್ಯಾಸಕ್ಕೆ ಮುಂದು ವರಿಯುವುದೆಂದೂ, ರಂಗರಾಯರು ಅವನ ವಿದ್ಯಾಭ್ಯಾಸದ ಹೊರೆ ಹೊರು ವುದೆಂದೂ ತೀರ್ಮಾನವಾಯಿತು. ರಂಗರಾಯರಿಂದ ಬಂದ ಈ ತೀರ್ಮಾನ ಅವನು ಒಪ್ಪುವಂತಹದಾದರೂ, ಅದರ ಹೊರೆ ಬಹಳ. ಅವನು ಕನಸು ನೆನಸಿನಲ್ಲೂ ಎಣಿಸದಂತಹ ಈ ಔದಾರ್ಯವನ್ನು ಕಂಡು ಮರುಮಾತೆತ್ತು ವುದಕ್ಕೆ ತೊದಲಿದ. "ನಿಮ್ಮ ಉಪಕಾರ ನಾನು ಮರೆಯುವಂತಿಲ್ಲ. ಇದಕ್ಕೆ ಬೇಕಾಗುವ ಅಷ್ಟೊಂದು ಹಣ, ಧರ್ಮಕ್ಕೆ ಎಂದು ಸ್ವೀಕರಿಸುವುದಕ್ಕೂ ನನಗೆ ಮನಸ್ಸಿಲ್ಲ. ನನಗೇನೆ ಈ ಭಾರವನ್ನು ಹೊರುವ ತ್ರಾಣವಿಲ್ಲ. ನಿಮಗೆ ನಂಬುಗೆ ಸಾಕಾದರೆ, ನೀವು ಕೊಟ್ಟದ್ದನ್ನೆಲ್ಲ ನಾನು 'ಸಾಲ'ವೆಂದು ತಿಳಿದು ಒಂದಲ್ಲ ಒಂದು ದಿನ, ತೀರಿಸುತ್ತೇನೆ" ಎಂದು ಕಣ್ಣೀರು ಕರೆದು ತನ್ನ ಕೃತಜ್ಞತೆಯನ್ನು ಸೂಚಿಸಿದ. ರಂಗರಾಯರಿಗೆ ಹುಡುಗನ ಮಾತು, ಮನಸ್ಸು

ಗಳೆರಡನ್ನೂ ಕಂಡು ತುಂಬ ಸಂತೋಷವಾಯಿತು. "ನೀನು ಅದನ್ನು ತೀರಿಸುತ್ತೀ, ತೀರಿಸಲೇಬೇಕು — ಎಂದು ನಾನು ಸಹಾಯ ಮಾಡುತ್ತೇನೆ ಎಂದದ್ದಲ್ಲ. ಅದು ತೀರಿಸುವಂತಹ ಋಣ ಎಂಬ ಭಾವನೆಯು ನಿನ್ನಲ್ಲಿದ್ದರೆ ಸಾಕು" ಎಂದರು.

"ಎಷ್ಟು ವರ್ಷ ಹಿಡಿಯುತ್ತದೋ ತೀರಿಸಲು......"

"ಆ ಚಿಂತೆ ಈಗಲೇ ಏತಕ್ಕೆ ನಿನಗೆ? ನಾನು ನಿನಗೆ ಹಣ ಕೊಟ್ಟು, ಮಾಡಿ, ನೀನು ಓದಿಯಾದ ಮೇಲೆ, ನಾನು ಕೊಡು ಎಂದ ಮೇಲೆ ಅಲ್ಲವೆ ಆ ಪ್ರಶ್ನೆ? ಅಲ್ಲದೆ ಋಣ ತೀರಿಸಬೇಕು—ಎಂದಿದ್ದರೆ ಹಣ ಒಂದರಿಂದಲೇ ಅದು ಸಾಧ್ಯ, ಬೇರೆಯಾವ ದಾರಿಯೂ ಇಲ್ಲ-ಎಂದು ತಿಳಿಯುತ್ತೀಯಾ? ಅಂತಹ ಸಹಾಯವೂ ನಿನ್ನಿಂದ ನನಗೆ ಆಗಬಹುದಾದ ಕಾಲ ಬಂದೀತು; ಆಗ ಹೇಳುತ್ತೇನೆ." ಎಂದರು.

ಈ ಸಂಭಾಷಣೆ ನಡೆದ ಮೇಲೆ, ಶಿವು ತಂದೆಗೆ ಸಮಾಚಾರವನ್ನು ಕೊಟ್ಟ. ಮುಂಬಯಿಗೆ ಹೋಗಿ ಪ್ರಯತ್ನಿಸಿದ. ಮೆಡಿಕಲ್ ಕೋಲೇಜಿನಲ್ಲಿ ವಿದ್ಯಾರ್ಥಿಯಾಗಿ ಮೂರು ವರ್ಷಗಳ ಕಾಲವೂ ಸರಿಯುವಲ್ಲಾಯಿತು. ಓದು, ವ್ಯಾಸಂಗಗಳ ವಿಚಾರದಲ್ಲಿ ಏನೊಂದೂ ಉದಾಸೀನ ಭಾವ ತೋರಲಿಲ್ಲ. ಬೇಸಿಗೆಯ ರಜೆಗೊ, ದೀಪಾವಳಿ ರಜೆಗೊ ತನ್ನ ಊರಿಗೆ, ಸೋದರಮಾವನ ಮನೆಗೆ, ಧಾರವಾಡಕ್ಕೆ ಹೋಗಿಬರುತ್ತಿದ್ದ. ಊರಿಂದ ದೂರವಾಗಿದ್ದಷ್ಟು ಊರಿನ ಮಮತೆ ಅವನಲ್ಲಿ ಬೆಳೆದುಬಂತು. ತೀರ ಸಾಮಾನ್ಯವಾದ ತನ್ನ ಕಾಳೂರು — ಎಲ್ಲಿಲ್ಲದ ಮೋಹವನ್ನು ಅವನ ಮನಸ್ಸಿನಲ್ಲಿ ಬೆಳೆಯಿಸಿತು. "ಶಿವು ಕಾಳೂರು" ಎಂದು ತನ್ನ ಹೆಸರನ್ನು ಮಾರ್ಪಡಿಸುವುದಕ್ಕೂ ಉತ್ಸಾಹಿತನಾದ. ಆ ಕಡೆಯ ವಿದ್ಯಾರ್ಥಿಮಿತ್ರರ ಬಾಯಲ್ಲಿ, 'ಶಿವು'ಎಂಬ ಹೆಸರು ಅಳಿದು, ಬರಿಯ 'ಕಾಳೂರು'ಎಂದಾದುದೂ ಉಂಟು. ಒಂದು ಬಗೆಯ ಅಂಧಪ್ರತಿಷ್ಠೆಯದು. ಆತನಿಗೆ ವಿದ್ಯಾಭ್ಯಾಸದ ಚಿಂತೆಯಲ್ಲದೆ ಬೇರಾವ ಶ್ರಮಗಳುಂಟಾಗದಂತೆ ರಂಗರಾಯರು ಯಾವತ್ತೂ ಹೊಣೆ ಹೊತ್ತರು. ಅದೇ ವರ್ಷ ಕಿಟ್ಟಪ್ಪ ಮಾಸ್ತರರ ಇಪ್ಪತ್ತೈದು ರೂಪಾಯಿಗಳ ಮಾಸ್ತರಿಕೆ ಮುಗಿದು, ಅವರು ವಾಸಪ್ಪಯ್ಯನವರ ಅಂಗಡಿ ಗುಮಾಸ್ತಿಕೆಯಿಂದಲೂ ಮನೆ ಜಮೀನಿನ ಅಲ್ಪ ವರಮಾನದಿಂದಲೂ ಬದುಕಬೇಕಾಗಿ ಬಂತು. ಈಗ ಅವರ ಪಾಲಿಗೆ ಉಳಿದಿರುವ ಹೊರೆಯೆಂದರೆ ಕಿರಿಯ

ಮಗಳ ಲಗ್ನ. ಐವರು ಹೆಣ್ಣುಮಕ್ಕಳಲ್ಲಿ ನಾಲ್ವರಿಗೆ ಮದುವೆಯಾಗಿ, ಕಿರಿಯಳೊಬ್ಬಳ ಮದುವೆಯೊಂದು ಉಳಿದಿತ್ತು. ಆ ಚಪಲ ತೀರಿಸುವ ಮೊದಲು, ಮಗನ ಮದುವೆಯ ಆತುರ ಹೆಚ್ಚಿತು. ಅದಕ್ಕೆ ಅವರು ಕಾರಣ ರಲ್ಲ. ತಂದೆಗೆ ಅಂತಹ ಆಸೆ ಸ್ವಾಭಾವಿಕವಾಗಿದ್ದರೂ, ಓದು ಮುಗಿಯುವ ತನಕ ಶಿವು ಮದುವೆಯಾಗಲಾರ ಎಂಬುದನ್ನು ಹವಾಮಾನದಿಂದಲೇ ಬಲ್ಲರು. ಆದರೆ ಶ್ರೀಪತಿರಾಯರಂತಹ ಊರಿನ ಹಿರಿಯರು, ಮಾನ್ಯರು, ಅವರನ್ನೊಂದು ದಿನ ಕರೆಯಿಸಿ "ಕಿಟ್ಟಪ್ಪ ಮಾಸ್ತರರೆ, ನಿಮ್ಮ ಹುಡುಗನ ಜಾತಕ ಕೊಡಿ" ಎಂದಾಗ, ಆಶ್ಚರ್ಯ ವಿಸ್ಮಯಗಳೆರಡೂ ಆದುವು. ನಂಬ ಲಾಗದಂತಹ ಘಟನೆ! "ಏನು ಸ್ವಾಮಿ ಹೀಗೆಂದರೆ? ನಾನೆಲ್ಲಿ? ನೀವೆಲ್ಲಿ?" ಎಂದು ವಿಸ್ಮಯ ಸೂಚಿಸಿದರು. ಊರಲ್ಲಿ ಬಾಳಿ ಬದುಕಿದ ಅವರಿಗೆ ತನ್ನ ಮತ್ತು ರಾಯರ ಸ್ಥಾನ ಮಾನಗಳಿಗೆ ಇರುವ ಅಂತರ ತಿಳಿದೇ ಇದೆ. ತಾನು ತುಂಬೆ ಗಿಡ; ರಾಯರು ತೆಂಗಿನಮರ-ಎಂದು ಅರಿತೇ ಇದ್ದರು. ಆದರೆ ದೊಡ್ಡ ವರ ಮಾತನ್ನು ಮೀರುವಂತಿಲ್ಲ.'ನೀವೇ ಜಾತಕನೋಡಿಸಿ'ಎಂದು ಕೈಗೊಪ್ಪಿ ಸಿದ ಜಾತಕದ ನಕಲನ್ನು ಮೂಲೆಗೆಸೆಯುವಂತಿಲ್ಲ. ಹೀಗಾಗಿ ಅದನ್ನು ಹಿಡಿದುಕೊಂಡು ಮಗನ ಜಾತಕದೊಂದಿಗೆ ರಾಮಾಜೋಯಿಸರಲ್ಲಿಗೆ ಓಡಿ ದರು. ಹೋಗುವಾಗ ಮನಸ್ಸು ಇಬ್ಬಗೆಯಿಂದ ಮಾತನಾಡುತಿತ್ತು: 'ದೊಡ್ಡ ವರ ಸಹವಾಸ ಬೇಡ; ದನದ ಕರು ಗಗನಕ್ಕೆ ಹಾರಬಾರದು' ಎಂಬ ವಿವೇಕ ಒಂದು ಕಡೆ. ಅವರಾಗಿ ನನ್ನಂಥವನ ನಂಟುತನ,ಬಯಸಿದರೆ ತಿರಸ್ಕರಿಸುವುದು ಒಳಿತಲ್ಲ ಎಂಬ ಲೌಕಿಕ ಇನ್ನೊಂದು ಕಡೆ. 'ಅದರೆ ಆಗಲಿ' ಎಂಬ ಬಯಕೆ ಒಂದು ಕಡೆ; ಜಾತಕ ಕೂಡದೆ ನಂಟುತನ ಬಿದ್ದುಹೋದರೆ ಪಾರಾಗಬಹು ದಲ್ಲ ಎಂಬ ಅನುಮಾನ ಇನ್ನೊಂದು ಕಡೆ. ಈಗ ಆ ಎರಡು ಜಾತಕಗಳು ಕನ್ನಡಕವನ್ನೇರಿಸಿಕೊಂಡ ರಾಮಾಜೋಯಿಸರ ಅಂಗೈಯಲ್ಲಿ ಕುಣಿದಾಡು ತ್ತಿವೆ. "ಮಾಸ್ತರರೆ, ಹಿಂದೊಂದು ದಿವಸ ನಿಮ್ಮ ಮಗನ ಜಾತಕ ತಂದು ತೋರಿಸಿದ್ದು ನೆನಪಿದೆಯಲ್ಲ. ಈಗ ಅದೇ ವಿಶ್ವಾಸದಿಂದ ನೀವು ಬಂದಿದ್ದೀರಿ. ಈ ನಂಟುತನ ಬಹುಚೆನ್ನಾಗಿ ಹೊಂದುತ್ತದೆ; ದಾಂಪತ್ಯ ಸುಖಕ್ಕೆ ಯಾವ ಕೊರತೆಯೂ ಇಲ್ಲ" ಎಂದು ತೀರ್ಪು ಕೊಟ್ಟರು. ಶ್ರೀಪತಿ ರಾಯರ ಮಗಳ ಜಾತಕ ಎಂದು ಕೇಳಿದ ಮೇಲೆ, ಸಾರಿಗೆ ಒಗ್ಗರಣೆ ಹಾಕಿದರು. ಅಷ್ಟೆಲ್ಲ ಮುಗಿದ ಮೇಲೆ, ಶಿವಪ್ಪಮಾಸ್ತರರು ತಮ್ಮ ಒಪ್ಪಿಗೆ ಕೊಟ್ಟಹಾಗೆಯೆ ಎಂದು

ಶ್ರೀಪತಿ ರಾಯರು ತಿಳಿದರು. ಮಾಸ್ತರರ ಸ್ಥಿತಿಗತಿಗಳು ಅವರಿಗೂ ಗೊತ್ತು. "ಮಾಸ್ತರರೆ, ಹೇಗೂ ಇರಲಿ, ಲಗ್ನ ನಿಶ್ಚಯವಾದ ಹಾಗೇ ಅಲ್ಲವೆ? ಮದುವೆಯ ಖರ್ಚುವೆಚ್ಚವನ್ನು ಕುರಿತು ನೀವು ಯೋಚಿಸಬೇಕಾಗಿಲ್ಲ. ಈ ಬಾರಿ ಬೇಸಗೆಯ ರಜೆಯಲ್ಲಿ ನಿಮ್ಮ ಮಗ ಊರಿಗೆ ಬಂದಾಗ ಒಂದು ಶುಭಕೆಲಸ ಮುಗಿಸಿ ಬಿಡುವ. ಇದಕ್ಕೆಲ್ಲ ನಮ್ಮ ಚಲಪತಿಯ ಒತ್ತಾಯ. ಅವನು ನಿಮ್ಮ ಹುಡುಗನ ಭಾರೀ ಸ್ನೇಹಿತ" ಎಂದು ಜಂಭದಿಂದ ಹೇಳುವಾಗ, ತನಗೆ ಇಷ್ಟವಿಲ್ಲ-ಎನ್ನುವ ಮಾತು ಕಿಟ್ಟಪ್ಪ ಮಾಸ್ತರರ ಬಾಯಿಯಿಂದ ಬಾರದಾಯಿತು. ಆದರೂ ಧೈರ್ಯಸಾಲದೆ, "ಆದರೆ ಮಗನಿಗೊಂದು ಕಾಗದ ಬರೆದು ನೋಡುತ್ತೇನೆ" ಎಂಬ ಅನುಮಾನಾಂಶ ಉಳಿಸಿಕೊಂಡರು. "ಬರೆಯಿರಿ. ಬರೆಯುವುದರಲ್ಲಿ ತಪ್ಪಿಲ್ಲ. ನಮ್ಮ ಚಲಪತಿಯಿಂದಲೂ ಬರೆಯಿಸಿದ್ದೇನೆ" ಎಂಬ ಅಪ್ಪಣೆ ಬಂದಿತು.

ಚಲಪತಿಯ ಕಾಗದಕ್ಕೆ ಶಿವನಿಂದ ಥಟ್ಟನೆ ಪ್ರತ್ಯುತ್ತರ ಮಾತ್ರ ಹೊರಡಲಿಲ್ಲ. ಏಕೆಂದರೆ-ಶಿವನಿಗೆ ವಿದ್ಯಾಭ್ಯಾಸ ಮುಗಿಯುವ ಮೊದಲು ನಂಟುತನದ ವಿಚಾರ ಏನೇನೂ ಮನಸ್ಸಿಲ್ಲ. ಅಲ್ಲದೆ ತನ್ನ ಮತ್ತು ರಂಗರಾಯರೊಡನೆ ಈ ಮೂರು ನಾಲ್ಕು ವರ್ಷಗಳಿಂದ ಬೆಳೆದು ಬಂದ ಆತ್ಮೀಯತೆಯ ದೆಸೆಯಿಂದಾಗಿ, ಅಂತಹ ಯಾವ ಕೆಲಸವನ್ನು ಮಾಡುವುದಿದ್ದರೂ ತನ್ನ ಶ್ರೇಯೋಕಾಂಕ್ಷಿಗಳಾದ ಅವರನ್ನು ಕೇಳದೆ ಮಾಡಬಾರದು. ತಂದೆಗೂ ಹೇಳದೆ ಇರಬಾರದು—ಎಂದು ಆತ ನಿರ್ಣಯಿಸಿದ್ದ. 'ಊರಿನ ವಿಚಾರ' ಎಂದ ಮೇಲೆ ತಂದೆಯಿಂದಲೂ ಕಾಗದ ಬಂದೀತು; ಬರಲಿ. ಬಂದ ಮೇಲೆ ನೋಡುವ-ಎಂದು ನಿಧಾನಿಸಿದ. ಆದರೆ ರಂಗರಾಯರಿಗೆ ಸಂಗತಿ ತಿಳಿಯಿಸದೆ ಇರಬಾರದೆಂದು, 'ಊರಿಂದ ಹೀಗೊಂದು ಕಾಗದ ಬಂದಿದೆ' ಎಂದು ಅವರಿಗೆ ಪತ್ರ ಬರೆದ.

ಆ ಪತ್ರಕ್ಕೆ ಉತ್ತರ ಕಾಯುತ್ತಿದ್ದ ಗಳಿಗೆಯಲ್ಲೇ, ಉತ್ತರದ ಬದಲು ರಂಗರಾಯರೇ ಬರುತ್ತಾರೆಂದು ಅವನು ನಿರೀಕ್ಷಿಸಿರಲಿಲ್ಲ. ಕಾಲೇಜಿನಿಂದ ಅವನು ಹಾಸ್ಟೆಲಿಗೆ ಮರಳುವಾಗ ಅವನ ಕೊಠಡಿಯೆದುರಿಗೆ ಅವರು ಕಾದು ನಿಂತಿದ್ದರು. "ಕಾಗದ ಬಂತೇ?" ಎಂದು ಕೇಳಿದ. "ಹೂಂ, ಬಂತಲ್ಲ. ನಾನು ಜವುಳಿ ಖರೀದಿಗೆ ಬರುವುದಿತ್ತು; ಏನು ಸಮಾಚಾರ-ನೋಡುವ ಎಂದು ಬಂದೆ" ಎಂದರು. ಆ ಸಂಜೆಯೆಲ್ಲ ಉಭಯ ಕುಶಲೋಪರಿಗಳಾದರೂ

ರಂಗರಾಯರು ಕುಳಿತಲ್ಲಿಂದ ಏಳಲಿಲ್ಲ. 'ಹಾಸ್ಟೆಲಿನಲ್ಲಿ ಊಟಮಾಡಿ' ಎಂದರೆ ಮಾಡಿದರು; 'ಕೊಠಡಿಯಲ್ಲಿ ಮಲಗಿ' ಎಂದರೆ ಮಲಗಿದರು. ರಾತ್ರಿ ಹಾಸ್ಟೆಲಿನ ಗದ್ದಲ ಶಾಂತವಾಗುವಾಗ ಹದಿನೊಂದು ಗಂಟೆಯಾಗಿರಬೇಕು. ಅನಂತರ ಮಲಗಿದಲ್ಲಿಂದಲೇ ರಂಗರಾಯರು ಕೆಮ್ಮುತ್ತ, "ಶಿವು, ನಾನು ನಿನ್ನನ್ನು ನೋಡುವುದಕ್ಕೆಂದೇ ಬಂದೆ" ಎಂದರು.

"ನನ್ನನ್ನೇ?"

"ಹೂಂ. ನೀನು ಬರೆದ ಕಾಗದ ನೋಡಿ ಗಾಬರಿಯಾಗಿ ಬಂದೆ."

"ಅದಕ್ಕೇಕೆ ಗಾಬರಿ? ನಾನು ತಮಾಷೆಗೆಂದು ತಿಳಿಸಿದೆ. ನಿಮಗೆ ತಿಳಿಸದೆ ಏನೂ ಮಾಡಬಾರದೆಂದು ಕಂಡಿತು; ಬರೆದೆ. ಅವರು ನಮ್ಮೂರವರು. ಶ್ರೀಪತಿರಾಯರ ವಿಚಾರ ನಿಮಗೂ ಗೊತ್ತಿರಬೇಕು. ಚಲಪತಿ ಧಾರವಾಡದಲ್ಲಿ ನಾನಿದ್ದಾಗ ನಿಮ್ಮಲ್ಲಿಗೂ ಬಂದು ಹೋಗುತ್ತಿದ್ದನಲ್ಲ. ಅವನ ತಂದೆಯದು. ನಾನಿನ್ನೂ ಉತ್ತರ ಬರೆಯಲಿಲ್ಲ."

"ಅದರಿಂದಲೇ ನನಗೆ ಗಾಬರಿಯಾಯಿತು; ಊರವರು ಎಂಬುದರಿಂದ. ನಿನ್ನ ತಂದೆ, ದಾಕ್ಷಿಣ್ಯಕ್ಕೆ ಸಿಕ್ಕಿ ಎಲ್ಲಾದರೂ ಒಪ್ಪಿಗೆ ಕೊಟ್ಟುಬಿಟ್ಟರೆ! ನಾನು ಈ ತನಕ ನನ್ನ ಮನಸ್ಸಿನಲ್ಲಿದ್ದ ಆಸೆಯನ್ನು ನಿನಗೆ ಹೇಳಿರಲಿಲ್ಲ. ಒಂದು ದಿವಸ ಮಾತು ಬಂದಾಗ ನೀನು-ಋಣ ಗಿಣ-ಎಂದದ್ದು ನೆನಪಿದೆಯೆ?"

"ಅದನ್ನೆಂದಾದರೂ ಮರೆಯುತ್ತೇನೆಯೇ?"

"ಅಂತಹ ಕಾಲ ಬಂದಲ್ಲಿ ಕೇಳುತ್ತೇನೆ-ಎಂದಿದ್ದೆ. ನಾನು ಈಗ ಅದಕ್ಕಾಗಿ ಬಂದೆ."

ಶಿವನಿಗೆ ಯಾವುದೂ ತಲೆಬುಡವಾಗಲಿಲ್ಲ. ಮನಸ್ಸು ಯೋಚನೆ ಮಾಡತೊಡಗಿತು. ನಾಲ್ಕು ನಿಮಿಷಗಳ ಕಾಲ ಇಬ್ಬರೂ ಮೂಕರಾಗಿದ್ದರು. ಮಲಗಿದಲ್ಲಿಂದಲೇ ರಾಯರು ಮಗ್ಗಲು ಮಗುಚಿ ಶಿವನ ಕಡೆಗೆ ಮುಖವನ್ನು ಮಾಡಿ 'ಕೇಳಲೇ?' ಎಂದರು. ಮೈನಿಡಿದು ಮಂಚದಲ್ಲಿ ಕುಳಿತೂ ಕುಳಿತರು.

"ನೀವು ಹಾಗೆನ್ನಬೇಕೆ? ಋಣ ಸಲ್ಲಿಸುವ ಯೋಗ್ಯತೆ ನನಗೆ ಬರಲಿ ಎಂದು ಆಶೀರ್ವದಿಸಬೇಕಾದವರು ನೀವು."

"ಶಿವೂ, ನೀನು ಅಂತಹನೆಂದು ಗೊತ್ತು ನನಗೆ. ಅಷ್ಟು ವಿಶ್ವಾಸ ನನಗಿದೆ. ನಾನು ಇದಕ್ಕಾಗಿ ಬರಬೇಕಿರಲಿಲ್ಲ—ಆದರೂ ಬಂದೆ. ನನ್ನ ಹೆಂಡತಿಯ ಒತ್ತಾಯಕ್ಕೆ. ಅವಳಿಗೆ ಕಾಗದ ನೋಡಿ ತುಂಬ ಗಾಬರಿಯಾಯಿತು.

ಇದ್ದ ಸಂಗತಿಯನ್ನು ಹೇಳುತ್ತೇನೆ. ನಮ್ಮ ಇಂದುಮತಿ, ಈ ವರ್ಷ ಮೆಟ್ರಿಕ್ ಮುಗಿಸಿದಳು. ಅವಳನ್ನು ನಿನಗೆ ಕೊಡಬೇಕೆಂದು ನಮ್ಮಿಬ್ಬರ ಇಷ್ಟ. ನೀನೂ ನೋಡದ ಹುಡುಗಿಯಲ್ಲ. ತಿಳಿಯದವಳೂ ಅಲ್ಲ. ಮದುವೆಯಾಗುವಿ— ಎಂದಾದರೆ ಈ ಬೇಸಿಗೆಯಲ್ಲೇ ಮುಗಿಸಿ ಬಿಡುವ. ಇಲ್ಲವಿದ್ದರೆ ನಿನ್ನ ತಂದೆಯ, ಊರವರ ದಾಕ್ಷಿಣ್ಯಕ್ಕೊಳಗಾಗಿ . . . . ."

ತುಸು ಹೊತ್ತು ಶಿವು ಮಾತನ್ನೇ ಆಡಲಾರನಾದ. ಕುಳಿತು ಅವರ ಮುಖವನ್ನೇ ನೋಡಿದ. ಕಿಟಕಿಯಿಂದ ಬರುವ ಹೊರದೀಪದ ಬೆಳಕು ಸಾಲದೆಂದು, ದೀವಿಗೆ ಬೆಳಗಿದ. ಅವರ ಚಿಂತೆ, ಆತುರ, ವಿನಯಪೂರಿತವಾದ ನಯನಗಳನ್ನೆ ನೋಡಿದ. ಅವರ ಉಪಕಾರವನ್ನೆಲ್ಲ ನೆನೆದ. ಆ ಗಳಿಗೆಗೆ ಅವನಿಗನಿಸಿದ್ದೆಂದರೆ–ಮದುವೆಯಾಗುವಲ್ಲಿ, ಎಷ್ಟಿದ್ದರೂ ಅಪರಿಚಿತ ವ್ಯಕ್ತಿಯನ್ನೇ ಆಗಬೇಕು. ಇಂದು, ಇಂದುಮತಿ, ತುಸುವಾದರೂ ಪರಿಚಿತೆ. ತುಸುವೇಕೆ? ಸಾಕಷ್ಟು. ಅಲ್ಲದೆ ರಂಗರಾಯರು ಹೊರಿಸಿರುವ ಋಣ ಸ್ವಲ್ಪವಲ್ಲ. ಆರಂಭದಲ್ಲಿ ಯಾವೊಂದೂ ಶರ್ತ ಹಾಕಿದವರಲ್ಲವಾದರೂ, ಇಂತಹ ವೇಳೆಯಲ್ಲಿ 'ಒಲ್ಲೆ' ಎನ್ನುವ ಧೈರ್ಯವಿಲ್ಲ. ಅದು ಸಜ್ಜನಿಕೆಯಲ್ಲ. ಯೋಚಿಸಿ ಒಮ್ಮೆಗೇ ಉತ್ತರ ಹೇಳಲಾರದೆ "ಮಲಗಿ; ನಾನಿದ್ದೇನೆ; ನೀವಿದ್ದೀರಿ. ಬೆಳಿಗ್ಗೆ ನೋಡುವ" ಎಂದನು.

ಬೆಳಿಗ್ಗೆ ಮುಖವನ್ನು ತೊಳೆದು, ಉಪಹಾರ ತರಿಸಿಕೊಂಡು, ಅದನ್ನು ಮೆಲ್ಲುತ್ತ, ಲಘು ಮನಸ್ಸಿನಿಂದ ಅವನು ಆಡಿದ ಮಾತೆಂದರೆ "ನಾನು ನಿಮಗೇಕೆ ಆ ಕಾಗದವನ್ನು ಬರೆದೆ? ನಿಮ್ಮ ಅನುಮತಿ, ಮಾತನ್ನು ಕೇಳದೆ ಏನೂ ಮಾಡಬಾರದೆಂಬುದರಿಂದ. ನೀವೆನ್ನುವುದು ನನ್ನ ಹಿತಚಿಂತನೆಯ ದೃಷ್ಟಿಯಿಂದಲೇ. ನಾನು ನಾಳೆಯಾದರೂ ಯಾರನ್ನಾದರೂ ಮದುವೆಯಾಗಲೇಬೇಕು. ನಿಮ್ಮ ಇಂದುವನ್ನು ಆಗಬಾರದೆಂದಿಲ್ಲ. ಆದರೆ ಓದು ಮುಗಿಯುವ ತನಕ ಕಾದರೆ ಆಗದೇ? ಉಳಿದ ಭೀತಿ ನಿಮಗೆ ಬೇಡ" ಎಂದ.

ರಂಗರಾಯರಿಗೆ ತೃಪ್ತಿಯಾಯಿತು. ಶಿವುಗೆ ತಾನೊಂದು ಮಹಾ ಕೆಲಸವನ್ನು ಮಾಡಿದೆ–ಎಂದು ಅನಿಸಲೂ ಇಲ್ಲ. ಮುಂದೆ ತಾನಾಗಲೀ, ತನ್ನ ತಂದೆಯಾಗಲೀ ತೊಡಕಿಗೆ ಗುರಿಯಾಗಬಾರದೆಂಬುದರಿಂದ, ತಾನು ವಚನಬಂಧಿತನಾದ ವಿಚಾರದಲ್ಲಿ ತಂದೆಗೆ ಪತ್ರ ಬರೆದ. ಚಲಪತಿಗೂ ಒಂದು ಕಾಗದವನ್ನು ಬರೆದು ಹಾಕಿದ.

ಆದರೆ ಈ ಪ್ರಕರಣವು ಅಷ್ಟು ಸುಲಭದಲ್ಲಿ ಮುಗಿಯಲಿಲ್ಲ. ಶ್ರೀಪತಿ ರಾಯರ ದಾಕ್ಷಿಣ್ಯ, ಬಲವಂತಗಳು ಹೆಚ್ಚಾದುವು. ಬರಿಯ ನಕಾರದಿಂದ ಶಿವು ತಂದೆಯನ್ನು ಸಮಾಧಾನಪಡಿಸಲಾರನಾದ್ದಕ್ಕೆ ಕಾರಣಗಳನ್ನು ಕೊಟ್ಟು ಕಾಗದ ಬರೆಯಬೇಕಾಯಿತು. ರಂಗರಾಯರ ಹೆಸರನ್ನು ಉಪಯೋಗಿಸ ಬೇಕಾಯಿತು. ಇದರಿಂದ ತಂದೆಯಿಂದ ಮತ್ತೊಂದು ಪತ್ರ ಬಂದಿತು. "ನೀನು ರಂಗರಾಯರಿಂದ ಪಡೆದ ಸಾಲವನ್ನು ಶ್ರೀಪತಿರಾಯರು ಒಮ್ಮೆಲೇ ಕೊಟ್ಟು ಮುಗಿಸುವುದಲ್ಲದೆ, ಮುಂದಿನ ಎರಡು ವರ್ಷಗಳ ಹೊರೆಯನ್ನೂ ಹೊರುತ್ತಾರಂತೆ" ಎಂದು ಬರೆಯುವಂತಾಯಿತು. ಶಿವು ನಿಜಕ್ಕೂ ಬಿಕ್ಕಟ್ಟಿಗೆ ಗುರಿಯಾದ. ಆದರೆ ತನ್ನ ಕರ್ತವ್ಯವೆಂದು ಚೆನ್ನಾಗಿ ಬಲ್ಲ ಆತ, ರಂಗ ರಾಯರಿಗೆ ಈಯೊಂದು ಕಾಗದ ಬರೆದ: "ಸುಮ್ಮನೆ ಕುಳಿತರೆ ದಾಕ್ಷಿಣ್ಯದ ಉರುಳಿಗೆ ಕೊರಳುಕೊಡುವ ಸ್ಥಿತಿ ಬರುವಂತಿದೆ. ನೀವು ಇಷ್ಟಪಟ್ಟಲ್ಲಿ ಈ ಬೇಸಿಗೆಗೇನೆ ಲಗ್ನ ನಿಶ್ಚೈಸುವುದು ಒಳಿತು. ಹೊರಗಾರಿಗೂ ಸುದ್ದಿ ಬೇಡ. ಅನಂತರ ಯಾರ ಒತ್ತಾಯಕ್ಕೂ ಅವಕಾಶವಿಲ್ಲವಲ್ಲ. ತಂದೆಗೆ—ರಜೆಗೆ ಬಂದಾಗ ವಿಚಾರಮಾಡಬಹುದು-ಎಂದು ಬರೆಯುತ್ತೇನೆ" ಎಂದು ಕಾಗದ ಬರೆದ.

ರಜೆ ಬಂದಿತು. ಶಿವು ನೆಟ್ಟಗೆ ಧಾರವಾಡಕ್ಕೆ ಹೋದ. ರಂಗರಾಯರ ಅಳಿಯನಾಗುವ ನಿಶ್ಚಯಮಾಡಿದ. ಮದುವೆಯ ದಿನವನ್ನು ನಿಶ್ಚೈಸಿ ತಂದೆಗೆ ತಂತಿ ಕೊಟ್ಟ. ಮಗನ ಕೆಲಸ ನೋಡಿ, ಕಿಟ್ಟಪ್ಪ ಮಾಸ್ತರರು ಸ್ವಾಭಾವಿಕ ವಾಗಿ ರೇಗಿದರು; ಬೇಸರಿಸಿದರು. 'ಕರುವಿಗೆ ಕೊಂಬು ಬಂದರೆ ಹಾಯದೆ ಇರುತ್ತದೆಯೆ' ಎಂದುಕೊಂಡರು. ಅಲ್ಲದೆ ಮನಸ್ಸು ಮುರಿದು, ಮದುವೆಗೆ ಹೋಗದೆ ಕುಳಿತುಬಿಟ್ಟರು. ಆ ರೀತಿಯಿಂದಲಾದರೂ ಶ್ರೀಪತಿರಾಯರಿಂದ ಮರ್ಯಾದೆಯನ್ನು ಸಂಪಾದಿಸಿದರು. ಈ ವಿಚಾರದಲ್ಲಿ ಮೋಸ ಕೊಟ್ಟಾತ ಮಗನೇ ಹೊರತು ತಂದೆಯಲ್ಲ—ಎಂದು ಅವರಿಗನಿಸಿತು. "ನನ್ನನ್ನು ಮಂಗಾ ಡಿಸಿ ಬಿಟ್ಟ" ಎಂದು ಕಿಟ್ಟಪ್ಪ ಮಾಸ್ತರರು ನಾಲ್ಕು ಜನರ ಮುಂದೆ ದೂರಿ, ತಮ್ಮ ಮರ್ಯಾದೆಯನ್ನು ಉಳಿಸಿಕೊಂಡರು. ತಂದೆ ತಾಯಿಯರಿಬ್ಬರೂ ಮದುವೆಗೆ ಬಂದಾರು-ಎಂದು ನಿರೀಕ್ಷಿಸಿದ್ದ ಶಿವುಗೆ ಮಾತ್ರ ತುಂಬ ಬೇಸರ. ಮದುವೆಯಾದ ನಾಲ್ಕು ದಿನಗಳಲ್ಲಿ ಮಡದಿ ಸಹಿತನಾಗಿ ಕಾಳೂರಿಗೆ ಹೋದ. ಮನೆಯನ್ನು ಹೊಕ್ಕಾಗ, ತಾಯಿ ತಂದೆಯರ ಮನಸ್ಸು ತಣಿಯಿತು. ಮಗನ

ಉಭಯಸಂಕಟದ ವಿಚಾರಗಳನ್ನು ಕೇಳಿದಾಗ, ಒಂದು ಬಗೆಯ ಸಮಾಧಾನವೂ ಆಯಿತು. "ನಾನೇನು ಮಾಡಲಿ ಮಗು, ನೀನು ಅಲ್ಲಿ ದಾಕ್ಷಿಣ್ಯಕ್ಕೆ ಬಿದ್ದ ಹಾಗೆ, ನಾನು ಇಲ್ಲಿ ಶ್ರೀಪತಿರಾಯರ ಹಂಗಿಗೆ ಗುರಿಯಾದೆ. ಎಷ್ಟೆಂದರೂ ದೊಡ್ಡವರು. ಸಿಟ್ಟಾಗದೆ ಉಳಿದಾರೆಯೇ? ದೇವರು ಒಳ್ಳೆಯದು ಮಾಡಲಿ" ಎಂದು ಹರಸಿದರು. ತಂದೆಯ ಬೇಸರ ಅಳಿಯಿತು. ತಾಯಿ ಬೇಸರಿಸುವುದಕ್ಕೆ ಕಾರಣವಿರಲಿಲ್ಲ. ಹೊಸತಾಗಿ ಮನೆಗೆ ಬಂದ ವಧುವಿಗೆ ಕಿಂಚಿತ್ತು ಅಸಮಾಧಾನ; ಬೇಸರ. ಮನೆ ಬಡವರ ಕಿರಿಯ ಗುಡಿಸಲು. ಊರಿನ ಆವರಣ ಸುಂದರವಾಗಿದ್ದರೂ ಸಿರಿವಂತವಾಗಿರಲಿಲ್ಲ. "ಇದೆಂತಹ ಊರು" ಎಂದು ಮನಸ್ಸಿಗನಿಸಿದರೂ, ಬಾಯಿಂದ ಭಾವನೆಯನ್ನು ಬಹಿರಂಗವಾಗಿ ಪ್ರಕಟಿಸಲಿಲ್ಲ. ಶಿವು ನಾಲ್ಕು ದಿನ ಮನೆಯಲ್ಲಿದ್ದು, ಒಂದೆರಡು ದಿನ ತನ್ನ ಸೋದರಮಾವನ ಮನೆಗೂ ಹೋಗಿ ಆರತಿ, ಅಕ್ಷತೆ ಮಾಡಿಸಿಕೊಂಡು, ಆಶೀರ್ವಾದ ಪಡೆದು, ಚುಟುಕಿನಲ್ಲಿಯೆ ಧಾರವಾಡಕ್ಕೆ ಮರಳಿಬಿಟ್ಟ. ಅಲ್ಲಿ ಕೆಲವು ದಿನ ಕಳೆದು, ನೇರಾಗಿ ಮುಂಬಯಿಗೆ. ಇನ್ನೆರಡು ವರ್ಷಗಳ ಅಭ್ಯಾಸ ಮುಗಿಯಿತೆಂದರೆ ಆತನು ಸ್ವತಂತ್ರನಾಗಬಲ್ಲ; ಸ್ವಾವಲಂಬಿಯಾಗಬಲ್ಲ; ನಾಲ್ಕು ಜನಗಳಿಗೆ ಬೇಕೆನಿಸಿಕೊಳ್ಳಬಲ್ಲ.

ಅವನು ಮುಂಬಯಿಯನ್ನು ಸೇರಿದ ಒಂದು ವಾರದೊಳಗಾಗಿಯೆ ಅವನ ತಂದೆಯಿಂದ ವಿಚಿತ್ರವಾದೊಂದು ಕಾಗದ ಬಂದಿತು. ಅದರ ಸಾರಾಂಶ ಹೀಗಿತ್ತು: "ಮಗೂ, ನೀನು ಮದುವೆಯಾದುದು ನನಗೆ ಸಂತೋಷವೇ. ನಾನು ಅದಕ್ಕೆ ಬಾರದಿದ್ದುದಕ್ಕಾಗಿ ತುಂಬಾ ಬೇಸರಪಟ್ಟಂತೆ ಕಾಣುತ್ತದೆ. ಆ ವಿಚಾರವನ್ನು ಮರೆತುಬಿಡು. ನಾನೇಕೋ ಆ ಗಳಿಗೆಯಲ್ಲಿ ಸಿಟ್ಟುಗೊಂಡೆ, ಅಂಜಿದೆ. ಅಂಜಬಾರದಿತ್ತು. ಹಾಗೆ ಮಾಡಬಾರದಿತ್ತು. ನಿನ್ನನ್ನು ಬಿಟ್ಟು ನನಗೆ ಬೇರೆ ಯಾರು ಇದ್ದಾರೆ? ನನ್ನ ಮಾಸ್ತರಿಕೆಗೆ ನಿವೃತ್ತಿ ಬಂದಿತು. ಏನೋ, ವಾಸಪ್ಪ ಸಾಹುಕಾರರು ಮೊದಲಿನಂತೆ ನಡೆಸಿಕೊಂಡು ಬಂದಿದ್ದಾರೆ. ಆದರೆ ಇಷ್ಟು ಪ್ರಾಯ ಸಂದ ಬಳಿಕ, ಮೊದಲಿನ ಹಾಗೆ ದುಡಿಯುವುದು ಸಾಧ್ಯವೇ? ನಿನ್ನ ತಂಗಿಗೆ ಲಗ್ನ ಮಾಡಿಸಿದೆನಾದರೆ ನನ್ನೆಲ್ಲ ಹೊರೆ ಇಳಿಯಿತು. ಮುಂದೆ ತಾಯಿತಂದೆಯರ ಭಾರವನ್ನು ಹೊರುವ ಹೊಣೆ ನಿನ್ನದು. ನೀನು ಓದನ್ನು ಮುಗಿಸಿ ಊರಿಗೆ ಬರುತ್ತೀಯಾ? ನಮಗೆಲ್ಲ ಒಂದು ಗೌರವ ತರುತ್ತಿಯಾ?" ಎಂದು ಬಯಸಿ ಬರೆದಿದ್ದರು.

ಶಿವನ ಮನಸ್ಸು ವಿಚಾರಕ್ಕೊಳಗಾಯಿತು! "ನನ್ನ ತಂದೆ ಹೀಗೇತಕ್ಕೆ ಬರೆದರು? 'ನನ್ನ ಮೇಲೆ ಅವಿಶ್ವಾಸವೆ? ಅವರನ್ನು ಸಾಕದೆ ಹೋದರೆ ನಾನು ಅವರಿಗೆ ಮಗನೆನಿಸಿಯೇನೆ? ಈ ಕಾಗದದ ಒಕ್ಕಣೆಯನ್ನು ಕಾಣುವಾಗ ಉದ್ದೇಶಪಟ್ಟು ಅದನ್ನು ಬರೆದಂತೆ ಕಾಣುತ್ತದೆ. ನನಗಾಗಿ ಬರೆದುದಕ್ಕಿಂತ ತಮಗಾಗಿ ಬರೆದಂತೆ ಕಾಣುತ್ತದೆ. ಓದು ಮುಗಿದ ಮೇಲೆ, ನಾನು ಸರಕಾರಿ ಚಾಕರಿಯನ್ನು ಹಿಡಿದು ಊರುಬಿಟ್ಟು ಹೋಗಿಯೇನೆಂಬ ಹೆದರಿಕೆ ಬಂದಿರ ಬೇಕು" ಎಂದೆಲ್ಲ ಯೋಚಿಸತೊಡಗಿದನು. ಈ ವಿಚಾರ ಸರಣಿ ಸನುನಾದ ತೀರ್ಮಾನಕ್ಕೆ ಬರುವ ಮುಂಚೆಯೇ, ಇಂದುಮತಿಯಿಂದ ಬೇರೊಂದು ಪತ್ರ ಬಂದಿತು. ಬಹುಮಟ್ಟಿಗೆ ಆ ಪತ್ರವೆಲ್ಲ, ಕಾಗದ ತುಂಬಿಸುವುದಕ್ಕೇನೆ ಬರೆದ ವಿಷಯಗಳಿಂದ ಕೂಡಿದ್ದು, ಅಂಥವುಗಳಲ್ಲಿ ಮನಸ್ಸನ್ನು ಮಿಂಚಿಬಂದ ಒಂದೆರಡು ವಾಕ್ಯಗಳೂ ಸೇರಿದ್ದುವು. ಈ ವರೆಗೆ ಮಾತನಾಡದ ವಿಷಯ; ಕಾಳೂರನ್ನು ಕುರಿತಾದ ತನ್ನ ಅಭಿಪ್ರಾಯ! "ನೀವು ನಿಮ್ಮ ಊರನ್ನು ಕುರಿತು ಹೊಗಳಿದ್ದೇ ಹೊಗಳಿದ್ದು. ಏನಿದೆ ಅಲ್ಲಿ? ಶುದ್ಧ ಹಳ್ಳಿ; ನಾಲ್ಕು ದಿನ ಇದ್ದೇ ಬೇಸರಬಂತು. ಎಷ್ಟಕ್ಕೂ ನಮ್ಮ ಧಾರವಾಡ ಬೇಕು" ಎಂದು ಬರೆ ದಿದ್ದಳು. ಇವೆರಡು ಪತ್ರಗಳೂ ಅವನ ಮನಸ್ಸಿನಲ್ಲಿ ಪ್ರೇರಿಸಿದ ಎರಡೆರಡು ವಿಚಾರ ಸರಣಿಗಳ ನಡುವೆ ಆತ ಓಲಾಡುವಂತಾಯಿತು. ಆತ ತನ್ನಷ್ಟಕ್ಕೆ ಯೋಚಿಸತೊಡಗಿದ: 'ನಮ್ಮ ತಂದೆಗನಿಸಿರಬೇಕು. ನಾನು ರಂಗರಾಯರ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು, ಅವರ ಮಗಳನ್ನು ಮದುವೆಯಾದ ಹಾಗೆ, ನಾಳೆ ದಿನ ಧಾರವಾಡದಲ್ಲಿ ನೆಲಸಿ ವೈದ್ಯಕೀಯ ವೃತ್ತಿಯನ್ನು ಕೈಕೊಂಡರೆ? ತಾವು ಅಲ್ಲಿಗೆ ಬರುವಂತಿಲ್ಲ. ಮಗ ಊರಿಗೆ ಬಾರದೆ ತಮ್ಮನ್ನು ಮರೆತರೆ ಎಂಬ ಯೋಚನೆ ಬಂದು, ಬಂದ ಗಳಿಗೆಯಲ್ಲೆ ಹೀಗೆ ಪತ್ರ ಬರೆದಿರಬೇಕು. ಪಾಪ! ಅವರ ಅನುಮಾನವು ಸಹಜವಾದದ್ದೇ. ಆದರೆ ನಾನು ಮಾವನಿಂದ ಹಣ ಕೊಂಡ ಮಾತ್ರಕ್ಕೆ ನನ್ನನ್ನು ಮಾರಿಕೊಂಡೇನೇ? ಅಷ್ಟೆಲ್ಲ ಬೇಡ. ಮಗಳನ್ನು ಮದುವೆಯಾದರೆ ಮಾತ್ರ ಹಣಕೊಡುತ್ತೇನೆ ಇಲ್ಲವಾದರೆ ಇಲ್ಲ-ಎಂದಿದ್ದರೆ ಖಂಡಿತಕ್ಕೂ ನಿರಾಕರಿಸುತ್ತಿದ್ದೆ. ಹಾಗೇನಿಲ್ಲದೆ ನನಗೆ ಸಹಾಯ ಮಾಡಿದರು. ಆ ಸಹಾಯವನ್ನು ತೀರಿಸತಕ್ಕ ಋಣ ಎಂದೇ ತಿಳಿದಿದ್ದೇನೆ. ಅದರಿಂದ ಮುಕ್ತನಾಗುವ ಯೋಚನೆ ಮಾಡಿದ್ದೇನೆ' ಎಂದು ತರ್ಕಿಸಿ ತಂದೆಯ ಅನುಮಾನಕ್ಕಾಗಿ ನಕ್ಕ. ಅವರ ಕಾಗದಕ್ಕೆ ಉತ್ತರವಾಗಿ 'ಅಪ್ಪಾ,

ನನಗೆ ಸರಕಾರಿ ನೌಕರಿಯನ್ನು ಹಿಡಿಯಬೇಕೆಂಬ ಇಚ್ಛೆಯೇ ಇಲ್ಲ. ನೀವು ಕಾಳೂರಿನಲ್ಲೇ ಹುಟ್ಟಿ ಅಲ್ಲೇ ಬೆಳೆದು ನಾಲ್ಕು ಮಕ್ಕಳಿಗೆ ಶಿಕ್ಷಣಕೊಟ್ಟು 'ನಮ್ಮ ಮಾಸ್ತರು' ಎಂದು ಹೇಗೆ ನಾಲ್ಕು ಮಂದಿಗೆ ಬೇಕಾದವರಾಗಿದ್ದೀರೋ ನಾನೂ ಹಾಗೆಯೇ ಆಗಬೇಕು. ಹುಟ್ಟಿದ ಊರಿಗೆ ನನ್ನಿಂದ ಒಂದಿಷ್ಟಾದರೂ ಪ್ರಯೋಜನವಾಗಬೇಕು ಎಂಬ ಆಸೆಯಿದೆ. ಅಲ್ಲದೆ ನಿಮ್ಮ ಕಷ್ಟದಲ್ಲಿ ನನ್ನನ್ನು ಬೆಳೆಸಿ ನಾನೊಬ್ಬ ಮನುಷ್ಯ ಎಂದು ಮಾಡಿದ ನಿಮ್ಮನ್ನು ನಡುದಾರಿಯಲ್ಲಿ ಬಿಡುತ್ತೇನೆಯೇ? ಅಂತಹ ಅಂಜಿಕೆ ಬಂದು ಈ ಕಾಗದ ಬರೆದಿರಾ? ಕಾಳೂರಿಗೇನೆ ಬಂದು ಅಲ್ಲಿಯೆ ಒಂದು ದವಾಖಾನೆ ತೆರೆಯುವ ಯೋಚನೆ ನನ್ನದು. ಅದೇನು ದೊಡ್ಡ ಊರಲ್ಲ, ನಿಜ. ಆದರೆ ನಾವು ಹುಟ್ಟಿದ ಊರು ಯಾವಾಗಲೂ ನಮಗೆ ದೊಡ್ಡದೇ' ಎಂದು ಬರೆದ. ಆ ಪತ್ರವನ್ನೋದಿದ ಮಾಸ್ತರರಿಗೆ ಮಗನ ಮಾತಿನ ಮೇಲೆ ಸಂಪೂರ್ಣ ಭರವಸೆಯುಂಟಾಗಿ ಸಂತೋಷವುಂಟಾಯಿತು ಎಂದು ಹೇಳಬೇಕಾಗಿಲ್ಲ.

ತಂದೆಗೆ ಕಾಗದ ಬರೆದ ಭರದಲ್ಲಿ, ಶಿವು ದೇಶಪ್ರೇಮವನ್ನು ಕುರಿತಾಗಿ ಮಡದಿಗೂ ಒಂದು ದೀರ್ಘ ಪ್ರಬಂಧ ಬರೆದುಬಿಟ್ಟ. "ನಮ್ಮ ಕಾಳೂರಿಗೆ ಏನಾಗಿದೆಯಂತೆ? ಯಾವ ಚೆಲುವು ಕಡಿಮೆಯಾಗಿದೆ? ದೊಡ್ಡ ಅಂಗಡಿಗಳಿಲ್ಲ; ಮಾಳಿಗೆಯ ಮನೆಗಳಿಲ್ಲ, ಡಾಮರು ಬಳಿದ ರಸ್ತೆಗಳಿಲ್ಲ, ವಿದ್ಯುದ್ದೀಪಗಳಿಲ್ಲ. ನಿಜ; ಆದರೆ ಸುತ್ತಲಿನ ನಿಸರ್ಗ ಎಷ್ಟು ಚೆನ್ನಾಗಿದೆ! ಜನ ಎಷ್ಟು ಸರಳರು! ಸಜ್ಜನರು! ಅವರ ಜೀವನ ಎಷ್ಟು ಚೆಲುವಿನದು. ಅಲ್ಲದೆ ಹುಟ್ಟಿದ ಊರನ್ನು ನನಗಂತೂ ಮರೆಯುವುದು ಸಾಧ್ಯವೆ? ನಿನಗೆ ನಿನ್ನ ಧಾರವಾಡದ ಓಣಿ, ರಸ್ತೆಗಳ ಮೋಹವಿದ್ದಂತೆ ನನಗೆ ನಮ್ಮೂರಿನ ಹೊಳೆ, ಕಡಲು, ಗದ್ದೆ ಏರಿ, ತೆಂಗಿನ ತೋಟಗಳ ಮೋಹ. ನನ್ನನ್ನು ಮೆಚ್ಚುವವರು ಇವನ್ನೂ ಮೆಚ್ಚಲು ಕಲಿಯಬೇಕು" ಎಂದು ಬರೆದ. ಹೇಗೂ ಇರಲಿ, ಮುಂದೆ ಸರಿದ ಎರಡು ವರ್ಷಗಳ ಕಾಲದಲ್ಲಿ ಗಂಡ ಹೆಂಡಿರ ಪತ್ರ ವ್ಯವಹಾರದಲ್ಲಿ, ಮುಖತ: ನಡೆದ ಸಲ್ಲಾಪಗಳಲ್ಲಿ, ಅವರವರ ಊರಿನ ಮೆಚ್ಚು, ಕೆಚ್ಚುಗಳ ವಿರಸ ತಿರುಗಿ ಉಂಟಾಗದೆ ಸಂತೋಷದಿಂದಲೇ ಸರಿಯಿತು.

ಮದುವೆಯಾದ ಮೊದಲ ವರ್ಷದ ಯುಗಾದಿಗೆ ಮಾಸ್ತರರು 'ರಜೆಗೆ ಬರುವಾಗ ನಿನ್ನ ಇಂದುವನ್ನು ಕರೆದು ತಾ' ಎಂದು ಬರೆದಿದ್ದರು. ಆ ರಜೆಯಲ್ಲಿ ಇಂದುಮತಿ ಅವನ ಜತೆಗೆ ಹೋಗಲು ಒತ್ತಾಯ ಬೇಕಾಯಿತು.

"ನೀವೇ ಹೋಗಿ ಬನ್ನಿ; ಬೇಗನೆ ಬಂದುಬಿಡಿ" ಎಂದಂದರೂ ಯೌವನದ ಬಯಕೆಗಳೂ, ಪತಿಯ ಚೆಲುವಿನ ಮಾತುಗಳೂ ಅವಳನ್ನು ಗೆದ್ದುವು. ಆ ಬಾರಯಂತು ಶಿವು ತುಂಬ ಜತನ ವಹಿಸಿದ್ದ. ಅವನ ಮನೆ ಚಿಕ್ಕ ಮನೆ. ತೀರ ಇಕ್ಕಟ್ಟಿನ ಗುಡಿಸಲು. ಹೊರಗಿನ ತೋಟ ವಿಶಾಲವಾಗಿತ್ತು. ಮನೆಯ ಗೂಡಿನಲ್ಲಿ ದಿನವೆಲ್ಲ ಕುಳಿತಿದ್ದು ಆಕೆಗೆ ಬೇಸರ ಬರಬಾರದೆಂದು ಮುಂಬಯಿಯ ನವದಂಪತಿಗಳಂತೆ, ಕೈ ಹಿಡಿಯುವುದೊಂದನ್ನು ಬಿಟ್ಟು, ಅವಳನ್ನು ಊರಿನ ಕಡಲಿಗೆ, ಬಯಲಿಗೆ ನಿತ್ಯವೂ ಅಲೆದಾಟಕ್ಕೆ ಒಯ್ಯುತ್ತಿದ್ದ. ಚೆಲುವಿನ ನೋಟಗಳನ್ನು ಕಂಡು ತಾನು ಮೆಚ್ಚಿ, ಹೆಮ್ಮೆಯಿಂದ "ಇದು ಚೆನ್ನಾಗಿಲ್ಲವೆ!" ಎಂದು ಕೇಳುತಿದ್ದ. ಚೆನ್ನಾಗಿಲ್ಲ ಅನ್ನಲಾರಳು; ಚೆನ್ನಾಗಿದೆ ಅನ್ನದಿರಲಾರಳು. "ಆದರೆ ಊರು ಮಾತ್ರ, ಊರೆಂದರೆ ಪೇಟೆ ಯಾಕೋ ಹಾಳು ಸುರಿಯುತ್ತದೆ. ಯಾವ ರಾಯನ ಕಾಲದ್ದೋ? ಬರಿಯ ಹುಲ್ಲಿನ ಮನೆಗಳು. ಲಕ್ಷಣವಿಲ್ಲ, ಒನಪಿಲ್ಲ, ಒಯ್ಯಾರವಿಲ್ಲ. ಪೇಟೆಗೆ ಗೆಲುವು ಬರಲು ದೊಡ್ಡ ಅಂಗಡಿಗಳಿರಬೇಕು. ತುಂಬ ಸಾಮಾನುಗಳಿರಬೇಕು. ಇರುವ ಸಾಮಾನುಗಳನ್ನು ಆಕರ್ಷಕವಾಗಿ ಇಟ್ಟು ತೋರಿಸುವ ಚಲಾಕಿ ಬೇಕು. ಬರಿಯ ಗೊಡ್ಡು ಜನಗಳು" ಎಂದೆನ್ನುತ್ತಾಳೆ ಅವಳು. ಅವನೊಪ್ಪಿಯೆ ವಾದಿಸಬೇಕಾಗುತ್ತದೆ ಶಿವು. "ಜನರು ಬಡವರಾದರೆ ಏನು ಮಾಡಿಯಾರು? ಮಾಳಿಗೆ ಮನೆ, ದೊಡ್ಡ ಮಂಡಿಗಳು ಸುಮ್ಮನೆ ಬರುತ್ತವೆಯೆ? ನಿಮ್ಮ ಧಾರವಾಡದಲ್ಲಿ ಒಂದು ಮಾಳಮುಡ್ಡಿ ನೋಡಬಹುದು. ಪೇಟೆ ತಕ್ಕಮಟ್ಟಿಗಿದೆ. ಇನ್ನು ಆ ರೈಟರ್ ಓಣಿಯೋ, ದೇಸಾಯರ ಓಣಿಯೋ, ಮೆಣಸಿನ ಕಾಯಿ ಗಲ್ಲಿಯೋ-ನೆನೆದರೆ ನರಕದ ಕಲ್ಪನೆ ಹುಟ್ಟುತ್ತದೆ. ಏನಿಲ್ಲದಿದ್ದರೂ ಆ ಹೊಲಸು ಇಲ್ಲವಲ್ಲ ನಮ್ಮೂರಲ್ಲಿ" ಎಂದು ವಾದಿಸಿ, ಅವಳನ್ನು ನಗಿಸಿ, ಮನೆಗೆ ಕರೆದು ತರುತ್ತಿದ್ದ.

ಅದರ ಮರುವರ್ಷವೇ ಅವನ ವಿದ್ಯಾಭ್ಯಾಸದ ಕಟ್ಟಕೊನೆಯ ವರ್ಷ. ಪರೀಕ್ಷೆ ಮುಗಿಯಿತು; ಉಸಿರಾಡುವಂತಾಯಿತು. ಧಾರವಾಡಕ್ಕೆ ಮರಳಿದ. ಫಲಿತಾಂಶ ಬಂದ ಮೇಲೆ ಊರಿಗೆ ಹೋಗೋಣ ಎಂದು ಯೋಚಿಸಿದ. ಅಲ್ಲದೆ ತನ್ನ ಇಂದುವಿನೊಡನೆ ಅವಳ ಮನದ ತೃಪ್ತಿಗೆ ವಿಹಾರಕ್ಕೆ ಹೋಗಬೇಕು. ಧಾರವಾಡದ ವಿಸ್ತರಣಗಳನ್ನು ಅವಳ ಸಲುವಾಗಿ ಚೆಲುವೆನ್ನಬೇಕು. ಮನಸ್ಸು ಕೂಡಿದಾಗ, ಎಳೆತನದ ಉತ್ಸಾಹ ತುಂಬಿದಾಗ, ಎದುರಿನ ವಸ್ತು

ಗಳು ನೆಪಕ್ಕೆ ಮಾತ್ರ. ಅಂತಹ ನೆಪಗಳು ಇಲ್ಲದಿದ್ದರೂ ಸಂತೋಷಕ್ಕೆ ಕೊರತೆಯಿಲ್ಲ. ಎರಡು ತಿಂಗಳುಗಳು ಸರಿಯುತ್ತಲೇ ಪರೀಕ್ಷೆಯ ಫಲಿತಾಂಶ ಬರದೇ ಬಂದಿತು. ಅದರ ಫಲ ತಿಳಿದದ್ದೇ. ಎಣಿಸಿದಂತೆ ಶಿವು ಪಾಸಾಗಿದ್ದ. ಹಾಗೆ ಐದು ವರ್ಷಗಳಲ್ಲಿ ವೈದ್ಯಕೀಯ ಅಜ್ಞಾತ ವಾಸ ಮುಗಿಸುವವರು ಕಡಿಮೆ. ಅಂತಹ ವಿರಳ ಸುದೈವಿಗಳಲ್ಲಿ ಶಿವು ಒಬ್ಬನು. ಆ ವಾರ್ತೆ ತಿಳಿದ ದಿನ ರಂಗರಾಯರು "ಏನು ಶಿವು, ಮುಂದಿನ ಯೋಚನೆಯೇನು? ಸರಕಾರಿ ನೌಕರಿಯೆ, ಖಾಸಗಿ ಶಾಪೇ?" ಎಂದು ಕೇಳಿದರು. ಮೊದಲು ಕೇಳಲಿಲ್ಲವೆಂದಲ್ಲ. ಕೇಳಿದ್ದರು. ಕೇಳಿದ್ದಕ್ಕೆ "ಪಾಸಾಗುವ ತನಕ ಯಾಕೆ ಆ ಚಿಂತೆ" ಎಂದಿದ್ದ ಆತ. ಈಗ ಕೇಳಿದ ಪ್ರಶ್ನೆಗೆ ಉತ್ತರ ಹೇಳಬೇಕು. "ನೌಕರಿ ಬೇಡ—ಯಾವಾವ ಊರಿಗೆ ಅಲೆದಾಡುವ ಕೆಲಸ. ಈಗಿನ ದಿನಗಳಲ್ಲಿ ಡಾಕ್ಟರನಾದವನು ಎಲ್ಲಿದ್ದರೂ ಜೀವನ ಸಾಗಿಸಬಹುದು—ಅಲ್ಲವೆ? ನಾನು ಅಪ್ಪನಿಗೆ ಒಂದು ಮಾತನ್ನು ಸಲ್ಲಿಸಿದ್ದೇನೆ. ಅವರು ಬೇಸರ ಪಡಬಾರದಲ್ಲ" ಎಂದ.

"ಕಾಳೂರಿನಲ್ಲೇ!" ಎಂದು ರಂಗರಾಯರು ವಿಸ್ಮಯ ತಾಳಿದರು. ಅವರ ಹುಟ್ಟು ಆ ಊರಿನಲ್ಲಾದರೂ ವಿಧಿ, ಅವರನ್ನು ಧಾರವಾಡದಲ್ಲಿ ಬೆಳೆಸಿತು. ಸಾಕೂರಿನ ಮೋಹ ಹುಟ್ಟೂರನ್ನು ಗೆದ್ದಿತು. "ಸ್ವಂತ ಪ್ರೆಕ್ಟಿಸ್ ಮಾಡುವ ಧೈರ್ಯವಿದ್ದರೆ ಧಾರವಾಡ ಚೆನ್ನಲ್ಲವೆ? ಇಲ್ಲಿಯೂ ನಾಲ್ಕಾರು ಮಂದಿ ಖಾಸಗಿ ಡಾಕ್ಟರುಗಳಿದ್ದಾರೆ ಎಂಬುದರಿಂದ ಹೊಸಬನಿಗೆ ಕಷ್ಟವಾದೀತೆ? ಎಷ್ಟೆಂದರೂ ದೊಡ್ಡ ಊರು. ಜನಸಂಖ್ಯೆಯಿದೆ. ಜನಗಳಲ್ಲಿ ದುಡ್ಡು ಕೊಡುವ ಅನುಕೂಲತೆಯೂ ಹೆಚ್ಚಿಗಿದೆ. ನೀನೇ ಹೇಳುತ್ತೀ—ಕಾಳೂರು ಬಡಬಗ್ಗರ ಊರೆಂದು" ಎಂದರು.

"ಹಾಗಲ್ಲ, ಎಷ್ಟೆಂದರೂ ಹುಟ್ಟಿದ ಊರು. ಸುಮಾರು ಹತ್ತಿಪ್ಪತ್ತು ಮೈಲು ಪಾಸಲೆಯೊಳಗೆ ಒಂದೇ ಒಂದು ಆಸ್ಪತ್ರೆ ಇಲ್ಲ. ಈ ವರ್ಷವೇ ಒಂದು ಸರಕಾರದ್ದೋ ಲೋಕಲ್ ಬೋರ್ಡಿನದೋ ಆಸ್ಪತ್ರೆಯಾಗುತ್ತದಂತೆ. ಆದರೆ ಆಯಿತು; ಇಲ್ಲವಾದರೆ ಇಲ್ಲ. ಒಬ್ಬನ ದುಡಿತಕ್ಕೆ ಏನೂ ಕೊರತೆ ಬರಲಾರದು.

"ಹೂಂ—ದುಡಿಯುವುದೇನೊ, ದುಡಿಯ ಬಹುದು. ದುಡಿಯುವವನಿಗೆ ಎಲ್ಲಿಯೂ ಸ್ಥಳವಿದೆ. ಆದರೆ ಗಳಿಸುವುದಕ್ಕೆ ಹಳ್ಳಿ ಸೇರಿ ಪ್ರಯೋಜನವೇನು? ನಿನ್ನ ಸಂಸಾರ ಸಾಗಬೇಡವೆ? ನಾನೂ ಅಲ್ಲಿಯೆ ಹುಟ್ಟಿದವನ

ಲ್ಲವೆ? ಆ ಮೇಲೆ ಅಲ್ಲಿಗೆ ಹೋಗಿಲ್ಲವಾದರೂ ಅಲ್ಲಿಯ ಸುದ್ದಿ ತಿಳಿಯದ್ದೇನಲ್ಲ. ಊರಿನಲ್ಲಿ ಹತ್ತು ಮನೆ ಹೆಚ್ಚಿಲ್ಲ; ಒಂದುಕಡ್ಡಿ ಆಚೆಂದೀಚೆ ಆಗಲಿಲ್ಲ. ನೀನು, ನಿನ್ನ ಹೆಂಡತಿ, ತಂದೆ, ತಾಯಿ ಇಷ್ಟೆಲ್ಲ ಮಂದಿ ನಿನ್ನ ಅಂತಸ್ತು ಗೌರವಗಳಿಗೆ ತಕ್ಕುದಾಗಿ ಬದುಕ ಬೇಡವೆ?"

"ನಿಜ–ಆದರೆ ಊರವರೆಲ್ಲ ಬಡವರಾಗಿರುವಾಗ, ಅವರ ಎಡೆಯಲ್ಲಿ ನಾನೊಬ್ಬನೇ ಶ್ರಿಮಂತನಾಗಿರುವುದು ಸಾಧ್ಯವಿಲ್ಲ. ಆಪರೂ ಒಂದು ಧೈರ್ಯ ನನಗೆ–ಜೀವನಕ್ಕೆ ಮೋಸವಾಗಲಾರದೆಂದು. ಈ ಒಂದು ವಿಚಾರದಲ್ಲಿ ನೀವು ಆಗ್ರಹಪಡಿಸಬಾರದು. ನನ್ನ ತಂದೆಗೂ ಅದು ಇಷ್ಟ; ಅಲ್ಲವೆ ಚಿಕ್ಕಂದಿನಿಂದಲೂ ಅದೊಂದು ಭ್ರಮೆ ನನ್ನಲ್ಲಿ ಮನೆಮಾಡಿಕೊಂಡಿದೆ."

ರಂಗರಾಯರಿಗೆ ಶಿವನ ಪರಿಚಯು ಸುಮಾರು ಏಳು ವರ್ಷಗಳದು. ಅಷ್ಟಿರುತ್ತ ಅವನ ಮನಸ್ಸು, ರೀತಿಗಳನ್ನು ತಿಳಿಯುವುದಕ್ಕೆ ಹೆಚ್ಚಿನ ಕಷ್ಟವಿಲ್ಲ. ಆತ ಆಡಂಬರವಿಲ್ಲದವ, ಸರಳ, ಸಜ್ಜನ ಎಂದು ಬಲ್ಲರು. ಅತ್ತ, ತಮ್ಮ ಮಗಳಿಗೆ ಕಾಳೂರಿನ ವಾಸ ಇಷ್ಟವಲ್ಲದ್ದು ಎಂಬುದೂ ತಿಳಿದಿತ್ತು. ಆದರೆ ಶಿವನಂತಹ ಹುಡುಗರ ಮೇಲೆ ತಮ್ಮ ನಿರ್ಧಾರ ಹೊರಿಸಬಾರದು. ಅನಾವಶ್ಯಕವಾದ ಬೇಸರ ಉಂಟುಮಾಡಬಾರದು ಎಂದೂ ಬಲ್ಲರು. 'ನಾಳಿನ ದಿವಸ ಕಾಳೂರಿನಲ್ಲಿ ಕಾಸು ಸಿಗದೆ ಜೀವನ ಕಷ್ಟವಾದರೆ, ತಾನಾಗಿಯೇ ಧಾರವಾಡಕ್ಕೆ ಬಂದಾನು' ಎಂದೆನಿಸಿತು. ಆ ಪ್ರಶ್ನೆ ತೀರ್ಮಾನವಾದ ಹಾಗೆಯೇ. ಆದರೆ ಅದು ಇಂದುಮತಿಯ ಮನಸ್ಸಿಗೆ ಪರಿಹಾರವಲ್ಲ. ಆಕೆ ತನ್ನ ಮುನಿಸನ್ನು ಚುಚ್ಚುಮಾತುಗಳಿಂದ ತಿಳಿಸಲು ಪ್ರಯತ್ನಿಸಿದಳು. "ನಾನಲ್ಲಿಗೆ ಬರುವುದಿಲ್ಲ. ನೀವೊಬ್ಬರೇ ಹೋಗಿರಬೇಕಾದೀತು" ಎಂದು ಅರ್ಧ ನಗು, ಅರ್ಧನೋವಿನಿಂದ ನುಡಿದಳು.

ಶಿವು ನೊಂದರೂ, ತೋರಿಸಿಕೊಳ್ಳಲಿಲ್ಲ. ನಗುವನ್ನು ನಟಿಸಿ "ನಮ್ಮ ಕಾಳೂರಿನವರು ಅಷ್ಟು ಕೆಟ್ಟವರೆಂದು ನಿನಗೆ ತೋರಿದರೆ ನೀನು ನಿನ್ನ ತಂದೆ ಮನೆಯಲ್ಲಿಯೆ ಇರುತ್ತೀಯ. ಹಾಗೆಯೇ ನಾನು ನನ್ನ ತಂದೆಯನ್ನು ಬಿಡಬಾರದಲ್ಲ" ಎಂದೇಬಿಟ್ಟ. ಆಕೆಯ ಅಧಿಕಾರ ಅಭಿಮಾನಗಳೆರಡೂ ಕುಸಿದು, ಕಂಬನಿ ಬರುವಂತಾಯಿತು. ಸಂಗತಿಯು ವಿಷಮಕ್ಕೆ ಹೋಗುವ ಮೊದಲೇ ಹಿರಿಯರು ಬುದ್ಧಿ ಹೇಳಬೇಕಾಯಿತು. "ಏನೇ ಇಂದು, ಮದುವೆಯಾದ ನಿನ್ನ ಅಕ್ಕಂದಿರು ಗಂಡಂದಿರ ಮನೆಗೆ ಹೋಗಲಿಲ್ಲವೆ? ಯಾವ

ಊರಿಗೆ ಹೋದರೂ, ಎಲ್ಲಿಗೆ ಹೋದರೂ, ಧಾರವಾಡಕ್ಕೆ ವರ್ಷಕ್ಕೆ ಒಂದೆ ರಡು ಬಾರಿ ಬಂದೇ ಬರುತ್ತಾರೆ. ಶಿವು ನೀನಿದ್ದಲ್ಲಿಗೆ ಬರುವುದೇ? ಅವನಿದ್ದ ಲ್ಲಿಗೆ ನೀನು ಹೋಗುವುದೇ? ಎಂತಹ ನಗೆಚಾಟಿಕೆಯ ಮಾತು!" ಎಂದರು. ಹಾಗಾಗಿ ಶಿವು ಸಪತ್ನಿಕನಾಗಿ ಕಾಳೂರನ್ನು ಸೇರುವಂತಾಯಿತು. ರಂಗ ರಾಯರು ಆರಂಭದಲ್ಲಿ–ಔಷಧ, ಶಸ್ತ್ರ ಸಾಮಗ್ರಿಗಳ ಸಲುವಾಗಿ ಒಂದಿಷ್ಟು ಹಣವನ್ನು ಒದಗಿಸಿಕೊಟ್ಟರು. ಆದ್ದರಿಂದ ಶಿವು, 'ಡಾಕ್ಟರ್ ಕಾಳೂರು' ಎಂಬ ಬಿರುದಿನ ಬೋರ್ಡನ್ನು ಹಾಕಿ, ಮದ್ದಿನ ಅಂಗಡಿ ತೆರೆಯುವುದು ಸಾಧ್ಯವಾಯಿತು. ಬಿರುದು ಹೇಗೂ ಇರಲಿ. ಊರವರ ಕರೆಯುವುದು ಮಾತ್ರ 'ಕಿಟ್ಟಪ್ಪ ಮಾಸ್ತರರ ಮಗ' ಎಂದೇ. ಆ ಬಿರುದು ತಪ್ಪಿದರೆ 'ಶಿವಪ್ಪ ಡಾಕ್ಟರರ ಅಂಗಡಿಗೆ ಮದ್ದಿಗೆ ಹೋಗುವ,' ಎನ್ನುತ್ತಾರೆಯೇ ಹೊರತು ಬೋರ್ಡಿನ ಬಿರುದು ಬೋರ್ಡಿನಲ್ಲೇ. ಅವನು ದವಾಖಾನೆ ತೆರೆದ ಸಮಯದಲ್ಲೇ ಊರಲ್ಲೊಂದು ಧರ್ಮಾಸ್ಪತ್ರೆಯೂ ತೆರೆಯಲ್ಪಟ್ಟಿತು. ಹೀಗಾಗಿ ಬಡಬಗ್ಗರ ಪಾಲಿಗೆ ಬಿಟ್ಟಿ ಔಷಧವನ್ನು ಸೇವಿಸಿ, ಗುಣವಾಗದೆ ಹೋದರೆ, ಕಾಸು ಕೊಟ್ಟು ಕಹಿಮದ್ದು ಕುಡಿಯಬೇಕೆಂಬ ಆಸೆಯಾದೀತು. ಒಂದೆರಡು ವರ್ಷ ಹಾಗೂ ಹೀಗೂ ಸವೆದ ಮೇಲೆ, ಊರಿನ ನಾಲ್ಕು ಮಂದಿ "ಏನೇ ಇರಲಿ, ನಮ್ಮ ಕಿಟ್ಟಪ್ಪ ಮಾಸ್ತರರ ಮಗನ ಕೈಗುಣ ಒಳ್ಳೆಯದು" ಎನ್ನ ತೊಡಗಿದ್ದಾರೆ. ಶಿವಪ್ಪನಿಗೆ ಅದು ಮೊದಲೇ ಗೊತ್ತಿದ್ದರೆ, ಹಣ ಸುರಿದು ವೈದ್ಯವೃತ್ತಿ ಕಲಿಯುವ ಮೊದಲೆ ಮುದ್ದು ಕೊಡುತ್ತಿದ್ದನೋ ಏನೊ? ಆದರೆ ಹಳ್ಳಿಗಳ ಮಟ್ಟಿಗೆ ರೋಗ ನಿದಾನ,ಚಿಕಿತ್ಸೆಗಳಿಗಿಂತ ಕೈಗುಣ ಮುಖ್ಯ. ಆ ಕೈಗುಣ ಧರ್ಮಾಸ್ಪತ್ರೆಯ ಡಾಕ್ಟರಿಗಿಲ್ಲ–ಎಂಬುದು ಖಾತ್ರಿ.

ಒಂದೆರಡು ವರ್ಷಗಳ ಅವಧಿಯಲ್ಲಿ ಶಿವು ಊರಿನ ಸುತ್ತುಮುತ್ತ ಲಿನ ಬಡಬಗ್ಗರಿಗೆ ಪ್ರಿಯನಾದ ವೈದ್ಯನಾಗಿದ್ದಾನೆ. ಎಂಥವರನ್ನೂ ವಿರಾಮ ವಾಗಿ ಕೇಳುವ ತಾಳ್ಮೆಯಿದೆ. ದುಡುಕಿಲ್ಲ. ಕೆಲಸದಲ್ಲಿ ಆಸಕ್ತಿಯಿದೆ. ಅಲ್ಲದೆ ಜನಗಳು ಬಾಯಲ್ಲಿ "ದುಡ್ಡಿನ ಆಂಕರು" ಇಲ್ಲ ಎನ್ನುತಿದ್ದಾರೆ. ಊರಿನ ದೊಡ್ಡವರಲ್ಲಿ ಅಷ್ಟು ಆದರ ಇದ್ದಿರಲಾರದು. ಅಂಥವರಲ್ಲಿ ಶ್ರೀಪತಿರಾಯರ ಮನೆಯವರು ಮುಖ್ಯ. ಅವರಿಗೆ ಉಂಟಾದ ಅತೃಪ್ತಿಯೆ ಮುನಿಸಿಗೆ ಕಾರಣ. ಆ ಮುನಿಸಿನ ಫಲವೇ ಧರ್ಮಾಸ್ಪತ್ರೆ. ತಮ್ಮ ವರ್ಚಸ್ಸಿನಿಂದ ಬೋರ್ಡಿನ ವೆಚ್ಚದಲ್ಲಿ, ಅವಸರದಲ್ಲಿಯೆ ಆಸ್ಪತ್ರೆ ತೆರೆಯಿಸಿದರು. ಅದು ತೆರೆದ ವೇಳೆ

ಶಿವು ಊರಿಗೆ ಬಂದು ಸ್ಥಾಪಿತನಾದುದು. ಶ್ರೀಪತಿರಾಯರ ಮನೆಯ ವರ ಪ್ರೋತ್ಸಾಹ, ಪ್ರಚಾರ, ಆಸ್ಪತ್ರೆಯ ವಿಷಯದಲ್ಲೂ, ಅಲ್ಲಿನ ಡಾಕ್ಟರರ ವಿಚಾರದಲ್ಲೂ ಹೆಚ್ಚಾಗಿಯೇ ಇತ್ತು. ಸಾಲದ್ದಕ್ಕೆ ಆ ಡಾಕ್ಟರರು, ಹಳೆಯ ದಾದರೂ ಒಂದು ಮೋಟರುವಾಹನ ಇಟ್ಟುಕೊಂಡವರು. ಕರೆದಲ್ಲಿಗೆ ತಕ್ಷಣ ಹೋಗಿ ಸಹಾಯ ನೀಡಬಲ್ಲ ಅನುಕೂಲತೆಯಿದ್ದವರು. ವಾಹನಕ್ಕೆ ತಕ್ಕ ಬಹುಮಾನ ಅಪೇಕ್ಷಿಸುವವರು. ಶಿವನ ವಾಹನ-ಕಾಲು, ಇಲ್ಲದೆ ಹೋದರೆ ಸೈಕಲ್. ಆದರೆ ಆತ ಒಳ್ಳೆಯವ; ಕರೆದಲ್ಲಿಗೆ, ಕರೆದ ಗಳಿಗೆಗೆ ಹೋಗು ತ್ತಾನೆ. ಹಣದ ವಿಷಯ ಕರಾರು ಆದ ಮೇಲೆ ಹೊರಡುವವನಲ್ಲ; 'ಇಷ್ಟನ್ನೇ ಕೊಡಿ' ಎಂದು ಹೇಳದೆ ಕೊಟ್ಟದ್ದರಿಂದ ತೃಪ್ತಿಪಟ್ಟು ಕೆಲಸಮಾಡುತ್ತಾನೆ- ಎಂಬ ಒಳ್ಳೆಯ ಮಾತುಗಳು ಅವನ ವಿಷಯದಲ್ಲಿ ಕೇಳಿಬರುತ್ತಿದ್ದುವು.

ಇದು ಶಿವುವಿನ ಪಾಲಿಗೆ ಕೀರ್ತಿಯೇ ಅನ್ನಬೇಕು. ಅಷ್ಟು ಬೇಗ, ಹೊಸಬನಾದರೂ ತನ್ನಲ್ಲಿಗೆ ಜನ ಬಂದಾರು; ಆಪತ್ತಿನಲ್ಲಿ ಮನೆಗೆ ಕರೆಮೊ ಯ್ಯುವ ವಿಶ್ವಾಸವನ್ನಿರಿಸಿಯಾರು-ಎಂದು ಆತನೇ ಊಹಿಸಿರಲಿಲ್ಲ. ತಾನು ಅನನುಭವಿಕನಾದರೂ—ಬಂದ ಯಾವುದೇ ಬೇನೆ ಇರಲಿ, ರೋಗಿ ಇರಲಿ— ಪರಿಶೀಲಿಸಿ, ತಿಳಿದು, ಸಹಾನುಭೂತಿಯಿಂದ ಕಂಡು, ಚಿಕಿತ್ಸೆ ಹೇಳುತ್ತಿದ್ದ. ಪಥ್ಯ ಹೇಳುತ್ತಿದ್ದ. ಚಿಕಿತ್ಸೆಯ ಭಾಗ ಅವನದು. ಪಥ್ಯದ ಹೊಣೆ ರೋಗಿ ಯದು. ಆ ಭಾಗವನ್ನು ನೆನೆದಾಗಲೆಲ್ಲಾ, ತಾನು ಕಲಿತ ಓದನ್ನು ಮರೆಯ ಬೇಕು ಎಂದವನಿಗನಿಸುತಿತ್ತು. "ಮುಸಂಬಿ ರಸ ಕೊಡು, ಹಾಲು ಕೊಡು, ಹಣ್ಣು ಕೊಡು—ಅನ್ನುವುದೇನೊ ಸರಿಯೆ. ಪಾಪ! ಮದ್ದಿನ ಮೂರಾಣೆ ಗಳನ್ನು ಕೊಡಲಿಕ್ಕೆ ಕಂಗಾಲಾಗುವ ಜನರು ಅದನ್ನೆಲ್ಲಿಂದ ತಂದಾರು? ಹೇಗೆ ಪೂರೈಸಿಯಾರು?" ಎಂಬುದನ್ನು ಆತ ಮನಗಾಣತೊಡಗಿದ. ಅವನ ಇಂತಹ ಮಾನಸಿಕ ಚರ್ಚೆಗಳಿಗೆ ಇಂದುಮತಿಯನ್ನು ಪಾಲುಗಾರ್ತಿಯಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ; ಅವಳಿಗೆ ತನ್ನೂರಿನ ಜೀವನದಲ್ಲಿ ಅನುತಾಪ, ಸಹಾನುಭೂತಿಗಳನ್ನು ಹುಟ್ಟಿಸಲು ಪ್ರಯತ್ನಿಸುತ್ತಾನೆ. ಶಿವು ವಿನ ಪುಣ್ಯದಿಂದೆಂಬಂತೆ, ಅತ್ತೆ ಮಾವಂದಿರಿಬ್ಬರೂ 'ಇಂದುಮತಿಯನ್ನು 'ಮಗು' ಎಂದು ಮಮತೆಯಿಂದಲೇ ನೋಡುತ್ತಿದ್ದರು. ಮಾತ್ರವಲ್ಲ ಶಿವನ ತಾಯಿಯು ಸೊಸೆಗೆ ಹೆಚ್ಚಿನ ಶ್ರಮಕೊಡಲು ಬಯಸುತ್ತಿರಲಿಲ್ಲ. ಶ್ರೀಮಂತರ ಮನೆಯ ಹುಡುಗಿ, ಚಿಂತೆ ಇಲ್ಲದೆ ಸಾಲೆಗೆ ಹೋದವಳು;

ತನ್ನಷ್ಟು ದಣಿಯಲಾರಳು, ದುಡಿಯಲಾರಳು — ಎಂದು ಯೋಚಿಸುವಳು. ಇಂದುಮತಿಗೆ ಅತ್ತೆ, ಮಾವಂದಿರ ವಿಚಾರದಲ್ಲಿ ಯಾವೊಂದೂ ದೂಷಣೆ ಹೇಳುವುದಕ್ಕೂ ಅವಕಾಶವಿರಲಿಲ್ಲ. ಆದರೆ ಅವಳ ಅಂತರಂಗಕ್ಕೆ ತೃಪ್ತಿ ಇರಲಿಲ್ಲ. ನಾಲ್ಕು ಮಂದಿಯಲ್ಲಿ-ಶ್ರೀಮಂತರ ಮಗಳಾದ ತಾನು ಸಿರಿವಂತಿಕೆ ಯಿಂದ ಮೆರೆಯಬೇಕು—ಎಂಬ ಚಪಲ ಅವಳದ್ದು. ಆಚೀಚೆ ಎಲ್ಲಿಗೆ ಹೋದರೂ, ತಾನೇನು ಬಟ್ಟೆ ಆಭರಣ ತೊಟ್ಟು ಹೋದರೂ, ಅವಳನ್ನು ಸಂಧಿಸುವ ಹಳ್ಳಿಯ ಗೆಳತಿಯರು 'ಎಲ್ಲಿನದು? ಗಂಡ ತೆಗೆಯಿಸಿಕೊಟ್ಟದ್ದೆ! ತವರಿಂದ ತಂದದ್ದೆ? ನಿಮಗೇನಪ್ಪಾ—ನಿಮ್ಮ ಅಪ್ಪನಿಗೆ ಜವುಳಿ ಅಂಗಡಿ ಇದೆ ಎಂತಲ್ಲಾ?" ಎಂದು ಹೇಳುತ್ತಾರೆ. ತವರು ಮನೆಯಿಂದ ಅವಳು ತರುವು ದಕ್ಕೂ ಕಡಿಮೆಯಾಗಿಲ್ಲ. ಆದರೆ ಕೈ ಹಿಡಿದ ಗಂಡನಿಂದ ಅಷ್ಟೆಲ್ಲ ಸಂಭ್ರಮ ಬಂದಿಲ್ಲ, ಬರುತ್ತಲಿಲ್ಲ—ಎಂಬ ನೆನೆವರಿಕೆ ಉಂಟಾಗಲೇ ಬೇಕಾಗುತ್ತದೆ.

ಶಿವು ತನ್ನ ಮಡದಿಗೆ, ತಾಯಿಗೆ ಸೀರೆ, ಕಣ ತಂದುಕೊಟ್ಟವನಲ್ಲವೆ? ಈಗೊಮ್ಮೆ, ಆಗೊಮ್ಮೆ ತಂದುಕೊಟ್ಟಿದ್ದಾನೆ. ಮನೆಯಲ್ಲಿ ಉಡುವುದಕ್ಕಷ್ಟೆ ಅವುಗಳ ಉಪಯೋಗ; ಮೆರವಣಿಗೆಯ ವಸ್ತ್ರಗಳು ಧಾರವಾಡದಿಂದ ಬಂ ದುವು. ಆಭರಣಗಳನ್ನಂತೂ ಮಾಡಿಸಿಯೇ ಇಲ್ಲ. ಹೋಗಲಿ; ಇರುವುದ ಕ್ಕೊಂದು ಚೆನ್ನಾದ ಬಂಗಲೆಯನ್ನಾದರೂ ಕಟ್ಟಿಸಬಾರದೇ? ಬೆಳಕು ಗಾಳಿ ಸಾಕಾಗದ ಈ ಜೋಪಡಿಯಲ್ಲಿ ಎಷ್ಟು ದಿನವಿರಬೇಕು? ಆಚೀಚಿನವರು ಅನ್ನುವ ಹಾಗೆ—ಕೋಳಿಯ ಗೂಡು! ಆ ನೋವು ಮಾತ್ರ ಮರೆಯಲಾರದು. ಹಗಲೆಲ್ಲ ಪತಿರಾಯನು ಆಸ್ಪತ್ರೆಯ ರೋಗಿಗಳ ಸೇವೆಯಲ್ಲೇ ನಿರತ. ಹಗ ಲೆಲ್ಲಾ ದುಡಿತ. ಬೇಕಾದರೆ ರಾತ್ರಿಯೂ ಎದ್ದೋಡಬೇಕು. ಕೈತುಂಬ ಕಾಸು ಓಡಾಡುವುದು ಮಾತ್ರ ಕಾಣುವುದಿಲ್ಲ. ಅದನ್ನು ಕಂಡ ಅವಳು 'ಒಳ್ಳೆಯ ಕಾಳೂರವರು. ಕಾಸನ್ನು ಕೊಟ್ಟೇ ಗೊತ್ತಿಲ್ಲ. ಆಸ್ಪತ್ರೆಯ ಡಾಕ್ಟರರಿಗೆ ಹೊರ ಡುವ ಮೊದಲೇ ಇಪ್ಪತ್ತು ಮೂವತ್ತು ಕೊಡುತ್ತಾರಂತೆ. ನಿಮ್ಮನ್ನು ಕಂಡು ಐದು ರೂಪಾಯಿ ಸಹ ಕೊಡುವವರಿಲ್ಲ. ಬಿಟ್ಟಿ ಮಾಡಬೇಕಾದರೆ ನೀವು; ಕಿಟ್ಟಪ್ಪ ಮಾಸ್ತರರ ಮಗ. ದುಡ್ಡು ಮರ್ಯಾದೆಗಳೆಲ್ಲ ಸರಕಾರಿ ಆಸ್ಪ ತ್ರೆಯ ಡಾಕ್ಟರರಿಗೆ' ಎಂದು ಬಾಯಿಬಿಟ್ಟು ತನ್ನ ಅಸಮಾಧಾನ ತೋಡಿ ಕೊಳ್ಳುತ್ತಾಳೆ.

ಇಂತಹ ಮಾತು ಕೇಳಿದಾಗಲೆಲ್ಲ ಶಿವು ನಗುತ್ತಾನೆ; ಒಳಗಿಂದೊಳಗೆ

ನೊಂದುಕೊಳ್ಳುತ್ತಾನೆ. "ಹಾಗಲ್ಲ ಇಂದು, ಬಂದ ಮೊದಲಿಗೆ--ನನ್ನಲ್ಲಿ, ನನ್ನ ಯೋಗ್ಯತೆಯಲ್ಲಿ, ವಿಶ್ವಾಸ ಹುಟ್ಟುವ ಮೊದಲೇನೆ-ಹಣಕಾಸು ನಿರ್ಣಯಮಾಡಲು, ಇದು ಅಂತಹ ಊರೇ? ನಾನೇನು ಅಂತಹ ತಜ್ಞನೇ? ಇಂದಲ್ಲವಾದರೆ ನಾಳೆಯಾದರೂ ಕೊಟ್ಟಾರು" ಎನ್ನುತ್ತಾನೆ.

"ಹೌದು. ಕೊಡುವುದು ಕಾಣುತ್ತಲೇ ಇದೆ-ಹಾಗಲಕಾಯಿ, ಬಾಳೆಹಣ್ಣು, ತೆಂಗಿನಕಾಯಿಗಳನ್ನು ತಂದು ಕೊಟ್ಟಾರು; ಕೊಡುತ್ತಿದ್ದಾರೆ."

"ಅದನ್ನಾದರೂ ಕೊಡುತ್ತಾರಲ್ಲ, ಬಡವರು. ಕೊಡುವ ಮನಸ್ಸಿದೆ ಎಂದಾಯಿತಲ್ಲ."

"ನಿಮ್ಮೂರಿನಲ್ಲಿ ಬಡವರು ಯಾರು, ಶ್ರೀಮಂತರು ಯಾರು--ಎಂದು ನನಗೆ ಗೊತ್ತಾಗುವುದಿಲ್ಲ."

"ನಿಜಕ್ಕೂ ಎಷ್ಟುಮಂದಿ ಶ್ರೀಮಂತರಿದ್ದಾರೆಂದು ಯೋಚಿಸುತ್ತೀಯಾ, ಈ ಊರಲ್ಲಿ? ಒಂದು ನಾಲ್ಕು ಮನೆಗಳಿವೆ. ಉಳಿದವರು? ಕೈಬಿಚ್ಚಿ ಡಾಕ್ಟರಿಗೆ ಕೊಟ್ಟರೆ, ಮನೆಯ ರೋಗಿಗೆ ಉಪವಾಸ. ಎಲ್ಲದಕ್ಕೂ ಒಳ್ಳೆಯ ದಿನವಿದೆಯಂತೆ. ಅಂತಹ ದಿನ ನಮ್ಮೂರಿಗೆ ಬಂದರೆ ನನಗೂ ಬರುತ್ತದೆ."

"ಹೂಂ. ಆ ಒಳ್ಳೆಯ ದಿನ ಬಂದು, ನಿಮ್ಮೂರು ಒಂದು ನಗರವಾಗುತ್ತದೆ. ಮುಂಬಯಿಯ ಪ್ಲೇಟ್ಸ್, ಬಂಗಲೆಗಳೆಲ್ಲ ಬರುತ್ತವೆ. ನಿಮಗೂ ಒಂದು ಬಂಗಲೆ ದೊರೆತು, ರೋಲ್ಸ್ ರೊಯ್ಸ್ ಕಾರು ಬಂದು ಸಂಭ್ರಮ ಸಂಪೂರ್ಣವಾಗುವಾಗ ನೋಡುವುದಕ್ಕೆ ನಾನು ಮಾತ್ರ ಬದುಕಿ ಇರುತ್ತೇನೊ ಇಲ್ಲವೊ?"

ಈ ಮಾತು ತೊಡಗಿದುದು ಪರಿಹಾಸ್ಯದಲ್ಲಿ; ಪರ್ಯವಸಾನ ತಿರಸ್ಕಾರದಲ್ಲಿ, ನೋವಿನಲ್ಲಿ. ಇಂದುಮತಿಯ ಮನಸ್ಸಿನಲ್ಲಿ ನೋವು ಹುದುಗಿದೆ, ಕಹಿ ಕಾಣಿಸಿದೆ-ಎಂದು ಬಲ್ಲ ಶಿವು, ತಡೆಯದ್ದಕ್ಕೆ "ನಿಜಕ್ಕೂ ನಿನ್ನ ಮನಸ್ಸಿಗೇನು ಅನಿಸುತ್ತಿದೆ ಹೇಳು. ವಸ್ತು, ಒಡವೆ, ಬಂಗ್ಲೆ, ಕಾರು-ಇಷ್ಟೆಲ್ಲ ಬೇಕೆಂದಿದೆಯಲ್ಲವೆ?" ಎಂದು ಕೇಳಿಯೇ ಕೇಳಿದ.

ಅಷ್ಟು ನೇರಾದ ಪ್ರಶ್ನೆಯನ್ನು ಅವಳು ನಿರೀಕ್ಷಿಸಿರಲಿಲ್ಲ. ಮನಸ್ಸು ಚುಚ್ಚಿತು; ನೊಂದಿತು. "ನನಗಾಗಿ ಏನೂ ಬೇಡ. ಆದರೆ ನಿಮ್ಮ ಊರವರು ನನ್ನ ಮೈ ಮೇಲಿರುವ ಅರಿವೆ, ಒಡವೆಗಳನ್ನು ನೋಡಿ 'ತವರಿಂದಲೆ' ಎಂದು ಕೇಳಿ, ಕೇಳಿ ಮರ್ಯಾದೆ ಕಳೆಯುವಂತಾಗದಿರಲಿ. ಬೇರೆಯೇನೂ

ಆಗದೆ ಹೋದರೆ, ಒಂದು ಸಾಮಾನ್ಯ ಮನೆಯನ್ನಾದರೂ ಕಟ್ಟಿಸಿ" ಎಂದು ತನ್ನ ನೋವಿನ ಭಾರವನ್ನು ಇಳುಹಿದಳು.

"ಹಾಗಿದ್ದರೆ ನಿನ್ನ ತಂದೆಯ ಋಣವನ್ನು ನಾನು ತೀರಿಸಬೇಕಿಲ್ಲ-ಎನ್ನುತ್ತೀಯಾ?" ಎಂದ ಶಿವು.

## ಅಧ್ಯಾಯ ೨.

ಕಾಳೂರು ಬಹು ವರ್ಷಗಳಿಂದಲೂ, ಅದೇ ಹೆಸರಿನಿಂದ ಮೆರೆದು ಬಂದಂಥ ಪೇಟೆ. ಅದನ್ನೇ ಆ ಊರಿನ ಓದು ಬಲ್ಲವರು ಅಭಿಮಾನದಿಂದ ಪಟ್ಟಣ ಎಂದು ಕರೆಯುವುದೂ ಉಂಟು. ರಾಜಕೀಯದ ಮಟ್ಟಿಗೆ, ಅದು ಪೇಟಾ ಅಂದರೆ ಉಪ ತಾಲೂಕಿನ ರಾಜಧಾನಿ. ಚಿಕ್ಕೊಂದು ಪೊಲೀಸ್ ಚೌಕಿ ಇದೆ; ಆಸ್ಪತ್ರೆ ಇದೆ. ಆರೆಂಟು ವರ್ಷಗಳಿಂದ ಹೈಸ್ಕೂಲ್ ಒಂದು ನಡೆದು ಬಂದು, ಊರಲ್ಲಿ ಇಂಗ್ಲಿಷು ಮಾತಾಡಬಲ್ಲ ಹಲವಾರು ತರುಣರು ಕಾಣಸಿಗುತ್ತಾರೆ. ಬಸ್ ಹೋಗುವ ದಾರಿಯಾದುದರಿಂದ ಇಂಗ್ಲಿಷ್ ವಾರ್ತಾಪತ್ರಗಳನ್ನು ತರಿಸಿಕೊಂಡು, ಆತುರದಿಂದ ಓದುವ ಕೆಲವರಾದರೂ ವ್ಯಕ್ತಿಗಳಿದ್ದಾರೆ. ಅಲ್ಲದೆ ಜನಗಳ ಹುಮ್ಮಸ್ಸಿನಿಂದ ಒಂದು ವಾಚನಾಲಯವೂ ನಡೆದುಬಂದಿದೆ. ವಾಚನಾಲಯಕ್ಕೆ ಹಿರಿಯರನೇಕರು ಸದಸ್ಯರಾಗಿದ್ದರೂ ಬಂದು ಕುಳಿತಿರುವವರು ಹೆಚ್ಚಾಗಿ ಊರಿನ ತರುಣರು; ಶಾಲೆಯ ಅಧ್ಯಾಪಕರು. ಇಂತಹ ಕೆಲವೇ ನವನಾಗರಿಕ ಪ್ರಭಾವಗಳನ್ನು ಬಿಟ್ಟರೆ, ಅನಾದಿ ಕಾಲದ ಕಾಳೂರಿಗೂ ಇಂದಿನ ಕಾಳೂರಿಗೂ ಯಾವ ವ್ಯತ್ಯಾಸವೂ ಇಲ್ಲ..

ಊರು ಎಂಬುದು ಮೂರು ಮುಖ್ಯ ಬೀದಿಗಳಿಂದ ಸಂಪೂರ್ಣವಾಗುತ್ತದೆ. ಅವುಗಳಿಂದ ಕವಲೊಡೆಯುವ ಓಣಿಗಳ ಸಂಖ್ಯೆ ಹಲವು. ರಾಜಮಾರ್ಗ ಎಂಬುದು ಕಡಲ ಕರಾವಳಿಗೆ ತುಸುದೂರದಲ್ಲಿ, ಸಮನಾಂತರವಾಗಿ ಹೋಗುವ ಹಾದಿ. ಪೇಟೆ ಎನ್ನುವ ಬಿರುದು ಸಲುವುದಾದರೆ ಅದಕ್ಕೆ. ದೊಡ್ಡವರ ಮನೆಗಳು, ಮುಖ್ಯ ಅಂಗಡಿಗಳು, ಜೀವನದ ಕೆಲವೊಂದು ಚಟುವಟಿಕೆಗಳು ಧಾರಾಳವಾಗಿ ಕಂಡು ಬಂದು, ಜೀವಕಳೆ ಕಾಣಿಸುವ ಭಾಗ ಅದೇನೆ. ಸುತ್ತುಮುತ್ತಲಿನ ಹಳ್ಳಿಯ ಜನ ತಮಗೆ ಬೇಕಾದ ಬೆಂಕಿಪೊಟ್ಟಣ, ಚಿಮಿಣಿ ಎಣ್ಣೆ, ಮೆಣಸು, ಕೊತ್ತಂಬರಿಗಳನ್ನು ಕೊಳ್ಳುವುದಕ್ಕೆ ಬರುವುದು ಅಲ್ಲಿಗೇನೆ. ಆದುದರಿಂದ ಬೆಳಗ್ಗೆ ಹತ್ತೆಂಟು ಮಂದಿ ತಿರುಗಾಡುತ್ತಿರುವ ಆ ಬೀದಿಯು ಸಂಜೆಯ ಹೊತ್ತಿಗೆ ನಾಲ್ವತ್ತು ಐವತ್ತು ಮಂದಿ ತಿರುಗಾಡುವ ಪೇಟೆಯಾಗುತ್ತದೆ. ಈ ಮೊದಲು ಅಂದರೆ, ಊರಲ್ಲಿ ಹೈಸ್ಕೂಲು ಸ್ಥಾಪನೆಯಾಗುವುದಕ್ಕಿಂತ ಮುಂಚೆ, ನಾಲ್ವರು ಇಂಗ್ಲಿಷ್ ಓದು ಕಲಿಯುವ ಮುಂಚೆ, ಊರಲ್ಲಿ ಪರಶುರಾಮ ಸೃಷ್ಟಿಯ ವಿಗ್ರಹಗಳನ್ನೇ ಅತ್ಯಧಿಕ

ವಾಗಿ ಕಾಣಬೇಕಿತ್ತು. ಆಡಂಬರವರಿಯದ ಈ ಬಡ ಜನರು 'ಕೌಪೀನವಂತ ರಾದ ಖಲು ಭಾಗ್ಯವಂತ'ರಾಗಿ, ಅಳುಕಿಲ್ಲದೆ ಪೇಟೆಗೆ ಬಂದು ಹೋಗು ತ್ತಿರುವುದೇ ವಾಡಿಕೆ. ಆ ನೋಟವೂ ಚೆನ್ನಾದುದೇ. ಅವರದು ಕಪ್ಪಾದ ಮೈ ಬಣ್ಣ; ನಡುವಿಗೆ ಬೆಳ್ಳಿಯ ಉಡಿದಾರ, ಕಿವಿಗೆ ಕೀಲೊಂಟಿ, ಮುರುಗಳ ಅಲಂಕಾರವುಳ್ಳವರು ಹಲವರು. ತುಂಬುಗೂದಲಿನ ತಲೆಯ ಮೇಲೆ ಅಡಿಕೆ ಹಾಳೆಯ ಟೊಪ್ಪಿಯನ್ನಿರಿಸಿ, ಅದರ ಮೇಲೆ ಎಣ್ಣೆಗೆಂಪಿನ ಎಲೆವಸ್ತ್ರ ಸುತ್ತಿ ಕೊಂಡು ತಿರುಗಾಡಿದರೆ ಇಲ್ಲವೆ ಭುಜದ ಮೇಲೆ ಅಂಥ ಎಲೆವಸ್ತ್ರವನ್ನು ಹಾಕಿಕೊಂಡು ಬಿಟ್ಟರೆ, ಸಾಮಾನ್ಯರ ಪಾಲಿಗೆ ಭರ್ಜರಿ ಉಡುಗೆಯಾಯಿತು. ಅವರೆಡೆಯಲ್ಲಿ ಕೆಲವೇ ಜನ, ಅಗಲ ಅಂಚಿನ ಒಂದೊಂದು ಧೋತ್ರವನ್ನು ನಡುವಿಗೆ ಸುತ್ತಿಕೊಂಡು ತಿರುಗಾಡುವುದು ಉಂಟು. ಆ ಪಂಚೆಗಳನ್ನು ಉಡುವ ರೀತಿಯಲ್ಲಿ ವೈಖರಿಯೇನೂ ಇಲ್ಲ. ನಡುವಿಗೊಂದು ಬಟ್ಟೆ ಸುತ್ತಿ ಕೊಂಡಿದೆ-ಎಂದಿಷ್ಟೇ ಗುರುತು. ಇಚ್ಚಿಡಿ ಪಂಚೆಯನ್ನು ಇನ್ನಿಚ್ಚಿಡಿ ಮಾಡಿ ಮೊಣಗಂಟಿಗಿಂತ ಮೇಲೆ ಬಿಗಿಯುವವರೇ ಎಲ್ಲ. ಅದರಂತೆ ಊರಿನ ಅನು ಕೂಲವಂತರು ಸಹ, ತಮ್ಮುಡುಗೆ ತೊಡುಗೆಗಳಿಂದ ಶ್ರೀಮಂತಿಕೆಯ ದರ್ಪ ಸಾಧಿಸುವವರಲ್ಲ. ಅವರು ಸಹ ಅಗಲ ಕಿರಿದಾದ ಧೋತ್ರಗಳನ್ನುಟ್ಟು ಬರಿ ಎದೆಯಿಂದ ಅಲೆದಾಡುವವರೇ. ಕೆಲವೇ ವಿಶೇಷ ಸಂದರ್ಭಗಳಲ್ಲಿ ಜರಿ ಯಂಚಿನ ಪಂಚೆ, ಶಾಲು ತೊಡಬಹುದು. ಒಮ್ಮೊಮ್ಮೆ ರೇಶ್ಮೆಯ ಶಾಲನ್ನೂ ಹೊದೆಯಬಹುದು. ಶ್ರೀಪತಿರಾಯರ ಮನೆಯವರು, ವಾಸಪ್ಪ ಸಾಹುಕಾ ರರ ಮನೆಯವರು ಸಹ ಈ ಬಗೆಯಲ್ಲಿ ಅಲೆದಾಡುತ್ತಿರುವಾಗ, ಹೊರಗಿನ ವರಿಗೆ-ಬಡವ ಯಾರು, ಶ್ರೀಮಂತ ಯಾರು-ಎಂದು ಗುರುತು ಸಿಗುವುದು ಕಷ್ಟ.

ಊರ ಹೆಂಗಳೆಯರೋ! ಒಮ್ಮತ-ಎಂಬ ಹಾಗೆ ಕಾಂಗು ಸೀರೆಗಳಿಗೆ ಮನಸೋತವರು. ಕಿರಿಯಂಚಿನ ಕಪ್ಪು ಸೀರೆಗಳನ್ನು ಉಟ್ಟು, ಅಲೆಯುವ ವರು. ಮಾಂಗಲ್ಯವಿಲ್ಲದಲ್ಲಿ ಕೆಂಪು ಸೀರೆ ಉಡುವುದು ವಾಡಿಕೆ. ಕೆಲಸಗಾರ ರಾದುದರಿಂದ, ಶ್ರೀಮಂತರ ಮನೆಯವರೂ, ಉಟ್ಟ ಸೀರೆಯ ಸೆರಗನ್ನು ತಿರುಗಿ ಮೊಣಗಂಟೆಗೆ ಮಡಿಸಿ ಸಿಕ್ಕಿಸಿಕೊಂಡು ಅಲೆದಾಡುವುದು ನಾಚಿಕೆ ಎಂದು ತಿಳಿಯುವುದಿಲ್ಲ. ಈ ವಿಚಾರದಲ್ಲಿ ಹಳ್ಳಿಯ ಹೆಂಗುಸರಿಗೂ ಪೇಟೆಯ ಹೆಂಗುಸರಿಗೂ ಅಂತರವೇ ಇಲ್ಲ.

ಹಾಗೆ ನೋಡಹೋದರೆ–ಬಹು ಮಟ್ಟಿನ ಸುಧಾರಣೆಯು ಇಂಗ್ಲಿಷ್ ವಿದ್ಯಾ ಮನ್ವಂತರದಿಂದ ತೊಡಗಿದ್ದು. ಶಾಲೆಯ ಹುಡುಗರೆಲ್ಲ ಶರ್ಟು, ಜುಬ್ಬ ಹಾಕಲು ಕಲಿತಿದ್ದಾರೆ. ಇವುಗಳ ಮೇಲೆ ಕೋಟನ್ನು ಹಾಕುವ ಪರಿಪಾಠ ಅಷ್ಟೊಂದಿಲ್ಲ. ಅದನ್ನು ಹಾಕುವವರು, ಒಳಗೆ ಜುಬ್ಬ ಬೇಕೆಂದು ಹೇಳುವು ದಿಲ್ಲ. ಹಾಗೆ ಕೇಳಹೋದರೆ, ಇತರರಂತೆ ಬರಿ ಮೈಯಿಂದ ತಿರುಗಾಡಲು ಅಂಜುವವರೆಂದರೆ ಇಂಗ್ಲಿಷ್ ಕಲಿತ ಶಾಲೆಯ ಮಾಸ್ತರರು ಮಾತ್ರ. ಈ ಶಾಲೆಯ ಗಾಳಿ ಸೋಂಕಿದಂದಿನಿಂದ 'ಶರ್ಟು' ಎಂಬುದು ತರುಣರ ಉಡುಗೆ ಯಲ್ಲಿ ಅನಿವಾರ್ಯ ಪದಾರ್ಥವಾಗಿದೆ. ಶಾಲೆಗಿಂತ ಹೆಚ್ಚಿನ ವರ್ಚಸ್ಸು ಬಸ್ಸುಗಳಿಂದ ಬಂದಿರಬೇಕು. ಕಾರವಾರ, ಧಾರವಾಡದ ಜನಗಳೆಲ್ಲ ಆ ಊರಿನ ಮೂಲಕ ಹಾಯುತ್ತಿದ್ದುದರಿಂದ ತೊಡುಗೆಗಳಲ್ಲಿ ಬದಲಾವಣೆ ಯಾಗುತ್ತಲೇ ಇದೆ. ಕೌಪೀನದಿಂದ ತೃಪ್ತರಾಗುತ್ತಿದ್ದ ಜನ, ಕಿರಿಪಂಚೆಯನ್ನು ಉಡುವುದಕ್ಕೆ ಕಲಿತಿದ್ದಾರೆ. ಅದನ್ನು ಮರೆತರೂ, ಕಾಲುಗಳು ಬರಿದಾಗಿ ದ್ದರೂ, ಗಿಡ್ಡ ಕೈಯ ಕೋಟನ್ನೊ, ಜುಬ್ಬವನ್ನೊ ಹಾಕಿಕೊಂಡು ಅಲೆದಾಡುವ ರೂಢಿಯೂ ಬಂದಿದೆ. ಅವರ ಕೋಟು ನೀರಿಗೆ ಹಾಕಿದರೆ ಬೇಗನೆ ಒಣಗುವ ಪದಾರ್ಥವಲ್ಲ. ಇದ್ದ ಒಂದು ಕೋಟನ್ನು ಒಗೆದ ದಿವಸ ಅವರೇನು ಮನೆ ಯಲ್ಲಿ ಕಾಳಿತಿರುವುದೇ? ಬೆವರು ಅಂಟಿ ಅದು ಮೇಣಗಪ್ಪಡವಾಗಿ ಅಸಹ್ಯ ವೆನಿಸಿದರೆ ಅವನ್ನು ನೀರಿನಲ್ಲಿ ಮುಳುಗಿಸಿ, ಒಗೆದು, ಒಣಗಿಸಿದರೆ, ಒಣಗಿದ ಬಟ್ಟೆಯ ನಿರಿ ತೆಗೆಯಬೇಕೆಂಬ ಜ್ಞಾನವೂ ಅವರಿಗಿಲ್ಲ. ಅಂತಹ ನಾಜೂಕೇ ನಿದ್ದರೂ ಶಾಲೆ ಕಲಿತ ಮಹಾನುಭಾವರಿಗೆ ಸಲುವ ವಿಚಾರ.

ಊರ ಬೀದಿಯ ವಿಚಾರ ನಡುವಿನಲ್ಲೆ ಬಿಟ್ಟಹಾಗಾಯಿತು. ಮುಖ್ಯ ವಾದ ಬೀದಿಯೆಂದರೆ—ಪೇಟೆ. ಅಲ್ಲಿ ಗೋಡೆಗೆ ಗೋಡೆ ತಾಗಿರುವ ಮನೆ ಗಳು ಬಹುಕಾಲದಿಂದ ಬಂದುವು. ಆದರೆ ಪ್ರತಿಮನೆಯ ಹಿಂದುಗಡೆಯೂ ಒಂದೊಂದು ಅಂಗಳ, ಹಿತ್ತಿಲು ಇದ್ದೇ ಇದೆ. ಅಂಗಳದಲ್ಲಿ ತುಳಸಿ ಕಟ್ಟೆ ಇದ್ದೇ ಇರಬೇಕು. ಹಿತ್ತಿಲಲ್ಲಿ ತೆಂಗು, ಕಂಗು, ಅಮಟೆ, ಮಾವು, ಹಲಸು– ಇಷ್ಟು ಮರಗಳಾದರೂ ಇರಬೇಕು. ಪ್ರತಿ ಹಿತ್ತಿಲಲ್ಲೂ ಒಂದೊಂದು ಬಾವಿ ಯಿದೆ. ತರಕಾರಿ ಬೆಳೆಯದ ಹಿತ್ತಿಲಿಲ್ಲ; ಒಂದೆರಡು ದನಕರುಗಳನ್ನಾದರೂ ಸಾಕದಂತಹ ಜನರಿಲ್ಲ. ಬೇಸಾಯ ಮಾಡದಂಥ ಅಂಗಡಿಕಾರರು ಸಹ ಹಾಲು, ಗೋಮಯ, ಬೆರಣೆಗಳಿಗಾದರೂ ದನಕರುಗಳನ್ನು ಸಾಕುತ್ತಾರೆ.

ಬೀದಿಯ ಹೆಚ್ಚಿನ ಮನೆಗಳಿಗೆ ಹುಲ್ಲಿನ ಮಾಡುಗಳಿವೆ. ಎಡೆಯಲ್ಲಿ ಓಡಲು ಮನೆಗಳೂ ಇವೆ. ಕುಂಬಾರನ ಓಡುಗಳನ್ನು ತೆಗೆದು, ಮಂಗಳೂರು ಹಂಚನ್ನು ಹೊದೆಸಿದವರು ವಾಸಪ್ಪಯ್ಯ, ಶ್ರೀಪತಿರಾಯರುಗಳು ಮಾತ್ರ. ಊರಲ್ಲಿರುವ ಪ್ರಾಚೀನ ದೇವಾಲಯವಾದ ಕಾಳಿಯ ಗುಡಿಗೆ ಇಂದಿಗೂ ಕುಂಬಾರನ ಓಡಿನ ಮಾಡೇ ಇದೆ. ಕೇವಲ ಇತ್ತೀಚೆಗೆ ಕಟ್ಟಿದ ಕೆಲವು ಮಳಿಮಾಡು, ಅಂಗಡಿಗಳಿಗೆ ಮಂಗಳೂರು ಹಂಚನ್ನು ಹೊದೆಯಿಸಿರುವುದೂ ಉಂಟು. ಇಂತಹ ಮನೆಗಳುಳ್ಳ ಮುಖ್ಯ ಬೀದಿಯು ಸುಮಾರು ಮೂರು ಫರ್ಲಾಂಗುಗಳಷ್ಟು ಉದ್ದವಾಗಿದೆ. ಅಲ್ಲಿನ ವಾಹನಸಂಚಾರಗಳಲ್ಲಿ ಎತ್ತಿನ ಗಾಡಿ ಮುಖ್ಯ. ಕೆಲವೇ ಸ್ಯಾಕಲುಗಳ ಸವಾರರೂ ಕಾಣಿಸುತ್ತಾರೆ. ಅಂಥವರ ಸಲುವಾಗಿ ಸ್ಯಾಕಲುಗಳನ್ನು ದುರುಸ್ತಿಮಾಡುವ, ಬಾಡಿಗೆಗೆ ಕೊಡುವ, ಎರಡು ಅಂಗಡಿಗಳೂ ಇವೆ. ಈ ಅಂಗಡಿಗಳ ಯಜಮಾನರೇ, ಮುಟ್ಟಿದರೆ ಹೋಗಲಾರದಂಥ ಸೈಕಲುಗಳನ್ನು ತುಳಿದು, ದಣಿದು ಬರುವ ಜನಗಳಿಗಾಗಿ, ಎರಡು ಸೋಡಾ ಅಂಗಡಿಗಳನ್ನು ಈಚೆಗೆ ತೆರೆದಿದ್ದಾರೆ. ಅವುಗಳ ಪರಿಪಾಠ ಚೆನ್ನಾಗಿ ಆಗಿಲ್ಲ. ತೀರ ಬಾಯಾರಿ ಬಂದ ದಾರಿಹೋಕರಷ್ಟೇ ಅದನ್ನು ಕುಡಿಯುತ್ತಾರೆ. ಊರ ಜಾತ್ರೆಗಳಲ್ಲಿ 'ಹೇಗಿದೆ ನೋಡುವ' ಎಂದು ಈ ಕೆಂಪು, ಗುಲಾಲಿ, ಹಳದಿ, ಹಸುರು ಬಣ್ಣಗಳ ಬಾಟ್ಲಿ ನೀರನ್ನು ಕುಡಿದು ತೇಗುವವರುಂಟು. ಹಳ್ಳಿಯ ತರುಣರು ಮಾತ್ರ, ಬಾಡಿಗೆ ಸೈಕಲಿನಲ್ಲಿ ಅಲೆದಾಡಿ ಒಂದು ಸೀಸೆ ಸೋಡಾ ಕುಡಿದುಬಿಟ್ಟರೆಂದರೆ ನಾಗರಿಕತೆಯ ಪರೀಕ್ಷೆಯಲ್ಲಿ ಪಾಸಾದಂತೆ ತಾವು ಎಂದು ತಿಳಿಯಬಹುದು.

ಊರಿನ ಅಂಗಡಿಗಳಲ್ಲಿ, ಭಾರಿ ಅಂಗಡಿ, ಎಂಬುದು ವಾಸಪ್ಪಯ್ಯನವರದೇ. ಎರಡೆರಡು ಮುಪ್ಪುಗಳ ಅಂಗಡಿಯದು. ಆದುದರಿಂದಲೇ ಕತ್ತಲು ತುಂಬಿದ್ದು. ಮೊದಲ ಬಾಗಿಲು ತೆಗೆದರೆ ಕಾಣುವುದು—ಲೋಡುದಿಂಬುಗಳನ್ನು ಹಾಸಿದ ವಾಸಪ್ಪಯ್ಯನವರ ದಿವಾನಖಾನೆ. ಮಗ್ಗುಲಲ್ಲಿ ಗುಮಾಸ್ತರ ಬರವಣಿಗೆಯ ಪೆಟ್ಟಿಗೆ, ಅದರ ಮೇಲೆ ದೌತಿ, ರೇತಿಯ ಡಬ್ಬಿ. ಅವರ ಗುಮಾಸ್ತರು ಇಂದಿಗೂ ಹಿರಾಕಸ, ಅಣಿಲೆ ಕಾಯಿಗಳ ಶಾಯಿಗಳನ್ನು ಉಪಯೋಗಿಸುತ್ತಾರೆಯೆ ಹೊರತು ಪೊಟ್ಟಣದ ಶಾಯಿಯನ್ನು ಉಪಯೋಗಿಸುತ್ತಿಲ್ಲ. ಸಾಹುಕಾರ ವಾಸಪ್ಪಯ್ಯನವರು ದಿಂಬಿಗೆ ಒರಗಿ ಕುಳಿತರೆ ಎದ್ದೇಳುವವರಲ್ಲ. ಸನಗುಗಳನ್ನು ತಂದು ತೋರಿಸಲು ಆಳುಗಳಿದ್ದಾರೆ. ಇಂದಿಗೂ ಅವರ

ಅಂಗಡಿಯಲ್ಲಿ ಹಚ್ಚುವುದು ಹೊನ್ನೆಣ್ಣೆಯ ದೀಪವನ್ನು. ಅದಕ್ಕೆನೇ ಗಾಜಿನ ಗೂಡನ್ನು ಮಾಡಿದ್ದಾರೆ. ಲಕ್ಷ್ಮಿ ಒಲಿಯುವಂಥ ದೀಪ ಅದು. ಆ ದೀಪವನ್ನು ಹೊತ್ತಿಸಿ, ಎದ್ದು ನಿಂತು, ನಮಸ್ಕರಿಸುವ ಸ್ವಭಾವ ಅವರದ್ದು. ಅವರ ಅಂಗಡಿಗೆ ತಾಗಿಯೇ ಮನೆ ಇದೆ. ಮನೆಯ ಕಿಟಿಕಿಗಳ ಬಾಗಿಲುಗಳು ಮಜಭೂತಿನವು; ಚಿತ್ರರಂಜಿತವಾದುವು. ಬಲವಾದ ಮರದ ಚೌಕಟ್ಟು, ಮರದ ಸರಳುಗಳುಳ್ಳ ಈ ಕಿಟಿಕಿಗಳು ತಡೆದಷ್ಟೇ ಬೆಳಕನ್ನು ಬಿಡುತ್ತವೆ. ವರ್ಷಂಪ್ರತಿ ಹಚ್ಚುವ ಎಣ್ಣೆಯ ಲೇಪನದಿಂದ, ಬೀಳುವ ಧೂಳಿನಿಂದ, ಕಿಟಿಕಿಗಳಿಗೆ ತಾಮ್ರವರ್ಣ ಬಂದಿದೆ. ಬೀದಿಯ ಬಳಿಯ ಕಿಟಿಕಿಗಳಾದುದರಿಂದ ಅವು ತೆರೆದಿದ್ದುದನ್ನು ಕಂಡವರು ಕಡಿಮೆ. ಎದುರಿನ ಬಾಗಿಲನ್ನು ತೆರೆಯುವುದಕ್ಕೆ ಆನೆಯ ತ್ರಾಣಬೇಕು. ಆ ಬಾಗಿಲಿಂದ ಒಳಕ್ಕೆ ಹೊಕ್ಕರೆ ದೊಡ್ಡ ಚಾವಡಿ ಸಿಗುತ್ತದೆ. ಇಬ್ಬಿಬ್ಬರು ಅಪ್ಪಿಕೊಳ್ಳಬಹುದಾದ ಕಂಬಗಳು. ಅಲ್ಲಿಂದ ದಾಟುತ್ತಲೇ ಚೌಕಿಯ ಮನೆ; ನಡುವೆ ಅಂಗಳ, ತುಳಸಿ ಕಟ್ಟೆ. ದಾಟಿ ಮುಂದುವರಿದರೆ ಬಚ್ಚಲು, ಹಟ್ಟಿ, ತೋಟಗಳು ಬರುತ್ತವೆ. ಅಲ್ಲಿಂದ ಮುಂದುವರಿದರೆ ಬತ್ತದ ಹೊಲಗದ್ದೆಗಳ ವಿಶಾಲ ನೋಟ.

ಇಷ್ಟೇ ಹಿರಿದಾದ ಮನೆಯು ಶ್ರೀಪತಿರಾಯರದ್ದು. ಮುಖ್ಯ ಬೀದಿಗೆ ತಾಗಿರುವ ಮನೆ ಅವರದ್ದು. ಆದರೆ ಮೊದಲಿಗೆ ಕಾಣಸಿಗುವುದು ಎತ್ತರದ ಪ್ರಾಕಾರ. ಪ್ರವೇಶಕ್ಕೊಂದು ದೊಡ್ಡ ಬಾಗಿಲಿದೆ. ಅಲ್ಲಿಂದ ಬಹು ದೊಡ್ಡ ಅಂಗಳ. ಅನಂತರ ಹಿರಿಯ ಚಾವಡಿಯುಳ್ಳ ಹೆಬ್ಬಾಗಿಲ ಮನೆ; ಮೇಲು ಮಹಡಿಯಿದೆ. ಇನ್ನೂರು ವರ್ಷಗಳಿಂದಲೂ ರಾಯರ ಕುಲದವರು ಬಾಳಿ ಬದುಕಿದ ಆ ಮನೆಯ ಮಣ್ಣಿನ ಗೋಡೆ ಕೋಟೆಯ ಗೋಡೆಯಂತಿದೆ. ಕೋಲು ದಪ್ಪದ ಹಲಸಿನ ಮರದ ಸ್ತಂಭಗಳೇನು? ಚಿತ್ರ ಕೆಲಸಗಳೇನು? ಹೆಬ್ಬಾಗಿಲ ಬಾಗಿಲ ಹಲಗೆಯ ದಪ್ಪವೇ ಮೂರಂಗುಲವಿದೆ. ಹೊರಗಿನ ಬಾಗಿಲೂ ಕೋಟೆಯ ಬಾಗಿಲೇ. 'ಇನ್ನೂ ಇನ್ನೂರು ವರ್ಷ ತಡೆಯಲು ಮುಲಾಜಿಲ್ಲ' ಎಂದು ಹೇಳುವ ಶ್ರೀಪತಿರಾಯರ ಮಾತು ತೀರ ನಿಜ. ಸಾಮಾನ್ಯವಾಗಿ ಊರಿನ ಉಳಿದ ಮನೆಗಳೆಲ್ಲವು ಚಿಕ್ಕವು. ಅಂಗಡಿ ವ್ಯಾಪಾರಿಗಳ ಮನೆಗಳು ಪೇಟೆಯ ಧೂಳಿಗೇನೆ ಮುಖಮಾಡಿಕೊಂಡಿರುವಂಥವು.

ವಾಸಪ್ಪಯ್ಯನವರಂತೆ ಇನ್ನೂ ಒಬ್ಬಿಬ್ಬರು ದೊಡ್ಡ ವ್ಯಾಪಾರಿಗಳಿದ್ದಾರೆ. ಜವುಳಿ ವ್ಯಾಪಾರ ಮಾಡುವವರಲ್ಲಿ ಭಟ್ಕಳದ ಮುಗುದುಮ್

ಸಾಹೇಬರ ಅಂಗಡಿ, ಮನೆಗಳೆರಡೂ ಹಿರಿಯವು. ಊರ ಹೆಚ್ಚಿನ ಅಂಗಡಿಗಳು ಜೀನಸಿನವು. ಸಣ್ಣಪುಟ್ಟ ಅಂಗಡಿಗಳು ಹಲವಾದರೆ, ದೊಡ್ಡ ಅಂಗಡಿಗಳು ಕೆಲವೇ ಕೆಲವು. ಆದರೆ ಆ ಅಂಗಡಿಗಳಲ್ಲಿ ಒಂದು ವೈಶಿಷ್ಟ್ಯ—ಅಲ್ಲಿ ನಿಮಗೆ ಸೂಜಿಯಿಂದ ಹಿಡಿದು ನೇಗಿಲು ಕುಳದ ತನಕ, ಹುರಿಹಗ್ಗದಿಂದ ಹಿಡಿದು ಉಡಿದಾರದ ತನಕ, ಉಪ್ಪಿಂದ ಹಿಡಿದು ಹಳೆಯ ದ್ರಾಕ್ಷೆಯ ತನಕ, ಕೊತ್ತಂಬರಿಯಿಂದ ಹಿಡಿದು ಹಿಪ್ಪಲಿ, ಕಂಕುಷ್ಠ, ದೇವದಾರುಗಳಂತಹ ಮದ್ದಿನ ಒಡವೆಗಳ ತನಕ ಸಿಕ್ಕುತ್ತವೆ.ಪೈಸಾವಾಣೆಗಳ ಲೆಕ್ಕಾಚಾರದಲ್ಲಿಯೇ ವ್ಯಾಪಾರ. ತಾಸು ತಾಸುಗಳ ತನಕ ಚೌಕಶಿ ನಡೆಪರೂ. ಬೇಸರವಿಲ್ಲದೆ ಕೊಡುವ, ಕೊಳ್ಳುವ ವ್ಯಾಪಾರಿಗಳಿದ್ದಾರೆ, ಗಿರಾಕಿಗಳಿದ್ದಾರೆ. ಬಸ್ಸು ಬರ ತೊಡಗಿದ ಮೇಲೆ, ಎರಡು ಕಾಫಿ ಹೊಟೇಲುಗಳು ತೆರೆದಿವೆ; ಅಲ್ಲ, ಚಾ ದುಖಾನುಗಳು. ಕಾಫಿಯನ್ನು ಮಾಡಲು ತಿಳಿಯದಿದ್ದರೂ ಚಹವನ್ನು ತೀಕ್ಷ್ಣವಾಗಿಯೇ ಮಾಡುತ್ತಾರೆ. ಅವಲಕ್ಕಿ ಉಪಕರಿ, ಕಡಲೆ ಉಸಳಿ, ಗೆಣಸಿನ ಪೋಡಿ, ಬಿಸ್ಕುಟು ಆಂಬೊಡೆಗಳು ಹೊಟೇಲಿಗೆ ಬರುವ ರಸಿಕರ ಉಪಹಾರದ ವಸ್ತುಗಳು. ಎರಡಾಣೆ, ಮೂರಾಣೆಗಳನ್ನು ಚೆಲ್ಲಿದರೆ ಹೊಟ್ಟೆ ತುಂಬಿಸಿಕೊಂಡು ಹೋಗಬಹುದಾದ ಸುಖದ ದಿನಗಳವು. ಆದರೆ ಹೆಚ್ಚಿನ ಜನರು ಟಿನ್ನಿನ ಗ್ಲಾಸಿನಲ್ಲಿ-ಕಾಲಾಣೆ ಚಾ, ಕಾಲಾಣೆ ಅವಲಕ್ಕಿಯನ್ನು ತಿಂದು ತೇಗುವುದಕ್ಕೂ ಶಕ್ತರಾದಂಥ ಜನರು. ಈ ಎರಡು ಅಂಗಡಿಗಳಲ್ಲಾಗುವ ವ್ಯಾಪಾರವನ್ನು ಕಂಡು—ಮುಂದೇನು ಮಾಡಲಿ, ಯಾವ ಉದ್ಯೋಗ ತೊಡಗಲಿ ಎಂದು ಬೆರಗಾಗುವ ತರುಣರಿಗೆ, 'ಚಾ,ದುಕಾನ' ತೆರೆಯಬಾರದೇ? ಎಂದು ಆಸೆ ಮೂಡುವಂಥ ದಿನಗಳು. ಆ ತರುಣ ಸ್ವಲ್ಪ ಚುರುಕಾಗಿದ್ದರೆ, ಸೈಕಲ್ ರಿಪೇರಿ ಅಂಗಡಿಯನ್ನು ತೆರೆಯುವ ಸಾಹಸವನ್ನೂ ಮಾಡಬಹುದು.

ಮುಖ್ಯ ಬೀದಿಗೆ ಸಮಕೋನವಾಗಿ ಹಾಯುವ ಒಂದು ರಸ್ತೆಯಿದೆ. ಅದರ ಒಂದು ಸೆರಗು ಅರ್ಧ ಮೈಲಿನ ತನಕ ಮೂಡಣಕ್ಕೆ ಹೋಗುತ್ತದೆ. ಇನ್ನೊಂದು ಸೆರಗು ಪಡುವಣಕ್ಕೆ ಮೂರು ಫರ್ಲಾಂಗು ದೂರ ಸರಿದು ತೆಂಗಿನತೋಟ, ಕಡಲ ದಿನ್ನೆಯಲ್ಲಿ ಮಾಯವಾಗಿಬಿಡುತ್ತದೆ. ಮೂಡಣಕ್ಕೆ ಹೋಗುವ ದಾರಿಯು ಇಕ್ಕಡೆಗಳಲ್ಲೂ, ಹಿತ್ತಿಲುಗಳುಳ್ಳ ಮನೆಗಳೇ ತುಂಬ. ಅದು ಕವಲೊಡೆಯುವಲ್ಲಿ ಒಂದೆರಡು ಅಂಗಡಿಗಳನ್ನೂ ಕಾಣಬಹುದು.

ಮುಂದೆ ಹಿತ್ತಿಲು ಮನೆಗಳು; ಅದಕ್ಕೂ ಮುಂದಕ್ಕೆ ಸರಿದರೆ ನಡುನಡುವೆ ಬತ್ತದ ಗದ್ದೆಗಳು, ತೆಂಗಿನ ತೋಟಗಳು. ಆ ದಾರಿಯೇ ಊರಿನ ಹಿರಿಯ ದೇವಾಲಯವಾದ ಮಹಾಂಕಾಳಿಯ ಗುಡಿಗೆ ಹೋಗುತ್ತದೆ. ಕೆಲವು ಶತಮಾನಗಳಿಂದಲೂ ಮನ್ನಣೆ ಪಡೆದು ಬಂದಂಥ ದೇವಾಲಯವದು. ಅದರ ಮುಂಗಡೆಯ ಕೊಳವು ಕಲ್ಲುಕಟ್ಟಿದ್ದು; ತಳ ಕುಸಿದ ಹಲವು ಸೋಪಾನಗಳುಳ್ಳದ್ದು. ಮಳೆಗಾಲದಲ್ಲಿ ನೀರಿಂದ ತುಂಬಿ, ಊರಮಕ್ಕಳ ಕೋಲಾಹಲದ ರಂಗವಾಗಿಬಿಡುತ್ತದೆ. ಎಷ್ಟು ಸಾವಿರ ಜನರು ಅಲ್ಲಿ ಮಿಂದಿಲ್ಲ! ಆದರೆ ಮಹಾಂಕಾಳಿಯ ಕೃಪೆಯಿಂದ ಒಂದೇ ಒಂದು ಅಪಮೃತ್ಯುವೂ ಆಗಿಲ್ಲ ಎಂದು ಜನ ಹೇಳುತ್ತಿದ್ದಾರೆ. ಬೇಸಿಗೆ ಬಂದರೆ ಕೊಳದ ನೀರು ಹಸುರು ತಂಬಳಿಯಾಗುತ್ತದೆ. ಮಕ್ಕಳ ಹೊಲಸು ಬಟ್ಟೆಗಳನ್ನು ತೊಳೆಯುವುದಕ್ಕಷ್ಟೆ ಅದರ ಪ್ರಯೋಜನ. ಆಗ ಊರ ಮಹಿಳೆಯರು ತುಸುದೂರದಲ್ಲಿ ಹರಿಯುವ ಸಿಹಿ ನೀರಿನ ಹೊಳೆಗೆ ಹೋಗುತ್ತಾರೆ. ಹೊಳೆಯಲ್ಲ; ನಿಜಕ್ಕೂ ಅದು ಹಳ್ಳ ಇಲ್ಲವೆ ತೋಡು; ಕಮ್ಮಾರ ಹೊಳೆಯೆಂದು ನಾಮಕರಣ. ಕಡಲಿಗೆ ಅದು ಸೇರುತ್ತದೆಯಾದರೂ ಕಡಲಿನ ಉಬ್ಬರದ ನೀರು ಬಾರದಷ್ಟು ಎತ್ತರದಿಂದ ಹರಿಯುವುದರಿಂದ, ಅದರ ನೀರು ಸಿಹಿಯಾಗಿದೆ. ನದಿ ಹರಿಯುವುದು ಕೇರೆ ಹಾವಿನಂತೆ. ಹರಳು, ಹುಲ್ಲು, ತುಂಬಿದ ದಂಡೆಯಲ್ಲಿ ಹೊಂಡಮಾಡಿ ಕುಳಿತರೆ ಮಾತ್ರ ಗಂಟಿನ ನೀರು ಎದೆಗೆ ಬಂದೀತು. ಅಲ್ಲಲ್ಲಿ ಬಂಡೆಕಲ್ಲುಗಳಿವೆ. ಹೋಗುವಾಗ ಬಿಂದಿಗೆ ಕೊಂಡೊಯ್ದರೆ, ಕಲ್ಲಿನ ಮೇಲೆ ಕುಳಿತು, ಕಣ್ಣು ಮುಚ್ಚಿ ಸ್ನಾನಮಾಡಬಹುದು. ಒಗೆದ ಬಟ್ಟೆಯನ್ನು ಒಣಗಿಸಿಕೊಂಡು ಮನೆಗೆ ಬರಬಹುದು. ಪೇಟೆಗಿಂತ ಇಮ್ಮಡಿ ಜನರು ಈ ಹೊಳೆಯ ಬದಿಯಲ್ಲಿ ಕಾಣಸಿಗುತ್ತಾರೆ. ವಿರಾಮಶೀಲರಾದ ಪೇಟೆಯ ಹೆಂಗುಸರೂ, ದನಕಾಯುವ ಬಾಲಕರೂ, ಬೆಳಗಿನ ಏಳು ಗಂಟೆಗೆ ಬರತೊಡಗುತ್ತಾರೆ. ಮಧ್ಯಾಹ್ನ ಎರಡು ಗಂಟೆಯ ತನಕವೂ ಜನ ಬರುತ್ತಿರುತ್ತಾರೆ. ಊರಿನ ಯಾವ ಸುದ್ದಿ ಸೂರುಗಳನ್ನೂ ಕೇಳಲಪೇಕ್ಷಿಸುವವರು ಕಿವಿ ನಿಮಿರಿಸಿಕೊಂಡು ಇಲ್ಲಿ ನಿಂತರಾಯಿತು.

ಈ ಮಹಾಂಕಾಳಿ ಬೀದಿಯ ನಡುವಿಗೆ ಕವಲೊಡೆಯುವ ಒಂದು ಚಿಕ್ಕ ರಸ್ತೆಯಿದೆ-ಸೂಳೆಗೇರಿ. ಇದು ಗತಕಾಲದ ಅವಶೇಷ. ಪ್ರಾಚೀನ ಕಾಲದಲ್ಲಿ ಜನರೆನ್ನುವಂತೆ, ಕಾಳೂರು ಒಂದು ದೊಡ್ಡ ಪಟ್ಟಣವಾಗಿತ್ತು-ಎಂಬುದಕ್ಕೆ

ದೇವಾಲಯವಾಗಲಿ, ಕೆರೆಯಾಗಲಿ, ಈ ಕೇರಿಯಾಗಲಿ ಸಾಕ್ಷಿ. ಈ ಕೇರಿಯಲ್ಲಿ ಹಿಂದೆ ತುಂಬ ಮನೆಗಳಿದ್ದುವಂತೆ. ಅಷ್ಟೇ ಸಂಪನ್ನರಾದ ಗಣಿಕೆಯರೂ ಇದ್ದರಂತೆ. ಈಗ ಕುಲದ ಕಸುಬನ್ನು ಬಿಡಲಾರದವರು ಎಂಬುದಕ್ಕೆ, ಅಂತಹರ ನಾಲ್ಕೆಂಟು ಮನೆಗಳಿವೆ. ಒಂದು ಕಾಲದಲ್ಲಿ ಪ್ರತಿಷ್ಠಿತ ಕುಟುಂಬಗಳೊಡನೆ ಸಂಬಂಧವಿದ್ದ ವೇಶ್ಯೆಯರೇ ಇಲ್ಲಿ ಇದ್ದರು. ನಾಗರಿಕರ ಆತಿಥ್ಯದಲ್ಲಿ ಭಾಗವಹಿಸುವವರು ಇದ್ದರು. ಈಗ ಅಂತಹ ವೈಭವವೇನಿಲ್ಲ. ಜನರು ಸಹನೆಯಿಂದಲೇ ನೋಡುತ್ತಿರುವ ಕೇರಿಯಿದು. ಹೊರಗಣ ತೋರಿಕೆಗೂ ಇಲ್ಲಿನ ಜನಗಳ ವಿಚಾರ, ತುಚ್ಛೀಕಾರದ ಭಾವನೆಯಿಂದ ನೋಡುವ ಪರಿಪಾಠವಿಲ್ಲ. ಹಾಗೆ ಹತ್ತೆಂಟು ವರ್ಷಗಳ ಅವಧಿಯಲ್ಲಿ ಒಮ್ಮೆ ಈ ಕೇರಿಯ ಯಾವುದಾದರೂ ವ್ಯಕ್ತಿಗೆ ಸಂಬಂಧಿಸಿದ ವಿಲಾಸ, ವೈಯ್ಯಾರಗಳ ಕತೆ ಕೆಲವು ಜನಗಳ ಬಾಯಲ್ಲಿ, ಕೆಲವು ದಿನ, 'ಯವನ ಯಾಮಿನೀ' ಕತೆಗಳ ಮೋಹಕತೆ ತಾಳುವುದುಂಟು. ಆದರೆ ಕಾಲಗತಿಯಿಂದ ಅಂತಹ ನಾಯಕ ನಾಯಕಿಯರು ಮರೆಯಲ್ಪಡುತ್ತಾರೆ. ಬಳಿಕ ಉಳಿದ ಅವರು ನಾಗರಿಕ ಜೀವರಂತೆಯೆ ಆಡಂಬರ ವಿರಹಿತ ಮಾತುಗಳಿಗೆ ತಕ್ಕವರೆನಿಸುತ್ತಾರೆ.

ಮಹಾಂಕಾಳಿ ಗುಡಿಗೆ ಹೋಗುವ ಬೀದಿಯೇ ಪಡುವಣಕ್ಕೆ ಹೋಗಿ ಕಡಲದಂಡೆಗೆ ಹೋಗುವ ಹಾದಿಯಾಗುತ್ತದೆ. ಈ ಬೀದಿಯ ಉದ್ದಕ್ಕೂ ಕಿರಿಯ ಮನೆಗಳು ಹೆಚ್ಚಿಗೆ. ಸಾಮಾನ್ಯ ಕುಟುಂಬಿಕರು, ಕೆಲಸಗಾರರು, ಕರ್ಮಕುಶಲರು ತುಂಬಿರುವ ವಠಾರವಿದು. ನಾಲ್ಕು ಗುಡಿಗಾರರ ಮನೆಗಳಿವೆ; ಸೊನೆಗಾರರ ಮನೆಗಳಿವೆ. ಬಡಗಿಗಳ ಮನೆಗಳಿವೆ. ತಮ್ಮ ಪ್ರಾಚೀನ ಕಸುಬನ್ನು ಬಿಡದೆ ನಡೆಯಿಸಿಕೊಂಡು ಬಂದ ಸಾಲಿಗರಿದ್ದಾರೆ; ಸಮಗಾರರಿದ್ದಾರೆ. ಅಪವಾದಕ್ಕೆ ಅವಕಾಶವಿರಬಾರದು ಎಂಬ ಹಾಗೆ, ಕುಂಬಾರರೂ ಇದ್ದಾರೆ. ಹಿಂದಿನ ಕಾಲದಲ್ಲಿ ಇಂಥವರುಗಳ ಒಂದೊಂದು ಕೇರಿಗಳೇ ಇದ್ದುವಂತೆ. ಈಗಲೂ ಈ ಮುಖ್ಯರಸ್ತೆಗಳನ್ನು ಬಿಟ್ಟರೆ, ಊರು ಹರಡಿರುವುದು ಒಂದು ಚದರ ಮೈಲು ವಿಶಾಲವಾದ, ಸಮತಟ್ಟಾದ ಪ್ರದೇಶದಲ್ಲಿ. ಅದನ್ನು ಚದುರಂಗದ ಅಂಕಣಗಳ ಹಾಗೆ ಒಡೆದು, ಜನರು ಹಿತ್ತಿಲು ಮನೆ ಮಾಡಿಕೊಂಡಿದ್ದಾರೆ. ಒಂದೊಂದು ಹಿತ್ತಿಲು, ತೋಟದಲ್ಲಿ ಒಂದೆರಡು ಮನೆಗಳು ಇದ್ದೇ ಇವೆ. ಇಂಥವುಗಳಿಗೆ ಹೋಗಲು ಓಣಿಗಳೇ ದಾರಿಗಳು. ಈ ಓಣಿಗಳಿಗೂ ಹೆಸರುಂಟು. ಕುಂಬಾರಕೇರಿ, ಕಂಚುಗಾರಕೇರಿ, ಸೇಕಾರ

ಕೇರಿ ಎಂಬ ಹಳೆಯ ಹೆಸರುಗಳು ಇವಕ್ಕೆ ಉಳಿದು ಬಂದಿವೆ. ಶತಮಾನಗಳು ಉರುಳಿದ ಹಾಗೆ, ಮಹಾಂಕಾಳಿಪುರ ಕಾಳಿಪುರವಾಗಿ, ಕಾಳೂರು ಆಯಿತೆಂದು ಜನರು ಹೇಳುತ್ತಾರೆ. ಆ ಒಂದು ಕಾಲದಲ್ಲಿ ಇದ್ದಿರಬೇಕಾದ ವೈಭವಗಳೆಲ್ಲವೂ ಕಳಚಿ ಹೋಗಿ ಈಗ ಕಾಳೂರು ಸಾಮಾನ್ಯವಾದೊಂದು ಊರೆನಿಸಿಕೊಂಡಿದೆ.

ಮೇಲೆ ಹೇಳಿದ ಪಡುವಣದ ರಸ್ತೆಯ ಹೆಸರು ಗುಡಿಗಾರಕೇರಿಯೆಂದು. ಅದರ ಮಗ್ಗುಲಲ್ಲಿ ಗುಡಿಗಾರರ ಮನೆಗಳೂ ಇವೆ. ಈ ಕೇರಿಯನ್ನು ಹಾದು ಮುಂದುವರಿವರೆ ಕಡಲ ಕಿನಾರೆ ಸಿಗುತ್ತದೆ. ಕೊನೆಯಲ್ಲಿರುವ ಇನ್ನೂರು ಗಜ ಭೂಮಿಗೆ ಮೇರೆ, ಆವರಣಗಳ ಬಂಧನವಿಲ್ಲ. ಅದರ ತುಂಬ ತೆಂಗಿನ ಮರಗಳಿವೆ. ಎಡೆ ಎಡೆಯಲ್ಲಿ ನರುಗಂಪನ್ನು ಬೀರುವ ಹೊನ್ನೆಯ ಮರಗಳಿವೆ. ಅಲ್ಲೊಂದು, ಇಲ್ಲೊಂದು-ಬಾವಿಗೆ ಬಾವಿ, ಕೆರೆಗೆ ಕೆರೆಯಾಗಬಲ್ಲ ನೀರ ಕುಣಿಗಳಿವೆ. ಇದೂ ಜನನಿಬಿಡವಾದ ಪ್ರದೇಶವೇ. ಕಾರ್ವಿಯರೆಂಬ ಬೆಸ್ತರ ಜನ ವಾಸಿಸುವ ಪ್ರದೇಶವಿದು. ಎದುರಿನ ಕಡಲಿನ ಘರ್ಜನೆಯು ಕಿವಿಯನ್ನು ನಡುಗಿಸುತ್ತಿರುವಾಗ, ಕಡಲ ಮೊರೆತವನ್ನು ಮೀರಿಸುವ ಗಟ್ಟಿತನ ಈ ಜನಗಳ ಗಂಟಲಿಗೆ ಬಂದಿದೆ. ಮೀನುಗಾರಿಕೆಯನ್ನು ಬಿಟ್ಟರೆ ಅವರಿಗೆ ಅನ್ಯವ್ಯವಹಾರವೇ ಕಡಿಮೆ. ವಿರಾಮವಿದ್ದರೆ ಮನೆಯಲ್ಲಿ ಕುಳಿತು, ದಾರಿಯಲ್ಲಿ ನಿಂತು, ಬಲೆಗೆ ಬೇಕಾದ ನೂಲನ್ನು ಹೊಸೆಯುತ್ತಾರೆ. ಊರಿನ ಖಾರಿ, ನದಿಗಳಲ್ಲಿ ನಿಂತು, ಮುಳುಗಿ, ಮಣ್ಣಿನಿಂದ ಮಳಿಯನ್ನೆತ್ತಿ ತರುತ್ತಾರೆ; ಗಾಳಹಾಕುತ್ತಾರೆ. ಏಡಿ ಹಿಡಿಯುತ್ತಾರೆ. ವರುಣ ಪುತ್ರರೆಂದರೆ ಇವರೇನೆ. ಅಲ್ಲಿನ ನೆಲ ಸಮತಟ್ಟಾದ ನಿತ್ಯ ಶುಚಿಯಾದ ಮರಳು ಭೂಮಿ. ಎಷ್ಟು ಉರುಳಾಡಿದರೂ ಮೈಗೆ ಧೂಳು ಅಂಟದಂತಹದು. ಬೆಳಗಿರಲಿ, ಬೈಗಿರಲಿ, ಮಧ್ಯಾಹ್ನವೇ ಇರಲಿ, ಮೇಲೆ ತೆಂಗಿನ ಗರಿಗಳ ಹಸುರು ಚಪ್ಪರ ಬಿಡಿಸಿರುವುದರಿಂದ, ಬಿಸಿಲಿನ ಬೇಗೆ ನೆಲದಲ್ಲಿ ಕಾಣಿಸುವುದು ಕಡಿಮೆ. ಈ ವಠಾರವನ್ನೆಲ್ಲ 'ಕಾರ್ವಿಕೇರಿ' ಎಂದು ಕರೆಯುವುದು ವಾಡಿಕೆಯಾದರೂ, ಬರಿಯ ಅವರೇನೆ ಅಲ್ಲಿ ತುಂಬಿಕೊಂಡಿಲ್ಲ. ಹೆಚ್ಚಿನ ಜನಸಂಖ್ಯೆ ಅವರದ್ದು. ಕರಾವಳಿಯ ದಕ್ಷಿಣ ಭಾಗದಲ್ಲಿ ಮೊಗೇರರೆಂಬವರು ಇದ್ದಾರೆ. ಅವರು ಕನ್ನಡ ಮಾತನಾಡುತ್ತಿದ್ದರೆ, ಇವರು ಕೊಂಕಣಿ ಮಾತಾಡುತ್ತಾರೆ. ಉಳಿದ ಜನರೊಡನೆ ಮಾತನಾಡುವಾಗ, ಇವರಾಡುವ ಕನ್ನಡಕ್ಕೆ ವಿಚಿತ್ರವಾದೊಂದು ರಾಗಮಾಲಿಕೆ

ಬರುತ್ತದೆ. ಅವರ ಗದ್ಯವೇ ಒಂದು ಸಂಗೀತದಂತೆ, ನಡುನಡುವೆ ರಾಗಾಲಾಪ ಭರಿತವಾಗಿದೆ. ಅವರ ಜೀವನ ತರಂಗವು ಮಾತಿನ ತರಂಗದಲ್ಲೂ ಧ್ವನಿಸುತ್ತದೆ. ಕಾಳೂರಿನ ಉಳಿದ ಜನಗಳ ಮಾತುಗಾರಿಕೆಯಲ್ಲೂ ಒಂದು ಬಗೆಯ ರಾಗ, ವಿರಾಮ, ಆಲಸ ಕಾಣದೆ ಇಲ್ಲ. ಮಹಾಂಕಾಳಿ ಮಹಾಲಸಿಯೂ ಹೌದು; ಈ ಊರಿನ ಅಧಿಷ್ಠಾತ್ರಿಯೂ ಹೌದು.

ಆದರೆ ತುಂಬ ಚಟುವಟಿಕೆಯುಳ್ಳ ಜನರನ್ನು ಕಾಳೂರಿನಲ್ಲೇ ಕಾಣಬಹುದಾದುದು ಈ ಕೇರಿಯಲ್ಲಿಯೆ. ಜನ ಮೈಗಳ್ಳರಾಗಿಲ್ಲ. ಒಂದಿಲ್ಲೊಂದು ಕೆಲಸಮಾಡಿಕೊಂಡಿರುತ್ತಾರೆ.ಅವರ ನಡಿಗೆ ಮಾತುಗಳು ವಿರಾಮವಾದುವು. ಅವರ ಹೆಂಗುಸರು ತೀರ ಚುರುಕಿನವರು. ಎಂದೂ ಮೈಗಳ್ಳ ಜೀವರಲ್ಲ. ವಿಚಿತ್ರ ಜೀವನ ಅವರದು. ಗಳಿಗೆ ಗಳಿಗೆಯ ವಿಧಿ ವಿಲಾಸವನ್ನು ಹೊಂದಿದ್ದು-ಅವರಲ್ಲಿ ಕೂಡಿಡುವ ಹಂಬಲವಿಲ್ಲ. ಕೂಡಿರಿಸುವುದೂ ಅವರ ಸ್ವಭಾವವಲ್ಲ. ಅಂತಹವರ ಜೀವನವು ಆಲಸ್ಯದ್ದಾಗಿರಲಾರದು. ಕೇರಿಯ ಎಳೆಯರು ಜಯಂತಿ ಉಡುಗೆಯಲ್ಲೇ ಬಿಳಿಯ ಮರಳಿನ ಮೇಲೆ ಚಂದನದ ಗೊಂಬೆಗಳಂತೆ ಆಡುತ್ತಿರುತ್ತಾರೆ. ತೆಂಗಿನ ಸೋಗೆ, ತಾಳೆಯ ಗರಿಗಳಿಂದ, ಗಿಳಿಯನ್ನೊ, ಗಾಡಿಯನ್ನೊ, ಗಿರಿಗಿಟಿಯನ್ನೊ ಮಾಡಿ ಆಡುತ್ತಾರೆ. ಮರಳಲ್ಲಿ ಪಾದಗಳನ್ನಿರಿಸಿ, ಮಣ್ಣು ಮೆತ್ತಿ ಗೂಡುಮಾಡುತ್ತಾರೆ. ಕಂಕುಳ ತನಕ ಕುಣಿ ತೋಡಿ ಬಾವಿಮಾಡುತ್ತಾರೆ. ಬೇಸರ ಬಂದರೆ ತೆಂಗಿನ ಕೊತ್ತಳಿಕೆಯನ್ನು ವಾಹನವಾಗಿ ಬಳಸಿ ಆಡುತ್ತಾರೆ. ನಿಸರ್ಗದ ಮಕ್ಕಳ ಈ ಆಟದ ಚೆಲುವು ಸಾಮಾನ್ಯವಲ್ಲ. ಅವರ ಉಡುಗೆ ಸಂಕೇತಮಾತ್ರದ್ದು, ಉಡಿದಾರದಿಂದಲೇ ಅದು ಸಂಪೂರ್ಣ. ತುಸು ಬೆಳೆದು ನಾಚಿಕೆ ಕಲಿತವರು ಕೌಪೀನಧಾರಿಗಳು; ಇನ್ನೂ ಬೆಳೆದವರಾದರೆ ಕೌಪೀನದ ಮುಂಜೆರಗುಗಳನ್ನು ಶಾಲಾಗಿ ಹೊದ್ದು ಬಿಡುವ ಮಹಾನುಭಾವರೂ ಉಂಟು. ಅರಿವೆಯಿಂದ ಅವರವರ ಸಿರಿತನವನ್ನು ಕಾಣಲಾರೆವಾದರೂ, ಮಕ್ಕಳ ಕಿವಿ ಮೂಗುಗಳಿಗೆ ಚುಚ್ಚಿದ ವಂಟಿ, ಮುರು, ಕೊಡಿಗೆಗಳಿಂದ ಅವರ ಸಂಪತ್ತಿನ ಅಂತರವನ್ನು ಊಹಿಸಬಹುದು.

ಹತ್ತೆಂಟು ವರ್ಷದ ಬಾಲಕಬಾಲಿಕೆಯರು, ತಮ್ಮ ಆಟದ ಜೊತೆಗೆ ಹಿರಿಯರ ಕೆಲಸಕ್ಕೂ ನೆರವಾಗುತ್ತಾರೆ. ಹಾಗೆ ನೆರವಾಗದೆಹೋದರೆ ಜೀವನ ಸಾಧ್ಯವಿಲ್ಲ. ಮಹಾಂಕಾಳಿ ಗುಡಿಯ ಮೂಡಣಕ್ಕೆ ಹರಿಯುವ ಕಮ್ಮಾರ

ಹೊಳೆ ಮುಂದುವರಿದು ಒಂದು ಖಾರಿಯಾಗಿ, ಕಾರ್ವಾರಕೇರಿಯ ದಕ್ಷಿಣದ ಮಗ್ಗುಲಲ್ಲಿ ಕಡಲನ್ನು ಹೋಗಿ ಕೂಡುತ್ತದೆ. ಈ ಖಾರಿಯ ಮುನ್ನೂರು ನಾನ್ನೂರು ಗಜ ಉದ್ದಗಲವಾದ ಹರಹು, ಬರತದ ನೀರಿಗೆ ತುಂಬಿದ ಜಲಾಶಯವಾಗುತ್ತದೆ. ಕಡಲಿನ ಅಲೆಗಳನ್ನು ಅಣಕಿಸುತ್ತದೆ. ಇಳಿತ ಬಂದಾಗ ಆ ನೀರೆಲ್ಲೋ! ಮರಳು, ಕೆಸರು ಹರವಿದ ವಿಶಾಲವಾದ ಒಂದು ಬೆಟ್ಟಿನಂತಾಗುತ್ತದೆ. ನೀರಿನ ಅಲೆಗಳು ಬರೆದು ಹೋದ ಚಿತ್ತಾರವೆಲ್ಲ ಅದರ ಮೇಲಿರುತ್ತದೆ. ಏಡಿಯ ಮರಿಗಳು ಹಿಂಗಾಲಿಂದೆಸೆದ ಮರಳಿನ ಮುತ್ತುಗಳ ಚಿತ್ರ ಕೆಲಸವೂ ಇರುತ್ತದೆ. ಇಂಥ ಪ್ರದೇಶದಲ್ಲೂ ಆ ಬಡ ಜನರು ದುಡಿಯುತ್ತಿರುತ್ತಾರೆ. ಖಾರಿಯ ನೀರಿರುವ ಭಾಗದಲ್ಲಿ ಮಳಿ ಚಿಪ್ಪು ಹೆಚ್ಚಾಗಿ ಸಿಕ್ಕುತ್ತದೆ. ಏಡಿಯ ಬಿಲಗಳನ್ನು ಹರಡಿ ಅವುಗಳ ಕಣ್ಣು ಚಿವುಟಿ ಬುಟ್ಟಿಗೆ ತುಂಬಿಸಿಕೊಳ್ಳುವುದೂ ಇಲ್ಲಿಯೇ; ಹೊಳೆಯ ದಂಡೆಯ ಮೇಲೆ ಕುಳಿತು ಗಾಳ ಹಾಕುವುದೂ ಇಲ್ಲಿಯೇ. ಬರತದ ನೀರು ತುಂಬಿದಾಗ ದೋಣಿಪಾತಿಗಳನ್ನೇರಿ ನೀರಲ್ಲಿ ಗಾಳ ಹಾಕುವುದೂ ಇಲ್ಲಿಯೇ.

ಹೆಂಗಸರಿಗೂ ಅಂಥದೇ ಉದ್ಯೋಗಗಳಿವೆ. ಅವರೂ ದೋಣಿ ಒತ್ತುತ್ತಾರೆ, ಕಡಲದಂಡೆಯನ್ನು ಹಾರೆಯಿಂದಗೆದು ಏಡಿ ಹಿಡಿಯುತ್ತಾರೆ. ತೋಡು ದಂಡೆಗಳ ಮಗ್ಗುಲುಗಳಿಗೆ ಬೆರಳು ತುರುಕಿ ಏಡಿ ಅರಸುತ್ತಾರೆ. ಮೊಳಕಾಲುದ್ದದ ನೀರಿನಲ್ಲಿ ನಿಂತು ತಮ್ಮ ಮೈಬಣ್ಣವೂ ಕೆಸರಿನೊಂದಿಗೆ ಮೇಳವಿಸಲೆಂಬಂತೆ ಬಗ್ಗಿಕೊಂಡು, ಚಿಪ್ಪುಗಳನ್ನು ಹೆಕ್ಕುತ್ತಾರೆ. ವರ್ಷದ ಒಂದೆರಡು ತಿಂಗಳು ಈ ಮಳಿ ಚಿಪ್ಪುಗಳು ಅವರ ಜೀವನಾಧಾರ. ಮನೆ, ಹಿತ್ತಿಲುಗಳಲ್ಲಿ ಕುಳಿತರೂ ಅವರು ಹಲವಾರು ವೃತ್ತಿ ನಡೆಸಬಲ್ಲರು — ಹಗ್ಗ ಹೊಸೆಯುವುದು, ಬಲೆ ದುರಸ್ತಿಮಾಡುವುದು, ತೆಂಗಿನ ಗರಿಗಳಿಂದ ಮಡಲು ಹೆಣೆಯುವುದು. ಸಂಜೆಯ ಹೊತ್ತಿಗೆ ಹಿಡಿದ ಮೀನುಗಳನ್ನು ಬುಟ್ಟಿಯಲ್ಲಿ ತುಂಬಿಸಿ, ಪೇಟೆಯವರಿಗೆ ಅದರ ಕಂಪನ್ನು ಬೀರುತ್ತ ಸಾಗಿ, ವಿಕ್ರಯಿಸುವುದು. ಹಾಗೆ ಹೇಳಹೋದರೆ ಹೆಂಗಳೆಯರಷ್ಟು ದುಡಿಮೆ ಗಂಡಸರದ್ದಲ್ಲ. ಗಂಡಸರು ತೀರ ನಸೀಬಿನ ಗುಲಾಮರು. ಮಳೆಗಾಲದಲ್ಲಿ ಹೆಚ್ಚು ಕಡಿಮೆ ಅವರಿಗೆ ವಿರಾಮ. ಮಳೆ ಕಳೆಯಿತೇ! ಮಾರಿಬಲೆ ಉದ್ಯೋಗಕ್ಕೆ ಪ್ರಾರಂಭ. ಅರ್ವತ್ತು ಎಂಬತ್ತು ಜನರು ಕೂಡಿ ಹೆಬ್ಬಲೆಯೊಂದನ್ನು ದೊಡ್ಡ ಪಾಂಡಿಯಲ್ಲಿ ತುಂಬಿಸಿಕೊಂಡು, ಮೀನಿನ ಸುಳಿವು ಹಿಂಬಾಲಿಸುತ್ತ, ಬಿಲ್ಲಿನ ಆಕಾರದಲ್ಲಿ ಕಡಲಯಾನ ಮಾಡಿ

ದರೆ, ಅವರ ಅದೃಷ್ಟ ಪರೀಕ್ಷೆಯಾಗುತ್ತದೆ. ಬೆವರಿನ ತೂಕಕ್ಕೆ ಸಮನಾಗಿ ಮೀನು ಬಾರದಿರುವುದೂ ಉಂಟು. ತಾಸು ತಾಸುಗಳ ತನಕ ಬಲೆಯನ್ನೆಳೆದು ದೋಚಿ ಮುಗಿಯದಂಥ ಮೀನಿನ ರಾಶಿ ಬೀಳುವುದೂ ಉಂಟು. ಎಲ್ಲವೂ ಅದೃಷ್ಟದ ಆಟ. ಶ್ರಾವಣ ಕಳೆದ ಮೇಲೆ, ಜ್ಯೇಷ್ಠಕ್ಕೆ ಇನ್ನೆರಡು ತಿಂಗಳು ಗಳಿರುವ ತನಕ, ಕಡಲಿನೊಡನೆ ಅವರು ತೋರುವ ಕೆಚ್ಚೇ ಕೆಚ್ಚು. ಮೀನಿನ ಸಂಪಾದನೆಗೆ ಸಮನಾಗಿ ಅವರ ಮಾತಿನ ಹಿಗ್ಗು ಕುಗ್ಗುಗಳಿರುತ್ತವೆ.

ತಿದ್ದಿ, ಕೆತ್ತಿಮಾಡಿದಂಥ ಬ್ರಹ್ಮನ ಗುಡಿಗಾರತನದಿಂದ ನಿರ್ಮಿತವಾದಂಥ ರೂಪ ಅವರದು. ಕಪ್ಪುಗಟ್ಟಿದ ಚಂದನದ ಗೊಂಬೆಗಳು. ಹದವಾದ ಎತ್ತರ,ಕಪ್ಪು ಇಲ್ಲವೆ ಎಣ್ಣೆಗಪ್ಪುಮೈಬಣ್ಣ,ನೀಳ ಮೊನಚು ಮುಖ,ಮೊನಚು ಮೂಗು, ಹೊಳೆವ ಅಗಲವಾದ ಎದೆ, ತುಂಬಿದ ತೋಳಿನ ಮಾಂಸಖಂಡ ಗಳು, ಬೆನ್ನಮೇಲೆ ಬಿಗಿಯಿಂದ ನಲಿವಂಥ ಮಾಂಸ ರಜ್ಜುಗಳು; ದಪ್ಪನಾದ ತೊಡೆಗಳು. ಅವರ ವೇಷ ಭೂಷಣವೋ! ಅವರೂ ಕೌಪೀನಧಾರಿಗಳು. ಕಪ್ಪುತೊಗಲಿನ ಮೇಲೆ ಹೊಳೆವ ಬೆಳ್ಳಿಯ ಉಡಿದಾರ. ಮೈಮೇಲೆ ಕವಚದಂತಹ 'ವಾಸುಕೋಟು' ಹಾಕುವವರುಂಟು, ಹಾಕದಿರುವವರೂ ಉಂಟು. ಅದಿಲ್ಲದಾಗಲೇ ಅವರ ಮೈಕಟ್ಟು ನೋಡುವುದಕ್ಕೆ ಸೊಗಸು. ಐಗುಪ್ತದ ಪ್ರಾಚೀನ ಚಿತ್ರಗಳಿಂದ ಎದ್ದು ಬಂದಂಥ ಜನಸಮುದಾಯದಂತೆ ಕಾಣುತ್ತಾರೆ. ಕಿರಿಯ ಪಂಚೆಯೊಂದನ್ನು ಕೌಪೀನವಾಗಿ ಉಟ್ಟು, ಅದರ ಸೆರಗನ್ನು ಥೋತ್ರವಾಗಿ ಸುತ್ತಿ, ಅಲೆದಾಡುವುದು ಅವರ ವಾಡಿಕೆ. ಕೆಲವರಿಗೆ ಎಣ್ಣೆಗೆಂಪು ಎಲೆವಸ್ತ್ರದ ಮೇಲೆ ಅಭಿಲಾಷೆ.

ಅವರ ಖಟಾಟೋಪವೇನಿದ್ದರೂ ಅದು ಕಡಲಿಗಿಳಿದಾಗ, ಮಾರಿ ಬಲೆ ಎಳೆಯುವಾಗ, ಪಾಂಡಿಯಲ್ಲಿ ಕುಳಿತು ಹುಟ್ಟು ಹಾಕುವಾಗ-ಆಗಲೇ ಕಾಣಬೇಕು. ಹತ್ತು ಜನರು ಕೂಡಿ ರಾಗಮಾಡುತ್ತ,ಹುಟ್ಟು ಹಾಕತೊಡಗಿದರೆಂದರೆ ಪ್ರಾಚೀನ ಭಾರತೀಯರ ವಿದೇಶ ಯಾನಗಳ ನೆನಪಾಗಬೇಕು. ಅದೇ ಠೀವಿ, ಆತ್ಮವಿಶ್ವಾಸ, ದಿನದಿನದ ಕೆಲಸಗಳಲ್ಲಿದೆ. ಮೀನುಗಾರಿಕೆಯಲ್ಲಿ ಪಳಗಿದ ಕೈ. ದುಡಿಯುವ ಕಾಲದಲ್ಲಿ ದೆವ್ವದಂತೆ ದುಡಿಯಬಲ್ಲರು; ದುಡಿತದ ಶ್ರಮ ಮರೆಯಲು ದೆವ್ವದಂತೆ ಕುಡಿಯ ಬಲ್ಲರು. ಈಗೀಗ ಬಾಯಲ್ಲೊಂದು ತುಂಡು ಬೀಡಿ, ಇನ್ನೊಂದು ತುಂಡು ಕಿವಿಯಲ್ಲಿ ಸಿಕ್ಕಿಸಿಕೊಂಡು ತಿರುಗಾಡುವುದು ಅವರಿಗೆ ಭೂಷಣವಾಗಿದೆ. ಆ ಇಡಿಯ ಕೇರಿಯಲ್ಲಿಯೇ

ಹೊಳೆ ಮುಂದುವರಿದು ಒಂದು ಖಾರಿಯಾಗಿ, ಕಾರ್ವಾರ್ಕೇರಿಯ ದಕ್ಷಿಣದ ಮಗ್ಗುಲಲ್ಲಿ ಕಡಲನ್ನು ಹೋಗಿ ಕೂಡುತ್ತದೆ. ಈ ಖಾರಿಯ ಮುನ್ನೂರು ನಾನ್ನೂರು ಗಜ ಉದ್ದಗಲವಾದ ಹರಹು, ಬರತದ ನೀರಿಗೆ ತುಂಬಿದ ಜಲಾಶಯುವಾಗುತ್ತದೆ. ಕಡಲಿನ ಅಲೆಗಳನ್ನು ಅಣಕಿಸುತ್ತದೆ. ಇಳಿತ ಬಂದಾಗ ಆ ನೀರೆಲ್ಲೋ! ಮರಳು, ಕೆಸರು ಹರವಿದ ವಿಶಾಲವಾದ ಒಂದು ಬೆಟ್ಟಿನಂತಾಗುತ್ತದೆ. ನೀರಿನ ಅಲೆಗಳು ಬರೆದು ಹೋದ ಚಿತ್ತಾರವೆಲ್ಲ ಅದರ ಮೇಲಿರುತ್ತದೆ. ಏಡಿಯ ಮರಿಗಳು ಹಿಂಗಾಲಿಂದೆಸೆದ ಮರಳಿನ ಮುತ್ತುಗಳ ಚಿತ್ರ ಕೆಲಸವೂ ಇರುತ್ತದೆ. ಇಂಥ ಪ್ರದೇಶದಲ್ಲೂ ಆ ಬಡ ಜನರು ದುಡಿಯುತ್ತಿರುತ್ತಾರೆ. ಖಾರಿಯ ನೀರಿರುವ ಭಾಗದಲ್ಲಿ ಮಳಿ ಚಿಪ್ಪು ಹೆಚ್ಚಾಗಿ ಸಿಕ್ಕುತ್ತದೆ. ಏಡಿಯ ಬಿಲಗಳನ್ನು ಹರಡಿ ಅವುಗಳ ಕಣ್ಣುಚಿವುಟಿ ಬುಟ್ಟಿಗೆ ತುಂಬಿಸಿಕೊಳ್ಳುವುದೂ ಇಲ್ಲಿಯೇ; ಹೊಳೆಯ ದಂಡೆಯ ಮೇಲೆ ಕುಳಿತು ಗಾಳ ಹಾಕುವುದೂ ಇಲ್ಲಿಯೇ. ಬರತದ ನೀರು ತುಂಬಿದಾಗ ದೋಣಿಪಾತಿಗಳನ್ನೇರಿ ನೀರಲ್ಲಿ ಗಾಳ ಹಾಕುವುದೂ ಇಲ್ಲಿಯೇ.

ಹೆಂಗಸರಿಗೂ ಅಂಥದೇ ಉದ್ಯೋಗಗಳಿವೆ. ಅವರೂ ದೋಣಿ ಒತ್ತುತ್ತಾರೆ, ಕಡಲದಂಡೆಯನ್ನು ಹಾರೆಯಿಂದಗೆದು ಏಡಿ ಹಿಡಿಯುತ್ತಾರೆ. ತೋಡು ದಂಡೆಗಳ ಮಗ್ಗಲುಗಳಿಗೆ ಬೆರಳು ತುರುಕಿ ಏಡಿ ಅರಸುತ್ತಾರೆ. ಮೊಳಕಾಲುದ್ದದ ನೀರಿನಲ್ಲಿ ನಿಂತು ತಮ್ಮ ಮೈಬಣ್ಣವೂ ಕೆಸರಿನೊಂದಿಗೆ ಮೇಳವಿಸಲೆಂಬಂತೆ ಬಗ್ಗಿಕೊಂಡು, ಚಿಪ್ಪುಗಳನ್ನು ಹೆಕ್ಕುತ್ತಾರೆ. ವರ್ಷದ ಒಂದೆರಡು ತಿಂಗಳು ಈ ಮಳಿ ಚಿಪ್ಪುಗಳು ಅವರ ಜೀವನಾಧಾರ. ಮನೆ, ಹಿತ್ತಿಲುಗಳಲ್ಲಿ ಕುಳಿತರೂ ಅವರು ಹಲವಾರು ವೃತ್ತಿ ನಡೆಸಬಲ್ಲರು — ಹಗ್ಗ ಹೊಸೆಯುವುದು, ಬಲೆ ದುರಸ್ತಿಮಾಡುವುದು, ತೆಂಗಿನ ಗರಿಗಳಿಂದ ಮಡಲು ಹೆಣೆಯುವುದು. ಸಂಜೆಯ ಹೊತ್ತಿಗೆ ಹಿಡಿದ ಮೀನುಗಳನ್ನು ಬುಟ್ಟಿಯಲ್ಲಿ ತುಂಬಿಸಿ, ಪೇಟೆಯವರಿಗೆ ಅದರ ಕಂಪನ್ನು ಬೀರುತ್ತ ಸಾಗಿ, ವಿಕ್ರಯಿಸುವುದು. ಹಾಗೆ ಹೇಳಹೋದರೆ ಹೆಂಗಳೆಯರಷ್ಟು ದುಡಿಮೆ ಗಂಡಸರದ್ದಲ್ಲ. ಗಂಡಸರು ತೀರ ನಸೀಬಿನ ಗುಲಾಮರು. ಮಳೆಗಾಲದಲ್ಲಿ ಹೆಚ್ಚು ಕಡಿಮೆ ಅವರಿಗೆ ವಿರಾಮ. ಮಳೆ ಕಳೆಯಿತೇ! ಮಾರಿಬಲೆ ಉದ್ಯೋಗಕ್ಕೆ ಪ್ರಾರಂಭ. ಅರ್ವತ್ತು ಎಂಬತ್ತು ಜನರು ಕೂಡಿ ಹೆಬ್ಬಲೆಯೊಂದನ್ನು ದೊಡ್ಡ ಪಾಂಡಿಯಲ್ಲಿ ತುಂಬಿಸಿಕೊಂಡು, ಮೀನಿನ ಸುಳಿವು ಹಿಂಬಾಲಿಸುತ್ತ, ಬಿಲ್ಲಿನ ಆಕಾರದಲ್ಲಿ ಕಡಲಯಾನ ಮಾಡಿ

ದರೆ, ಅವರ ಅದೃಷ್ಟ ಪರೀಕ್ಷೆಯಾಗುತ್ತದೆ. ಬೆವರಿನ ತೂಕಕ್ಕೆ ಸಮನಾಗಿ ಮೀನು ಬಾರದಿರುವುದೂ ಉಂಟು. ತಾಸು ತಾಸುಗಳ ತನಕ ಬಲೆಯನ್ನೆಳೆದು ದೋಣಿ ಮುಗಿಯದಂಥ ಮೀನಿನ ರಾಶಿ ಬೀಳುವುದೂ ಉಂಟು. ಎಲ್ಲವೂ ಅದೃಷ್ಟದ ಆಟ. ಶ್ರಾವಣ ಕಳೆದ ಮೇಲೆ, ಜ್ಯೇಷ್ಠಕ್ಕೆ ಇನ್ನೆರಡು ತಿಂಗಳು ಗಳಿರುವ ತನಕ, ಕಡಲಿನೊಡನೆ ಅವರು ತೋರುವ ಕೆಚ್ಚೇ ಕೆಚ್ಚು. ಮೀನಿನ ಸಂಪಾದನೆಗೆ ಸಮನಾಗಿ ಅವರ ಮಾತಿನ ಹಿಗ್ಗು ಕುಗ್ಗುಗಳಿರುತ್ತವೆ.

ತಿದ್ದಿ, ಕೆತ್ತಿಮಾಡಿದಂಥ ಬ್ರಹ್ಮನ ಗುಡಿಗಾರತನದಿಂದ ನಿರ್ಮಿತವಾದಂಥ ರೂಪ ಅವರದು. ಕಪ್ಪುಗಟ್ಟಿದ ಚಂದನದ ಗೊಂಬೆಗಳು. ಹದವಾದ ಎತ್ತರ, ಕಪ್ಪು ಇಲ್ಲವೆ ಎಣ್ಣೆಗಪ್ಪುಮೈಬಣ್ಣ, ನೀಳ ಮೊನಚು ಮುಖ, ಮೊನಚು ಮೂಗು, ಹೊಳೆವ ಅಗಲವಾದ ಎದೆ, ತುಂಬಿದ ತೋಳಿನ ಮಾಂಸಖಂಡ ಗಳು, ಬೆನ್ನಮೇಲೆ ಬಿಗಿಯಿಂದ ನಲಿವಂಥ ಮಾಂಸ ರಜ್ಜುಗಳು; ದಪ್ಪ ನಾದ ತೊಡೆಗಳು. ಅವರ ವೇಷ ಭೂಷಣವೋ! ಅವರೂ ಕೌಪೀನಧಾರಿ ಗಳು. ಕಪ್ಪುತೊಗಲಿನ ಮೇಲೆ ಹೊಳೆವ ಬೆಳ್ಳಿಯ ಉಡಿದಾರ. ಮೈಮೇಲೆ ಕವಚದಂತಹ 'ವಾಸುಕೋಟು' ಹಾಕುವವರುಂಟು, ಹಾಕದಿರುವವರೂ ಉಂಟು. ಅದಿಲ್ಲದಾಗಲೇ ಅವರ ಮೈಕಟ್ಟು ನೋಡುವುದಕ್ಕೆ ಸೊಗಸು. ಐಗುಪ್ತದ ಪ್ರಾಚೀನ ಚಿತ್ರಗಳಿಂದ ಎದ್ದು ಬಂದಂಥ ಜನಸಮುದಾಯದಂತೆ ಕಾಣುತ್ತಾರೆ. ಕಿರಿಯ ಪಂಚೆಯೊಂದನ್ನು ಕೌಪೀನವಾಗಿ ಉಟ್ಟು, ಅದರ ಸೆರಗನ್ನು ಧೋತ್ರವಾಗಿ ಸುತ್ತಿ, ಅಲೆದಾಡುವುದು ಅವರ ವಾಡಿಕೆ. ಕೆಲವರಿಗೆ ಎಣ್ಣೆಗೆಂಪು ಎಲೆವಸ್ತ್ರದ ಮೇಲೆ ಅಭಿಲಾಷೆ.

ಅವರ ಖಟಾಟೋಪವೇನಿದ್ದರೂ ಅದು ಕಡಲಿಗಿಳಿದಾಗ, ಮಾರಿ ಬಲೆ ಎಳೆಯುವಾಗ, ಪಾಂಡಿಯಲ್ಲಿ ಕುಳಿತು ಹುಟ್ಟು ಹಾಕುವಾಗ–ಆಗಲೇ ಕಾಣಬೇಕು. ಹತ್ತು ಜನರು ಕೂಡಿ ರಾಗಮಾಡುತ್ತ, ಹುಟ್ಟು ಹಾಕತೊಡಗಿದರೆಂದರೆ ಪ್ರಾಚೀನ ಭಾರತೀಯರ ವಿದೇಶ ಯಾನಗಳ ನೆನಪಾಗಬೇಕು. ಅದೇ ಠೀವಿ, ಆತ್ಮವಿಶ್ವಾಸ, ದಿನದಿನದ ಕೆಲಸಗಳಲ್ಲಿದೆ. ಮೀನುಗಾರಿಕೆಯಲ್ಲಿ ಪಳಗಿದ ಕೈ. ದುಡಿಯುವ ಕಾಲದಲ್ಲಿ ದೆವ್ವದಂತೆ ದುಡಿಯಬಲ್ಲರು; ದುಡಿತದ ಶ್ರಮ ಮರೆಯಲು ದೆವ್ವದಂತೆ ಕುಡಿಯ ಬಲ್ಲರು. ಈಗೀಗ ಬಾಯಲ್ಲೊಂದು ತುಂಡು ಬೀಡಿ, ಇನ್ನೊಂದು ತುಂಡು ಕಿವಿಯಲ್ಲಿ ಸಿಕ್ಕಿಸಿಕೊಂಡು ತಿರುಗಾಡುವುದು ಅವರಿಗೆ ಭೂಷಣವಾಗಿದೆ. ಆ ಇಡಿಯ ಕೇರಿಯಲ್ಲಿಯೋ

ವತನದಾರರು, ಶ್ರೀಮಂತರು ಎಂಬವರು ಇಲ್ಲವಾದರೂ, ಎಲ್ಲರೂ ದುಡಿದು ದಿನ ಕಳೆಯಬಲ್ಲ ಶಕ್ತರೇ. ಅವರಲ್ಲಿ ಗದ್ದೆ ಬೇಸಾಯ ಮಾಡುವವರೂ ಇದ್ದಾರೆ. ತೆಂಗಿನ ಮರಗಳನ್ನು ನಟ್ಟು, ಅದರಿಂದ ತಮ್ಮ ವರಮಾನ ಹೆಚ್ಚಿಸಿ ಕೊಂಡವರೂ ಇದ್ದಾರೆ. ಈ ಜನಗಳಲ್ಲಿ ವೆಂಕಟು ಎಂಬವನು ಮಾತ್ರ ಕಾಳೂರಿನ ಸಾಹುಕಾರರಷ್ಟೇ ಹೆಸರಾದ ವ್ಯಕ್ತಿಯೆನ್ನಬೇಕು. ಅವನು ಕಾರ್ವಿ ಯರಿಗೆ ಗುರಿಕಾರ. ವೆಂಕಟು ಹೇಳಿದಂತೆ ಉಳಿದ ಜನರಿದ್ದಾರೆ. ಅವನಿ ಗಾಗಿ ಜೀವ ಕೊಡುವವರುಂಟು; ಕೊಟ್ಟವರುಂಟು. ಕಾಳೂರಿನ ಚಿಕ್ಕ ಬಂದರಿನಲ್ಲಿ ಏನಾದರೂ ನಾಲ್ಕು ಹಡಗುಗಳು, ಮಂಜಿಗಳು ಬಂದು ತಂಗಿ ದರೆ, ಅವುಗಳಿಂದ ಮಾಲು ಇಳಿಸುವುದಕ್ಕೂ, ಮಾಲು ಏರಿಸುವುದಕ್ಕೂ ಅವನೇ ಬೇಕು. ಉಪ್ಪುನೀರಲ್ಲಿ ಮುಳುಗಿಸಿದ ದೆವ್ವನಂತಹ ಮೋಪುಗಳನ್ನು ಉರುಳಿಸಿ, ಮರ ಸಿಗಿಯುವ ದಡೆಗೆ ಏರಿಸಬೇಕಾದರೆ, ಅವನಿಗೇನೆ ಪಟ್ಟ ಕಟ್ಟಬೇಕು. ಜನಬಲದಿಂದಾಗುವಂಥ ಕೆಲಸಕ್ಕೆಲ್ಲ ವೆಂಕಟು ಮತ್ತವನ ಪಟಾಲಮು ಬರಬೇಕಾದುದು ಅನಿವಾರ್ಯ.

ವೆಂಕಟು ಗುರಿಕಾರನಾದರೂ ಶ್ರೀಮಂತನಲ್ಲ. ನಾಲ್ಕು ಕೆಂಪಿನ ಹರಳುಗಳ ಕೊಡಿಗೆ ಅವನ ಕಿವಿಯಲ್ಲಿದೆ. ಅವನ ಒಂಟಿಯ ಕೀಲುಗಳೂ ಉದ್ದವಾಗಿ ತೂಗುತ್ತಿವೆ. ಕೈಗೊಂದು ಬಂಗಾರದ ಬಳೆಯೂ ಇವೆ-ಎಂಬುದ ರಿಂದ ಅವನು ಶ್ರೀಮಂತನೆಂದು ಊಹಿಸಬೇಕಷ್ಟೆ. ಆದರೆ ನಿಜಸ್ಥಿತಿ ಹಾಗಿಲ್ಲ. ಉಳಿದವರಷ್ಟೇ ಶ್ರೀಮಂತ ಅವನು. ಮಾರಿ ಬಲೆಯ ಕಾಲದಲ್ಲಿ ಅವನೇ ಮುಖಂಡ. ಎಲ್ಲರಿಗಿಂತ ಹೆಚ್ಚಿನ ಪಾಲು ಅವನದ್ದು. ಆದರೆ ಕೈಗೆ ದುಡ್ಡು ಬಂದಾಗ ಮುಷ್ಟಿ ಮುಚ್ಚಿಕೊಳ್ಳುವಂಥ ಮುಖಂಡ ಅವನಲ್ಲ. ಕೈಗೆ ಕಾಸು ಬಂದಾಗ, ತನ್ನ ಭರಾಮಿಗೆ ತಕ್ಕ ಹಾಗೆ, ತಾನೂ ಕುಡಿಯುತ್ತಾನೆ; ಪರಿವಾರ ದವರಿಗೂ ಕುಡಿಸುತ್ತಾನೆ. ವಾಸಪ್ಪನವರು, ಶ್ರೀಪತಿ ರಾಯರು ಮನೆಬಿಟ್ಟು ಹೊರಡುವಾಗ ಅವರಿಬ್ಬರ ಬೆನ್ನಹಿಂದೆ ಒಬ್ಬಿಬ್ಬರು ತೈನಾತಿಗಳು ಹೊರಡು ವಂತೆ, ಕಾಸಿರಲಿ ಇಲ್ಲದಿರಲಿ, ವೆಂಕಟುವಿನ ಹಿಂದೆ ಒಬ್ಬಿಬ್ಬರು ತರುಣರೋ ಹಿರಿಯರೋ ನಾಲ್ಕು ಹೆಜ್ಜೆ ಹಿಂದಿನಿಂದ ಹಿಂಬಾಲಿಸುವ ಜನರು ಇದ್ದೇ ಇದ್ದಾರೆ.

ಇಂತಹ ಊರ ಜನಗಳಲ್ಲಿ ನಮ್ಮ ಕಿಟ್ಟಪ್ಪ ಮಾಸ್ತರೂ ಒಬ್ಬರು. ಈ ತನಕ ಅವರಿಗೆ ಹೆಚ್ಚಿನ ಪ್ರತಿಷ್ಠೆ ಬಂದಿರದೆ ಹೋದರೂ, ಊರಿನ ಜನರಿಗೆ

ಪರಿಚಿತರಾದವರಾಗಿದ್ದಾರೆ, ಬೇಕಾದವರಾಗಿದ್ದಾರೆ. ಅನೇಕರು ಅವರ ಬಾಯಿಂದ 'ಹತ್ತೊಂಭತ್ತಿಪ್ಪತ್ತಿ'ಯ ತನಕ ಮಗ್ಗಿಯನ್ನು ಕಲಿತವರು. ಈಗ ಇಂಗ್ಲಿಷ್ ಶಾಲೆಯು ಊರಲ್ಲಾದ ಮೇಲೆ, ಪ್ರಾಥಮಿಕ ಶಾಲೆಯ ಮಾಸ್ತರರಾಗಿದ್ದ ಕಿಟ್ಟಪ್ಪನವರ ವಿಚಾರದಲ್ಲಿ ಪರಿಚಯ,ಗೌರವ ಸಾಲದೆ ಹೋದರೂ, ಹಳಬರಿಗೆಲ್ಲಾ ಅವರ ಸ್ನೇಹವಿದೆ, ಗೌರವವಿದೆ. ಆದರೆ ಈ ಗೌರವ ತೋರಿಸುವ ಬಗೆ ಬೇರೆಯೆ ತೆರನಾದುದು. ವಾಸಪ್ಪ ಸಾಹುಕಾರರು ಬೀದಿಯಲ್ಲಿ ತಿರುಗಾಡುವಾಗ ಆಚೀಚಿನವರು'ಎಲ್ಲಿಗೆ ಸವಾರಿ'ಎಂದು ಬಗ್ಗಿ ಕೇಳುತ್ತಾರೆ. ಶ್ರೀಪತಿರಾಯರು ಬೀದಿಯಲ್ಲಿ ಎದುರಾದರೆ ಅವರ ಗುರುತಿನವರು ತಡೆದು, ಸರಿದು, ನಿಂತು, ಮೈಬಗ್ಗಿಸಿ ನಮಸ್ಕರಿಸುತ್ತಾರೆ. ಆಳು ಮಕ್ಕಳು, ಹಂಗಿನವರು, ದಾರಿಯ ಮಗ್ಗುಲಿಗೇನೆ ಸರಿದು ಬೆನ್ನು ಬಗ್ಗಿಸುತ್ತಾರೆ. ಈ ತೆರನಲ್ಲಿ ಊರಿನ ಯಾರೂ ಕಿಟ್ಟಪ್ಪನವರಿಗೆ ಮನ್ನಣೆ ಸಲ್ಲಿಸಿಲ್ಲ. ಆದರೆ ನಿತ್ಯದ ರೂಢಿಯಂತೆ, ಮನೆಯಿಂದ ಪೇಟೆಗೆ ಹೋಗುವಾಗ, ಪೇಟೆಯಿಂದ ಮನೆಗೆ ಹೋಗುವಾಗ, ಸಂಜೆಯ ರೂಢಿಯಂತೆ ದೇವರ ಗುಡಿಗೆ ಹೋಗಿ ಬರುವಾಗ "ಏನು ಮಾಸ್ತರರೇ?" ಎಂದು ಕೇಳದಂತಹ ಸಮವಯಸ್ಕರಾಗಲಿ, ಹಿರಿಯರಾಗಲಿ ಇಲ್ಲ. ಕಿರಿಯರಾದವರು ಅವರನ್ನು ಕಂಡು ಕೈಮುಗಿಯದೆ ಹೋದರೂ, ತುಟಿಯ ಕುಡಿಗಳಿಂದ ನಗು ಸೂಸುವುದುಂಟು. ಇವರು ಉತ್ತರವಾಗಿ "ಚೆನ್ನಾಗಿದ್ದೀಯಾ" ಎಂದು ಕೇಳುವುದುಂಟು. ಇದಕ್ಕಿಂತ ಹೆಚ್ಚಿನ ಗೌರವ ಅವರಿಗಾದರೂ ಏನು ಬೇಕು? ತಾವು ಬಡವರಾಗಿರುವುದರಿಂದ, ಇತರರಿಗೆ ಯಾವ ಉಪಕಾರವನ್ನು ಮಾಡುವ ಸ್ಥಿತಿಯಲ್ಲೂ ಇಲ್ಲ. ಆದರೆ 'ನಾಲ್ಕು ಮಂದಿಗೆ ಬೇಡದವನಾಗಿಲ್ಲ' ಎನ್ನುವ ಸಮಾಧಾನವಿದೆ. ಊರಲ್ಲಿ ಒಬ್ಬಿಬ್ಬರಾದರೂ "ಮಾಸ್ತರರ ಅಭಿಪ್ರಾಯ ಹೀಗೆ. ಹಾಗೆ ಮಾಡುವುದೇ ಒಳ್ಳೆಯದೆಂತ ಕಾಣುತ್ತದೆ" ಎಂದು ಹೇಳುತ್ತಾರೆ.

ಅಂಥ ಮಾಸ್ತರರ ಮಗನು ಧಾರವಾಡಕ್ಕೆ ಓದಲಿಕ್ಕೆ ಹೋದ ವೇಳೆಯಲ್ಲಿ ಅನೇಕ ಮಿತ್ರರು ಅವರ ಸಲುವಾಗಿ ಕನಿಕರ ತೋರಿಸಿದ್ದಾರೆ. "ಹೇಗೆ ಪೂರೈಸುತ್ತೀರಪ್ಪಾ, ಕೆಲಸವೇನೊ ಒಳ್ಳೆಯದೇ." ಎಂದು ಸಹಾನುಭೂತಿಯನ್ನು ತೋರಿಸಿದ್ದಾರೆ. "ಶಿವು ಮೆಡಿಕಲ್ ಕಾಲೇಜಿಗೆ ಹೋಗಿದ್ದಾನೆ. ಧಾರವಾಡದವರು ಯಾರೋ ಸಹಾಯ ಮಾಡುತ್ತಿದ್ದಾರೆ"ಎಂದಾಗ'ಮಹಾಂಕಾಳಿಯ ಕೃಪೆಯಿಂದ ಒಳ್ಳೆಯದಾಗಲಿ' ಎಂದು ಜನ ಮನಃಪೂರ್ವಕವಾಗಿ

ಬಯಸಿದ್ದುಂಟು. ಅವರ ಯಾವತ್ತು ಹೆಣ್ಣುಮಕ್ಕಳ ಮದುವೆಯ ಕಾಲದಲ್ಲಿ-ಪರಿಚಿತರು, ಸ್ನೇಹಿತರು ತರಕಾರಿ, ಅಕ್ಕಿ ಮೊದಲಾದುವುವನ್ನು ಒದಗಿಸಿದ್ದುಂಟು. ಅಂಥ ಬಹಳ ಮಂದಿ ಸ್ನೇಹಿತರಿದ್ದಾರೆ. ಆದರೆ ಅದೇ ಮಾಸ್ತರರ ಮಗನಿಗೆ ಶ್ರೀಪತಿರಾಯರು ಹೆಣ್ಣುಕೊಡುವ ಯೋಚನೆಮಾಡಿದ ವಿಚಾರ ಬಹು ಮಂದಿಗೆ ತಿಳಿದಿಲ್ಲ. ರಾಮಾ ಜೋಯಿಸರನ್ನು ಬಿಟ್ಟರೆ ಉಳಿದವರಿಗೆ ತಿಳಿದೇ ಇಲ್ಲವೆನ್ನಬಹುದು. ಆದರೆ ಶಿವುವಿನ ಮದುವೆಯು ಧಾರವಾಡದಲ್ಲಿ ನಡೆದು, ಅದಕ್ಕೆ ಕಿಟ್ಟಪ್ಪ ಮಾಸ್ತರರು ಹೋಗದೆ ಉಳಿದಾಗ, ಎಲ್ಲರೂ ಅವರನ್ನು ಆಕ್ಷೇಪಿಸಿದರು. ವಾಸಪ್ಪ ಸಾಹುಕಾರರು ಸಹ "ಯಾಕೆ ಹೋಗಲಿಲ್ಲ? ದೊಡ್ಡ ತಪ್ಪುಮಾಡಿದಿರಿ" ಎಂದರು. ಯಾವ ಕುಂಟು ನೆಪ ಹೇಳಿದರೂ ಅವರ ಮಿತ್ರರಿಗೆ ಸಮಾಧಾನವಾಗಲಿಲ್ಲ. ಸಾಹುಕಾರರ ಅಸಮಾಧಾನಕ್ಕೆ ಮಾಸ್ತರರು ಕಾರಣವನ್ನೂ ಹೇಳಬೇಕಾಯಿತು. ಮುಂದೆ ಮದುಮಕ್ಕಳು ಊರಿಗೆ ಬರುತ್ತಲೇ ಅವರ ಮಿತ್ರರೆಲ್ಲರೂ ಸಂತೋಷಪಟ್ಟರು. ಬಹುಮಂದಿ ವಧೂವರರನ್ನು ತಮ್ಮ ಮನೆಗೆ ಆಮಂತ್ರಿಸಿ ಹರಸಿದರು; ಉಪಚರಿಸಿದರು.

ಅವನ ವಿದ್ಯೆಯು ಮುಗಿದು ಶಿವು ಡಾಕ್ಟರನಾಗಿ ಕಾಳೂರಿಗೆ ಬಂದು ಅಲ್ಲಿಯೇ ದವಾಖಾನೆ ತೆರೆದುದು ಅನೇಕರ ಸಂತೋಷಕ್ಕೆ ಕಾರಣವಾಗಿದೆ. ಬಂದಾಗ "ಡಾಕ್ಟರರಿಗೆ ಏನು ದುಡ್ಡು ಕೊಟ್ಟಾರು ನಮ್ಮ ಜನ?" ಎಂದವರುಂಟು. 'ಕಿಟ್ಟಪ್ಪ ಮಾಸ್ತರರೇ, ನಿಮ್ಮ ಮಗ ಸರಕಾರಿ ಕೆಲಸಕ್ಕೆ ಸೇರಿದರೆ ಫಾಯಿದೆಯಲ್ಲವೆ' ಅಂದುದುಂಟು. ಅದಕ್ಕೆ ಮಾಸ್ತರರು "ನೀವೂ ಹೀಗೆನ್ನುತ್ತೀರಾ? ನಾನು ಮಗನಿಂದ ದೂರವಾಗಿ ನಿಂತು, ಈ ಊರಲ್ಲಿ ಸುಡುವವರು ಗತಿಯಿಲ್ಲದೆ ಸಾಯಬೇಕೆನ್ನುತ್ತೀರಾ?" ಎಂದು ಪರಿಹಾಸ್ಯದ ಉತ್ತರ ಸಲ್ಲಿಸಿದರು. ಈಗ ಅಂತಹ ಮಾತನ್ನಾಡುವವರಿಲ್ಲ.

ಕಿಟ್ಟಪ್ಪ ಮಾಸ್ತರರ ಮನೆ ಇರುವುದು ಮಹಾಂಕಾಳಿಯ ಗುಡಿಗೆ ಹೋಗುವ ಹಾದಿಯಲ್ಲಿ; ರಸ್ತೆಗೆ ತಾಗಿದ ಮನೆಯಲ್ಲ. ನಾಲ್ಕೆಂಟು ಗದ್ದೆಗಳ ಏರಿಗಳನ್ನು ಮೆಟ್ಟಿ, ನಡೆದು, ಮುಂದೆ ಸಿಗುವ ಓಣಿಯಲ್ಲಿ ಸ್ವಲ್ಪದೂರ ಸರಿದರೆ ಅವರ ಹಿತ್ತಿಲು ಬರುತ್ತದೆ. 'ಮಾಸ್ತರರ ಹಿತ್ತಿಲೆ'ಂದು ಅದಕ್ಕೆ ನಾಮಕರಣ. ಅರ್ಧ ಎಕ್ರೆಯಷ್ಟು ವಿಸ್ತಾರವಾಗಿರುವ ಆ ಭೂಮಿ ಪಿತ್ರಾರ್ಜಿತವಾದದ್ದು. ಅದರ ಮರಳು ಮಿಶ್ರಿತವಾದ ಕೆಮ್ಮಣ್ಣಿನಲ್ಲಿ ಮಾವು, ಅಡಿಕೆ, ತೆಂಗು ಚೆನ್ನಾಗಿ ಬೆಳೆಯುತ್ತದೆ. ಬೇಸಿಗೆಯುದ್ದಕ್ಕೂ ನೀರೆರೆಯುವ ಭುಜ

ಬಲ ಮಾಸ್ತರರಿಗಿರುವುದು ಅತಿ ಅವಶ್ಯ. ಹಿತ್ತಿಲಿನ ನಡುವೆ ಚಿಕ್ಕದೊಂದು ಮನೆಯಿದೆ; ಮನೆಗೆ ಜಾಜಿಹಾಕಿ ಥಳಿಸುವಂತೆ ಮಾಡಿದ ಚಾವಡಿಯಿದೆ; ಎದುರಿಗೆ ಒಂದು ಮಳಿಮಾಡಿದೆ. ಅದೇನೆ–ಒಂದೆರಡು ಕುರ್ಚಿ ಮೇಜುಗಳ ನ್ನಿಟ್ಟು ಮಗನ ದಿವಾಖಾನೆಯಾಗಿದೆ. ಆ ಚಾವಡಿಯೇ ಮಲಗುವುದಕ್ಕೆ. ಅದಕ್ಕೆ ಚಾಚಿರುವ ಮೂರು ಕೋಣೆಗಳಿಂದ ಮನೆ ಸಂಪೂರ್ಣವಾಗುತ್ತದೆ. ಮನೆಗಿಂತ ಬೇರೆಯಾಗಿರುವ ಹಟ್ಟಿ, ಬಚ್ಚಲುಗಳಿವೆ. ಊರಿನ ಇತರರ ಮನೆ ಗಳ ಹಾಗೆ ಮಾಸ್ತರರ ಮನೆಯಿದ್ದರೂ, ಆ ವಿಚಾರದಲ್ಲಿ ಇಂದುಮತಿಗೆ ತುಂಬಾ ಅಸಮಾಧಾನವಿದೆ. ತಮ್ಮ ಮನೆ ಬಿಟ್ಟು ಪರಿಚಿತರ ಯಾವ ಮನೆಗೆ ಹೋಗುವುದಾದರೂ ಗದ್ದೆ ಏರಿಗಳನ್ನೂ ಓಣಿಗಳನ್ನೂ ದಾಟಿಯೇ ಹೋಗ ಬೇಕು. ಗಾಡಿ ಬರುವ ದಾರಿಯೇ ಅಲ್ಲ. ಗಾಡಿ ಹೋಗಿ ಬರುವ ದಾರಿಯು ಗುಡಿಯ ರಸ್ತೆಯತನಕ ಮಾತ್ರ. ಅಲ್ಲಿಂದ ಇನ್ನೂರು ಮುನ್ನೂರು ಗಜ ಕಾಲು ದಾರಿ. ಈ ಊರಿನ ಓಣಿಗಳ ಒಂದು ವೈಶಿಷ್ಟ್ಯವೆಂದರೆ—ಇಬ್ಬದಿಗಳಲ್ಲೂ ಅವಕ್ಕೆ ಎತ್ತರದ ಮಣ್ಣಿನ ದಂಡೆಗಳಿವೆ. ಮಳೆಗಾಲದಲ್ಲಿ ಈ ಓಣಿಗಳಲ್ಲಿ ಸದಾ ಒರತೆಯ ನೀರು ಹರಿಯುತ್ತಿರುತ್ತದೆ. ಅದನ್ನು ಮೆಟ್ಟಿಕೊಂಡು ನಡೆ ಯುವುದೆಂದರೆ ಮನಸ್ಸಿಗೆ ಅಸಹ್ಯವೆನಿಸುತ್ತದೆ. ಇನ್ನೂ ಒಂದು ಕೊರತೆ ಯೆಂದರೆ—ಊರಲ್ಲಿ ಪ್ರಜೆಗಳಷ್ಟೇ ನಿರ್ಭೀತಿಯಿಂದ ಬೆಳೆದು ಬಂದಂಥ ಕಾಟುನಾಯಿಗಳ ಹಿಂಡಿದೆ. ಅವುಗಳ ವಿಷಯದಲ್ಲಿ ಯಾರಿಗೂ ಆದರವಿಲ್ಲ. ಪ್ರತಿ ಮನೆಯವರೂ ಒಂದೆರಡು ನಾಯಿಗಳನ್ನು ಸಾಕುತ್ತಿರುತ್ತಾರೆ. ದಾರಿ ಯಲ್ಲಿ ಹೋಗುವ ಯಾರನ್ನು ನೋಡಿದರೂ 'ಗೌ ಗೌ' ಎನ್ನುವುದು ಅವು ಗಳ ಸ್ವಭಾವ. ಇವುಗಳೆಲ್ಲ ಸೇರಿ ರಾತ್ರಿ, ಹಗಲು ಶ್ವಾನವರಾಳಿ ರಾಗವನ್ನು ಹಾಡತೊಡಗಿದರೆ, ಮನಸ್ಸಿಗೆ ನೆಮ್ಮದಿಯೂ ಕಡಿಮೆ. ರಾತ್ರಿಯಂತೂ ನಿದ್ರೆ ಯೇ ಬರಲಾರದು. ಇನ್ನು ಇಂದುಮತಿಯೊ ಊರ ಓಣಿಯಲ್ಲಿ ಹೋಗು ವಾಗ, ಹಿಂದಾಗಲಿ, ಮುಂದಾಗಲಿ ಒಂದು ಸೊಣಗ ಬಂತೆಂದರೆ, ಆ ನಾಯಿ ಗೂ ತಾನು ದಾರಿ ಬಿಡಬೇಕೆಂಬ ಬುದ್ಧಿಯಿಲ್ಲ, ಇವಳಿಗೂ ಅದನ್ನು ಓಡಿ ಸುವ ಧೈರ್ಯಸಾಲದೆ, ನಿಂತಲ್ಲಿಯೇ ನಿಂತು, ಇನ್ನೊಬ್ಬರು ಬಂದ ಮೇಲೋ, ಆ ನಾಯಿಗೇ ಬೇಸರಬಂದು ಅಡ್ಡದಾರಿ ಹಿಡಿದ ಮೇಲೋ, ಅವಳು ಹೆಜ್ಜೆ ಕೀಳಬೇಕು. ಹೀಗೆ ಬಂದ ನಾಯಿಯು ಆಗಂತುಕ ಸೊಣಗನಾದರಂತೂ ಮುಗಿಯಿತು! ಆಚೀಚಿನ ಹಿತ್ತಿಲು ಮನೆಗಳಿಂದ ಬೊಬ್ಬಿರಿಯುವ ನಾಯಿ

ಗಳ ಸಮುದಾಯವೇ ಜಮೆಯಾಗುತ್ತವೆ. ಅಂತಹ ಪ್ರಸಂಗ ಬಂತೆಂದರೆ-ಇಂದುವಿಗೆ ಜೀವದಲ್ಲಿ ಜೀವವಿಲ್ಲ. ಇವೆಲ್ಲವು ತೀರ ಚಿಕ್ಕ ವಿಷಯಗಳೆಂದು ಕಾಣಬಹುದು. ಆದರೆ ಇಂದುಮತಿಗೆ ವಿಹಾರದಿಂದ ದೊರೆಯುವ, ಗೆಳೆಯರ ಮನೆಗೆ ಹೋಗಿ ದೊರೆಯುವ, ಸಂತೋಷವನ್ನು ತಪ್ಪಿಸಲು ಇಷ್ಟೇ ಸಾಕು. ಹೀಗಾಗಿ—ಜತೆಗೆ ಗಂಡನಿಲ್ಲದೆ ಕದಲುವುದಕ್ಕೇ ಇಷ್ಟ ಬರುವುದಿಲ್ಲ. ಮನೆಯಲ್ಲಿ ಕುಳಿತು ಬೇಸರವಾಗುತ್ತದೆ. ಗಳಿಗೆಯನ್ನು ಎಣಿಕೆಹಾಕಬೇಕಾಗುತ್ತದೆ. 'ಈ ಮನೆಯನ್ನು ಬಿಟ್ಟು ರಸ್ತೆಗೆ ತಾಗಿರುವ ಯಾವುದಾದರೊಂದು ದೊಡ್ಡ ಮನೆ ಹಿಡಿಯಬಾರದೇ? ದವಾಖಾನೆಗೆ ಸಮೀಪವಾಗಿದ್ದರೆ ಒಳ್ಳೆಯದಲ್ಲವೆ? ಬೆಳಿಗ್ಗೆ ಹೊರಟವರು ಮಧ್ಯಾಹ್ನ ಮೂರು ಗಂಟೆಗೆ ಬಂದರೆ ಬಂದಿರಿ. ಕೆಲವು ಬಾರಿ ರಾತ್ರಿಗೇ ಬರುವುದೂ ಉಂಟು. ರಾತ್ರಿ ಬಂದು ಮಲಗಿದರೂ ಸುಖವುಂಟೇ? ಆಗಲೂ ಬಂದು ಪೀಡಿಸುವವರೂ ಇದ್ದಾರೆ. ನೀವು ನಿತ್ಯವೂ ಜನರ ಮಧ್ಯದಲ್ಲಿ ಇರುತ್ತೀರಿ. ನಿಮಗೆ ಬೇಸರವಾಗಲಾರದು. ನನಗಿಲ್ಲಿ ಕುಳಿತು ಹೊತ್ತು ಹೋಗುತ್ತದೆಯೇ?' ಎನ್ನುತ್ತಾಳೆ. ಆದಿತ್ಯವಾರದ ಒಪ್ಪತ್ತುಮಾತ್ರ ಅವಳಿಂದ ಶಿವಪ್ಪನಿಗೆ ಒತ್ತಾಯದ ರಜೆ ದೊರಕುತ್ತಿದೆ. ಅಷ್ಟು ಅಲ್ಪ ವಿರಾಮದಿಂದ ವಾರದ ಬೇಸರವೆಲ್ಲ ಅಡಗೀತೆ?

ನಾಗರಿಕತೆಯ ಸೋಂಕಿಲ್ಲದಂಥ ಆರಸಿಕ ಜೀವನ ಕಾಳೂರಿನದು ಎಂಬುದರಿಂದ ಇಂದುಮತಿ ಅದರಲ್ಲಿ ಭಾಗಿಯಾಗಲಾರಳು. ಇತರ ಹೆಂಗೆಳೆಯರಂತೆ ಬಟ್ಟೆಯ ಬುಟ್ಟಿಯನ್ನು ಹಿಡಿದುಕೊಂಡು ಮಹಾಂಕಾಳಿ ಕೆರೆಗೊ, ಕಮ್ಮಾರ ಹೊಳೆಗೊ ಹೋಗುತ್ತಿದ್ದಲ್ಲಿ, ಊರಿನ ಎಷ್ಟೋ ಚಿಕ್ಕಪುಟ್ಟ ಹರಟೆಗಳಿಗೆ, ಸರಸಗಳಿಗೆ, ನಿಂದೆಗಳಿಗೆ, ಸುಖ, ದುಃಖಗಳಿಗೆ ಅವಳು ಭಾಗಿಯಾಗಬಹುದಿತ್ತು. ಎಳೆತನದಿಂದಲೂ ಅವಳು ಹಾಗೆ ಬೆಳೆದುಬಂದವಳಲ್ಲ. ತುಸು ಮಟ್ಟಿಗೆ ಓದಿದವಳು. ಕಾಳೂರಿನ ಮಹಿಳೆಯರಲ್ಲಿ ಬೆರಳೆಂದೆಣಿಸುವಷ್ಟು ಮಂದಿ 'ಅ ಆ' ಬರೆಯಬಲ್ಲರು. ಈಗೀಗ-ನಾಲ್ಕೆಂಟು ಮಂದಿ ಹುಡುಗಿಯರು ಶಾಲೆಗೆ ಹೋಗುತ್ತಿದ್ದಾರೆ. ಮೊದಮೊದಲು ಧೈರ್ಯಗಾತಿಯರಾಗಿ ಶಾಲೆಗೆ ಹೋದಂಥ ಹುಡುಗಿಯರಲ್ಲಿ ಕಲಾವಂತಿಯರೇ ಹೆಚ್ಚು. ಅದರಿಂದ ಇಂದುಮತಿಯ ಸ್ನೇಹಿತರಾಗುವಂತಹರ ಸಂಖ್ಯೆಯೇ ಕಡಿಮೆ. ಅವಳೇನಿದ್ದರೂ-ಧಾರವಾಡದಿಂದ ಆಗಾಗ ಅಂಚೆಯಿಂದಲೊ, ಬಸ್ಸುಗಳಿಂದಲೊ ತರಿಸಿಕೊಳ್ಳುವ ಕಸೂತಿ ಸಾಮುಗ್ರಿಗಳಿಂದ ಸಂತೋಷಪಡಬೇಕು. ಮನಸ್ಸನ್ನು

ಚುಚ್ಚುವಂಥ ಬೇಸರಿಕೆಗೆ ಪರಿಹಾರ–ಬಟ್ಟೆ ಚುಚ್ಚುವಿಕೆ. ಅತ್ತೆ ಅವಳನ್ನು ಪ್ರತಿಯೊಂದು ಮಂಗಳ, ಶುಕ್ರವಾರಗಳ ದಿವಸ ಗುಡಿಗೆ ಹೋಗಲು ಕರೆಯು ತ್ತಾಳೆ. ತನಗೆ ದೇವರಲ್ಲಿ ಭಕ್ತಿ ಕಡಿಮೆಯಾಗಿಲ್ಲ ಎಂದು ತೋರಿಸಿಕೊಳ್ಳು ವುದಕ್ಕಷ್ಟೆ ಅವಳು ಹೋಗಿಬರುತ್ತಾಳೆ. ನಾಲ್ಕು ಜನರೊಡನೆ ಬೆರೆಯುವ ಅವಕಾಶ ಅದೇನೆ. ಆದರೆ ಅಲ್ಲೊಂದು ವ್ಯಕ್ತಿತ್ವವಿಲ್ಲ. ಪರೋಕ್ಷವಾಗಿ ಕರೆಯುವವರು, ಅವಳಿಗೆ ಕೇಳಿಸುವಂತೆ 'ಶಿವಪ್ಪನವರ ಹೆಂಡತಿ'ಯೆಂದೋ, 'ಕಿಟ್ಟಪ್ಪ ಮಾಸ್ತರರ ಸೊಸೆ'ಯೆಂದೊ ಸಂಭೋದಿಸಿದರೆ ಅವಳಿಗೂ ಬೇಸರ. ಇಂಗ್ಲಿಷ್ ಶಾಲೆಯಲ್ಲಿ ಓದಿದವಳೆಂದು ಊರ ಜನರು ಹೆಗಲ ಮೇಲೆ ಕೈ ಯಿಟ್ಟು ಮಾತಾಡಿಸುವುದಿಲ್ಲ. ಅವಳಿಗೂ ಊರಿನ ಹರಟೆ ಬೇಕೆನಿಸುವುದಿಲ್ಲ. ಹೀಗಾಗಿ ಅತ್ತೆಯು 'ಬಾ' ಎಂದು ಕರೆದರೆ, ಗುಡಿಗೆ ಹೋಗುವುದಕ್ಕೂ ಅವಳು ಹಿಂಜರಿಯುವುದುಂಟು.

ಇಂದುವಿಗೆ ಬೇಸರ ಬಂತೆಂದು ಕಾಳೂರಿನ ಜನಕ್ಕೆ ಸರಸ, ವಿರಾಮ, ವಿಲಾಸ, ಹಿಗ್ಗು, ಉಬ್ಬುಗಳು ಇಲ್ಲವೇ ಇಲ್ಲ–ಎಂದು ತಿಳಿಯಬೇಕಾಗಿಲ್ಲ. ಊರಿನ ಹಲವಾರು ಹಬ್ಬಗಳಿವೆ, ಕೂಟಗಳಿವೆ. ಅದರಲ್ಲಿ ಭಾಗವಹಿಸದ ಜನತೆ ಇಲ್ಲ. ಮೊದಲಿಗೆ-ಮಹಾಂಕಾಳಿ ಗುಡಿಯೇ ತೀರ ಆಕರ್ಷಕ ಕೇಂದ್ರ. ಮುಖ್ಯ ಗುಡಿ ಅದೇನೆ; ಇನ್ನೆರಡು ಕಿರಿಯ ದೇವಾಲಯಗಳು ಅದರ ಮಗ್ಗುಲಿಗೇ ಇವೆ. ಅದರಲ್ಲೊಂದು ಶಿವಾಲಯ; ಮತ್ತೊಂದು ವೀರಭದ್ರನ ಗುಡಿ. ಅವಕ್ಕೆ ದೊಡ್ಡ ಪ್ರಾಕಾರವಿದೆ. ವಿಜಯನಗರದ ಅರಸುಗಳ ಕಾಲ ಕ್ಕಿಂತಲೂ ಹಿಂದೆ ಇವು ಸ್ಥಾಪಿತವಾದುವು. ಇಲ್ಲಿನ ಶಂಭುಲಿಂಗ ಸ್ವಾಮಿಯ ಗುಡಿ, ಅನಾದಿಕಾಲದಿಂದ ಹೆಸರುಪಡೆದ ಗುಡಿಯಾಗಿದ್ದರೂ ಈಗಿನ ಎರಡು ಶತಮಾನಗಳಿಂದ, ಮುಖ್ಯ ಗುಡಿಯ ಕೀರ್ತಿಯನ್ನೆಲ್ಲ ಅಪಹರಿಸಿ ತನ್ನದೇ ಆದ ವೈಭವ, ಬೆಡಗು, ಪೂಜೆಗಳಿಂದ ಜನಪ್ರಿಯವಾಗಿ ಬಂದ್ದುದು ಮಹಾ ಕಾಳಿಯ ಗುಡಿ. ವೀರಭದ್ರನ ಗುಡಿಯೂ ಚಿಕ್ಕದೇ. ಅವನ ವಿಚಾರದಲ್ಲಿ ಮೊದಲಿಂದ ಜನಕ್ಕೆ ಭಕ್ತಿ, ಅಂಜಿಕೆಗಳಿವೆ. ಈ ಮೂರು ಗುಡಿಗಳಿಂದಾಗಿ- ದೇವಾಲಯದ ಪರಿಸರ ನಿತ್ಯ ಯಾತ್ರಿಕರಿಂದ ತುಂಬುತ್ತದೆ. ಹೊರ ಪ್ರಾಂಗ ಣದ ಚಾವಡಿಯಲ್ಲಿ ಯಾವಾಗಲೂ—ಭಾವಾಜಿಗಳೂ, ಮುಸಾಫಿರರೂ, ಭಂಗಿಮುಕ್ಕರೂ, ಗೋಕರ್ಣಕ್ಕೆ ಹೋಗಿ ಬರುವವರೂ ಬೀಡುಬಿಟ್ಟರು. ತ್ತಾರೆ. ಅವರು ಇರಲಿ, ಇಲ್ಲದಿರಲಿ ಗುಡಿಯ ಒಳ ಪ್ರಾಂಗಣವು ಊರಿನ

ಭಕ್ತಕೋಟಿಗೆ ಸೇರಿದ್ದು. ಜನರು ಸದಾ ತುಂಬಿರುತ್ತಾರೆಂದಲ್ಲ; ಮಂಗಳ ವಾರ, ಶುಕ್ರವಾರಗಳಲ್ಲಿ ನಾಲ್ಕು ಸುತ್ತಿನ ಗ್ರಾಮಗಳಿಂದಲೂ ದೇವಿಯ ದರ್ಶನಕ್ಕೆ ಬಾರದಿರುವ ಹೆಂಗೆಳೆಯರಿಲ್ಲ-ಎನ್ನಬಹುದು. ಆ ದಿನ ಗಣಿಕೆಯರ ಕೇರಿಯಿಂದ ಹೆಸರು ತಿಳಿದೇ ಇರುವಂತಹ ಹತ್ತೆಂಟು ಹೆಂಗೆಳೆಯರು ಬಂದೇ ಬರುತ್ತಾರೆ. ಅವರನ್ನೇ ನೋಡುವ ಚಪಲದಿಂದ ಬಂದ ಎಷ್ಟೋ ಉತ್ಸಾಹಿ ತರುಣರು ಗುಡಿಯ ಮಗ್ಗುಲ ತುಣುಕು ಮೈದಾನಿನಲ್ಲಿ--ಸೋಡಿ, ಕಾಲ್ಚೆಂಡು ಗಳ ಆಟವಾಡುತ್ತಿರುತ್ತಾರೆ. ಇತ್ತೀಚೆಗೆ ಅಲ್ಲೇನೆ ಒಂದು ಬೆಡ್‌ಮಿಂಟನ್ ಕೋರ್ಟೂ ಸ್ಥಾಪನೆಯಾಗಿದೆ. ಆಟದ ವೇಳೆಯಲ್ಲಿ ಆಕಸ್ಮಿಕವಾಗಿಯೋ, ಉದ್ದೇಶಪೂರ್ವಕವಾಗಿಯೋ, ಉಣ್ಣೆಯ ಚಂಡು ದಾರಿಯಲ್ಲಿ ಸಾಗುವ ಗುಲಾಬಿಯ ಮೇಲೋ, ಗಿರಿಜೆಯ ಮೇಲೋ ಬಿತ್ತೆಂದರೆ ಅವರ ಕುಡಿ ನೋಟವನ್ನು, ಕಣ್ಣಿನ ಕೆರಳನ್ನೂ ನೋಡಲು ಆತುರಪಡುವ ತರುಣರೂ, ಯೌವನಸ್ಥರೂ ಇದ್ದೇ ಇರುತ್ತಾರೆ. ಈ ವಿಶೇಷೋತ್ಸವಕ್ಕಾಗಿಯೇ ರಂಗಿನ ಷರಾಯಿ ಹಾಕಿಕೊಂಡು ಬರುವ ವಿಲಾಸಿಗಳೂ ಇರುತ್ತಾರೆ.

ಇದಲ್ಲದೆ ಇಲ್ಲಿನ ಶಿವಾಲಯಕ್ಕೆ ಬೆಳಗಿಂದ ಸಂಜೆಯ ತನಕ ಊರ ಹಿರಿಯರೂ, ವಯೋವೃದ್ಧರೂ ಬಂದು ಹೋಗುತ್ತಿರುತ್ತಾರೆ. ವಾರಕ್ಕೊಮ್ಮೆ ಯಾವರೂ ಅಲ್ಲಿಗೆ ಬಾರದಂಥ ಜನಗಳಿಲ್ಲ. ಈ ದೇವಾಲಯಗಳಲ್ಲಿ ಎರಡು ಮುಖ್ಯ ಉತ್ಸವಗಳಾಗುತ್ತವೆ. ಕಾರ್ತಿಕ ಮಾಸದಲ್ಲಿ ಜರಗುವ ದೀಪೋತ್ಸವ ತುಂಬ ವಿಜೃಂಭಣೆಯದು. ಸಮಾರಾಧನೆ, ಸಂತರ್ಪಣೆ, ತೆಪ್ಪೋತ್ಸವ, ಊರಿಂದೂರೇ ದೀಪಮಾಲೆಗಳಿಂದ ಬೆಳಗುವ ದೀಪಾರಾಧನೆಗಳೆಲ್ಲ-ಮಹಾ ಕಾಳಿಗೆ ಸಲ್ಲುತ್ತವೆ. ಆ ದಿನದ ಭೋಜನವೊಂದನ್ನು ಬಿಟ್ಟರೆ, ಉಳಿದ ಯಾವತ್ತು ಉತ್ಸವಗಳಲ್ಲಿ ಜಾತಿಭೇದವಿಲ್ಲದೆಯೆ ಜನರು ಬೆರೆಯುತ್ತಾರೆ.

ಶಂಭುಲಿಂಗ ಸ್ವಾಮಿಯ ರಥೋತ್ಸವವು ಅದೇ ಮಾದರಿಯಲ್ಲಿ ವಿಜೃಂಭಣೆಯಿಂದ ಜರಗುವ ಉತ್ಸವ. ವರ್ಷಕ್ಕೊಮ್ಮೆಯಾದರೂ ದೇವರನ್ನು ಮೆರವಣಿಗೆ ಮಾಡಿಸುವ ಈ ಅವಕಾಶದಲ್ಲಿ, ಜನ ತಾವೂ ಮೆರೆಯುವುದಕ್ಕೆ ಮರೆಯುವುದಿಲ್ಲ. ಹಳೆಗಾಲದ ತೇರೊಂದನ್ನು ಸಿಂಗರಿಸಿ, ದೇವರನ್ನೇರಿಸಿ, ಬೆಳಗು ಬೈಗುಗಳಲ್ಲೂ ಎಳೆಯುವ ವಾಡಿಕೆಯಿದೆ. ಎಂಟು ದಿನಗಳ ಈ ಜಾತ್ರೆಯಲ್ಲಿ ಊರಿನ ನಾನಾ ಮೂಲೆಗಳಿಗೆ ದೇವರು ಮೆರವಣಿಗೆ ಹೊರಡು ತ್ತಾರೆ. ಆರು ದಿನ ಪಲ್ಲಕ್ಕಿ ಸವಾರಿ; ಏಳನೆಯ ದಿನ ರಥೋತ್ಸವ. ದೇವರ

ಮುಂದೆ ಮೇಳದವರ ನೃತ್ಯವಾಗುತ್ತದೆ. ಆಗಲಂತೂ ಜನ ಸೇರಲೇಬೇಕು. ಉತ್ಸವದ ವೇಳೆ ರಸ್ತೆಯ ಇಕ್ಕಡೆಗಳೂ ಹಸರದಿಂದ ತುಂಬುತ್ತವೆ. ಹೊಲ ಗದ್ದೆಗಳೆಲ್ಲ ಅಂಗಡಿ ಮನೆಗಳಾಗುತ್ತವೆ. ಜಾತ್ರೆ ಕಳೆದ ಮತ್ತೂ ಹದಿನೈದು ದಿನಗಳ ತನಕ, ಅರಿವೆ, ತಾಮ್ರ, ಮಣಿಸರಕು, ಮೆಣಸು, ಕೊತ್ತಂಬರಿ ಮೊದಲಾದ ವ್ಯಾಪಾರಗಳ ಸಂತೆ ಜರಗುತ್ತದೆ. ಈ ಉತ್ಸವ ಬಂತೆಂದರೆ ಕಾಳೂರಿಗೆ ಕಾಳೂರೇ ಜೀವತಾಳುತ್ತದೆ.

ಕಾಳೂರಿನ ಪಡುವಣ ಭಾಗವೆಲ್ಲ ಬಟ್ಟಬಯಲಾಗಿದೆ. ಅಲ್ಲಿ ಸಮ ತಟ್ಟಾದ ಗದ್ದೆಗಳೇ ಹೆಚ್ಚಿಗೆ. ಆದರೆ ದೇವರ ಗುಡಿಯಿಂದ ಮೂಡಣಕ್ಕೆ ಒಂದು ಮೈಲು ಮುಂದುವರಿದರೆ ಗುಡ್ಡಗಾಡು ತೊಡಗುತ್ತದೆ. ಅಲ್ಲಿಂದಲೇ ಸರಕಾರದ ಕಾದಿಟ್ಟ ಕಾಡುಗಳಿಗೆ ಪ್ರಾರಂಭ. ಮೂಡಣಕ್ಕೆ ಸರಿದಂತೆ ಜನ ಸಂಖ್ಯೆ ವಿರಳವಾಗುತ್ತದೆ. .ಕಾಳೂರಿನ ಜನ ದಟ್ಟಣೆ ಇಲ್ಲವೇ ಇಲ್ಲ. ಈ ಮೂಡು ಪ್ರಾಂತ್ಯದ ಜನಕ್ಕೆ ಶಂಭುಲಿಂಗನ ಉತ್ಸವ ಅಪೂರ್ವದ ಹಬ್ಬ. ಅಲ್ಲಿನ ಹಾಲವಕ್ಕಿ ಜನರು ಆದಿವಾಸಿಗಳಷ್ಟು ಸರಳ ಜೀವಿಗಳು. ಬೇಸಾಯ ಅವರ ನಿತ್ಯೋದ್ಯೋಗ. ಈ ಉತ್ಸವಗಳಲ್ಲಿ ಅರಿವಾಸಿ ಜನ ಅವರೇನೋ ಎನ್ನು ವಷ್ಟು ಸಂಖ್ಯೆಯಿಂದ ಅಲಂಕರಿಸಿಕೊಂಡು ಬರುತ್ತಾರೆ. ಅವರ ಹೆಂಗಸರು ಕೆಂಪು, ಕಪ್ಪು, ಚೌಕುಳಿ ಸೀರೆಗಳನ್ನು ಕೊರಳಿಂದ ತೂಗಿಕೊಂಡು, ಎದೆ, ಕತ್ತುಗಳನ್ನು ಮುಚ್ಚುವಷ್ಟು ಕಾಜಿನ ಮಣಿಸರಗಳನ್ನು ಧರಿಸಿ, ಬಂದು ನಿಂತಿರುತ್ತಾರೆ. ಬಣ್ಣದ ಈ ಮಣಿಮಾಲೆಗಳು ಅವರ ಹೊರುವ ತ್ರಾಣ ವನ್ನೆಲ್ಲ ಪರೀಕ್ಷಿಸುತ್ತದೆ. ಕಂಡ ನಮಗೇ 'ಎಂತಹ ಹೊರೆ' ಅನಿಸಿದರೂ, ಅವರ ಲಘುಮಾತು, ಲಘುನಡಿಗೆಗಳು ಆ ಭಾರವನ್ನು ಸೂಚಿಸುವುದಿಲ್ಲ. ಅಲಂಕಾರದಲ್ಲಿ ಅವರನ್ನು ಮೀರಿಸುವುದಕ್ಕೆ ಊರ ಜನರಿದ್ದಾರೆ. ಯಾತ್ರೆಯ ವೇಳೆ ಸೇವಂತಿಗೆ ಹೂವಿನ ಬೆಟ್ಟವೇ ಬಂದು ಬೀಳುತ್ತದೆ. ಕೂದಲು ಕಿತ್ತು ಬರುವಷ್ಟು ದಪ್ಪನಾದ ಸೇವಂತಿಗೆ ಹೂವಿನ ದಂಡೆಗಳನ್ನು ತೊಡುವ ಹೆಂಗ ಸರಿದ್ದಾರೆ. ಕೇದಗೆ, ಸಿಂಗಾರ ಹೂವುಗಳ ಅಲಂಕಾರದಿಂದ ಮೆರೆಯುವ ಮಹಿಳೆಯರೂ ಇದ್ದಾರೆ; ಇವರೆಲ್ಲ ಹಾಲವಕ್ಕಿ ಜನಕ್ಕೆ ಪ್ರತಿಸ್ಪರ್ಧಿಗಳು.

ಇವೆರಡನ್ನು ಬಿಟ್ಟರೆ ಮೂರನೆಯ ಪ್ರಾಮುಖ್ಯ ಹಬ್ಬವು ನವರಾತ್ರಿ ಆಗ ಕಾಳಿಯ ಗುಡಿಯು ಒಂಬತ್ತು ದಿನವೂ ಸ್ತ್ರೀಯರ 'ಗುಜು ಗುಜು' ಧ್ವನಿ ಯಿಂದ ಶಬ್ದಸಮುದ್ರವನ್ನು ಉಕ್ಕಿಸುತ್ತದೆ. ಚೌತಿಯ ಹಬ್ಬವೂ ವಿಶೇಷದ

ಹಬ್ಬವೇ. ಗುಡಿಗಾರರು ಮಣ್ಣನ್ನು ಹಣಿದು ಮಾಡಿದ ದಷ್ಟಪುಷ್ಟ ವಿನಾಯಕ ರೂಪಕ್ಕೆ ಕೆಂಬಣ್ಣ, ಬೇಗಡೆಗಳನ್ನು ಅಂಟಿಸಿ ವಾದ್ಯದೊಡನೆ ಕೊಂಡೊಯ್ದು, ಪೂಜಿಸಿ, ಜಾಗಟೆಯ ಧ್ವನಿಯಲ್ಲಿ ಕೆರೆಯ ನೀರಿಗೆ ತಳ್ಳುವ ತನಕವೂ ಜೀವಕಳೆ ತುಂಬಿದಂಥ ದಿನಗಳು. ವಿನಾಯಕನನ್ನು ಮಾಡುವವರಿಗೂ ಉತ್ಸಾಹವಿದೆ; ನೋಡುವವರಿಗೂ ಉತ್ಸಾಹವಿದೆ. ಅವನ ಪೂಜೆಗೆ, ಚಕ್ಕುಲಿ ಉಂಡೆಗಳನ್ನು ಅರ್ಪಿಸುವ ಜನವರ್ಗಕ್ಕೂ ಉತ್ಸಾಹವೇ.

ಕಾಮನ ಹುಣ್ಣಿಮೆ ಬಂತೆಂದರೆ ಕಾರ್ವಿ ವೆಂಕಟುವಿನ ಬಳಗಕ್ಕೆ ಮೆಚ್ಚುಗೆಯ ಸಮಯ ಬಂದ ಹಾಗೆ. ತೊಗಲಿಂದ ಮುಚ್ಚಿದ ಗಡಿಗೆಗಳನ್ನು ಹಿಡಿದುಕೊಂಡು, ಹಾಡುತ್ತ, ಬಾರಿಸುತ್ತ ಹೊರಡುವ ಕಾಲ. ಹಾಗೆ ಗಂಡಸರು ಹೊರಟರೆಂದರೆ, ಕೇರಿಯ ಒಂದೇ ಒಂದು ಪಿಳ್ಳೆ ಹಿಂದಕ್ಕುಳಿಯುವುದಿಲ್ಲ. ಮೂರು ನಾಲ್ಕು ದಿನಗಳ ಮೊದಲೇನೆ ಉತ್ಸಾಹದ ಅಮಲು ಜನಗಳ ತಲೆಗೇರುತ್ತದೆ. ಕಾಮದಹನದ ದಿನ,ಬೇರೆ ಹತ್ತೆಂಟು ಜಾತಿಯ ಜನಗಳಿಗೂ ಹಬ್ಬದ ವಾಡಿಕೆಯಿದೆ. ಮನೆಮನೆಗೆ ಹೋಗಿ— ಕೊಟ್ಟ ವಂತಿಗೆಯಿಂದ, ಬೇಡಿದ ಕಟ್ಟಿಗೆಯಿಂದ, ಸೂರೆಮಾಡಿದ ಬೇಲಿಯಿಂದ ಕಾಮನನ್ನು ಸುಡುವ ಮಹಾ ಉರಿ ಮಹಾಕಾಳಿಯ ಗುಡಿಯ ಮಗ್ಗುಲ ಮೈದಾನಿನಲ್ಲೆ ವೈಭವಪೂರಿತವಾಗಿ ಸಾಗುತ್ತದೆ. ಇವೆಲ್ಲ ನಿಶ್ಚಿತವಾದ ಹಬ್ಬಗಳು. ಇವಲ್ಲದೆ ಜನಕ್ಕೆ ಸ್ಫೂರ್ತಿ ಬರಬಾರದೆಂದಿಲ್ಲ. ತುಸು ತಬಲೆ ಬಾರಿಸಲು ಕಲಿತವರು, ಹಿಂದೆ ಹೇಳಿದ ಗಡಿಗೆ ವಾದ್ಯ ಇಲ್ಲವೆ 'ಗುಮಟೆ ಪಾಗು' ಬಾರಿಸುವವರು ಮುಂದಾಳುಗಳಾಗಿ ಹೊರಡಿಸುವ ಭಜನಾ ಕೂಟಗಳಿವೆ. ಇಂತಹ ಎರಡು ಮೂರು ಬಣಗಳಿರಲೇಬೇಕು ಆ ಊರಲ್ಲಿ. ಸೊನೆಗಾರರು ಮೊದಲಿನಿಂದಲೂ ಇಂಥ ಭಜನೆಯ ಕಾರ್ಯಕ್ರಮಗಳಲ್ಲಿ ಉತ್ಸಾಹ ತೋರುತಿದ್ದವರು. ಶ್ರುತಿಬದ್ಧವಾಗಿ ಹಾಡುತ್ತ ರಾತ್ರೆಯ ಹತ್ತು ಗಂಟೆಗೆ ಕಲೆತು, ಊರಿನ ಕೇರಿಕೇರಿಗೂ ಸುತ್ತಾಡಿ ಬರುವ ಒಂದು ತಿಂಗಳ ವ್ರತ ಅವರದ್ದು. ವ್ರತ ಮುಗಿಯುವಾಗ ತಮ್ಮ ದೇವಾಲಯದಲ್ಲಿ ಸಪ್ತಾಹ ಸಮಾರಾಧನೆಗಳನ್ನು ಜರುಗಿಸುತ್ತಾರೆ. ಪೇಟೆಯ ಇತರ ತರುಣರು, ವರ್ಷ ಎರಡು ವರ್ಷಗಳಿಗೊಮ್ಮೆ ತಮ್ಮ ಉತ್ಸಾಹದ ಉಬ್ಬರ, ಇಳಿತಗಳಿಗೆ ಸಮನಾಗಿ, ಶ್ರೀರಾಮ ಭಜನಾಮಂಡಳಿಯ ಆಶ್ರಯದಲ್ಲಿ ಇಂತಹ ಕೂಟವನ್ನು ಜರಗಿಸುತ್ತಾರೆ. ಆರಂಭದ ಪ್ರೇರಣೆ, ಪ್ರೋತ್ಸಾಹಗಳು ಬರಿಯ ಒಂದೊಂದು ಜಾತಿ, ಗುಂಪುಗಳ ಮುಖಂಡರಿಂದ

ಬಂದರೂ, ಇವೆಲ್ಲ ಊರವರ ಪಾಲಿನ ಹಬ್ಬಗಳೇ. ಭಜನೆಯ ಕೂಟ ಯಾರ ಬೀದಿಗೆ ಬಂದರೂ ಅದಕ್ಕೆ ದೀಪದ ಮರ್ಯಾದೆಯು ಸಲ್ಲಬೇಕು. ರಾಮ ಮಂದಿರದ ತರುಣರಿಗೆ ಉತ್ಸಾಹ ಬಂದ ವರ್ಷ— ಏಳು ದಿನಗಳ ಸಪ್ತಾಹ ಹುಚ್ಚು ಹೊಳೆಯಾಗಿ ಹರಿಯುತ್ತದೆ. ದಿನ ರಾತ್ರಿ ತಾಳ ಹಾಕಿ ಕುಣಿಯು ವುದೇನು, ಹಾಡುವುದೇನು, ಗುಮಟೆ ಪಾಗಿನ ವೀರ ಸಂಗೀತದ ಆರ್ಭಟೆ ಯೇನು? ಇಂಥ ವೇಳೆಯಲ್ಲಿ ಪರದೇಶಿಯೊಬ್ಬ ಊರಿಗೆ ಬಂದರೆ–ಕಾಳೂ ರಿನ ಜನಗಳಲ್ಲಿ ಸಂಗೀತ ಬಾರದವರಿಲ್ಲ, ಭಕ್ತಿ ಇಲ್ಲದವರಿಲ್ಲ-ಎಂದು ಅನಿಸ ಬೇಕು.

ಇನ್ನು ಮಲೆನಾಡಿನ ಶಿರ್ಶಿಯಿಂದಲೋ ಸಿದ್ದಾಪುರದಿಂದಲೋ ಮಾರಿ ಯನ್ನು ಹೊರಡಿಸಿ ಕಾಳೂರಿನ ಗಡಿಯತನಕ ಅಟ್ಟಿಬಿಡುವ ಜನಗಳೂ ಇದ್ದಾರೆ. ಘಟ್ಟದ ಮೇಲೆ ಮೈಲಿಗೆ ಶುರುವಾದರೆ, ಅದನ್ನು ಘಟ್ಟದ ಕೆಳಗೆ ಅಟ್ಟಿಬಿಡುವ ಈ ನ್ಯಾಯಕ್ಕೇನು ಗತಿ? ಊರಿಗೆ ಬಂದ ಮಾರಿಯನ್ನು ಊರಿನಲ್ಲಿ ನಿಲ್ಲಿಸಿಕೊಳ್ಳಲು ಬಂದೀತೆ? ಎಷ್ಟೆಂದರೂ ಕಾಳೂರಿನವರಿಗೆ ಮೈಲಿಗೆ ಎಂದರೆ ತುಂಬ ಭೀತಿ. ಮೈಲಿಗೆಯಾದ ಮನೆಯ ಒಂದು ಮೈಲು ದೂರದಿಂದ ಬಳಸಿ ಹೋಗುವುದೇ ವಾಡಿಕೆ. ಆದುದರಿಂದ ಘಟ್ಟದ ಮೇಲಿನ ಮಾರಿಯನ್ನು ಅವರ ಊರಿನ ಬಳಿಗೆ ಯಾರಾದರೂ ತಂದುಬಿಟ್ಟರೆ, ವಾರ, ಹದಿನೈದು ದಿನಗಳೊಳಗಾಗಿ ಮಾರಿಯಮ್ಮನನ್ನು ಮುಂದಿನ ಊರಿಗೆ ಸಾಗಿ ಸುತ್ತಾರೆ. ಅಷ್ಟರೊಳಗೆ ಮೈಲಿಗೆ ಆ ಊರಲ್ಲಿ ತಲೆದೋರಬೇಕೆಂದೂ ಇಲ್ಲ. ಅದರೊಳಗೇನೆ ಹಲವರಿಗೆ ಕನಸುಗಳಾಗಿಬಿಡುತ್ತವೆ! 'ಹುರುಳಿ ಬೇಕೋ' ಎಂದು ಯಾವಳೋ ಹೆಂಗಸು ರಾತ್ರಿ ಕನಸಿನಲ್ಲಿ ಯಾರಿಗೋ ಕಾಣಿಸಿಕೊಳ್ಳು ತ್ತಾಳೆ. ಮರುದಿನವೇ ಅವಳಿಗೆ ಜ್ವರಬಂದರೂ ಬಂದಿತೇ. ಇಂಥದಕ್ಕೆ ಊರಿನ ಆಸ್ಪತ್ರೆಗೆ ಹೋಗುವುದು ಕ್ರಮವಲ್ಲ. ಬದಲು–ನೆಟ್ಟಗೆ ಅಮ್ಮನವರ ಗುಡಿಗೆ ಹೋಗಿ, ಉದ್ದಂಡ ನಮಸ್ಕರಿಸಿ, ಅಂಗಲಾಚಿ 'ಅಮ್ಮಾ ನನ್ನನ್ನೂ ನನ್ನ ಮಕ್ಕಳನ್ನೂ ಉಳಿಸುವ ಭಾರ ನಿನ್ನದು. ಎಂಟು ದಿನ ನಿನಗೆ ಎಳ್ಳೆ ಣ್ಣೆಯ ದೀಪ ಉರಿಸುತ್ತೇನೆ' ಎಂದರೆ, ಮರುದಿನವೇ ಜ್ವರ ಇಳಿಯುತ್ತದೆ. ಜ್ವರ ಇಳಿಯಲಿ, ಇಳಿಯದಿರಲಿ, ಈ ಸ್ವಪ್ನದ ವಾರ್ತೆ ಹತ್ತು ಜನಗಳ ಕಿವಿಗೆ ಹಬ್ಬಿ, ಇನ್ನಷ್ಟು ಜನಗಳಿಗೆ ಇಂತಹ ಕನಸುಗಳಾಗಿ, ಗುಡಿಗೆ ಓಡುವವರ ಸಂಖ್ಯೆ ಹೆಚ್ಚುತ್ತದೆ. ಜನ ಒಗ್ಗಟ್ಟಿನಿಂದ, ಸಂಭ್ರಮಪೂರ್ಣವಾಗಿ ಮಾರಿಯ

ದಿಬ್ಬಣವನ್ನು ಮುಂದಿನ ಊರಿಗೆ ಕಳುಹಿಸುವುದಂತು ನಿಶ್ಚಯ.

ಇವೆಲ್ಲ ಹಿಂದೂ ಜನರ ಹಬ್ಬಗಳು. ಊರಲ್ಲಿ ಅವರೇನೆ, ಉಳಿದ ಜನ ಸಮುದಾಯವಿಲ್ಲ—ಎಂದು ತಿಳಿಯಬೇಕಾಗಿಲ್ಲ. ಹಲವಾರು ಮುಸಲ್ಮಾನರ ಮನೆಗಳಿವೆ. ಕೆಲವು ಬಹು ಪ್ರಾಚೀನಕಾಲದಿಂದಲೂ ಬಂದವುಗಳು. ಅಂಥ ವರಲ್ಲಿ ಜವುಳಿ ಅಂಗಡಿ ಮುಗುದುಮ್ ಸಾಹೇಬರ ಮನೆಯು ಬಹು ಹೆಸರಾ ದದ್ದು. ಈ ಸಂಗತಿ ಆ ಮೇಲೆ. ಅವರಿದ್ದಾರೆ; ಅವರ ಜನಗಳ ಮಸಣವಿದೆ-ಊರಿನ ದಕ್ಷಿಣಕ್ಕೆ. ಅದಕ್ಕೆ ತೀರ ಸಮೀಪವಾಗಿ ಅರ್ಧ ಜೀರ್ಣಾವಸ್ಥೆಯಲ್ಲಿ ರುವ ಒಂದು ಮಸೀದಿ ಇದೆ. ಹಾಗೆಂದ ಮೇಲೆ 'ಮೊಹರಂ' ಇರಬೇಡವೆ? ಅಲಾಬಿ ಹಬ್ಬ ಆಗಬೇಡವೆ? ಅದಿಲ್ಲವಾದರೆ ಅನೇಕ ಎಳೆಯರ ಜೀವನದ ಅರ್ಧ ಸೊಗಸೇ ತಪ್ಪಿದ ಹಾಗೆ. ವರ್ಷದಲ್ಲಿ ಹತ್ತೆಂಟು ದಿನ ಅಲಾಬಿಯ ಸಂಭ್ರಮ ನಡೆದೇ ನಡೆಯುತ್ತದೆ. ಹಬ್ಬವೇನೋ ಮುಸಲ್ಮಾನರದಾದರೂ, ವೇಷ ಹಾಕುವವರು ಹೆಚ್ಚಿಗೆ ಹಿಂದೂ ಜನ. ಅನೇಕರು ಇಂತಹ ವೇಷವನ್ನೇ ಹಾಕುತ್ತೇನೆಂದು ಹರಕೆ ಹೊತ್ತವರು. ಹೀಗಾಗಿ, ಊರ ಅಲಾಬಿಯಲ್ಲಿ ಯಾರಾರ ಮುಖ್ಯ ವೇಷಗಳಿವೆ ಎಂಬುದು ಗೊತ್ತಾದ ಸಂಗತಿ.ಕೆಲವರು ಅದ ರಲ್ಲಿ ಹೆಸರನ್ನು ಗಳಿಸಿರುತ್ತಾರೆ. ಎಷ್ಟೇ ವೇಷಗಳಿರಲಿ; ಕಾಳೂರಿನ ಜನಕ್ಕೆ ಅತಿ ಪ್ರಿಯವಾದ ವೇಷ, ಹುಲಿವೇಷ. ಕಾರ್ವಿ ಕೊಗ್ಗ ಎಂಬವನೂ ಅವನ ಅಳಿಯನೂ ಊರ ಹುಲಿಗಳಲ್ಲಿ ತುಂಬ ಹೆಸರಾದವರು.ವೇಷ ಹಾಕಿ, ಬಾಲದ ಗೊಂಡೆ ಹಿಡಿಸಿಕೊಂಡು, ವಾದ್ಯ ಸಮೇತರಾಗಿ ಗಣ್ಯರ ಮನೆಗಳ ಮುಂದೆ ನಲಿದು, ಶಾಲು ಜೋಡಿ, ರೂಪಾಯಿಗಳನ್ನು ಗಳಿಸದ ಸಂದರ್ಭವಿಲ್ಲ. ಮೊದಲು ಇಂತಹ ಮನೆಯ ಮುಂದಕ್ಕೆ ಕುಣಿತವಾಗಬೇಕೆಂಬ ಮರ್ಯಾ ದೆಯ ಕ್ರಮವೂ ಇದೆ. ಇದು ಒಣ ಮರ್ಯಾದೆಯೂ ಅಲ್ಲ. ಈ ಮರ್ಯಾ ದೆಗೆ ಪ್ರತಿಯಾಗಿ ಶಾಲಿನ ರೂಪದಲ್ಲಿ ಬಹುಮಾನವಿದೆ. ಈ ಶಾಲು ಬಾಲದ ಗೊಂಡೆಯ ಬಳಿ ಕಟ್ಟಲ್ಪಟ್ಟು, ಹುಲಿಯ ಜತೆಯಲ್ಲಿ ಅದೂ ಕುಣಿಯಬೇಕು.

ಮೊಹರಂ ಹಬ್ಬದ ವೇಳೆ ಪೇಟೆಯವರಿಗೇನೋ ಹಿಗ್ಗಿನ ಸಂತೆ. ಆಸು ಪಾಸಿನ ಜನಗಳು ಅಲಾಬಿ ಮೆರವಣಿಗೆ ಕಾಣುವುದಕ್ಕೆ ಬರುತ್ತಾರೆ. ಆದರೆ ಆ ನಡುವಣ ದಿನಗಳಲ್ಲಿ ಹಳ್ಳಿಯ ಜನ ಹೆದರುವ ವೇಷಗಳೂ ಉಂಟು; ನಗುವ ವೇಷಗಳೂ ಉಂಟು. ತೀರ ಬೆದರಿಕೆ ಹುಟ್ಟಿಸುವ ಒಂದು ವೇಷ ವೆಂದರೆ 'ಸಿದ್ಧಿಬಾಯಿ'. ಈ 'ಸಿದ್ಧಿಬಾಯಿ' ಮನುಷ್ಯ ತೊಟ್ಟು ಮೆರೆಯಿಸುವ

ವೇಷವಾದರೂ ಅದನ್ನು ಕುರಿತಾದ ಭೀತಿ ಮಾತ್ರ ಪ್ರಾಚೀನ ಕಾಲದ್ದು. ಅದಕ್ಕೆ ತಲೆಯಿಂದ ಮೊಣಗಂಟಿನ ತನಕ ಕಂಬಳಿ ಮುಸುಕು; ರುಂಡ ಮುಚ್ಚುವುದಕ್ಕೊಂದು ಅಡಿಕೆ ಹಾಳೆ. ಅದರೆದುರಿಗೆ ವಿಕಾರವಾದೊಂದು ಮುಖವಾಡ-ಭಯಂಕರ ಹಲ್ಲು, ಕಣ್ಣು, ಮೂಗುಗಳುಳ್ಳದು. ಹಾಳೆಯಲ್ಲಿ ಕಣ್ಣು ಕಾಣಿಸುವುದಕ್ಕೆ ಎರಡು ತೂತುಗಳಿವೆ. ನಡುವಿಗೊಂದು ಬಾವಿ ಹಗ್ಗ ದಷ್ಟು ದಪ್ಪನಾದ ಹಗ್ಗ. ಅದಕ್ಕೊಂದು ಆನೆಯ ಗಂಟೆ. ಈ ಗಂಟೆಯನ್ನು ಬಾರಿಸುತ್ತಾ 'ಸಿದ್ಧಿಬಾಯಿ' ಹೊರಟಿತೆಂದರೆ, ಹಳ್ಳಿಯ ಜನರು ದೂರ ದಿಂದಲೇ ಗದ್ದೆಯ ಹೊಂಡಕ್ಕೆ ಇಳಿಯುವವರೇ. ಧೈರ್ಯದಿಂದ ಅದನ್ನು ಇದಿರಿಸುವವನೂ, ಅದನ್ನು ನಿರಾಕರಿಸಿ ದಾಟಲಾರ. ಅದು ಅನ್ನುವ ಮಾತೇ ನಿಲ್ಲ-ಕೈಯಲ್ಲಿ ಕಬ್ಬಿಣದ ಒಂದು ಗದೆಯಾಕಾರದ ಸದ್ದು ಮಾಡುವ ಒಂದು ಕುಂಚವನ್ನು ಕುಲುಕಿಸುತ್ತ 'ಸಿದ್ಧಿ ಸಿದ್ಧಿ ಔರ್ ಸಿದ್ಧಿ' ಎಂದು ಆರ್ಭಟಿಸುತ್ತ, ಮಸಿ ಬಳಿದ ಕೈಯನ್ನು ಮುಂದುಮುಂದಕ್ಕೊತ್ತಿ ದಾರಿಗೆ ಅಡ್ಡವಾಗಿ ಬರು ತ್ತದೆ. ಕಾಸು ಕೈ ಮೇಲೆ ಬಿದ್ದರೆ-ವೇಷ ದೂರ ಸರಿಯುತ್ತದೆ. ಯಾಕೋ, ಜನಕ್ಕೆ ಅದನ್ನು ಕಂಡರೆ ತೀರ ಪುಕ್ಕಲು. ಸಿದ್ಧಿಬಾಯಿ ಓಡಾಡುವ ರಸ್ತೆ ಯಲ್ಲಿ ಗಾಯತ್ರಿ ಬರುವ ಬಚ್ಚುಖಾನೆಯ ಭಟ್ಟರು ಸಹ ಸುಳಿಯಲು ಅಂಜು ತ್ತಾರೆ. ಮಕ್ಕಳು ಈ ವೇಷವನ್ನು ನೋಡುವುದು ಮನೆಯ ಜಗಲಿಯಿಂದ, ಅಥವಾ ಕಿಟಿಕಿಯಿಂದ. ಅಲಾಬಿಯ ದಿನ ಮಾತ್ರ ಇತರ ವೇಷಗಳ ಎಡೆ ಯಲ್ಲಿ ಈ ವೇಷವನ್ನು ತುಸು ಸಮೀಪದಿಂದ ನಿರೀಕ್ಷಿಸಬಹುದು. ಈ ವೇಷ ಧಾರಿ ಯಾರೆಂಬ ವಿಚಾರದಲ್ಲಿ ಅವನ ಮನೆಯವರಿಗಷ್ಟೇ ಗೊತ್ತಿರಬೇಕು.

ಯಾವುದೋ ಒಂದು ಕಾಲದಲ್ಲಿ ಇಲ್ಲಿನ ಕಡಲ ತೀರಕ್ಕೆ ಮೊರಕ್ಕೋ ದೇಶದ ಸಿದ್ಧಿಯರು ಬಂದು ತಂಗಿರಬೇಕು. ಇಲ್ಲಿಂದ ಮುಂದೆ ಅವರು ವಲಸೆ ಹೋದರು. ಅವರ ಕುಲ ಕಾಳೂರಿನಲ್ಲಂತೂ ಉಳಿದಿಲ್ಲ.ಆದರೆ ಅವರ ಕರ್ರನೆಯ ರೂಪ, ನೀಳ ಕಾಯ, ನಿಲುವಂಗಿಗಳು ಇಂದು ಪುರಾಣವಾಗಿವೆ; ಅವರು ಹುಟ್ಟಿಸಿದ ಬೆದರಿಕೆ, ಪರಂಪರೆಯಿಂದಲೂ ಉಳಿದಿದೆ-ಕಾಳೂರಿನ ಜನಗಳ ಎದೆಯಲ್ಲಿ.

ಸಿದ್ಧಿಬಾಯಿಯ ಭೀತಿ ಊರಿನ ಮೊಹರಮ್ಮಿನ ಜತೆಯಲ್ಲೇ ಮರವೆ ಯಾಗುತ್ತದೆ. ಆ ದಿನ ಹಲವಾರು ವೇಷಗಳ ಅವತಾರ! ಲಂಗು ಲಗಾಮಿ ಲ್ಲದ ಕುದುರೆಗಳಂತೆ, ಹುಚ್ಚಾಟ ತೋರುವ ಬಯಕೆಯುಳ್ಳ ಊರಿನ

ಹುಡುಗರೆಲ್ಲ ಒಂದೊಂದು ವಿರಾಟರೂಪ ತಾಳಿ, ಈ ಅವ್ಯವಸ್ಥಿತ ಸಂತೆಯಲ್ಲಿ ಭಾಗಿಗಳಾಗುತ್ತಾರೆ. ಕಾಳೂರಿನ ಮುಸಲ್ಮಾನರು ನೂರು ಮಂದಿ ಇದ್ದರೆ, ಅದರ ಐದು ಪಾಲು ಹಿಂದೂ ನಾಗರಿಕರು, ಮತ್ತೆಷ್ಟೋ ಪಾಲು ಇಕ್ಕಡೆಯ ಪ್ರೇಕ್ಷಕರೂ ಸೇರಿ, ಒಂದು ವೈಭವದ ಜಾತ್ರೆ ನಡೆಯುತ್ತದೆ. ಅದು ಸಹ ಹತ್ತು ಸಮಸ್ತರ ಜಾತ್ರೆ, ಕಾಳೂರಿನ ಇತರ ಎಲ್ಲ ಜಾತ್ರೆಗಳಂತೆ.

ಇಂತಹ ಅನೇಕ ಸಾಮಾನ್ಯ ಉತ್ಸವಗಳಿಂದಲೂ ಕಾಳೂರಿನ ಸರಳ ಜೀವಿಗಳಿಗೆ ಸಂತೋಷದ ಉಣಿಸು ದೊರೆಯುತ್ತದೆ. ಹಾಗಿಲ್ಲದೆ ಹೋದರೆ ಅವರ ಬರಡು ಜೀವನವು ಹೇಗೆ ಬೆಳಗಬೇಕು? ಊರಿನಲ್ಲಿ ಅಷ್ಟೊಂದು ಹೆಚ್ಚಿನ ವ್ಯಾಪಾರಕ್ಕೆ ಅವಕಾಶವಿಲ್ಲ. ಚಿಕ್ಕದೊಂದು ನದಿಯಿದೆ; ಖಾರಿ ಇದೆ. ಹೆಸರಿಗೆ ಆರೆಂಟು ಹಡಗುಗಳು ನಿಲ್ಲತಕ್ಕ ಒಂದು ಬಂದರೂ ಇದೆ. ಆದರೆ ಸುತ್ತುಮುತ್ತಲಿನ ಯಾವೊಂದೂ ವಠಾರದಲ್ಲೂ ಕಾರ್ಖಾನೆಗಳು, ವ್ಯಾಪಾರಿ ಸಂಸ್ಥೆಗಳು, ಆಧುನಿಕ ಚಟುವಟಿಕೆಗಳು ಬೆಳೆಯದಿರುವಾಗ ಊರು ಸಂಪತ್ಸಮೃದ್ಧವಾಗಬೇಕು ಎಂದರೆ ಹೇಗೆ? ಪೇಟೆಯ ವ್ಯಾಪಾರ ಅಷ್ಟೊಂದು ದೊಡ್ಡದಲ್ಲ. ಜವುಳಿ ವ್ಯಾಪಾರಿಗಳಲ್ಲಿ ಮುಗುದುಮ್ ಸಾಹೇಬರೂ, ವಾಸಪ್ಪಯ್ಯನವರೂ ಇಬ್ಬರೇ ಶ್ರೀಮಂತರು. ಶ್ರೀಪತಿರಾಯರಿಗೆ ಪ್ರಾಕಿನಿಂದ ಬಂದ ಭೂಮಿ ಕಾಣಿಕೆಗಳಿವೆ. ಅವಿಭಕ್ತ ಕುಟುಂಬ ಅವರದು. ಕೆಲವು ಜನರು–ಸಂಪತ್ತಿನಲ್ಲಿ ಮುಗುದುಮ್ ಸಾಹುಕಾರರೇ ಮೇಲುಗೈ ಎನ್ನುತ್ತಾರೆ. ಅವರಿಗೆ ಗೆರಸೊಪ್ಪೆ, ಹಾಡುವಳ್ಳಿಗಳಲ್ಲಿ ಭೂಮಿಕಾಣಿಕೆಗಳಿವೆ. ಗೆರಸೊಪ್ಪೆಯ ಕಾಡಿನಲ್ಲಿ ಒಮ್ಮೆ ದುಡ್ಡಿನ ಕೊಪ್ಪರಿಗೆಯೂ ಸಿಕ್ಕಿತ್ತಂತೆ. ಹೀಗಾಗಿ ಊರಲ್ಲಿ ಯಾರಾದರೂ ಶ್ರೀಮಂತಿಕೆಯ ಜಂಭ ತೋರಿಸಿದ್ದಾದರೆ, ಅದರ ಕಾರಣ ತಿಳಿಯದವರು 'ಅವನಿಗೂ ಹಾಡುವಳ್ಳಿಯಲ್ಲೊ, ಗೆರಸೊಪ್ಪೆಯಲ್ಲೊ ನಿಧಿ ಸಿಕ್ಕಿರಬೇಕು' ಅನ್ನುತ್ತಾರೆ. ಒಂದು ಕಾಲದಲ್ಲಿ ಈ ಎರಡು ಸ್ಥಳಗಳು ಸಂಸ್ಥಾನಗಳ ರಾಜಧಾನಿಗಳಾಗಿ ಮೆರೆದುವುಗಳು. ಅಂಥ ಶ್ರೀಮಂತರ ವಿಷಯದಲ್ಲಿ ಯಾರೂ ಅಸೂಯೆಯನ್ನು ಪಡುತ್ತಲಿಲ್ಲ ಎಂಬುದು ಒಂದು ಹೆಚ್ಚಳ.

ಕಿಟ್ಟಪ್ಪ ಮಾಸ್ತರರನ್ನಾಗಲಿ, ಊರಿನ ಇನ್ನಾವ ಹಿರಿಯರನ್ನಾಗಲಿ ಕಾಳೂರಿನ ಗತವೈಭವದ ವಿಚಾರವನ್ನು ಕುರಿತು ಕೇಳಿ ತಿಳಿಯುವುದು ಸಾಧ್ಯ. ಕಾಳಿಕಾಪುರ ಕಾಳೂರು ಆಯಿತೆಂದು ಮಾಸ್ತರರು ನಂಬುವುದಿಲ್ಲ.

ಊರಿಗೆ ಹಳೆಯ ಹೆಸರು ಬೇರೇನೆ ಇತ್ತು. ದೇಗುಲದ ಅಂಗಣದಲ್ಲಿ ಬಿದ್ದಿರುವ ಶಾಸನಗಳನ್ನೆಬ್ಬಿಸಿ ಓದುವ ತವಕ ಯಾರಿಗಿಲ್ಲವಾದರೂ, ತಮ್ಮ ಅಜ್ಜಿ, ಅಜ್ಜಂದಿರು ಹೇಳಿದ ವಂತ ಕಥೆಗಳನ್ನು ಚರಿತ್ರೆಯಾಗಿ ತಿಳಿಯುತ್ತಾರೆ. ಈ ಚರಿತ್ರೆಯಂತೆ— ವಿಜಯನಗರದ ಅರಸರ ಕಾಲದಲ್ಲಿ ಆ ಊರಿಗೆ ಕಾಂಚನ ಪುರ–ಎಂಬ ನಾಮಕರಣವಿದ್ದಂತೆ ತಿಳಿಯುತ್ತದೆ. 'ಹಾಡುವಳ್ಳಿ' ಸಂಗೀತ ಪುರವಾದಂತೆ, ಕಾಳೂರು ಏಕೆ ಕಾಂಚನಪುರವಾಗಿರಬಾರದು? ನೆನಪಿನಿಂದ ಹೇಳುವ ಈ ಚರಿತ್ರೆಯ ಆಧಾರದ ಮೇಲೆ, ಕಾಳಿಕಾ ಗುಡಿಯ ಹಿಂದಣ ಪ್ರದಕ್ಷಿಣಾ ಪಥದಲ್ಲಿ ಹಾಸಿರುವ ಎರಡು ದೆವ್ವದಂತಹ ಕಲ್ಲುಗಳನ್ನೆತ್ತಿದರೆ, ಸಿದ್ಧರಸ,ಪಾದರಸಗಳ ಬಾವಿ ಸಿಗುತ್ತವೆ ಎಂದು ಜನ ಹೇಳುತ್ತಾರೆ. ಎತ್ತುವ ತ್ರಾಣ ಒಬ್ಬಿಬ್ಬರಿಗೆ ಬರಲಾರದು; ಎತ್ತುವ ಕುತೂಹಲ ಹತ್ತುಮಂದಿಗಿಲ್ಲ; ಎತ್ತುವ ಸಾಹಸ ಕಾಳೂರಿನ ಜನಕ್ಕೇ ಇಲ್ಲ. ಹೀಗಾಗಿ ಕಾಳೂರಿನ ಜನ ಬಡವರಾಗಿಯೇ ಇದ್ದಾರೆ. ಕಾಳಿಕಾಂಬೆಯ ಗುಡಿಯಲ್ಲಿ ಕೆಲವೇ ಕಾಲದ ಮೊದಲು ಮಣಗಟ್ಟಲೆಯಿಂದ ಚಿನ್ನಾಭರಣಗಳು ಇದ್ದುವಂತೆ. ಅವನ್ನು ಟೀಪುವಿನ ಕಾಲದಲ್ಲೋ, ಪೋರ್ತುಗೀಸರ ಕಾಲದಲ್ಲೋ ದರೋಡೆ ಮಾಡಿಕೊಂಡು ಹೋದರಂತೆ. ಅಂತು ಅಲ್ಲಿನ ಇತಿಹಾಸ ತಾಮ್ರದ ಕಡಿತ, ಶಿಲಾಶಾಸನಗಳಲ್ಲಿ ಅಡಕವಾಗಿರಬಹುದು, ಇಲ್ಲದಿರಬಹುದು. ಅಚ್ಚಾದ ಯಾವ ಪುಸ್ತಕಗಳಲ್ಲೂ ಬರೆದಿಲ್ಲ. ಅಚ್ಚೊತ್ತಿದ ಕೆಲವರ ಮನಸ್ಸಿನಲ್ಲಷ್ಟೇ ಅದು ಉಳಿದಿದೆ.

ಕತ್ತಲು ಹರಿಯಿತೆಂದರೆ, ಕಾಳಿ ಗುಡಿಯ ಪೂಜೆ ಮುಗಿಯಿತೆಂದರೆ, ಗುಡಿಯ ಪ್ರಾಂಗಣವೆಲ್ಲ ಜನಶೂನ್ಯವಾಗುತ್ತದೆ. ತಿಳಿದ ಊರಿನ ಜನರು ಗುಡಿಯ ಬಳಿಗೆ ಬರುವುದಿಲ್ಲ. ಭಂಗಿ ಸೇದಿ,ಆ ಗುಂಗಿನಲ್ಲಿ ಮಲಗುವ ಭೈರಾಗಿಗಳಿಗೆ ಸ್ಥಳಪುರಾಣ ಗೊತ್ತಿಲ್ಲ. ಗೊತ್ತಿದ್ದರೆ ವೀರಭದ್ರನ ಗುಡಿಯ ಮುಂದೆ ಅವರು ಕಾಲುಚಾಚಿ ನಿಶ್ಚಿಂತೆಯಿಂದ ಮಲಗುವುದಕ್ಕೂ ಇದ್ದಿಲ್ಲ. ಮಧ್ಯರಾತ್ರಿಯಲ್ಲಿ-ದೇವಾಲಯದ ನವರಂಗದಿಂದ ಗಣಗಳು ಬಾರಿಸುವ, ಡಮರು, ವಾದ್ಯ, ಗೆಜ್ಜೆಯ ಧ್ವನಿ ಪ್ರತಿಯೊಂದೂ ಕೇಳಿಸುತ್ತದೆಯಂತೆ. ಗುಡಿಯ ಮಹಾದ್ವಾರ ತೆರೆದೇ ಇದ್ದರೂ, ಯಾರೂ ಒಳಕ್ಕೆ ಹೋಗುವುದಿಲ್ಲ. ಧ್ವನಿ ಕೇಳಿ ಒಳಗೆ ಹೋದ ಒಬ್ಬಿಬ್ಬರು ಮೂರ್ಛೆ ಬಡಿದು ಬೆಳಗಿನ ತನಕ ಅಲ್ಲೇ ಬಿದ್ದುದುಂಟಂತೆ.

ಅಂತಹ ಕಥೆಗಳಲ್ಲಿ ಇನ್ನೂ ಒಂದನ್ನು ಕೇಳಿ ಸಂತೋಷಗೊಳ್ಳ ಬಹುದು. ಶಂಭುಲಿಂಗ ದೇವಾಲಯದ ಮುಂದುಗಡೆಯಲ್ಲಿ ನಟ್ಟ ನಿಡಿದಾದ ಧ್ವಜ ಸ್ತಂಭವಿದೆಯಷ್ಟೆ; ಅದು ಚಿಗುರಿ, ಕುಡಿಯೊಡೆದ ದಿನ ಕಾಳೂರು ಮೊದಲಿನ ಕಾಂಚನಪುರವೇ ಆಗಿ ಮೆರೆಯುವ ಕಾಲ ಬರುತ್ತದೆಯೆಂದು- ದೇವರ ವರವಿದೆಯೆನ್ನುತ್ತಾರೆ. ಅಂಥ ದಿನ ಬಂದೀತೆಂದು ನಂಬಿಕೆಯುಳ್ಳ ವರೂ ಇದ್ದಾರೆ. ಅದು ಹೇಗೂ ಇರಲಿ, ನೂರಿನ್ನೂರು ವರ್ಷಗಳ ಮಳೆ ಬಿಸಿಲ ನ್ನುಂಡ ಆ ಮರವು ಇನ್ನೂ ಅಲ್ಲಿ ನಿಂತಿರುವುದಾದರೂ ಒಂದು ಆಶ್ಚರ್ಯವೇ!

---

# ಅಧ್ಯಾಯ ೩.

ಮುಗುದುಮು ಸಾಹೇಬರೇ ಊರವರ ಬಾಯಲ್ಲಿ ಮುಕಾದಮ್ ಸಾಹೇಬರಾಗಿದ್ದಾರೆ. ಅವರ ಮನೆತನ ದೊಡ್ಡದು. ಇಂದು ಅದು ಆರೆಂಟು ಬಳಗಗಳಾಗಿ ಒಡೆದುಹೋಗಿದೆಯಾದರೂ, ಹೆಚ್ಚಿನವು ಒಳ್ಳೆಯ ಸ್ಥಿತಿಯಲ್ಲಿರುವುದು ಅವರ ಭಾಗ್ಯ. ಅವರ ಮೂಲ ಸ್ಥಳವೆಲ್ಲಿ ಎಂದು ತಿಳಿಯುವುದು ಕಷ್ಟದ ಮಾತು. ನವಾಯತ ಸಮಾಜದ ಅವರ ಜನರು ಕುಮಟೆ, ಭಟ್ಕಳ, ಮುರ್ಡೇಶ್ವರಗಳಲ್ಲಿ ಈಗಲೂ ಅರ್ಧ ವ್ಯಾಪಾರಿಗಳೋ, ಅರ್ಧ ಜಮೀನುದಾರರುಗಳಾಗಿಯೋ ಇದ್ದಾರೆ. ಭಟ್ಕಳದ ಅವರ ಕುಟುಂಬದ ಮನೆಯೂ ಪ್ರಾಚೀನದ್ದಂತೆ. ಅದಕ್ಕೂ ಮೊದಲು ಹೊಸಾಡಿಯಲ್ಲಿದ್ದರು;ಅದಕ್ಕೂ ಹಿಂದೆ ಹಾಡುವಳ್ಳಿಯಲ್ಲಿದ್ದಿರಬೇಕು. ಅವರನ್ನು 'ಹೊಸಾಡಿ ಸಾಹೇಬರು' ಎಂದೂ ಕರೆಯುವುದು ವಾಡಿಕೆ. ಹೊಸಾಡಿಯಲ್ಲಿ, ಹಾಡುವಳ್ಳಿಯಲ್ಲಿ–ಹಳೆಗಾಲದ ಅವಶೇಷಗಳಿವೆ. ಪಶ್ಚಿಮ ಘಟ್ಟದ ಬುಡದಲ್ಲಿರುವ ಈ ಊರುಗಳು ಒಂದು ಕಾಲದಲ್ಲಿ ಹೆಸರಾದ ಪಟ್ಟಣವಾಗಿದ್ದುವು. ಸಾಹೇಬರ ಕುಲದವರು ಆ ಊರನ್ನು ಬಿಟ್ಟ ಮೇಲೆಯೂ, ಅವರ ಆಸ್ತಿಪಾಸ್ತಿಗಳು ಅಲ್ಲಿ ಬಹಳವಾಗಿವೆ. ವರ್ಷಕ್ಕೊಮ್ಮೆ ಅವರಾಗಲಿ,ಅವರ ಮಕ್ಕಳಾಗಲಿ ಅಲ್ಲಿಗೆ ವಸೂಲಿಗೆ ಹೋಗುತ್ತಾರೆ. ಅದರಂತೆ, ಶರಾವತಿ ನದಿಯ ದಂಡೆಯಲ್ಲಿರುವ ಘಟ್ಟದ ಕೆಳಗಿರುವ ಊರಾದ ಗೆರೆಸೊಪ್ಪೆಯಲ್ಲಿಯೂ ಅವರಿಗೆ ತುಂಬ ಜಮೀನುಗಳಿವೆ. ಹಿಂದಿನ ಕಾಲದಲ್ಲಿ ಈ ಜಮೀನುಗಳಿಂದ ಅವರ ಮನೆತನಕ್ಕೆ ಬರತಕ್ಕ ವರಮಾನ ಅಪಾರವಾಗಿತ್ತು. ಆದರೆ ಉತ್ತರ ಕನ್ನಡದ ಎಲ್ಲ ಘಟ್ಟದ ಸೆರಗಿನ ಊರುಗಳಂತೆ ಅದು ನಿದ್ರಾವಸ್ಥೆಯ ಊರು. ಎಲ್ಲೆಲ್ಲಿಯೂ ಕಾಡು ಬೆಳೆದು, ಜ್ವರ ಹೆಚ್ಚಿ, ಒಕ್ಕಲು ಮಕ್ಕಳುಗಳು ಹೋಗಿ ವಾಸಿಸುವುದಕ್ಕೆ ಅಂಜುವ ಸ್ಥಳವಾಗಿದೆ. ಹಳೆಗಾಲದ ಅನೇಕ ಒಕ್ಕಲುಗಳು ತಳಕಿತ್ತು ಹೊರಟೇಹೋದರು, ಕೆಲವು ಮನೆತನಗಳು ಜ್ವರದಿಂದ ಹುಟ್ಟಡಗಿದುವು. ಉಳಿದಿರುವ ಜನ ಅರ್ಧಕ್ಕರ್ಧ ಅಳಿದು ಹಾಳಾದರು. ಬೇಸಾಯದ ಭೂಮಿಯೆಷ್ಟೋ ಪಡುಬಿದ್ದಿತು. ಹೀಗಾಗಿ ಹೊಸಾಡಿ, ಗೆರೆಸೊಪ್ಪೆಗಳಿಂದ ಸಾಹೇಬರಿಗೆ ಬರುತ್ತಿರುವ ವರಮಾನ ತಗ್ಗಿದೆ. ಚಿನ್ನದಂಥ ಭೂಮಿಯನ್ನು ಕೇಳುವವರೇ ಇಲ್ಲವಾಗಿದೆ. ಇವೆಲ್ಲ ಹಿಂದಿನ ಮಾತುಗಳೇ.

ಮುಗುದುಮ ಸಾಹೇಬರ ತಂದೆ ಕಾಸೀಮ್ ಸಾಹೇಬರು ತಮ್ಮ ಹಿಸೆ ಪಡೆದು, ಕಾಳೂರಿಗೆ ಬಂದು ನೆಲೆಸಿದ ಮೇಲೆ, ಬರಿಯ ಜಮೀನಿನಿಂದಲೇ ಜೀವನ ಸಾಗಿಸುವುದು ಕಷ್ಟವೆಂದು ತಿಳಿದು, ವ್ಯಾಪಾರಕ್ಕೆ ಕೈತೊಡಕಿದರು. ಕೈಹಾಕಿದ ವೇಳೆ ಚೆನ್ನಾಗಿತ್ತು; ತೊಡಗಿದ ವ್ಯಾಪಾರವೂ ಕೈ ಕೊಳಿಯಾಗ ದಂತಹ ಜವುಳಿ ವ್ಯಾಪಾರ. ಆಗಿನ ದಿನಗಳಲ್ಲಿ ಅವರ ಜನಗಳ ಕೈಯಲ್ಲಿ ಆ ವ್ಯಾಪಾರ ಚೆನ್ನಾಗಿತ್ತು. ಉಳಿದ ಜನಕ್ಕೆ–ಸೀರೆಗಳು, ಇಲ್ಕಲಿನಲ್ಲಾಗು ತ್ತವೆಯೆ, ಗದುಗಿನಲ್ಲೆ, ಸೇಲಮಿನಲ್ಲಿ, ಅಥವಾ ಗೋವೆಯಲ್ಲೇ-ಎಂದು ತಿಳಿ ದಿರಲಿಲ್ಲ. ಸಾಮಾನ್ಯರು ಉಡುವ ಪಂಚೆಗಳನ್ನು ಊರ ನೇಕಾರರು ನೇಯು ತ್ತಿದ್ದರಾದರೂ, ಹೆಚ್ಚುಗಟ್ಟಲೆಯ ಸೀರೆ, ಕಣ, ಧೋತ್ರ, ಜಮಖಾನೆ, ಬಚ್ಚ ಖಾನೆ-ಯಾವುದೇ ಇದ್ದರೂ ಪರವೂರುಗಳಿಂದ ಆಮದಾಗಬೇಕು. ಅವರ ಜನಕ್ಕೆ ಆ ವ್ಯಾಪಾರದ ಗುಟ್ಟು ತಿಳಿದಿತ್ತು. ಹೀಗಾಗಿ ಬಟ್ಟೆಯ ವ್ಯಾಪಾರ ಅವರಿಗೆ ಒಲಿಯಿತು. ಹಿರಿಯರಿಂದ ಬಂದ ಕೊಪ್ಪರಿಗೆಯ ಹಣ ಬೇಕಷ್ಟು ಇದ್ದುದರಿಂದ ದೊಡ್ಡ ಪ್ರಮಾಣದಲ್ಲಿ ಜವುಳಿ ಅಂಗಡಿಯನ್ನು ತೆರೆದರು. ಬಂಧುವರ್ಗ ದೊಡ್ಡದಿದ್ದುದರಿಂದ, ಕುಮಟೆಯಲ್ಲೂ ಒಂದು ಮಳಿಗೆ ತೆರೆ ದರು. ಅನಂತರ ಅವರ ಶ್ರೀಮಂತಿಕೆಗೆ ಈ ವ್ಯಾಪಾರವು ಸಹಾಯವಾಗಿರ ಬೇಕು. ಊರ ಜನಕ್ಕೆ--ಸಾಹೇಬರು ಆಗರ್ಭ ಶ್ರೀಮಂತರು, ಅನುಕೂಲ ವಂತರು, ಪುಲಾವು ತಿನ್ನದ ದಿನವಿಲ್ಲ; ಎಂದಿಷ್ಟೆ ತಿಳಿದಿದೆ--ಹೆಚ್ಚಿಗೆ ಏನೂ ತಿಳಿದಿಲ್ಲ. ಕಾಸೀಮ ಸಾಹೇಬರು ಹಣ್ಣುಹಣ್ಣು ಮುದುಕರಾದ ಮೇಲೆಯೇ ತೀರಿಕೊಂಡದ್ದು. ಅನಂತರದ ಪಟ್ಟವು ಅವರ ಮಗಂದಿರಾದ ಮುಗುದುಮ್ ಸಾಹೇಬರಿಗೆ ಬಂದಿತು.

ಮುಗುದುಮ್ ಸಾಹೇಬರ ಪ್ರಾಯ ಈಗಾಗಲೆ ಅರುವತ್ತಕ್ಕೆ ಮೀರಿದೆ. ಆದರೂ ಹೇಗಿದ್ದಾರೆ ನೋಡುವುದಕ್ಕೆ? ಒಳ್ಳೆಯ ದಂತದಂತಹ ಶರೀರ ಕಾಂತಿ ತುಂಬಿದ ಮೈ. ಕುಳಿತಲ್ಲಿಯೆ ವ್ಯಾಪಾರ ನಡೆಯಿಸುವುದರಿಂದ ಹೊಳ ಪಿನ ಬೊಜ್ಜು ಬಂದಿದೆ. ಮುಖ ಅಗಲವಾಗಿದ್ದು, ಇರಿಸಿದ ಗಡ್ಡದಿಂದಾಗಿ ಇನ್ನಷ್ಟು ಅಗಲವಾಗಿ ಕಾಣಿಸುತ್ತದೆ. ದೊಡ್ಡ ಕಣ್ಣುಗಳು; ಹಣೆಯೂ ದೊಡ್ಡದು; ಮೂಗು ಮತ್ತಷ್ಟು ಹಾಗೆ. ಆಳು ಮಾತ್ರ ತುಸು ಕುಳ್ಳಗೆ. ಉಡುಗೆತೊಡುಗೆಗಳು, ದರ್ಬಾರು, ರೀತಿಗಳು ಅನಾದಿಕಾಲದಿಂದ ವಂಶ ಪಾರಂಪರ್ಯವಾಗಿ ಬಂದಂಥ ಕ್ರಮಗಳಿಗೆ ಸರಿಹೊಂದುತ್ತಿದ್ದುವು. ಹತ್ತಿ

ಬಟ್ಟೆಯ ಲುಂಗಿಯನ್ನುಟ್ಟು ಅವರಿಗೆ ತಿಳಿದೇ ಇಲ್ಲ. ಸದಾ ಕೆಂಪು ಇಲ್ಲವೆ ಅರಸಿನ ಬಣ್ಣದ ರೇಶಿಮೆ ಲುಂಗಿಯುಟ್ಟು, ಅದರ ಮೇಲೆ ನಾಲ್ಕೈದೆಳೆಯ ಚಿನ್ನದ ಉಡಿದಾರ ತೇಲಿಸಿ, ಆಮೇಲೆ ದಟ್ಟಿ ಬಿಗಿಯುತ್ತಿದ್ದರು. ಆ ದಟ್ಟಿಗೆ ಬೀಗದ ಕೈ ಗೊಂಚಲು, ಜಿಂಕೆ ಕೊಂಬಿನ ಹಿಡಿಯುಳ್ಳ ಒಂದು ಚೂರಿಯೂ ತೂಗುತ್ತಿರಬೇಕು. ಅದರಲ್ಲಿರುವ ಬೆಳ್ಳಿಯ ತೂಕವೇ ಸೇರಿಗೆ ಸಮೀಪ ವಾಗಿತ್ತು. ಮೈಮೇಲೆ ತೊಡುವ ಗಂಜಿಫರಾಕು ದಪ್ಪನಾದ ಕತ್ತನ್ನು, ತೋಳುಗಳನ್ನು, ಎದೆಯ ಮೇಲು ಭಾಗವನ್ನು ತೋರಿಸುವಂತಹದು. ಇದರ ಮೇಲೆ ತೆಳ್ಳಗಿನ ಮುಸಲೀನು ಷರಾಯಿ. ಅದರಲ್ಲಿ ಕಸೂತಿಯ ಕೆಲಸ ಇದ್ದೇ ತೀರಬೇಕು. ಅವರು ಹೊರಕ್ಕೆ ಹೊರಡುವಾಗ ಜರತಾರಿ ಕೆಲಸಮಾಡಿದ ವೆಲವೆಟಿನ 'ವಾಸುಕೋಟು' ಬೇರೆ ಧರಿಸುತ್ತಾರೆ. ತಲೆಗೊಂದು ಸಾದಾ ಮುಸಲೀನು ಟೊಪ್ಪಿ; ಬೆವರು ನಾಟದಿರಲು ತಾಳೆಗರಿಯ ಒಳ ಟೊಪ್ಪಿ; ಈ ಟೊಪ್ಪಿಗಳ ಮೇಲೆ ರೇಶಿಮೆಯ ಎಲೆವಸ್ತ್ರ ಬಿಗಿಯುತ್ತಾರೆ. ಅಂಗಡಿಯಲ್ಲಿ ಕುಳಿತಿರುವಾಗಲೂ, ವಾಸುಕೋಟನ್ನು ಬಿಟ್ಟು ಉಳಿದೆಲ್ಲ ಅಲಂಕಾರ ಗಳೂ ಇದ್ದೇ ಇರುತ್ತವೆ.

ಮುಗುದುಮ್ ಸಾಹೇಬರ ಜವುಳಿ ಅಂಗಡಿಗೆ ಬಹು ದೂರದ ಗ್ರಾಮ ಗಳಿಂದ ವಂಶಪಾರಂಪರ್ಯವಾಗಿ ಬರುವ ಗಿರಾಕಿಗಳು ಅಧಿಕ. ಅವರು ಹೇಳಿದಂಥ ಬೆಲೆಯನ್ನು ಕೊಟ್ಟು, ಬಟ್ಟೆಯನ್ನು ಕೊಂಡು, ನಂಬಿಕೆಯಿಂದ ಹೋಗುತ್ತಾರೆ. ಕೊಳ್ಳಲು ಬಂದ ಗಿರಾಕಿ–ಗಂಡಸಿರಲಿ ಹೆಂಗಸಿರಲಿ–ಅವರ ಮಾತಿಗೆ ಮರುಳಾಗಲೇಬೇಕು. "ಮಂಜಿ, ನೀನು ಕಳೆದ ವರ್ಷ ಬೇಕೆಂದು ಕೇಳಿದೆ; ಸರಪಳಿ ಅಂಚಿನ ಸೀರೆ,ಮಾವಿನ ಕಾಯಿ ಸೆರಗಿನದನ್ನು-ಎರಡನ್ನೂ ಸೇರಿಸಿ ಮಾಡಿಸುವ ಹಾಗೆ ಸೇಲಮಿಗೆ ಬರೆದು ತರಿಸಿದ್ದೇನೆ. ರಂಗು ಅನ್ನು ತ್ತೀಯೋ? ಕಡಿದರೂ ಹೋಗಲಿಕ್ಕಿಲ್ಲ, ಸುಟ್ಟರೂ ಹೋಗಲಿಕ್ಕಿಲ್ಲ-ಪರಮಾಶಿ ಸೀರೆ. ನೀನು ಉಟ್ಟು, ನಿನ್ನ ಮೊಮ್ಮಕ್ಕಳೂ ಉಟ್ಟು ಹರಿಯುವ ತನಕವೂ ರಂಗಿನ ಖಾತ್ರಿ ನಾನು ಹೇಳುತ್ತೇನೆ" ಎಂದರೆ, ಮಂಜಿ ಕೇಳಿದಷ್ಟು ದುಡ್ಡು ಕೊಟ್ಟು ಕೊಂಡುಹೋಗುತ್ತಾಳೆ. ಯಾರ ಚೌಕಸಿಯ ಬಾಯನ್ನೂ ಕಟ್ಟುವ ಚಲಾಕಿ ಅವರದು. "ಮಂಜಿ, ನಿನ್ನ ಹತ್ತಿರ ಚೌಕಸಿಯೆ? ನನ್ನ ಅಸಲು ಖರೀದಿಯೆ ಎರಡು ವರಹ ಬೀಳುತ್ತದೆ. ನಿನಗೋಸ್ಕರ, ಅಂದರೆ ಈ ರೀತಿಯ ಸೀರೆ ಉಳಿದವರಿಗೆ ಖಾಯಿಸಾಗಲಾರದು ಎಂಬುದರಿಂದ, ಕಾಲು ಕಡಿಮೆ

ಎರಡು ವರಹಕ್ಕೆ ಕೊಟ್ಟಿದ್ದೇನೆ” ಎಂದು ಕೊಡುತ್ತಾರೆ. ಹೀಗೆ ಅವರ ಮಾತಿನಂತೆ ಎಣಿಸುವುದಾದರೆ, ಅವರು ಮುನಾಫೆಯಿರಿಸಿ ಮಾರಿದ್ದೆಂಬುದೇ ಇಲ್ಲ. ಈ ಬಗೆಯಲ್ಲಿ ಎಷ್ಟು ನಷ್ಟಮಾಡಿಕೊಂಡು ಮಾರಿದರೂ, ಜವುಳಿ ವ್ಯಾಪಾರದಲ್ಲಿ ಮಾತ್ರ ಹಣ ಗಳಿಸಿದವರೇ.

ಅಂಗಡಿಯಲ್ಲಿ ಅವರು ಕುಳಿತರೇನೆ ಒಂದು ಅಲಂಕಾರ. ತಂಬಾಕನ್ನು ಗುಡುಗುಡಿಗೆ ತೀಡಿಕೊಡುವ ಆಳುಬೇಕು–ಸಮೀಪ; ಎಲೆ ಅಡಕೆ ತಿನ್ನುವ ಮನಸ್ಸಾದರೆ ಕುಟ್ಟಾಣಿಯಿಂದ ಕುಟ್ಟುವ ಆಳೂ ಬೇಕು.ಆಳುಗಳ ಸಹಾಯದಿಂದ ಅವರು ಧೂಮ್ರಪಾನ ಮಾಡುವುದು, ತಾಂಬೂಲ ಹಾಕುವುದು ವಿಶೇಷವಾದ ವೈಖರಿ. ಗುಡಾಕನ್ನು ಹೈದರಾಬಾದಿನಿಂದಲೇ ತರಿಸುತ್ತಾರೆ. ತೊಲೆಗೆ ಅದೆಷ್ಟೋ ಕ್ರಯ ಬೀಳುತ್ತದಂತೆ. ಅವರು ತುಟಿಯಿಂದಿಳಿಸಿದ ಚಿಲುಮೆಗೆ ಬಾಯಿಹಿಡಿಯುವುದಕ್ಕೆ ನಾಲ್ಕಾರು ಬಂಧುಗಳು ಕಾದಿರುತ್ತಾರೆ.ವೀಳೆಯ ತಿನ್ನುವಾಗ ಬಳಸುವುದು ಕಾಟು ಹೊಗೆಸೊಪ್ಪಲ್ಲ. ಸೇಲಮಿನಿಂದ ಟಪ್ಪಾಲು ಮೂಲಕ ತರಿಸಿಕೊಳ್ಳುವ ಪರಿಮಳಿಸಿದ ಹೊಗೆಸೊಪ್ಪನ್ನು. ಅವರ ಮೆಚ್ಚಿನ ಕಾರ್ವಿ ವೆಂಕಟುವಿಗೆ ಎಷ್ಟೋ ಸಾರಿ “ನಿನ್ನ ಮೆಹನತ್ತಿಗೆ” ಎಂದು ಆ ಹೊಗೆಸೊಪ್ಪನ್ನು ಕೊಟ್ಟುದುಂಟು. ಅವನು ಅದನ್ನು ವರಪ್ರಸಾದವೆಂದು ಸ್ವೀಕರಿಸಿ ಬರಿದೆ ಬಾಯಿಗೇರಿಸಿಕೊಂಡರೆ, ಗಳಿಗೆ ಗಳಿಗೆಯ ತನಕ ಸವಿಯುತ್ತ, ಎಂಜಲು ತುಪ್ಪುತ್ತ ಇರುತ್ತಾನೆ.

ಅವರ ಮನೆಗೆ ಬಂದು ಹೋಗುವ ಜನರು ಬಹಳ; ಮನೆ ದೊಡ್ಡದು. ಹಳೆಗಾಲದ ಓಡಲು ಮನೆ. ಅಂಗಡಿಯಲ್ಲಿ ಅಷ್ಟೊಂದು ಜನ ಗಂಡಸರು ಕಾಣಿಸದಿದ್ದರೂ, ಘೋಷಾ ಸಂಸಾರವಾದುದರಿಂದ ಹಿಂದಿನ ಅಂಗಣದಲ್ಲಿ ಇರುವ ಜನ ಬಹಳ. ಒಮ್ಮೊಮ್ಮೆ ಬೆಳುದಿಂಗಳಲ್ಲಿ ಮನೆಯ ಜನರು ಹೊರಬಿದ್ದರೆ ಸಾಲಾಸಾಲು ಬುರುಕೆಗಳು ಹೊರಡುತ್ತವೆ. ಚಿಕ್ಕವರು ದೊಡ್ಡವರು—ಎಂದು ಬಲು ದೊಡ್ಡ ಸಂಸಾರ. ಅವರುಣ್ಣುವ ಅಕ್ಕಿ ಸಣ್ಣಕ್ಕಿಯೇ ಆಗಬೇಕು ಇಲ್ಲವೆ ಗಂಧಸಾಲೆಯಾಗಬೇಕು. ಊರಿನ ಕೋಳಿ, ತುಪ್ಪಗಳಿಗೆ ಅವರೊಬ್ಬರದೇ ಗುತ್ತಿಗೆ. ಅಂತಹ ದೊಡ್ಡ ಸಂಸಾರವನ್ನು ಇಷ್ಟು ವೈಭವದಿಂದ ಸಾಗಿಸಿಕೊಂಡು ಹೋಗಬೇಕಾದರೆ ಅವರು ಸಾಕಷ್ಟು ಶ್ರೀಮಂತರಿರಬೇಡವೇ? ನಿಧಿ ಸಿಕ್ಕಿದರೂ ಸಿಕ್ಕಿರಬೇಕು–ಎಂಬ ಊರ ಜನಗಳ ತೀರ್ಮಾನಕ್ಕೆ ಅದೇ ಆಧಾರ.

ಅವರು ಬೆಳಗಿಂದ ಸಂಜೆಯ ತನಕ ಅಂಗಡಿಯಲ್ಲಿ ದಿಂಬಿಗೆ ಒರಗಿ ನವಾಬರಂತೆ ಕುಳಿತಿರುತ್ತಾರೆ. ಅಪೂರ್ವಕ್ಕೊಮ್ಮೆ ಬಂದರಿನ ತನಕ ಹೋಗಿ ಬರುವುದೂ ಉಂಟು. ಆಗ ಚಿನ್ನದ ಹಿಡಿಯುಳ್ಳ ದಪ್ಪನಾದ ಬೆತ್ತ ಕೈಯಲ್ಲಿದ್ದೇ ತೀರಬೇಕು. ನಾಲ್ಕಾರು ಮಂದಿ ಅನುಚರರು ಅವರ ಜತೆಯಲ್ಲಿ ರಬೇಕು. ಬಾಬಾ, ಬಾವಾ, ಬಸ್ತಿ--ಎಂದು ಏನೇನೋ ಹೆಸರಿನ ತರುಣ, ವೃದ್ಧ, ತೈನಾತಿಗಳ ಪರಿವಾರವೇ ಹೊರಡುತ್ತದೆ. ಬಂದರಿಗೆ ಹೋಗಿ, ಅಲ್ಲಿನ ತಂಡೇಲರನ್ನು ಕರೆದು—'ಏನು ಹಾಕಿದೆ ಇವತ್ತು? ಏನು ಹೋಗುತ್ತದೆ ದೀವಿಗೆ (ಅಮೀನ ದೀವಿ)? ಗೋವೆಗೆ ಏನು? ವಿರಾವಲ್ಲಿಗೆ ಹುರಿತುಂಬಿಸಿ ಯಾಯಿತೆ?'-ಎಂದು ತನಿಖೆಮಾಡುತ್ತಾರೆ. ಅಷ್ಟು, ಮೇಲು ತನಿಖೆ ಮಾತ್ರ. ಯಾಕೆಂದರೆ—ಬಂದರದಲ್ಲಿರುವ ಭಂಡಸಾಲೆಯನ್ನು ಅವರ ಮಗನೇ ಖುದ್ದಾಗಿ ನೋಡಿಕೊಳ್ಳುತ್ತಿದ್ದಾನೆ.

ಅವರಿಗೆ ಮೂವರು ಮಕ್ಕಳು-ಹಿರಿಯ ಹುಡುಗ ಕಾಸೀಮ್, ಕುಮಟೆಯ ಅಂಗಡಿಯನ್ನೂ ಆ ಭಾಗದಲ್ಲಿರುವ ಭೂಮಿಯನ್ನೂ ನೋಡಿಕೊಂಡಿದ್ದಾನೆ. ಎರಡನೆಯ ಮಗನಾದ ಕರೀಮನಿಗೆ ಬಂದರದ ಅಂಗಡಿ. ಅಲ್ಲಿನ ಅಂಗಡಿ,ಗೋದಾಮುಗಳಲ್ಲಿ ಏರಿಸುವ,ಇಳಿಸುವ ಸಾಮಾನುಗಳ ಗದ್ದಲವೇ ಗದ್ದಲ. ಅವನದೆಲ್ಲ ಆಮದು ರಫ್ತಿನ ವ್ಯಾಪಾರ. ಅವರಿಗೆ ಸೇರಿದ ಎರಡು ಮಚ್ವೆಗಳು ಸದಾ ಗೋವೆ, ವಿರಾವಲ್, ಕೊಚ್ಚಿಗಳಿಗೆ ತಿರುಗಾಡುತ್ತಲಿವೆ. ಊರಿನ ವ್ಯಾಪಾರಕ್ಕಿಂತ ಅವರಿಗೆ ಪರಬಂದರುಗಳೊಡನೆ ಹೆಚ್ಚಿಗೆ ವ್ಯಾಪಾರ ವಿದೆ ಎನ್ನುತ್ತಾರೆ. ಊರಿನ ಮಸ್ಕತಿ ಅಕ್ಕಿಯನ್ನು ಗೋವೆಗೆ ಸಾಗಿಸುತ್ತಾರೆ; ಹುರಿಹಗ್ಗ, ದಾಲಚೀನಿ ಕೆತ್ತೆ, ಅಣಿಲೆ ಕಾಯಿ, ಕಾಚು ಮೊದಲಾದುವನ್ನು ಕಾಥಿಯಾವಾಡಕ್ಕೆ ರವಾನಿಸುತ್ತಾರೆ. ದೀವಿ, ಸಿಂಹಳಗಳಿಂದ ತೆಂಗು ತರಿಸಿ ಘಟ್ಟಕ್ಕೆ ಕಳುಹಿಸುತ್ತಾರೆ. ಇಂತಹ ಸಣ್ಣ ಊರಲ್ಲಿ ಮಾಲು ಬರುವುದು ಹೋಗುವುದು ಕಣ್ಣಿಗೆ ಕಾಣಿಸದಷ್ಟು ನಿಶ್ಶಬ್ದದಿಂದ ಸಾಗುತ್ತದೆ. ಹಳ್ಳಿಯ ಜನರು–ಏನೇನೋ ಕೆತ್ತೆ, ನಾರು, ಬೀಜಗಳನ್ನು ಹೊತ್ತುತಂದು ಮಳಿಗೆಯ ಮುಂದೆ ಕಾದು ಕುಳಿತರೆ,ಸಂಜೆಯ ವೇಳೆಗೆ ಕರೀಮ ಸಾಹೇಬರು ಕೊಡುವ ಹಣವನ್ನು ಹಿಡಿದುಕೊಂಡು ಮನೆಗೆ ಹೋಗಬಹುದು. ಅದರಲ್ಲಿಯೇ ಒಂದಂಶ ಮುಕಾದಮ್ ಸಾಹೇಬರ ಅಂಗಡಿಗೆ ತಿರುಗಿ ಬಂದೂ ಬರುತ್ತದೆ. ಈ ಬಂದರದ ಅಂಗಡಿ ನಡೆಸುವ ಕರೀಮ್ ಎಂದರೆ ಮುಕಾದಮ್

ಸಾಹೇಬರಿಗೆ ಬಹಳ ಅಭಿಮಾನ. ಅವರು ಸದಾ ಅನ್ನುವುದುಂಟು—'ನನ್ನ ನಂತರ ಮತ್ತೆ ಯಾರೂ ಅಲ್ಲ, ನಮ್ಮ ಕರೀಮನೇ' ಎಂದು. ಹಾಗೆಂದು ಹಿರಿಯ ಕಾಸೀಮ್ ವ್ಯರ್ಥವೆಂದಲ್ಲ; ಕುಮಟೆಯ ಅಂಗಡಿ ನೋಡಿಕೊಳ್ಳು ವುದು ಆತನೇ. ಆದರೆ ತಮ್ಮನಷ್ಟು ಚಲಾಕಿ ಸಾಲದು ಎಂಬುದೇ ಅವರ ಅಭಿಪ್ರಾಯ. ಆ ಅಭಿಪ್ರಾಯದಂತೆ ಭಂಡಸಾಲೆಯನ್ನು ನಡೆಸಲೂ ಬಹಳ ಚಲಾಕಿ ಬೇಕು. ನಾಲಗೆ, ಕಿವಿ, ಕಣ್ಣು—ಮೂರೂ ಚುರುಕಾಗಿರಬೇಕು. ಯಾವುದಕ್ಕೆ ಬೆಲೆ ಏರೀತು, ಯಾವುದಕ್ಕೆ ಇಳಿದೀತು?–ಎಂಬುದನ್ನು ಕಿವಿ ನೀಡಿ, ಕಣ್ಣು ಚಾಚಿ ಕಾದಿರಬೇಕು. ಅದಿಲ್ಲದೆ ಹೋದರೆ, ಹತ್ತು ವರ್ಷ ದುಡಿದದ್ದು ಒಂದು ಗಳಿಗೆಯಲ್ಲಿ ಮುಳುಗಿ ದಿವಾಳಿಯಾದೀತು

ಅಲ್ಲದೆ ಮಂಜಿ, ಮಚ್ವೆಗಳ ವ್ಯಾಪಾರವೆಂದರೆ ಸಮುದ್ರದೇವರ ಕೈ ವಾಡವೇ ಹೊರತು ಇನ್ನೇನೂ ಅಲ್ಲ. "ಕಳೆದ ವರ್ಷ ಹೊನ್ನಾವರದಲ್ಲಿ ಬಂದ ರದ ಎದುರಿಗೆನೇ ಮಾಲು ತುಂಬಿದ ಮೂರು ನಗಗಳು ಮುಳುಗಿದುವು. ನನಗೇನೋ ಅನಿಸಿತ್ತು—ಈ ಸಾರಿ ಮೊಸೂಮು (Monsoon) ಬೇಗನೇ ಸುರುವಾಗಲಾರದು-ಎಂದು. ಅದಕ್ಕೆ ನಮ್ಮ ಕರೀಮ ಹೇಳಿದ–ಈ ಬೇಸಿಗೆ ಯಲ್ಲಿ ಮಂಜಿಗಳು ಹೊರಗೆ ಹೋಗುವುದೇ ಒಳ್ಳೆಯದಲ್ಲವೆಂದು. ಶಿವರಾ ತ್ರಿಯ ನಂತರ ನಂಬಿಕೆಯುಲ್ಲ–ಎಂದಿದ್ದ. ಅವನ ಮಾತೇ ಸಮನಾಯಿತು. ಇಲ್ಲವಾಗಿದ್ದರೆ ನಮ್ಮ ನಗ, ಇಲ್ಲಿಂದ ಅಕ್ಕಿ ಸಾಗಿಸಿಕೊಂಡು ರತ್ನಾಗಿರಿಯಿಂದ ಸ್ವಲ್ಪ ಮ್ಹಾಲು ತೆಗೆದುಕೊಂಡು ಮುಂದೆ ಹೋಗಬೇಕಿತ್ತು. ಹೋಗಿದ್ದರೆ–ಹೊನ್ನಾವರದಲ್ಲಿ ಆದ ಹಾಗೆಯೇ ನಮಗೂ ಆಗುತ್ತಿತ್ತು" ಎಂದು ಮಗನ ದೂರದರ್ಶಿತ್ವದ ವಿಷಯದಲ್ಲಿ ಅಭಿಮಾನಪಡುತ್ತಾರೆ. ಅವರಿಗೆ ತುಸು ಬೇಸರವಿದ್ದರೆ, ಅದು ಮೂರನೆಯ ಮಗನಾದ ಆದಮ್ಮನ ವಿಚಾರದಲ್ಲಿ. ಆದಮ್ ಅವರ ಮುದ್ದು ಮಗನಾಗಿಯೇ ಬೆಳೆದವನು. ಆದರೆ ಹದಿನಾರು ವರ್ಷಗಳು ತುಂಬುವುದರೊಳಗೇನೆ ಅವನ ರೀತಿ ಬದಲಾಯಿತು. ತಂದೆಯ ಪೆಟ್ಟಿಗೆಯಿಂದ ಹಣ ಕದಿಯುವುದಕ್ಕೂ ಶುರುಮಾಡಿದ ಅನ್ನುತ್ತಾರೆ. ಎಷ್ಟು ನಿಜವೋ, ಎಷ್ಟು ಸುಳ್ಳೋ! ಅಂತೂ ಆದಮ್ ಈಗ ಊರು ಮನೆಯಲ್ಲಿಲ್ಲ. ಅವನು ಊರುಬಿಟ್ಟು ಹೋಗಿಯೇ ಇಂದಿಗೆ ಹದಿನೈದು ವರ್ಷಗಳಾದುವು. ಊರನ್ನು ಬಿಡುವಾಗ ಅವನಿಗೆ ಸುಮಾರು ಇಪ್ಪತ್ತು ವರ್ಷದ ಹರೆಯ. ಏಕಾ ಏಕಿ ಹೊರಟು ಹೋದನೇ. ಬಹುಕಾಲದ ತನಕ ತಂದೆಗೆ ಬರೆಯಲೂ ಇಲ್ಲ,

ಬರೆಯಿಸಲೂ ಇಲ್ಲ. ಆ ವೇಳೆಯಲ್ಲಿ ಮುಕಾದಮ್ ಸಾಹೇಬರು ತುಂಬಾ ಸೊರಗಿಹೋಗಿದ್ದರು. ಮಗನನ್ನು ಮನೆಯಲ್ಲಿರಿಸಿಕೊಂಡಿದ್ದರೆ ಅವಮಾನ, ನಷ್ಟಗಳಿಗೆ ಗುರಿಯಾಗಬೇಕೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಆದರೂ ಮುದ್ದು ಮಗನನ್ನು, ಕರೆದು ಬಾಯಾರೆ "ನೀನು ಹೊರಟುಹೋಗು" ಎನ್ನುವ ಮನಸ್ಸೇ ಬರಲಿಲ್ಲ. ಆ ಕೆಲಸವೇನೋ ತನ್ನಂತೆಯೇ ಆಯಿತು. ಮಗನು ಓಡಿ ಹೋದ ಎರಡು ವರ್ಷಗಳ ಕಾಲ, ತಂದೆಯಾದ ಅವರು, ಪೇಟೆಯಲ್ಲಿ ಹೆಚ್ಚಾಗಿ ಮುಖ ತೋರಿಸಿದ್ದಿಲ್ಲ—ಎನ್ನುತ್ತಾರೆ.

ಆದರೆ ಈ ಕೆಲವಾರು ವರ್ಷಗಳಿಂದ ಆ ಚಿಂತೆ ಸಂಪೂರ್ಣವಾಯವಾಗಿ, ಅವರಿಗೆ ಆ ಮಗನ ಮೇಲೆ ತಿರುಗಿ ಅಭಿಮಾನವುಂಟಾಗಿದೆ. ಊರಲ್ಲಿ ಇಲ್ಲದಿರುವುದರಿಂದ ಅವರ ಈ ಅಭಿಮಾನ ಮತ್ತಷ್ಟು ಜಾಸ್ತಿ. "ಬರುತ್ತೇನೆ, ಊರಿಗೇನೆ ಬಂದಿರುತ್ತೇನೆ." ಎಂದು ಮಗನೂ ಕಾಗದ ಬರೆದಿದ್ದಾನಂತೆ. ಹೀಗೆ ಬರೆಯುತ್ತಿದ್ದು ಕೆಲವು ವರ್ಷಗಳಾದರೂ, ಆತ ಬಂದುದು ಕಾಣುವುದಿಲ್ಲ. ಒಮ್ಮೊಮ್ಮೆ ತಮ್ಮ ಉತ್ಸಾಹದ ಗಳಿಗೆಯಲ್ಲಿ, ವೆಂಕಟುವಿನ ಮುಂದೆ ಸಾಹೇಬರೆನ್ನುವುದುಂಟು, "ವೆಂಕಟು, ನಮ್ಮ ಮಗ ಬರುತ್ತೇನೆ" ಎಂದು ಬರೆದಿದ್ದಾನೆ.

"ಎಲ್ಲಿದ್ದಾರೆ ಒಡೆಯ, ಅವರು!"

"ಕೊಲಂಬೋದಲ್ಲಿ"

"ಏನು ಮಾಡಿಕೊಂಡು?"

"ಅದನ್ನೆಲ್ಲ ನಿನಗೆ ಹೇಳಿದರೆ ತಿಳಿಯುತ್ತದೆಯೆ? ಮೊದಲು ನನಗೇನೆ ನಂಬಲಿಕ್ಕಾಗಲಿಲ್ಲ ಅವನ ಕತೆ. ನಮ್ಮ ಭಟ್ಕಳದ ಇಬ್ರಾಹಿಂ ಸಾಹೇಬರು ಅವನನ್ನು ಕೊಲಂಬೋದಲ್ಲಿ ಕಂಡು, ಬಂದು ಹೇಳಿದ ಮೇಲೆಯೇ ನಾನು ನಂಬಿದ್ದು. ಕೊಲಂಬೋ ಎಷ್ಟು ದೂರ ಎಂದು ನಿನಗೆ ಗೊತ್ತಿಲ್ಲ? ಒಳ್ಳೆಯ ಗಾಳಿ ಸಿಕ್ಕಿದರೆ ನಮ್ಮ ಮಚ್ವೆಗಳು ಇಲ್ಲಿಂದ ಅಲ್ಲಿಗೆ ಹೋಗಿ ಮುಟ್ಟುವುದಕ್ಕೆ ಹದಿನೈದು ದಿವಸಗಳು ಹಿಡಿಯುತ್ತವೆ."

"ದೂರ ಎಂದರೆ ಆ ಪಾಟಿ ದೂರವೇ?"

"ಇಲ್ಲಿ, ಸಣ್ಣದರಲ್ಲಿ ಬುದ್ಧಿ ಕಡಿಮೆಯಾಗಿ ಏನು ಮಾಡಿಕೊಂಡಿದ್ದರೂ, ಕೊನೆಗೆ ಒಳ್ಳೆಯ ದಾರಿಗೆ ಬಂದನಲ್ಲ. ದೇವರೂ ಚೆನ್ನಾಗಿ ನಡೆಯಿಸಿದರು."

"ಅಲ್ಲೇನು? ವ್ಯಾಪಾರವೇ?"

"ವ್ಯಾಪಾರವೆಂದರೆ ಅಂಥಿಂಥ ವ್ಯಾಪಾರವಲ್ಲ. ಕೊಲಂಬೋ ಊರೇ ಹಾಗೆ; ದುಡ್ಡನ್ನು ಹೆಡಗೆಯಲ್ಲಿ ಗೋಚುವಂತಹ ಊರು. ಇಬ್ರಾಹಿಂ ಸಾಹೇಬರು ನಮ್ಮ ಮಗನ ಮಳಿಗೆಯನ್ನು ನೋಡಿ ಬಂದವರು ಹೇಳಿದರು— ಅವನಿರುವ ಅಂಗಡಿಯಲ್ಲಿ ಚಾಲತಿ ಮ್ಹಾಲಿನ ದಾಸ್ತಾನೇ ಹತ್ತು ಲಕ್ಷರೂಪಾಯಿಗಳಷ್ಟಿರ ಬಹುದಂತೆ. ಎಲ್ಲವೂ ರಖಂ ವ್ಯಾಪಾರ; ವಿಲಾಯತಿಯಿಂದಲೇ ಮ್ಹಾಲು ತರಿಸುತ್ತಾನಂತೆ. 'ಆದಮ್ ಮುಗುದುಮ್ ಸಾಹೇಬ್ ಕಂಪೆನಿ' ಎಂದು ಭಾರೀ ದೊಡ್ಡ ಕಂಪೆನಿಯನ್ನು ಮಾಡಿದ್ದಾನಂತೆ. ಕೊಲಂಬೋದಲ್ಲಿ ಯಾರನ್ನೇ ಕೇಳಲಿ,'ಆದಂ ಮುಗುದುಮ್ ಕಂಪೆನಿ' ಎಂದರೆ ಕರೆದುಕೊಂಡು ಹೋಗಿ ತೋರಿಸುತ್ತಾರಂತೆ. ನೀನೇನು ಅನ್ನುತ್ತೀಯ ವೆಂಕಟು? ಬಿಳಿಯ ಜನರೇ ಅವನ ಅಂಗಡಿಗೆ ಬಂದು, ಮ್ಹಾಲು ತೆಗೆದುಕೊಳ್ಳಬೇಕಾದರೆ ಅದು ಎಂಥ ಅಂಗಡಿ ಇರಬೇಡ? ಅವನು ಹೋದ ಕೆಲವು ವರ್ಷಗಳಲ್ಲಿ, ನನಗೆ ಕಾಗದ ಬರೆಯಲಿಲ್ಲ ನಿಜ. ಮೂರು ವರ್ಷಗಳ ಹಿಂದೆ ಅವನದ್ದೊಂದು ಕಾಗದ ಬಂದಿತ್ತು—'ಎಲ್ಲಾ ಕ್ಷೇಮ. ನಿಮ್ಮ ಆಶೀರ್ವಾದ ಬಲದಿಂದ ಸುಖವಾಗಿದ್ದೇನೆ. ಒಂದು ಜವುಳಿ ಅಂಗಡಿ ಇದೆ. ವ್ಯಾಪಾರವೂ ಚೆನ್ನಾಗಿದೆ ಇಲ್ಲಿಂದಲೇ ಮದುವೆಯಾಗಿ, ಹೆಂಡತಿ ಮಕ್ಕಳೊಡನೆ ಸುಖವಾಗಿದ್ದೇನೆ.' ಎಂದೆಲ್ಲ ಬರೆದಿದ್ದ." ಆಗ ವೆಂಕಟು ಕುತೂಹಲದಿಂದ ಕೇಳಿದ 'ಅಂದರೆ–ಅಲ್ಲಿಯೂ ನಿಮ್ಮ ಜನ ಇದ್ದಾರೆಯೇ? ಮದುವೆಗಿದುವೆಯಾಗುವುದಕ್ಕೆ?'

"ಅಲ್ಲಿದ್ದಾರೆ,ಬೇಕಷ್ಟುಮಂದಿ ನಮ್ಮವರಿದ್ದಾರೆ. ಆದರೆ ನಮ್ಮ ಇಬ್ರಾಹಿಮನ ಮಾತಿನಂತೆ–ಅವನು ಲಗ್ನವಾದದ್ದು ಅಲ್ಲಿಯೇ ನೆಲೆಸಿದ ನಮ್ಮವರ ಅಂದರೆ ಮುಸಲ್ಮಾನರ ಮನೆತನದಿಂದ. ಮಾವನ ಮನೆಯಿಂದ ಅವನಿಗೆ ತುಂಬ ಸಹಾಯ ಸಿಕ್ಕಿರಬಹುದು ಎನ್ನುತ್ತಾನೆ ಇಬ್ರಾಹಿಂ."

"ಆಗಲಪ್ಪ, ಎಲ್ಲಾದರೂ ಒಳ್ಳೆಯದಾಗಿರಲಿ. ನನಗೆ ಈಗ ಅನಿಸುತ್ತದೆ ಧನಿಗಳೇ–ನೀವು ನಿಮ್ಮ ಆ ಮಗನಿಗೆ ಎಳೆಯ ವಯಸ್ಸಿನಲ್ಲೇ ಲಗ್ನ ಮಾಡಿಸಿದ್ದರೆ, ಹೀಗಾಗುತ್ತಿರಲಿಲ್ಲವೆಂದು. ಊರು ಮನೆಯಲ್ಲಿಯೇ ಇದ್ದು ನಿಮ್ಮ ಕಾಸೀಮ್ ಸಾಹೇಬರ ಹಾಗೆ, ಕರೀಮ್ ಸಾಹೇಬರ ಹಾಗೆ, ಹೆಸರು ಪಡೆಯಬಹುದಿತ್ತು. ಈಗ ಊರಲ್ಲಿರುವ ನಿಮಗಾಗಲೀ, ನಿಮ್ಮ ಈ ಮಕ್ಕಳಿಗಾಗಲೀ, ಹೆಸರಿಗಾಗಲೀ, ಭರಾಮಿಗಾಗಲೀ ಏನಾದರೂ ಕಡಿಮೆಯಿದೆಯೆ? ಕೊಲಂಬೋ ಎಂದರೆ ಎಲ್ಲಿ? ಏನು ಕಥೆ? ನಿಮಗೂ ವಯಸ್ಸಾಯಿತು, ಒಂದು

ಜಡ ಜಾಪತ್ತು ಬಂದು ನಿಮಗೆ ಮಗನನ್ನು ಕಾಣುವ ಆಸೆಯಾದರೆ, ಅವನು ಎಲ್ಲಿಂದೆಲ್ಲಿಗೆ ಬರಬೇಕು?"

"ನಿನಗೆ ಮರುಳು-ವೆಂಕಟು. ಈಗ ನನಗೆಷ್ಟು ವಯಸ್ಸುಅನ್ನುತ್ತೀಯ? ಇನ್ನೂ ಐವತ್ತು ಕಳೆದು ಅರವತ್ತು ತುಂಬಿಲ್ಲ. ನಮ್ಮಅಪ್ಪ ಸತ್ತದ್ದು ತೊಂಬತ್ತಕ್ಕೆ; ಅಜ್ಜ ನೂರು ವರ್ಷವೇ ಬದುಕಿದ್ದರಂತೆ" ಎನ್ನುತ್ತಲೇ, ವೆಂಕಟುವಿನ ಮನಸ್ಸು ಬೇರೆಯೇ ಕಡೆಗೆ ಹರಿಯಿತು. ಸಾಹುಕಾರರ ಆ ವಾದಸರಣಿಯೂ ಮುರಿದುಬಿತ್ತು. ಅಷ್ಟರಲ್ಲಿ ಅವರ ಅಂಗಡಿಗೆ ಯಾರೋ ಬಂದರೆಂದು 'ಹೋ ಬನ್ನಿ ಬನ್ನಿ, ಹೆಗ್ಗಡೆಯರೋ, ಕುಳಿತು ಕೊಳ್ಳಿ. ಏನು-ಎಳೆನೀರು ತರಿಸಲೇ? ಅಥವಾ ನಮ್ಮ ಪ್ರಭುಗಳ ಅಂಗಡಿಯಿಂದ ಚಾ ತರಿಸಲೇ?" ಎಂದು ಉಪಚಾರಕ್ಕೆ ತೊಡಗಿದರು.

ಇತ್ತ ಧನಿಗಳ ಕೈಯಿಂದ ಗುಡುಗುಡಿಯನ್ನಿಸಕೊಂಡು, ಒಂದು ದಮ್ಮು ಎಳೆದು, ಅವರ ಮಚ್ವೆ ಬರುವ ದಿನ ಯಾವುದೆಂದು ತಿಳಿಯಲು ಹೊರಟ ವೆಂಕಟುವಿಗೆ, ದಾರಿಯುದ್ದಕ್ಕೂ ಸಾಹೇಬರ ಮೂರನೆಯ ಮಗ ಆದಮ್ಮನ ವಿಚಾರದಲ್ಲಿ ಮನಸ್ಸು ಹರಿದಾಡಿತು. ವೆಂಕಟುವಿಗೆ ಕಡಲಿನ ಹುಚ್ಚು ಬಹಳ. ತರುಣನಾಗಿದ್ದಾಗ—ಮಸ್ಕತ್ತಿನ ತನಕ ಅಕ್ಕಿತುಂಬಿದ ಮಚ್ವೆಯೊಂದರಲ್ಲಿ ಕುಳಿತು, ಕಲಾಸಿಯಾಗಿ ಹೋದ ಧೀರನವನು. ಈಗ ಊರಲ್ಲಿಯೇ ಮರ್ಯಾದೆ ಸಂಪಾದಿಸಿ ನಾಲ್ಕು ಜನರಿಗೆ ಬೇಕಾದವನಾಗಿದ್ದಾನೆ. ಹೊರಗೆ ಹೋಗಿ ಜೀವನ ಸಂಪಾದಿಸಬೇಕಾದ ಪ್ರಮೇಯವಿಲ್ಲ. ಆದರೂ ಒಮ್ಮೊಮ್ಮೆ ಸಾಹಸಕ್ಕೆ ಅವನ ಮನಸ್ಸು ಹರಿಯುತ್ತದೆ. 'ಸಾಹೇಬರ ಮಂಜಿ ಸರಕು ತುಂಬಿ ಕೊಲಂಬೋವಿಗೆ ಹೋಗುವುದಿದ್ದರೆ ತಾನೂ ಯಾಕೆ ಹೋಗಬಾರದು? ಆ ಕೊಲಂಬೋ ಊರು ಎಂಥದೆಂದು ನೋಡಿಕೊಂಡು ಬರಬಾರದು?' ಎಂಬ ಕುತೂಹಲವುಂಟಾಗುತ್ತದೆ.

ಒಮ್ಮೊಮ್ಮೆ ತಮ್ಮ ಯೌವನವನ್ನು ಕುರಿತು ಮಾತನಾಡಿದ ಹಿರಿಯ ಮುಕಾದಮ್ ಧನಿಗಳ ವಿಚಾರದಲ್ಲಿ, ವೆಂಕಟುವಿಗೆ ನಗು ಬರುವುದುಂಟು. ಅವರು ತನಗಿಂತ ಹತ್ತೆಂಟು ವರ್ಷಗಳಿಗೆ ಕಡಿಮೆ ಪಕ್ಷವಾದರೂ ದೊಡ್ಡವರು. ತನಗೆ ಐವತ್ತು ವರ್ಷ ಪ್ರಾಯ ಎಂದೋ ಸಂದಿರಬೇಕು. ತನ್ನ ತಲೆಗೂದಲು ನೆರೆದು ಬಿಳಿಚಾಗದೆ ಹೋದರೂ, ಬೂದು ಬಣ್ಣವೊತ್ತಿದೆ. ಮೊದಲಿನಂತೆ ಕಷ್ಟದ ಕೆಲಸ ಆಗುವಂತಿಲ್ಲ. ಏನಿದ್ದರೂ 'ಗುರಿಕಾರ'ನೆಂಬ ಬಲ

ಅವನ ಬಲವೇ ಹೊರತು, ಹರೆಯದ ಮಾಂಸ ಖಂಡ, ಹುಮ್ಮಸ, ಈಗ ಅವನ ಎದೆ, ಭುಜಗಳಿಗೆ ಬಂದಾವೇ? ಸಾಹೇಬರು ಸುಖಜೀವಿಗಳು. ಇಂದಿಗೂ ಅವರ ಪಾಲಿಗೆ ಯೌವನ ಕಾಣಿಸುತ್ತಿರಬಹುದು. ಅದು ಅವನಿಗೂ ತಿಳಿದಂಥ ಸಂಗತಿಯೆ. ಎಷ್ಟೋ ಬಾರಿ ಸಾಹೇಬರು ಸರ್ಕಿಟಿಗೆ ಹೋಗುವಾಗ, ಅವರ ಬೆನ್ನ ಹಿಂದೆಯೇ ಆತ ಹೋದುದುಂಟು. ಹೋಗಿ, ತುಸು ದೂರ ನಡೆದು, ಅವರ ನೆಚ್ಚಿನವಳ ಮನೆಯ ತನಕ ಅವರನ್ನು ಬಿಟ್ಟುಬಂದುದುಂಟು. ಅದರಲ್ಲಿ ಗುಟ್ಟಿನ ಸಂಗತಿಯೇನಿಲ್ಲ.

ಊರಿನ ಆರೆಂಟು ಗಣಿಕೆಯರ ಮನೆಗಳು, ಪರಂಪರೆಯಿಂದ ನಾಗೂರಿನ ರಸಿಕ ಜೀವಿಗಳ ಸ್ನೇಹ, ಶೃಂಗಾರಗಳಿಗೆ ಅನುಕೂಲವಾಗಿ ಬಂದಂಥ ಮನೆಗಳಾಗಿವೆ. ಅವರೆಲ್ಲರು ಒಳ್ಳೆಯ ಸಂಪತ್ತುಳ್ಳವರೆಂದು ಹೇಳಲು ಬಾರದಿದ್ದರೂ, ಎಷ್ಟೋ ಬಡ ಜನರಿಗಿಂತ ವಾಸಿ. ಒಂದೊಂದು ಮನೆಗೂ ಒಂದೊಂದು ಹಿತ್ತಿಲಿದೆ. ನಿವಾಸಕ್ಕೆ ಅನುಕೂಲವಾದ ದೊಡ್ಡ ಮನೆಗಳೇ ಇವೆ. ಅಲ್ಲಿಗೆ ಬರುವವರ ಗೌರವವೇ ಅಲ್ಲಿ ಇರುವವರ ಗೌರವ. ಅದರಿಂದ ಸ್ವಲ್ಪ, ವಲ್ಲ ಸ್ವಲ್ಪ ವರಮಾನವುಳ್ಳ ಜಮೀನೂ ಅವರಿಗಿರುತ್ತದೆ. ಊರಿನ ಜನಗಳ ಶೃಂಗಾರ, ವಿಲಾಸಗಳಿಗೆ ನೆರವಾದುದಕ್ಕೆ ಪಾರಿತೋಷಕಗಳಿವು. ಅವರಲ್ಲಿ ಯಾರೂ ಇಂದಿಗೂ ಹೊಲಗದ್ದೆಗಳಲ್ಲಿ ಮೈ ಕೆಸರುಮಾಡಿಕೊಂಡು ಜೀವನ ಸಾಗಿಸುತ್ತಿರುವುದು ಕಂಡುಬರುವುದಿಲ್ಲ. ಅವರಲ್ಲಿ ಗಂಡಸರು--ಪಿಟಿಲು, ತಬಲಾ ವಾದ್ಯಗಳೊಡನೆ ನೃತ್ಯ, ಸಂಗೀತಗಳ ಹಿಮ್ಮೇಳಕ್ಕೆ ನಿಲ್ಲಬಲ್ಲರು. ಸ್ತ್ರೀಯರು ತಮ್ಮ ಕಲಾವಂತ ಜೀವನಕ್ಕೆ ಅನಿವಾರ್ಯವಾದ ಸಂಗೀತ, ನೃತ್ಯ ಬಲ್ಲರು. ಆದರೆ ಅನೇಕ ಊರುಗಳಲ್ಲಿ ಕಾಣಬಹುದಾದ 'ಬಿಡುಸೂಳೆ'ಯರೆಂಬ ಬಿರುದನ್ನು ಎಂದೂ ಗಳಿಸಿದವರಲ್ಲ. ಅವರ ಮನೆಗಳು ಇಂಥಿಂಥವರಿಗೆ ಸಂದುದು ಎಂಬುದು ಊರವರಿಗೆ ಗೊತ್ತಿದ್ದ ವಿಷಯ. ಅಂಥ ಮನೆಯವರಿಗೆ ಸಲುವ ಗೌರವದ ಒಂದಂಶವು ಇವರ ಮನೆಗಳಿಗೂ ಸಲ್ಲುತ್ತಿದೆ—ಎನ್ನಬಹುದು.

ಪ್ರತಿ ಶುಕ್ರವಾರವೂ ಮಹಾಂಕಾಳಿಯ ಗುಡಿಗೆ ತಪ್ಪದೆ ಭಕ್ತಿಯಿಂದ ಹೋಗಿ ಬರುವ ಗುಲಾಬಿಯು ಮುಕಾದಮ ಸಾಹೇಬರ ಪ್ರೇಯಸಿಯೆಂದು ಜಗಜ್ಜನಿತವಾದ ವಿಷಯ. ಆಕೆಗೆ ಈಗೇನಾದರೂ ಇಪ್ಪತ್ತು ವರ್ಷ ಪ್ರಾಯವಿರಬಹುದು. ಕೇದಗೆಯ ಮೈಬಣ್ಣ, ತಾವರೆಗಣ್ಣುಳ್ಳ ಅಂಡಾಕಾರವಾದ

ಮುಖ, ತೀರ ಗಿಡ್ಡವೂ ಅಲ್ಲದ, ನೀಳವೂ ಅಲ್ಲದ ಹದವಾದ ಮೈಕಟ್ಟು, ಕಿರಿದಾದ ನಡು, ಉಬ್ಬಿದ ಎದೆಯುಳ್ಳ ರೂಪವತಿಯವಳು. ಆಕೆಗೆ ಮೈತುಂಬಿ ಬರುವ ದಿನ ಉದಯಿಸಿದೊಡನೆಯೆ—ಅಲ್ಲಿಗೆ ಬಂದು ಹೋಗತೊಡಗಿದ ರಾಯಭಾರಿಗಳ ಸಂಖ್ಯೆ ಒಂದೆರಡಲ್ಲ. ತಾಯಿಯಿಲ್ಲದ ಮಗು ಆಕೆ. ಈಗ ಮನೆಯಲ್ಲಿರುವವಳು ಅವಳ ತಾಯಿಯ ತಾಯಿ ಚಂದು. ಚಂದುವಿಗೆ ಮಕ್ಕಳೆಂದರೆ—ಒಂದು ಗಂಡು, ಒಂದು ಹೆಣ್ಣು; ಅವರಲ್ಲೀಗ ಒಬ್ಬ ಬದುಕಿದ್ದಾನೆ; ಇನ್ನೊಬ್ಬಳಿಲ್ಲ. ಅವಳ ಮಗಳು, ರಾಜೀವಿ, ಗುಲಾಬಿಯನ್ನು ಹಡೆದ ಮೂರು ವರ್ಷಗಳಲ್ಲಿಯೆ ತೀರಿಕೊಂಡಳು. ಅಜ್ಜಿಯಾದ ಚಂದುವೂ ಕೀರ್ತಿಶಾಲಿಯೆ. ನೆರಿಯೂರಿನ ಸುಬ್ರಾಯ ಹೆಗ್ಗಡೆಯರೆಂಬ ಜಮೀನ್ದಾರರ ವಿಲಾಸಿನಿಯಾಗಿ, ಮುಪ್ಪಿನ ತನಕ ಮೆರೆದು ಸಂಪತ್ತನ್ನು ಗಳಿಸಿದ್ದಳು. ಹೆಗ್ಗಡೆಯವರು ಸಾಯುವಾಗ, ಇವಳಿಗೂ ಯೌವನ ಸರಿದುಹೋಗಿತ್ತು. ಮನೆ, ಹಿತ್ತಿಲು, ಐವತ್ತು ಮಾನಿಗೆ ಅಕ್ಕಿಯ ವರಮಾನವುಳ್ಳ ಭೂಮಿ--ಅವಳು ಹೆಗ್ಗಡೆಯರಿಂದ ದೊರಕಿಸಿಕೊಂಡಂಥ ಉಡುಗೊರೆ. ಬದುಕುವುದಕ್ಕೆ, ತೀರ ಸಾಮಾನ್ಯ ತೆರನ ಜೀವನಕ್ಕೆ ಅವರಿಗಿಷ್ಟು ಸಾಕು. ಆದರೆ ಸುಖಸಂತೋಷವಾಗಿ ಬಾಳಬೇಕು, ಮೊಮ್ಮಗಳ ಮೈತುಂಬ ಆಭರಣ, ಸೀರೆಗಳು ಮೆರೆದಾಡಬೇಕು—ಎನ್ನುವ ಬಯಕೆಗಳಿಗೆ ಇಷ್ಟು ಸಾಲದೇ ಸಾಲದು.

ಅವಳ ಮನೆಯಲ್ಲಿ ನಿಜಕ್ಕೂ ತುಂಬಿರುವ ಸಂಪತ್ತೆಂದರೆ, ಗುಲಾಬಿಯ ಯೌವನ, ಚೆಲುವುಗಳು. ತಪ್ಪು ಹೆಜ್ಜೆ ಹಾಕಿದರೂ ಅದರಲ್ಲಿ ಚೆಲುವನ್ನೇ ಒಡಮೂಡಿಸುವಂಥ ವಯಸ್ಸುಬೇರೆ. ಆಕೆ ನರ್ತಿಸುವುದಕ್ಕೂ ಕಲಿತಿದ್ದಾಳೆ. ಕುಣಿತವನ್ನು ವಿಮರ್ಶಿಸಬಲ್ಲ ರಸಿಕರೂ ಆ ಊರಲ್ಲಿದ್ದಾರೆ. ಮದುವೆಯ ಮನೆಗಳಲ್ಲೋ, ದೇವರ ಮುಂದೆಯೋ, ಗೆಜ್ಜೆಕಟ್ಟಿಯಾರಾದರೂ ಕುಣಿಯುವಾಗ ಹುಳುಕು ಹುಡುಕುವ ಕಣ್ಣುಗಳೂ ಇದ್ದಾವೆ. ನಿಜಕ್ಕೂ—ಕುಣಿಯುವುದರಲ್ಲಿ ಆಕೆ ನಿಪುಣಳಲ್ಲ. ಅದರಲ್ಲಿ ಅವಳಿಗೆ ಉತ್ಸಾಹವೂ ಇಲ್ಲ. ಅಳುಕಿ, ಅಳುಕಿ, ಹೆಜ್ಜೆ ಹಾಕುತ್ತಾಳೆ, ತಾಳ ತಪ್ಪುತ್ತಾಳೆ, ಮುಕ್ತಾಯ ಬರುವಾಗ ಗಡಿಬಿಡಿಗೊಳ್ಳುತ್ತಾಳೆ—ಹಾಗೆಂದು ನೃತ್ಯವನ್ನು ಬಲ್ಲವರು ಹೇಳುತ್ತಾರೆ. ಅವಳ ಕುಣಿತವನ್ನು ಹೊಗಳುವವನು ಅವಳ ಸೋದರ ಮಾವ ಶ್ಯಾಮನೇ ಹೊರತು ಇನ್ನೊಬ್ಬರಿಲ್ಲ. ಇತ್ತ ಹಾಡುಗಾರಿಕೆಗೆ ಬೇಕಾದಂಥ ಮಧುರವಾದ ಕಂಠವೂ ಅವಳಲ್ಲಿಲ್ಲ. ಪಿಟೀಲು ಬಾರಿಸುವುದರಲ್ಲಿ, ಚೀಸ್ ಹಾಡುವುದರಲ್ಲಿ,

ಖ್ಯಾಲ್, ಕವ್ವಾಲಿ ಗಾನಗಳಲ್ಲಿ ಶ್ಯಾಮ ನಿಸ್ಸೀಮ. ತನ್ನ ಸೊಸೆಗೆ ಸಂಗೀತ ಪಾಠವನ್ನು ಹೇಳಿಹೇಳಿ ಆತ ಬೇಸರಿಸಿಕೊಂಡಿದ್ದಾನೆ. ಅವಳು ಕುಣಿಯಲು ಕಲಿಯುವಾಗ, ಹಾಡಲು ಕಲಿಯುವಾಗ, ಶ್ಯಾಮ ಹುಲಿಯಂತೆ ಗದರಿಸುತ್ತಿದ್ದ. "ನಿಷ್ನ ಗೊಂಬೆಯೊಂದು ಚೆನ್ನಾಗಿಲ್ಲದೆ ಹೋಗಿದ್ದರೆ, ನಿನ್ನ ಅಜ್ಜಿಗೂ ನನಗೂ ಸಾಯುವ ಕಾಲಕ್ಕೆಗಂಜಿಯ ತಿಳಿ ಸಿಕ್ಕಲಾರದು" ಎಂದು ಶಪಿಸಿದ್ದಾನೆ. ಏನೂ ಇರಲಿ, ಗುಲಾಬಿ ಏನೇನೂ ಹಾಡಲು ಬಾರದಂಥ, ಕುಣಿಯಲು ಬಾರದಂಥ ಕಲಾವಂತಿಯಲ್ಲ. ಅವಳು ಬೆಳೆದು ದೊಡ್ಡವಳಾಗುವ ತನಕ, ಜೀವನ ಸಾಗಿಸುವುದು ಮನೆಯವರಿಗೆ ಕಷ್ಟವಾಗಿತ್ತು. ಹೆಗ್ಗಡೆಯವರು ಬದುಕಿದ್ದಾಗ ದರ್ಬಾರಿನಿಂದ ಮೆರೆದಂಥ ಅವರು, ಅಂಥ ಇನ್ನೊಂದು ಕೃತಯುಗಕ್ಕಾಗಿ, ಹಸಿದಿರುವುದರಲ್ಲಿ ಆಶ್ಚರ್ಯವಿಲ್ಲ.

ಗುಲಾಬಿಯ ರೂಪ, ಯೌವನಗಳೇ ಚಂದುವಿನ ಭಾವೀ ಸುಖಜೀವನದ ಕಲ್ಪನೆಗೆ ಆಶಾಂಕುರವಾಗಿತ್ತು. ಈಗ ಕಾಲವೇ ಬದಲಿಸಿದೆ. ಶ್ಯಾಮನ ಸಂಗೀತ ವಿದ್ಯೆಗೆ ನಿತ್ಯ ಗಿರಾಕಿಗಳಿಲ್ಲ. ಊರಿನ ಮದುವೆಗಳ ವೇಳೆಯಲ್ಲಿ ಆತನು ಮೇಳಕ್ಕೆ ಹೋದಾಗ, ದೊರೆಯುವ ನಾಲ್ಕಾರು ರೂಪಾಯಿಗಳು ಸಾಕೇ? ಹೀಗಾಗಿ ಸೊಸೆಯ ಪ್ರಸ್ತವು ತುಂಬ ಶ್ರೀಮಂತರ ಕೈಯಿಂದಲೇ ನಡೆಯಬೇಕೆಂಬುದು ಅವನ ಆಸೆಯಾಗಿತ್ತು. ಅವಳ ವಿಚಾರದಲ್ಲಿ ಆಸೆಬಟ್ಟು ಬರುವ ಗಿರಾಕಿಗಳನ್ನು ಆತ ತುಲನೆ ಮಾಡುತ್ತಾನೆ. ಎಷ್ಟೆಷ್ಟು ಬೆಲೆ ಹೆಚ್ಚಿಸಬಹುದೆಂದು ನೋಡುತ್ತಾನೆ. 'ತಮ್ಮ ಸುಖದ ದಿನಗಳು ದೂರವಿಲ್ಲ' ಎಂಬ ವಿಶ್ವಾಸ ತಾಳುತ್ತಿದ್ದಾನೆ. 'ನನ್ನ ಸೊಸೆಯಂತಹ ಚೆಲುವಿನ ಹುಡುಗಿ–ಕಾರವಾರದಿಂದ ಭಟ್ಕಳದ ತನಕ ಇಲ್ಲ; ಮಾತ್ರವಲ್ಲ ಹುಟ್ಟಿಲ್ಲ' ಎಂಬುದು ಅವನ ಕೆಚ್ಚಿನ ಮಾತು. ಆ ಮಾತು ನಿಜವಿರಬೇಕು. ಆಕೆಯ ಸಲುವಾಗಿ ಅಷ್ಟು ದೂರದಿಂದಲೂ ರಾಯಭಾರ ಬಂದಿದೆ. ಅವಳ ದರ್ಶನಾತುರರಾಗಿ— ಶುಕ್ರವಾರದ ದಿನ, ಗುಡಿಯ ದಾರಿಯಲ್ಲಿ ಕಾದು ನಿಂತಿರುವ ಯೌವನಸ್ಥರ ಸಂಖ್ಯೆಯೂ ಸಾಕಷ್ಟು ಹೆಚ್ಚಾಗಿತ್ತು.

ಇಂತಹ ಒಂದು ದಿನದಲ್ಲಿ--ನಮ್ಮ ಮುಕಾದಮ್ ಸಾಹೇಬರು ಪರಿವಾರದೊಡನೆ ಜಮೀನನ್ನು ನೋಡಿಕೊಂಡು ಬರುವುದಕ್ಕಾಗಿ, ಮೂಡಣ ಗ್ರಾಮವೊಂದಕ್ಕೆ ಹೋದವರು ಮರಳಿಬರುವಾಗ, ಮಹಾಂಕಾಳಿ ಗುಡಿಯ ಹಾದಿಯಾಗಿಯೇ ನಡೆದು ಬಂದರು. ತುಂಬ ದಣಿದವರಂತೆ ಗುಡಿಯ

ಬಳಿಯ ಒಂದು ಕಲ್ಲಿಗೆ ಒರಗಿ ಕುಳಿತರು. ಕಾಕ ತಾಳೀ ನ್ಯಾಯದಂತೆ, ಆ ದಿವಸ ಶುಕ್ರವಾರವಾಗಿತ್ತು; ಸಮಯ ಮುಸ್ಸಂಜೆಯಾಗಿತ್ತು. ಆ ವೇಳೆಗೆ ಗುಲಾಬಿ ತನ್ನ ಅಜ್ಜಿಯನ್ನು ಕೂಡಿಕೊಂಡು, ಹಣ್ಣುಕಾಯಿಗಳ ಹರಿವಾಣ ಹಿಡಿದುಕೊಂಡು, ದೇವಾಲಯಕ್ಕೆ ಹೋಗುತ್ತಿದ್ದಳು. ಸಾಹೇಬರಿಗೆ ಆ ಚೆಲುವೆಯ ದರ್ಶನವಾಯಿತು. ಅವರು ಸೂಳೆಗೇರಿಗೆ ಹಿಂದೆ ಹೋಗದವರಲ್ಲ. ಅವಳನ್ನು ತಿಳಿಯದವರೂ ಅಲ್ಲ. ಆದರೂ "ನಿನ್ನ ಮೊಮ್ಮಗಳಿರಬೇಕು ಅಲ್ಲವೆ?" ಎಂದು ನಗುತ್ತ, ಚಂದುವನ್ನು ಮಾತನಾಡಿಸಿದರು. ಆಕೆಯು ನಗುತ್ತ 'ಹೂಂ' ಎಂದು ನಾಲ್ಕು ನಿಮಿಷಗಳ ಕಾಲ ಮಾತನಾಡಿ ಹೊರಟು ಹೋದಳು. ತಲೆತಗ್ಗಿಸಿ ನಿಂತ ಮೊಮ್ಮಗಳು ಅಜ್ಜಿಯನ್ನು ಹಿಂಬಾಲಿಸಿದಳು. ಇದಾದ ಆರೆಂಟು ದಿನಗಳೊಳಗೆ, ಅವರ ದೌತ್ಯವನ್ನು ವಹಿಸಿ, ಖುದ್ದು ವೆಂಕಟುವಿನ ಸವಾರಿಯೇ ಚಂದುವಿನ ಮನೆಗೆ ಹೋಯಿತು. ಅವರ ಸಂಭಾಷಣೆಯ ಕಾಲದಲ್ಲಿ ವೆಂಕಟುವೇ ಅಂದುದುಂಟು "ಏನು ಚಂದು, ನಮ್ಮ ಸಾಹೇಬರಿಗೆ ಅಷ್ಟು ಪ್ರಾಯವಾಯಿತೆನ್ನುತ್ತೀಯ? ಸುಮಾರು ನಾಲ್ವತ್ತೈದಕ್ಕಿಂತ ಮೀರಿಲ್ಲ" ಎಂದಿದ್ದ. ಇದು ಬರಿಯ ನಾಲ್ಕು ವರ್ಷಗಳ ಕೆಳಗೆ ಹೇಳಿದಂತಹ ಘಟನೆ.

"ನೋಡುವ, ಏನವಸರ? ಅವಳಿನ್ನೂ ಸಣ್ಣವಳಲ್ಲವೆ" ಎಂದು ಹೇಳಿ ಚಂದು ವೆಂಕಟುವನ್ನು ಕಳುಹಿಸಿಕೊಟ್ಟಳು. ಅವಳ ಮನಸ್ಸಿಗೆ ಬೇರೊಂದು ಬಗೆಯ ಸಂಕಟ ಪ್ರಾಪ್ತವಾಯಿತು. 'ತಾವು ಬರಿಯ ಹಣದ ಮುಖವನ್ನು ನೋಡುವುದಲ್ಲ; ಕುಲದ ವಿಚಾರವನ್ನೂ ಗಮನಿಸಬೇಕಾಗುತ್ತದೆ. ತಮ್ಮ ಮನೆಯವರು ಈ ತನಕ ಉತ್ತಮ ಜಾತಿಯವರ ಸಂಬಂಧ ಬೆಳೆಯಿಸಿದವರು. ಅವಳೇನೆ ಒಂದು ಕಾಲದಲ್ಲಿ, ಬ್ರಾಹ್ಮಣರಲ್ಲದ ಇನ್ನೊಂದು ಸಂಬಂಧ ಬಂದಾಗ, ಅದನ್ನು ನಿರಾಕರಿಸಿ,ಬ್ರಾಹ್ಮಣರಾದ ಹೆಗ್ಗಡೆಯವರ ಕೈಹಿಡಿದಳು. ಈಗ ಅರ್ಥಾತ್ ಸಂಬಂಧವಿಲ್ಲದಂಥ ಅನ್ಯರೊಡನೆ ಬಾಂಧವ್ಯ ಬೆಳೆಸುವುದು ಅವಳಿಗಿಷ್ಟಿಷ್ಟೂ ಸಮನೆನಿಸಲಿಲ್ಲ. ತಮ್ಮ ಸಮಾಜದೊಳಗೆ ಒಂದು ಕಟ್ಟುನಿಟ್ಟು, ಊರಿನ ಜಾತೀಯತೆಗೆ ಸಮನಾದ ನಿಯಮಗಳನ್ನಿರಿಸಿಕೊಂಡಿದ್ದ ಸಂಪ್ರದಾಯದಲ್ಲಿ ಅವಳು ಬೆಳೆದು ಬಂದವಳು.

ಆ ಕಾರಣದಿಂದಲೇ ಏನೋ, ನಮ್ಮ ಸಾಹೇಬರ ಮೊದಲನೆಯ ಪ್ರೇಯಸಿಯು ಅದೇ ಊರಿನವಳಾಗಿರಲಿಲ್ಲ. ಸಾಹೇಬರು ಬಹುವಾಗಿ

ತಲಾಸಿಮಾಡಿ,ಕಾರವಾರದಿಂದ ಒಬ್ಬ ಚೆಲುವೆಯನ್ನು ಕರೆಸಿಕೊಂಡು, ಮನೆ ಕಟ್ಟಿಸಿಕೊಟ್ಟು, ರಸಿಕಜೀವನವನ್ನು ಸಾಗಿಸಿದರು. ಬಹುದಿನಗಳಿಂದಲೂ ಕಾರವಾರದ ಕಲಾವತಿ ಮುಗುದುಮ್ ಸಾಹೇಬರ ಆಸಾಮಿಯೆಂದು ಲೋಕ ಪ್ರಸಿದ್ಧವಾಗಿತ್ತು. ಆಕೆ ಅಷ್ಟೊಂದು ಚೆಲುವೆಯಲ್ಲ. ತುಂಬ ಶರೀರದಾರ್ಢ್ಯ ವುಳ್ಳ ಎಣ್ಣೆಗೆಂಪು ಜೀವ; ಹಿಂದುಸ್ಥಾನಿ ಸಂಗೀತದಲ್ಲಿ ನುರಿತವಳು. ಸಿತಾರ್ ಹಿಡಿದು ಬಾರಿಸಿದಳೆಂದರೆ, ಕತ್ತಲಲ್ಲಿ ಅವಳ ಮನೆಯ ಬೇಲಿಯ ಹತ್ತಿರ ಹತ್ತೆಂಟು ಮಂದಿ ಕಿವಿ ನಿಮಿರಿಸಿಕೊಂಡು ಕೇಳುತ್ತಿರುತ್ತಾರೆ. ಪ್ರತಿನಿತ್ಯವೂ ರಾತ್ರಿ ಹತ್ತು ಗಂಟೆಯ ಹೊತ್ತಿಗೆ, ಆಳೊಬ್ಬನನ್ನು ಜೆತೆಗೆ ಕರೆದುಕೊಂಡು ಸಾಹೇಬರು ಅಲ್ಲಿಗೆ ಬಂದರೆಂದರೆ, ತಾಸೆರಡು ತಾಸುಗಳ ಬೈಠಕು ನಡೆಯು ತ್ತದೆ. ಅವರು ಅಲ್ಲಿ ಕುಳಿತಿದ್ದು, ತೈನಾತಿಯಿಂದ-ಗುಡುಗುಡಿ ತುಂಬಿಸಿ, ಹೊತ್ತಿಸಿ, ದಿಂಬಿಗೊರಗಿ ಹಾಡನ್ನು ಕೇಳುತ್ತಿರುತ್ತಾರೆ. ಏನೋ ಒಂದು ಶೋಕಿಯದು! ಅವರು ಬರುವ ಮೊದಲೇ ಗಾಯನ ಕಚೇರಿಯು ತೊಡಗ ಬಾರದೆಂದಿಲ್ಲ. ಅವಳ ಮನೆಯ ಓಣಿಯಲ್ಲಿ ಸಿತಾರ ಗಾನ ಕೇಳುವುದಕ್ಕೆ ಜನ ಕಿವಿಯೊಡ್ಡಿ ನಿಂದಿರಬಾರದೆಂದಿಲ್ಲ. ಸಾಹೇಬರು ಅಂಥವರನ್ನು ಕಂಡರೆ— "ಯಾತಕ್ಕೆ; ಬನ್ನಿ" ಎಂದು ಒಬ್ಬಿಬ್ಬರನ್ನಾದರೂ ಕರೆದುಕೊಂಡು ಹೋಗಿ, ಆಕೆಯ ಸಂಗೀತದ ಇಂಪನ್ನು ಉಣಿಸುವುದೂ ಉಂಟು. ಸುಮಾರು ಹದಿ ನೈದು ವರ್ಷಗಳಕಾಲ ಕಲಾವತಿಯು ಅವರ ಗೌರವದ ಪ್ರೇಯಸಿಯಾಗಿ ದ್ದಳು. ಆ ಮೇಲೆ ಎರಡು ವರ್ಷಗಳ ಕಾಲ ಕ್ಷಯರೋಗಕ್ಕೆ ತುತ್ತಾಗಿ, ನರಳಿ, ತೀರಿಕೊಂಡಳು. ಮತ್ತೊಂದು ವರ್ಷಕಾಲ ಅವಳ ಸಾವಿನ ನೋವು ಸಾಹೇಬರ ಅಂತರಂಗದಲ್ಲಿ ಮಾಸದೆ ಉಳಿಮಕೊಂಡಿತ್ತು. ಅನಂತರ-ಜನರ ಬಾಯಿಂದ ಕೇಳಿ, ತನ್ನ ಕಣ್ಣಿಂದ ಪರಾಂಬರಿಸಿ, ಚೆಲುವಿಗೆ ಮನಸೋತು ದಿದ್ದರೆ ಅದು ಗುಲಾಬಿಯ ವಿಚಾರದಲ್ಲಿ ಮಾತ್ರ. ಹಾಗೆಂದು ವೆಂಕಟು ದೂತತ್ವ ವಹಿಸಿ ಹೋದಾಗಲೆಲ್ಲ 'ಅವಳು ಚಿಕ್ಕವಳು' ಎನ್ನುತ್ತಾಳೆ ಅಜ್ಜಿ.

"ಅದರ ಅರ್ಥ ನಾನು ಮುದಿಯೆ!" ಎನ್ನುವಂತಾಯಿತು ಸಾಹೇಬರು. ವೆಂಕಟುವಿನ ದೌತ್ಯ ಪ್ರಯೋಜನವಾಗಲಿಲ್ಲವೆಂದು, ಶ್ಯಾಮನ ಮುಖಾಂ ತರ ನೇರಾದ ಸಂಧಾನ ನಡೆಸತೊಡಗಿದರು. ಅಂತೂ ಶ್ಯಾಮನ ಅಧಿಕಾರ ದಿಂದ, ವಾಕ್ ಚಾಪಲ್ಯದಿಂದ, ಚಂದುವಿನ ಜಾತಿಯ ಭೀತಿತೊಲಗಿತೆಂದು ಕಾಣುತ್ತದೆ. ವಾದ್ಯ,ವೈಭವಗಳಿಂದ ತುಂಬು ಯೌವನೆಯಾದ ಗುಲಾಬಿಯು

ಅಲಂಕಾರಭರಿತಳಾಗಿ,ಹರಿವಾಣದಲ್ಲಿ ಹೂವು, ಪನ್ನೀರು, ಹಣ್ಣು ಕಾಯಿಗಳ ನ್ನಿರಿಸಿಕೊಂಡು, ಅಮ್ಮನವರ ಗುಡಿಗೆ ಹೋದ ದಿವಸ— ಈ ಗುಲಾಬಿ ಹೂ ಯಾವನೋ ಒಬ್ಬ ಭಾಗ್ಯಶಾಲಿಗೆ ಸಮರ್ಪಿತವಾಯಿತು — ಎಂದು ಜನರಿಗೆ ತಿಳಿಯಿತು. ಆ ದಿನ ಊರಿನ ಹಲವು ತರುಣರಿಗೆ ಆದ ನಿರಾಶೆಯಾಗಲೀ, ಅಸೂಯೆಯಾಗಲಿ–ಅಷ್ಟಿಷ್ಟಲ್ಲ.

ಗುಲಾಬಿಯು ಶಾಲೆಯಲ್ಲಿ ಓದು ಕಲಿತಂಥ ಹುಡುಗಿಯೂ ಆಗಿದ್ದಾಳೆ. ಹೈಸ್ಕೂಲಿನ ಎಂಟನೆಯ ಸ್ಟೇಂಡಾರ್ಡಿನ ವರೆಗೆ ಓದಿದ್ದಳು. ಅನಂತರ, ಅವಳ ಮಾವ ಶ್ಯಾಮು, ಅವಳನ್ನು ಬೇಕೆಂದೇ ಶಾಲೆ ಬಿಡಿಸಿದ; ಆಕೆ ಎಲ್ಲರ ಪಾಲಿಗೆ ಸುಲಭವಾಗಬಾರದೆಂಬುದರಿಂದ. ಆ ಅನುಮಾನಕ್ಕೆ ಕಾರಣವೂ ಇತ್ತು. ಅವಳಿಗೆ ಓದುಬರಹ ಬರುತ್ತದೆ–ಎಂಬುದರಿಂದ, ರಾಯಭಾರವಿಲ್ಲದೆ ಅವಳ ಪ್ರಸನ್ನತೆಯನ್ನು ಪತ್ರಮುಖೇನ ಗಳಿಸಬೇಕೆಂದು ಪ್ರಯತ್ನಿಸಿದವರೂ ಇದ್ದಾರೆ. 'ಆ ಚಂದುವೆಂದರೆ ಮುದಿಗೂಬೆ! ಎಷ್ಟುಬೇಡಿಯಾಳೋ! ಸುಬ್ರಾಯ ಹೆಗ್ಗಡೆಯವರನ್ನು ಮುಳುಗಿಸಿದವಳೇ ಅವಳು' ಎಂಬ ಊರ ಪ್ರತೀತಿಯನ್ನು ನಂಬಿದವರು, ತಮ್ಮ ಆಸೆ ತಡೆಹಿಡಿದು ಮೂಕರಾಗಬೇಕಾಯಿತು. ಆದರೆ ಆ ವಿಚಾರದಲ್ಲಿ ಸ್ವತಃ ಗುಲಾಬಿಯ ಮನಸ್ಸನ್ನು ಕದಲಿಸಿದ ತರುಣರೂ ಇದ್ದರು. ಅದು ಅವಳ ಶಾಲೆಯ ಜೀವನದಲ್ಲುಂಟಾದ ಪರಿಚಯದ ಪರಿಣಾಮ. ಅಂಥವರಲ್ಲಿ ನಮ್ಮ ವಾಸಪ್ಪನವರ ಮಕ್ಕಳಲ್ಲಿ ಒಬ್ಬನಿದ್ದ. ಹಿರಿಯ ವೈಕುಂಠ ಓದನ್ನು ಅರ್ಧನಿಲ್ಲಿಸಿ ಅಂಗಡಿಯಲ್ಲಿ ತಂದೆಗೆ ನೆರವಾಗಲು ಕುಳಿತ. ಅವನ ಬೆನ್ನಿಗೆ ಬಂದ ಮತ್ತೂ ನಾಲ್ವರು ಸೋದರರಿದ್ದಾರೆ. ಅಲ್ಲದೆ ಅವರ ತಮ್ಮಂದಿರ ಮಕ್ಕಳು ಆರೇಳು ಮಂದಿ ಇದ್ದಾರೆ. ಹೀಗಾಗಿ–ವಾಸಪ್ಪ ಸಾಹುಕಾರರ ಮನೆಯೆಂಬುದು ಹುಡುಗರಿಂದಲೂ, ತರುಣರಿಂದಲೂ ತುಂಬಿದ್ದ ಮನೆಯಾಗಿತ್ತು. ಶಾಲೆಗೆ ಹೋಗಿ ಬರುತ್ತಿರುವಾಗ, ವಿರಾಮದಲ್ಲಿ, ಊರೆಲ್ಲ ಸುತ್ತುತ್ತಿರುವ ಮಕ್ಕಳಮೇಲೆ, ಕಣ್ಣಿಟ್ಟು ಕುಳಿತಿರುವುದು ಯಾವ ತಂದೆಗೂ ಸಾಧ್ಯವಲ್ಲದ ಮಾತು; ವಾಸಪ್ಪ ಸಾಹುಕಾರರಿಗೂ ಅದು ಅಸಾಧ್ಯವೇ?

ವೈಕುಂಠನ ತಮ್ಮ ಮಾಧವನಿಗೆ, ಆಗಲೇನಾದರೂ ಹದಿನೆಂಟು ವಯಸ್ಸಿರಬಹುದು. ಅವನು ಮೆಟ್ರಿಕ್ ಪರೀಕ್ಷೆಗೆ ಕುಳಿತಿರುವಾಗಲೇ ಗುಲಾಬಿ ನಾಲ್ಕನೆಯ ಸ್ಟೇಂಡಾರ್ಡಿನಲ್ಲಿ ಓದುತ್ತಿದ್ದಳು. ಆ ದಿನಗಳಲ್ಲೇ, ಅವರವರೊಳಗೆ ಕಾಗದ ಪತ್ರಗಳು ನಲಿದಾಡುತ್ತಿದ್ದುವೆಂಬ ಸುದ್ದಿ ಹಬ್ಬಿತ್ತು. ಅನೇಕ

ತಂದೆ ತಾಯರು–'ಈ ಬೀದಿಯ ಹುಡುಗಿಯರೆಲ್ಲ ಓದಿನ ನೆಪದಿಂದ ಶಾಲೆಗೆ ಸೇರಿ, ನಮ್ಮ ಮಕ್ಕಳನ್ನು ಕೆಡಿಸುವುದಕ್ಕೊಂದು ದಾರಿಯಾಯಿತು' ಎನ್ನುತ್ತಿದ್ದುದುಂಟು. ಅದೂ ಶಾಲೆಯ ಹೊಸತರಲ್ಲಿ. ಸಾರ್ವಜನಿಕ ಶಾಲೆಯೆಂದ ಬಳಿಕ ಕುಲವಂತರೂ ಹೋಗುತ್ತಾರೆ; ಕಲಾವಂತರೂ ಹೋಗುತ್ತಾರೆ. ಏನು ಮಾಡಲು ಬರುತ್ತದೆ? ಶಾಲೆಯೇ ಏನು ಕೆಡುಕು ಮಾಡೀತು? ಊರ ಜನಕ್ಕೆ ಕಣ್ಣು, ಕಿವಿ, ಬಾಯಿಗಳಿರುವಷ್ಟು ದಿನ ಸಂಧಾನಕ್ಕೆ ಶಾಲೆಯೊಂದೇ ಅವಕಾಶವೇನು? 'ಮದ್ದು' ಯಾನೆ 'ಮಾಧವ' ಶಾಲೆಯ ವೇಳೆಯನ್ನು ಅದಕ್ಕಾಗಿ ವ್ಯಯಿಸಿದವನಲ್ಲ. ಗುಲಾಬಿಯನ್ನು ಶಾಲೆಯಲ್ಲಿ ಕಂಡವನಾದುದರಿಂದ ಅವಳ ಮೇಲೆ ಅವನಿಗೆ ಮೋಹ ಪ್ರಾಪ್ತವಾಯಿತು. ಮೆಟ್ರಿಕ್ ಮುಗಿಸಿ, ಓದುವುದನ್ನು ನಿಲ್ಲಿಸಿದ. ಸಮವಯಸ್ಕ ತರುಣರೊಡನೆ ಊರಲ್ಲಿ ಅಲೆದಾಡತೊಡಗಿದ. ಕಾಫಿ, ಉಪಹಾರಗಳ ಲಂಚದಿಂದ ತರುಣರ ಗುಂಪಿಗೆ ಯಜಮಾನನೂ ಆದ. ಗುಲಾಬಿಯ ಅಜ್ಜಿ, ಮಾವಂದಿರು ಮನೆಯಲ್ಲಿಲ್ಲದ ವೇಳೆಯನ್ನು ಸಾಧಿಸಿ, ಗುಲಾಬಿಯ ಸ್ನೇಹವನ್ನು ಸಂಪಾದಿಸಿದ–ಎನ್ನುತ್ತಾರೆ. ಆದರೆ ಇಷ್ಟು ನಿಜ, ಅವಳ ಮಾವನಾದ ಶ್ಯಾಮನು–ಸಾಹೇಬರೊಡನೆ ಸಂಬಂಧವನ್ನು ಗಂಟುಹಾಕಿದಾಗ, ಆ ಅಜ್ಜಿ ಮೊಮ್ಮಕ್ಕಳಿಬ್ಬರೂ–ಕೆಲವು ದಿನ ಸಂತೋಷಚಿತ್ತರಾಗಿರಲಿಲ್ಲ. ಅಜ್ಜಿಗೆ ಜಾತಿ ಸಂಬಂಧವಾದ ಆತ್ಮಸಾಕ್ಷಿ ಕೊರೆಯುತ್ತಿತ್ತು, ಎನ್ನಬಹುದು. ಮೊಮ್ಮಗಳನ್ನು, ಮದ್ದುವಿನ ಮೇಲಿನ ಆಸೆ ಕಾಡುತಿತ್ತು. ಶ್ಯಾಮ ಹಣ, ಚಿನ್ನಾಭರಣಗಳ ಆಸೆ ತೋರಿಸಿ ತನ್ನ ತಾಯಿಯನ್ನು ಸಂತೋಷಗಳಿಸಿದಷ್ಟು ಸುಲಭದಲ್ಲಿ ಸೊಸೆಯನ್ನು ಒಲಿಸದಾದ. 'ನನ್ನನ್ನು ಅವರು ಎಂದಿಗೂ ಬಿಡುವುದಿಲ್ಲವೆಂದು ಕೈ ಮೇಲೆ ಕೈಯಿರಿಸಿ ಆಣೆ ಮಾಡಿದ್ದಾರೆ" ಎಂದು, ಗುಲಾಬಿಯು ಮಾಧವನ ಪರವಾಗಿ ವಾದಿಸಿದರೆ, 'ನಿನಗೆ ಮರುಳು! ಅವನು ಹುಡುಗ; ಬುದ್ಧಿಯಿಲ್ಲ. ಅವನ ತಂದೆ ವಾಸಪ್ಪಯ್ಯನವರಿಗೆ ಇದೆಲ್ಲ ತಿಳಿದು ಬಂದರೆ, ಸಿಟ್ಟಾಗಿ, ಅವನನ್ನು ಮನೆಯಿಂದ ಹೊರತಳ್ಳಿದರೂ ಆಶ್ಚರ್ಯವಿಲ್ಲ. ಆಗ ನೀನು ಕಾಸಿಲ್ಲದ ಮಾಧವನ ಬೆನ್ನು ಹಿಡಿದರೆ ನಿನ್ನ ಗತಿಯೇನಾದೀತು?" ಎಂದು ಬೆದರಿಕೆಯನ್ನು ಹಾಕಿದ. 'ನಿಮ್ಮ ಮನೆಯವರಿಗೆ ತಿಳಿದರೆ ಏನಾದೀತು!" ಎಂಬ ಮಾತನ್ನೇ ಆಕೆ ಮಾಧವನೊಡನೆ ಹೇಳಬೇಕಾಯಿತು. ಆತ "ಏನಾದೀತು!" ಎಂಬ ಮರುಮಾತನ್ನೇ ಹೇಳಬೇಕಾಯಿತು. ಅಲ್ಲದೆ ಅವನು ಈ ತನಕ ಅವಳ ಕೈಮೇಲೆ

ತಂದಿರಿಸಿದ ಹತ್ತೆಂಟು ರೂಪಾಯಿಗಳಾದರೂ ತಂದೆಯ ಅಂಗಡಿಯಿಂದ ಕದ್ದುವು. ಅದನ್ನು ಬಲ್ಲಶ್ಯಾಮು, ಉಪಾಯವಾಗಿ "ಪ್ರಸ್ತದ ಖರ್ಚಿಗೆ ನಗದು ಎರಡು ಸಾವಿರ ಕೊಡುತ್ತೀರಾದರೆ ಅಡ್ಡಿಯಿಲ್ಲ" ಎಂಬ ಮಾತನ್ನು ಅವಳ ಬಾಯಿಯಿಂದಲೇ ಅನಿಸಿ, ಮಾಧು ಸಮೀಪಬಾರದಂತೆ ಮಾಡಿದ. ಬದಲು ಸಾಹೇಬರು ಕೊಡಿಸಿದ ನಗ, ಸೀರೆ, ನಗದುಗಳನ್ನು ಅವಳ ಮುಂದಕ್ಕಿರಿಸಿ ಸಮಾಧಾನ ಪಡಿಸಿದ. ಇದರಿಂದಾಗಿ—ಮುದ್ದುವಿನ ಮನಸ್ಸಿನಲ್ಲಿ, ತನ್ನ ಪ್ರೇಯಸಿಯನ್ನು ಅಪಹರಿಸಿದ ಬಗ್ಗೆ, ಸಾಹೇಬರ ಮೇಲಿನ ಕೋಪ ಬಹು ದಿನ ಉಳಿದುಕೊಂಡಿತು. ಅಲ್ಲದೆ ಊರವರ 'ಗುಸುಗುಸು' ಮಾತುಗಳನ್ನು ನಂಬುವುದಕ್ಕಿದ್ದರೆ, 'ನಿಜವಾಗಿಯೂ ಗುಲಾಬಿಯ ಜೀವ, ಪ್ರೇಮಗಳೆರಡೂ ಮುದ್ದುವಿನ ಮುಷ್ಟಿಯಲ್ಲಿವೆ; ಹಣದ ದಂಡ ತೆರುವವರಷ್ಟೇ ಮುಕಾದಮ್ ಸಾಹೇಬರು.' ಇದು ನಿಜವಿರಲಿ, ಸುಳ್ಳಿರಲಿ--ಈ ವಾರ್ತೆಯು ಸಾಹೇಬರ ಕಿವಿಯನ್ನಂತು ಸೇರಿಲ್ಲ. ಜನಸಾಮಾನ್ಯರ ತಿಳಿವಿನಲ್ಲಿ ಗುಲಾಬಿಯು ಸಾಹೇಬರ ನಾಯಕಸಾನಿಯೆಂದು ಪ್ರಸಿದ್ಧವಾಗಿದೆ.

ಇಂತಹ ವಿಚಾರಗಳಲ್ಲಿ ಕಾಳೂರಿನ ರಸಿಕ ಪ್ರಪಂಚವು ಬಹುದಿನ ಗಳಿಂದಲೂ ಹೆಸರಾದುದು. ಅಥವಾ ಹಳೆಗಾಲದ ಹೆಸರಾದ ಪೇಟೆ ಪಟ್ಟಣ ಗಳೆಲ್ಲ ಹೀಗೆಯೇ ಇರುವಂಥವು. ಮನೆ, ಜಮೀನು, ಅಂದರೆ ಶ್ರೀಮಂತಿ ಕೆಯ ವೈಭವವುಳ್ಳ ಯಾವನೇ ಆಗಲಿ, ತನ್ನ ಪಾಡಿಗೆ ತಾನು ಸಂಸಾರಮಾಡಿ ಕೊಂಡಿರುವುದು ಒಂದು ಹೆಚ್ಚಿನ ಸಂಗತಿ-ಎನಿಸುತ್ತಿರಲಿಲ್ಲ. ತಾವು ರಸಿಕರು, ದರ್ಬಾರಿಗಳು-ಅನಿಸಿಕೊಳ್ಳುವುದಕ್ಕೆ ಈ ಬಗೆಯಲ್ಲಿ ಒಬ್ಬ ಪ್ರೇಯಸಿಯನ್ನು ದೊರಕಿಸಬೇಕು. ಹಳ್ಳಿಯ ಶ್ರೀಮಂತರು ಸಹ ನಾಗರಿಕರೆನಿಸಿಕೊಳ್ಳುವು ದಕ್ಕೆ ಪೇಟೆಯ ಇಂಥ ಒಂದೊಂದು ಮನೆಯ ಸಂಬಂಧವನ್ನು ಕಟ್ಟಿಕೊಳ್ಳು ವುದುಂಟು. ಇದರಿಂದ ಎರಡೂ ಮನೆಗಳಿಗೆ ಒಂದು ತೆರನ ಗೌರವ-ಎಂದು ತಿಳಿಯುವವರೂ ಉಂಟು. ಅದರಲ್ಲಿ ಗೌರವಹೀನವಾದ ಪೋಲಿತನ ಎಂದರೆ ನಿಶ್ಚಿತವಾದ ಮನೆ, ಪ್ರೇಮ, ಸ್ನೇಹಗಳಿಲ್ಲದ, ಕಂಡವರನ್ನು ಹಿಂಬಾಲಿಸುವ ಜೀವನ. ಅಂತಹ 'ಬಿಡು ಸೂಳೆ'ಯರ ವಿಚಾರದಲ್ಲಿ ಕಾಳೂರಿನ ಮನೆ ತನಸ್ಥ ಕಲಾವತಿಯರಿಗೂ ಅಭಿಮಾನವಿರುವುದಿಲ್ಲ. ಅಂಥವರ ಮನೆಗಳಿಗೆ ಊಟ ಪಾಠಕ್ಕೆ ಅವರು ಹೋಗುವುದೂ ಇಲ್ಲ. ಹೆಚ್ಚೇನು? ಮುಗುದುಮ್ ಸಾಹೇಬರಿಗೆ ಒಂದು ದಿನ ಗುಲಾಬಿ ಸಂದಳು—ಎಂದು ಖಚಿತವಾದ ಮೇಲೆ,

ಅವಳ ಬಳಗದ ಆಚೀಚಿನ ಮನೆಯವರು, ಊಟಕ್ಕೆ ಕರೆದರೆ ತಪ್ಪಿಸಿಕೊಳ್ಳು ತ್ತಾರೆ. ಅಂಥ ಪರಿಣಾಮವನ್ನು, ದುಡ್ಡಿಗಾಗಿ ಹಸಿದ ಶ್ಯಾಮನು ಸಹ ನಿರೀಕ್ಷಿಸಿರಲಿಲ್ಲ.

ತನ್ನ ಚಾತುರ್ಯದಿಂದ ದೊಡ್ಡ ಬೇಟೆಯೊಂದನ್ನು ತನ್ನ ಸೊಸೆಗೆ ಸಂಪಾದಿಸಿದ್ದೇನೆ ಎಂಬ ಹೆಮ್ಮೆ-ಒಂದೆರಡು ವರ್ಷಕಾಲ ಶ್ಯಾಮನಲ್ಲಿತ್ತು. ಆದರೆ ಅದರ ಕೊನೆಯೇನಾದೀತು ಎಂಬುದನ್ನು ತಿಳಿಯುವ ತನಕ ದೇವರು ಅವನಿಗೆ ಆಯುಷ್ಯವನ್ನು ಕೊಡಲಿಲ್ಲ. ಈ ನಂಟುತನವು ಬೆಳೆದು ಬಂದ ಎರಡು ವರ್ಷಗಳಲ್ಲೇ ಆತ ತೀರಿಕೊಂಡ. ಮುದುಕಿ-ಚಂದುವಿಗೆ ಮನೆಯಲ್ಲಿ ತನ್ನವರೆಂಬ ಗಂಡಸಿನ ಆಶ್ರಯವೇ ಶೂನ್ಯವಾಯಿತು. ಆದರೆ ಸಾಹೇಬರ ಸವಾರಿಯು ದಿನ ಬಿಟ್ಟು ದಿನವಾದರೂ ಅವರ ಮನೆಗೆ ಬರುತ್ತಿದ್ದುದರಿಂದ, ಜೀವನದ ಚಿಂತೆಗೆ ಅವಕಾಶವಿರಲಿಲ್ಲ. ಮಗಳು ಸುಖಿಯಾಗಿದ್ದಾಳೆಂಬುದೇ ಅವಳ ತಿಳುವಳಿಕೆ. ಅರಿವೆ, ಅಲಂಕಾರಗಳಿಗೂ ಕೊರತೆ ಬರಲಿಲ್ಲ. ಉಳಿದವರು ಬಾಯಲ್ಲಿ "ಮುದಿ ಸಾಹೇಬರು ಈ ವಯಸ್ಸಿನಲ್ಲಿ ಈ ಹುಡುಗಿಗೆ ಮರುಳಾಗಿ, ತಮ್ಮ ಮನೆಮಾರುಗಳನ್ನು ತೀರ ಕಳೆದುಕೊಳ್ಳದಿದ್ದರಾಯಿತು" ಎಂದು ಹೇಳಿದ್ದೂ ಉಂಟು.

ನಿಜವಾದ ಸ್ಥಿತಿಯೇನೋ ಹಾಗಿರಲಿಲ್ಲ. ಊರ ಜನರಲ್ಲಿ ಹಲವರ ಕಣ್ಣು ಗುಲಾಬಿಯಂಥವಳ ಮೇಲೆ ಬಿದ್ದಿದ್ದರೆ, ಅದರಲ್ಲಿ ಸೋಜಿಗವೇನಿಲ್ಲ. ಅವಳು ತಮಗಿಲ್ಲದೆ ಹೋದಳೆಂಬ ನಿರಾಶೆಯ ಮಾತುಗಳು, ಅಸೂಯೆಗೆ ಎಡೆಗೊಡುವುದೂ ಸಹಜ. ಆದರೆ ಸ್ವತಃ ಗುಲಾಬಿ ಸುಖಿಯಾಗಿದ್ದಾಳೆಯೇ ಎಂದು ವಿಚಾರಿಸುವ ತೊಂದರೆಯನ್ನು ಯಾರು ತಾನೆ ತೆಗೆದುಕೊಳ್ಳುತ್ತಾರೆ? ಆಚೀಚೆ ಮನೆಗಳ ಪರಿಚಿತರೂ, ಮಿತ್ರರೂ, ಸ್ವಜಾತಿಯವರೂ ಅನೇಕ ವೇಳೆ ಚಂದುವನ್ನು ಕಂಡು "ಏನೇ, ನಿನ್ನ ಮೊಮ್ಮಗಳು ಮೊದಲಿನ ಹಾಗಿಲ್ಲ ವಲ್ಲ. ಅವಳಿಗೆಷ್ಟು ಪ್ರಾಯ? ಇಪ್ಪತ್ತಾದರೂ ಆಗಿರಬೇಕು. ಇಷ್ಟರಲ್ಲಿಯೇ ಗರ್ಭಿಣಿಯಾಗಬೇಕಿತ್ತು. ಅದಿಲ್ಲದೆಯೆ, ಅವಳು ವೈಯ್ಯಲ್ಲಿಷ್ಟು ಸೊರಗುವುದಕ್ಕೆ ಕಾರಣವೇನು?" ಎಂದು ಪ್ರಶ್ನಿಸುತ್ತಾರೆ. ನಿತ್ಯ ಕಾಣುತ್ತಲಿರುವುದರಿಂದಲೋ, ಮುದಿವಯಸ್ಸಿನಿಂದ ಕಣ್ಣಿಗೆ ಪರೆ ಬರುತ್ತಿರುವದರಿಂದಲೋ, ಮೊಮ್ಮಗಳ ಮುಖ ಕಳೆಗುಂದಿದೆ ಎಂಬುದನ್ನು ಚಂದು ಮನಗಾಣಳು. ತನ್ನ ಸಮಾಧಾನಕ್ಕಾಗಿ ಮೊಮ್ಮಗಳೊಡನೆ "ಎಲ್ಲರೂ ನೀನು ಸೊರಗಿದ್ದೀ ಅನ್ನು

ತ್ತಾರೆ. ಯಾಕೆ ಸೊರಗಬೇಕು? ತಿನ್ನಲಿಕ್ಕಿಲ್ಲವೇ? ಉಣ್ಣಲಿಕ್ಕಿಲ್ಲವೆ?" ಎಂದು ಅವಳೊಡನೆಯೇ ವಾದಿಸುತ್ತಾಳೆ, ಮತ್ತೂ ಕೆಲವು ಸಮಯ ಸರಿದ ಮೇಲೆ "ಹೂಂ, ನಿಜ–ಅವಳು ಮೊದಲಿನಂತೆ ಗೆಲುವಾಗಿಲ್ಲ, ಅವಳ ಮನಸ್ಸಿಗೆ ತನಗೆ ಮಕ್ಕಳಾಗದು; ತಾನು ತಾಯಾಗಲಾರೆ––ಎಂದು ಅನಿಸುತ್ತಿದೆಯೋ ಏನೋ" ಎಂಬ ತರ್ಕವನ್ನು ತನ್ನಲ್ಲಿಯೇ ಹೂಡತೊಡಗಿದ್ದಳು. ಅಂತಹ ಮಾತು ಬಂದಾಗ, ಗುಲಾಬಿಯ ಮುಖವು ಅಷ್ಟು ಚೆನ್ನಾಗಿ ಅವಳಿಗೆ ಕಾಣಿಸದೆ ಹೋದರೂ, ಅವಳ ಗದ್ಗದಿತ ಕಂಠವನ್ನು ಕೇಳಿ, "ಶ್ಯಾಮು ಅವಸರ ಮಾಡಬಾರದಿತ್ತು ನಿಜ. ಆದರೆ ನೀನೇನು ಅಷ್ಟು ದೊಡ್ಡವಳೇ?" ಎಂದು ಅಜ್ಜಿ ಮೊಮ್ಮಗಳನ್ನು ಸಮಾಧಾನಗೊಳಿಸಬೇಕಾಗುತ್ತಿತ್ತು.

ಈಗೀಗ ವಾರಕ್ಕೊಂದೆರಡು ಬಾರಿ ಮಹಾಂಕಾಳಿಯ ಗುಡಿಗೆ ಹಣ್ಣು ಕಾಯಿಗಳನ್ನು ತೆಗೆದುಕೊಂಡು ಹೋಗುವ ವಾಡಿಕೆಯನ್ನು ಗುಲಾಬಿ ನಿಲ್ಲಿಸಿಬಿಟ್ಟಿದ್ದಾಳೆ. ದಾರಿಯಲ್ಲಿ, ದೇಗುಲದ ಪ್ರಾಂಗಣದಲ್ಲಿ ಅವಳಿಗಾಗಿ ಕಣ್ಣುಸಿದು ನಿಂತಿರುವ ಮಾಧವನನ್ನು ಇದಿರಿಸುವ ಧೈರ್ಯ ಅವಳಲ್ಲಿಲ್ಲ. ನಿಶ್ಚಯಕ್ಕೂ ಅವಳ ಅಂತರಂಗ ಅವನಿಗಾಗಿ ಬೇಯುತ್ತಿತ್ತು. 'ತಾನು ಹಣಕ್ಕಾಗಿ ಮಾರಿ ಹೋದೆ; ಪ್ರೀತಿಗೆ ಸಲದಾದೆ' ಎಂದು ಅವಳ ಮನಸ್ಸು ಕಾಡುತ್ತಿತ್ತು. ಅವರ ಜತೆಗೆ, ತನ್ನ ಬಂಧನದಿಂದಾಗಿ ತನ್ನ ಯಾವತ್ತೂ ದೈಹಿಕ, ಮಾನಸಿಕ ತೃಪ್ತಿಗಳು ಮುರಿದುಹೋದುವು—ಎಂಬ ನಿರ್ಧಾರಕ್ಕೆ ಬಂದಿದ್ದಾಳೆ. ಅದನ್ನು ನೆನೆದಂತೆಲ್ಲ, ಅವಳ ತಾಯ್ತನದ ಬಯಕೆ ಅತಿರೇಕವಾದಂತೆಯೂ ಕಾಣುತ್ತಿದೆ. ಆದರೆ ಎಚ್ಚರ ತಪ್ಪಿದ ಜೀವನವನ್ನು ನಡೆಸುವುದಕ್ಕೆ ಅವಳಿಗೆ ಧೈರ್ಯ ಬಾರದೇ ಬಾರದು. ತಮ್ಮ ಹಿತ್ತಿಲಿಗೆ ಬಂದುಹೋಗುವ ದನಕರುಗಳ ಲೆಕ್ಕವೂ ಸಾಹೇಬರ ಕಿವಿಗೆ ಮುಟ್ಟುತ್ತದೆ–ಎಂಬುದನ್ನು ಅವಳು ಬಲ್ಲಳು. ಅವರಿಗೆ ಊರಲ್ಲಿರುವ ಪ್ರತಿಷ್ಠೆಯನ್ನು ತಿಳಿದೂ ಬಲ್ಲಳು. ಆದುದರಿಂದ ಮನೋವೇದನೆಗಳು ಎಷ್ಟಿವೆಯೋ ಅಷ್ಟನ್ನು ಮೌನವಾಗಿ ಅನುಭವಿಸ ತೊಡಗಿದಳು.

ಅಜ್ಜಿ, ಚಂದು ಮಾತ್ರ, ಅಮ್ಮನವರ ಗುಡಿಗೆ ಹೋಗಿ 'ನನ್ನ ಮೊಮ್ಮಗಳಿಗೊಂದು ಹೆಣ್ಣು ಕೂಸನ್ನು ಕೊಡು' ಎಂದು ಪ್ರತಿವಾರವೂ ತಪ್ಪದೆ ಪ್ರಾರ್ಥಿಸಿ ಬರುತ್ತಾಳೆ. ಅನೇಕ ಬಾರಿ ಮೊಮ್ಮಗಳನ್ನು ಬಲವಂತದಿಂದ ದೇವರ ಗುಡಿಗೆ ಹೊರಡಿಸಲು ಪ್ರಯತ್ನಿಸುತ್ತಾಳೆ. ಗುಲಾಬಿ ಮಾತ್ರ, ತನ್ನ

ಮನೆಯೇ ತನಗೆ ಸೆರೆಮನೆಯಾಗಲಿ—ಎಂಬ ಹಟದಿಂದ ಮನೆಯಲ್ಲಿಯೇ ಕುಳಿತಿರುತ್ತಾಳೆ.

ಇಂತಹ ಒಂದು ಸಮಯದಲ್ಲಿ ಮುಗುದುಮ್ ಸಾಹೇಬರು ಕುಮಟೆಯಲ್ಲಿರುವ ಮಗನ ಮನೆಗೆ ಹೋಗಬೇಕಾಗಿ ಬಂದಿತು. ಹೊರಟುಹೋಗುವ ಮುಂಚಿನ ದಿನ, ಅವಳ ಮನೆಗೆ ಹೋಗಿ "ಗುಲಾಬಿ, ನಾನೆಂಟು ದಿನ ಊರಲ್ಲಿಲ್ಲ" ಎಂದು ತಿಳಿಸಿಯೆ ಹೋದರು. ಊರಲ್ಲಿ ಸಾಹೇಬರಿರಲಿ, ಇಲ್ಲದಿರಲಿ –ಅವರ ತೈನಾತಿಗಳಲೊಬ್ಬನಾದ ವೆಂಕಟುವು, ಪ್ರತಿ ಸಂಜೆಯೂ ಅವರ ಮನೆಗೆ ಹರಟೆಹೊಡೆಯುವುದಕ್ಕೆ ಬರುತ್ತಾನೆ. ಮುದುಕಿಯನ್ನು ಮಾತನಾಡಿಸುತ್ತಾನೆ; ಗುಲಾಬಿಯ ಆರೋಗ್ಯವನ್ನು ಕೇಳುತ್ತಾನೆ. ಧನಿಯರ ವಿಚಾರದಲ್ಲಿ ನಾಲ್ಕು ಹೊಗಳಿಕೆಯ ಮಾತುಗಳನ್ನು ಹೇಳುತ್ತಾನೆ. ಹಡಗಿನ ಸುದ್ದಿ ಸಮಾಚಾರಗಳನ್ನು, ವ್ಯಾಪಾರದ ಕತೆಗಳನ್ನೂ, ಸಾಹೇಬರ ಕೊಲೊಂಬೊದಲ್ಲಿರುವ ಮಗನ ಕತೆಯನ್ನು ಹೇಳುತ್ತಾನೆ—ಅರ್ಥಾತ್ ಅವರ ಅಂಗಡಿ, ಭಂಡಸಾಲೆಗಳಲ್ಲಿ ಕೇಳಿದ್ದನ್ನೆಲ್ಲ ಹೇಳಿ, ಅಲ್ಲಿಂದ ತನ್ನ ಮನೆಗೆ ಹೋಗುತ್ತಿದ್ದ. ಅಂತಹ ಒಂದು ದಿನದಲ್ಲಿ, ಗುಲಾಬಿಯು ಸ್ಮರಣೆಯನ್ನು ಇನ್ನೂ ಮರೆತಿರಲಾಗದ ಮಾಧು, ಒಬ್ಬ ಚಿಕ್ಕ ಹುಡುಗನ ಮೂಲಕ ಅವಳಿಗೆ ಒಂದು ಪತ್ರವನ್ನು ಕಳುಹಿಸಿದ. ಆ ದಿನ ಚಾವಡಿಯಲ್ಲಿ ಅವಳೊಬ್ಬಳೇ ಕುಳಿತಿದ್ದಳು; ಅಜ್ಜಿ ಒಳಮನೆಯಲ್ಲಿದ್ದಳು. ಆಕೆ ಚೀಟಿ ನೋಡಿದಳು; ಓದಿದಳು. ಮಾಧವ ಈಗ ಯಾವ ವಹಿವಾಟಿನಲ್ಲಿದ್ದಾನೆಂಬುದೇ ಅವಳಿಗೆ ತಿಳಿಯದು. ಯಾವುದನ್ನೂ ಕೇಳಲು ಧೈರ್ಯವೂ ಬರಲಿಲ್ಲ. ಆತ ತಂದೆಯೊಡನೆ ಜಗಳವಾಡಿ ಬೇರೆಯೇ ಅಂಗಡಿ ತೆರೆದಿರುವ ಸುದ್ದಿ ಸಹ ಅವಳಿಗೆ ಸಿಕ್ಕಿರಲಿಲ್ಲ. ಈಗ ಮಾತ್ರ ಪತ್ರದ ದರ್ಶನದಿಂದ, ಹಳೆಯ ನೆನಹುಗಳೆಲ್ಲ ಉಕ್ಕಿ ಬಂದುವು—ಅವಳ ಮನಸ್ಸಿನಲ್ಲಿ ತನ್ನ ಬಾಳೆಲ್ಲ ಈ ಮುದಿಗೂಬೆಗಾಗಿ ಹಾಳಾಯಿತಲ್ಲ. ತಾನೇತಕ್ಕೆ ಅವರಿಗೆ ಮಾರುವೋಗಬೇಕು? ತನ್ನ ಜೀವ, ಮನಸ್ಸುಗಳು ತನ್ನದಲ್ಲವೇ—ಎಂಬ ಕ್ರಾಂತಿ ಉದ್ಭವಿಸಿತು. ಅವನ ಚೀಟಿಯನ್ನು ಕಂಡು ಮನಸ್ಸಿಗೆ ಏನೇನೆಲ್ಲ ಹೊಳೆಯಿತು. ಬಂದ ಹುಡುಗನೊಡನೆ, ಏನನ್ನೋ ಹೇಳಿ ಕಳುಹಿಸಿದಳು. ಆ ರಾತ್ರಿ ತನ್ನ ಪೂರ್ವದ ಇನಿಯನಿಗಾಗಿ ಕಾದು ಕುಳಿತಳು, ಅಲ್ಪಕಾಲದ ಆನಂದವನ್ನು ಆತನೊಡನೆ ಅನುಭವಿಸಿದಳು. ಅದರಿಂದ ಉತ್ತೇಜಿತಳಾಗಿ ಮುಂದಿನ ಜೀವನಕ್ಕೆ ಬೇರೊಂದು ದಾರಿ

ಹುಡುಕುವೆನೆಂಬ ಅಪೇಕ್ಷೆ ಅವಳಲ್ಲಿ ಹುಟ್ಟಿದರೂ, ಅದು ಕ್ಷೇಮಕರವಲ್ಲ ವೆಂಬ ಬೆದರಿಕೆಯೂ ಹುಟ್ಟಿತು.

ಇತ್ತ ವಾರಕ್ಕೆ ಏಳೇ ಏಳು ದಿನಗಳಲ್ಲವೆ? ಮುಗುದುಮ್ ಸಾಹೇಬರು ಕುಮಟೆಯಿಂದ ಮರಳಿ ಬಂದೂ ಬಂದರು. ಅವರು ಊರಲ್ಲಿರುವಷ್ಟು ಕಾಲ ಪ್ರಜ್ವಲಿಸಿದ ಆಸೆಯು ಉರಿಯದೆ, ತಿರುಗಿ ಅಂತರಂಗದಲ್ಲಿ ಹುದುಗಿಕೊಂಡು ಹೊಗೆಯಬೇಕಾಯಿತು. ಇನ್ನೊಮ್ಮೆ ಪ್ರಿಯನ ದರ್ಶನವು ಅಸಾಧ್ಯ. ಮಾಧು ವಿಗಾದರೂ ಅವಳನ್ನು ಬಹಿರಂಗವಾಗಿ ಕಟ್ಟಿಕೊಂಡು ಬೇರೊಂದು, ಊರಿಗೆ ಹೋಗಿ, ಜೀವನ ಮಾಡಿಯೇನು, ಎಂಬ ಧೈರ್ಯ ಬಂದಿರಲಿಲ್ಲ. ಅವನಿಗೂ ಲಗ್ನವಾಗಿತ್ತು; ಸಂಸಾರವಿತ್ತು. ಕುಟುಂಬದ ಮನೆಯ ಹಂಗನ್ನೂ ಸಂಪೂ ರ್ಣವಾಗಿ ಕಡಿದಿರಲಿಲ್ಲ.

ಈ ನಿರ್ಬಂಧದ ನಾಲ್ಕು ವರ್ಷಗಳು ಸರಿದುವು. ಆ ಕೊನೆಯ, ಮೂರುನಾಲ್ಕು ತಿಂಗಳಲ್ಲಿ,ಅವಳಲ್ಲಿ ಗರ್ಭಿಣಿಗೆ ಸಹಜವಾದ ವಾಂತಿ, ಮೊದ ಲಾದ ಚಿಹ್ನೆಗಳು ತೋರಿ ಬರುತ್ತಲೆ, ಚಂದುವಿಗೆ ಸಂತೋಷ, ಕಳವಳಗಳೆ ರಡೂ ಉಂಟಾದುವು. ಮಗಳ ಆರೋಗ್ಯದ ಸಲುವಾಗಿ ಕಳವಳ; ಅಮ್ಮ ನವರು ಮುಂದಿನ ಸಂತಾನವನ್ನು ಅನುಗ್ರಹಿಸಿ ತನ್ನ ಕೋರಿಕೆಯನ್ನು ಈಡೇರಿಸುತ್ತಿದ್ದಾಳೆಂಬ ಆನಂದ. ಈ ಆನಂದದಲ್ಲೊಂದು ಪಾಲು ಸಾಹೇಬ ರಿಗೂ ಇದ್ದಿತು.

ಸಾಹೇಬರಿಗೆ ಕಾಳೂರಿನಲ್ಲಿ ಹಲವಾರು ಮನೆಗಳೂ, ಪೇಟೆಯಲ್ಲಿ ಆರೆಂಟು ಅಂಗಡಿಗಳೂ ಇದ್ದುವು. ಮಧ್ಯ ಪೇಟೆಯಲ್ಲಿರುವ ಅವರ ಎರಡು ಸಣ್ಣ ಅಂಗಡಿಗಳನ್ನು ಒಂದುಗೂಡಿಸಿ, ಅದರಲ್ಲಿ ಶಿವಪ್ಪ ಡಾಕ್ಟರರು ತಮ್ಮ ದವಾಖಾನೆ ತೆರೆದಿದ್ದಾರೆ. ಬಾಡಿಗೆ ಗೊತ್ತುಮಾಡಿದವರು ಕಿಟ್ಟಪ್ಪ ಮಾಸ್ತ ರರು. ಸಾಹೇಬರಿಗೆ ಶಿವಪ್ಪನವರು ಅವರ ಮಗನೆಂಬುದು ಗೊತ್ತೇ ಹೊರತು ತಮ್ಮ ಮನೆಯ ಕಾಯಿಲೆ ಕಸಾರೆಗಳಿಗೆ ಅವರನ್ನು ಕರೆಯಿಸಿದವರಲ್ಲ. ಮೊನ್ನೆ ಮೊನ್ನೆಯ ತನಕ ಆಸ್ಪತ್ರೆಗೇನೆ ಜನ ಕಳುಹಿಸುತಿದ್ದರು. ಆಸ್ಪತ್ರೆಯ ಡಾಕ್ಟರ ರಿಗೂ ಅವರಿಗೂ ತುಂಬ ಸ್ನೇಹವಿದೆ. ಡಾಕ್ಟರರು ತಮ್ಮ ಕಾರಿನಲ್ಲಿ ಕುಳಿತು, ಅವರ ಜವುಳಿ ಅಂಗಡಿಯ ತನಕ ಬಂದು, ಗುಡುಗುಡಿಯನ್ನು ಸೇದುವುದ ರಲ್ಲಿ ಭಾಗಿಗಳಾಗುತ್ತಿದ್ದರು. ಊರಿನ ಶ್ರೀಮಂತರಲ್ಲಿ ಶ್ರೀಪತಿರಾಯರೂ ಆಸ್ಪತ್ರೆಯ ಡಾಕ್ಟರರ ಪ್ರೋತ್ಸಾಹಕರು. ವಾಸಪ್ಪ ಸಾಹುಕಾರರ ಮನೆಯ

ವರು ಹಾಗೂ ಅಲ್ಲ; ಹೀಗೂ ಅಲ್ಲ—ಎಂಬಂತಿದ್ದಾರೆ. ಹೆಚ್ಚಿನ ಕಾಯಿಲೆ ಕಸಾರೆಗಳೆಂಬವು ಅವರಲ್ಲಿಲ್ಲ. ಚಿಕ್ಕ ಪುಟ್ಟ ಕಾಯಿಲೆಗಳಿಗೆ ಮನೆಯ ಹೆಂಗುಸರೇ ಮದ್ದು ಮಾಡುತ್ತಾರೆ. ತುಸು ಮೀರಿದ್ದಾದರೆ ಆಸ್ಪತ್ರೆಗೆ ಹೋಗುತ್ತಾರೆ; ಕೆಲವೊಮ್ಮೆ ಶಿವಪ್ಪನವರ ಬಳಿಗೂ ಹೋಗುತ್ತಾರೆ. ಅದಕ್ಕೊಂದು ಕಾರಣವಿದೆ. ಊರಲ್ಲಿ ಆಸ್ಪತ್ರೆಯಿಲ್ಲದೆ ಬಡಜನರಿಗೆ ತುಂಬ ಕಷ್ಟವಾಗಿದೆ ಎಂದು ಅರ್ಜಿಮಾಡಿ, ಅಸ್ಪತ್ರೆ ಸ್ಥಾಪನೆಯಾಗುವಂತೆ ಮಾಡಿದ ಕೀರ್ತಿಯಲ್ಲಿ ಅವರಿಗೂ ಒಂದು ಪಾಲಿದೆ. ಹಾಗಾಗಿ ಧರ್ಮಾಸ್ಪತ್ರೆಯ ಸಂಬಂಧವನ್ನು ತೀರ ಕಡಿದುಕೊಂಡವರಲ್ಲ.

ವೈಕುಂಠನಾಗಲಿ, ಅವನ ಸೋದರ ಮಾಧವನಾಗಲಿ, ನಾಲ್ಕು ಮಾರು ದೂರದಲ್ಲಿರುವ ಶಿವಪ್ಪನವರಲ್ಲಿಗೆ ಹೋಗಿ ಬರುವುದು ಅಧಿಕ. ಹರಟೆಗೂ ಹೋಗಿ ಬರುತ್ತಾರೆ; ಮದ್ದಿಗೂ ಹೋಗಿಬರುತ್ತಾರೆ. ಮಾಧವನೇಕೋ ಈಚೀಚೆಗೆ ಅಷ್ಟೊಂದು ಆರೋಗ್ಯವಂತನಾಗಿಲ್ಲ. ನಿತ್ಯ ಜೀವನದಲ್ಲಿ ವೈದ್ಯರು ಅನಿವಾರ್ಯ ಎಂಬಷ್ಟು ಅವನ ಆರೋಗ್ಯ ಕೆಡುವುದುಂಟು. ಅವನ ಕಾಯಿಲೆಗಳು ಮನೆಯ ಮದ್ದಿನಿಂದ ನೀಗದಂಥವು. ಆಸ್ಪತ್ರೆಯ ವೈದ್ಯರ ಬಳಿಗೆ ಆತ ಹೋಗಲಾರ. ಅದರಿಂದ ಬೇಡದ ಸಮಾಚಾರಗಳು ತಂದೆಯ ಕಿವಿಗೆ ಮುಟ್ಟಬಹುದು. ಅವನ ಮನಸ್ಸು ಕೆಟ್ಟದ್ದಲ್ಲ; ಆದರೆ ನಡತೆ ಸಭ್ಯವಾಗಿಲ್ಲ; ದುಂದುಗಾರಿಕೆಗೆ ಮಿತಿಯಿಲ್ಲ. ತಂದೆ ಅವನ ಗೊಡವೆ ಬೇಡವೆಂದು ಅವನಿಗೆ ಬೇರೆಯೇ ಅಂಗಡಿಯನ್ನು ಮಾಡಿಕೊಟ್ಟರು. ವಯಸ್ಸು ತುಂಬಿದಾಗ 'ತನ್ನ ಕರ್ತವ್ಯವೆಂದು' ಅನುಕೂಲವಂತರ ಮನೆಯಿಂದ ಹೆಣ್ಣು ತಂದು ಲಗ್ನಮಾಡಿಸಿದರು. ಅನಂತರ ಮಾಧವ ಸಂಸಾರ ಹೂಡಿ ಬೇರೆಯೇ ಮನೆಯನ್ನು ಮಾಡಿದ. ಹಿರಿಯರಿರುವಾಗಲೇ ಮನೆಯನ್ನೊಡೆದು ಹೊರಗೆ ಬಂದ ಅವನ ವಿಚಾರದಲ್ಲಿ, ಊರವರು ಬೇಕಾದಂತೆ ಆಡಿಕೊಂಡರು. ಆದರೆ ಅವನದ್ದೊಂದು ಗುಣ—ಅವನನ್ನು ಹೊಗಳಿದವರಿಗೆ, 'ನೀನೇ ದೇವರು' ಎಂದವರಿಗೆ ಎಷ್ಟೂ ಸಹಾಯವನ್ನೂ ಮಾಡುವ ಧೀರ. ಅಂಥ ಗುಣ ಅವನ ಮನೆಯವರಿಗಿಲ್ಲ. ಮನೆಯವರು ಹಿರಿಯರಿಂದಲೂ ನಡೆಸಿಕೊಂಡು ಬಂದಿರುವ ಹಬ್ಬ ಹುಣ್ಣಿಮೆಗಳಲ್ಲೋ, ಮದುವೆ, ಮುಂಜಿಗಳಲ್ಲೋ ತಮ್ಮ ಗೌರವಕ್ಕೆ ವ್ಯತ್ಯಯ ಬಾರದ ರೀತಿಯಲ್ಲಿ ನಡೆಯುತ್ತಾರಾದರೂ, 'ಇಂಥವ ಕಷ್ಟದಲ್ಲಿದ್ದಾನೆ' ಎಂದು, ಮರುಕದಿಂದ ದಾನಮಾಡುವವರಲ್ಲ. ಅದಕ್ಕೆ ಸಮಾ

ಧಾನವೂ ಉಂಟು. "ಈ ಮನೆ ನನ್ನೊಬ್ಬನದ್ದೇನು? ತಮ್ಮಂದಿರು, ಅವರ ಮಕ್ಕಳುಮರಿಗಳು ಇರುವ ಕುಟುಂಬದ ಮನೆಯಲ್ಲಿ ನನ್ನಿಚ್ಛೆಯಂತೆ ನಡೆದರೆ ಉಳಿದವರೇನೆಂದಾರು?" ಎಂಬ ಸಮಾಧಾನದ ಮಾತಿದೆ. ವಾಸಪ್ಪಯ್ಯನವರು ಹಾಗೆ ಹೇಳುವುದೂ ಸಹಜ.

ಕಾಳೂರಿನ ದಿನಮಾನವು ಇಂತೆ ಸರಿಯುತ್ತಿದ್ದ ಸಮಯದಲ್ಲೊಂದು ದಿನ, ಕಾರ್ವಿ ವೆಂಕಟುವು ಡಾಕ್ಟರ್ ಶಿವಪ್ಪನವರ ದವಾಖಾನೆಗೆ ಬಂದು "ಡಾಕ್ಟರರೇ, ಒಂದು ಮಾತಿದೆ ನಿಮ್ಮಲ್ಲಿ; ಈಚೆಗೆ ಬರುತ್ತೀರಾ?" ಎಂದು ಕೇಳಿದ. ಊರವರು ಯಾರು ಬಂದರೂ ಜಂಭವಿಲ್ಲದ ನಡತೆ ಅವರದ್ದು. ಈಚೆಗೆ ಬಂದರು; "ಏನಪ್ಪ?" ಎಂದು ಕೇಳಿದರು.

"ಮತ್ತೇನಿಲ್ಲ; ಸಾಹೇಬರು ಹೇಳಿ ಕಳುಹಿಸಿದ್ದಾರೆ-ಅವರ ಗುಲಾಬಿಗೆ ಏನೇನೂ ಹುಷಾರಿಲ್ಲ; ಒಂದು ಸಾರಿ ಬಂದು ಪರೀಕ್ಷೆಮಾಡಿ ನೋಡಲಿ ಎಂದರು. ಹೋಗಿ ಬರುತ್ತೀರಾ? ಈಗಲೇ ಹೋಗಬೇಕೆಂದಿಲ್ಲ. ಸಂಜೆಗೆ ಹೋದರೂ ಸಾಕು. ಬೇಕಾದರೆ-ನಾನೂ ನಿಮ್ಮ ಜತೆಗೆ ಬರುತ್ತೇನೆ."

"ಆಗಲಪ್ಪ" ಎಂದರು ಶಿವಪ್ಪನವರು. ಅವರಿಗೆ ಸೋಜಿಗವಾಯಿತು; ಸಾಹೇಬರು ತನ್ನ ಧನಿಗಳಾದರೂ, ಈ ತನಕ ಯಾವುದಕ್ಕೂ ತನ್ನನ್ನು ಕರೆಯಿಸಿದವರಲ್ಲ. ಈಗ ಅವರಾಗಿ ಕರೆಯಲು ವೆಂಕಟುವನ್ನು ಕಳುಹಿಸಿದ್ದನ್ನು ನೋಡಿ ಆಶ್ಚರ್ಯವಾಯಿತು. ಸರಕಾರಿ ಆಸ್ಪತ್ರೆಯ ಡಾಕ್ಟರರಾದ ಮಡಗಾಂವಕಾರರು ಅವರಲ್ಲಿಗೆ ನಿತ್ಯ ಹೋಗಿ ಬರುವವರು. ಈ ಅನುಮಾನದಿಂದ "ಏನು, ಆಸ್ಪತ್ರೆಯ ಡಾಕ್ಟರರು ಊರಲ್ಲಿಲ್ಲವೆ?" ಎಂದು ಕೇಳಿದರು.

"ಅವರಿದ್ದಾರೆ; ಆದರೆ ಅವರು ಇದಕ್ಕೆಲ್ಲ ಪ್ರಯೋಜನವಿಲ್ಲ. ನಾಳೆ ಅವಳಿಗೆ ಹೆರಿಗೆ ಕಷ್ಟವಾದರೂ ನೀವೇ ಬೇಕೆಂದು ನನಗೂ ಗೊತ್ತು, ಅದು ಅವರಿಗೂ ಗೊತ್ತು; ಊರವರಿಗೆಲ್ಲಾ ಗೊತ್ತು-ಹೆರಿಗೆಯ ವಿಚಾರದಲ್ಲಿ ನೀವು ಬುದ್ಧಿವಂತರೆಂಬುದು. ಅದೊಂದು ಕೆಲಸಕ್ಕೆ ಮಡಗಾಂವಕರರನ್ನು ನಂಬಿದರಾಗದೆಂದು ನಾನು ಸಾಹೇಬರಿಗೆ ಹೇಳಿದ ಮೇಲೆ, ಅವರು ಅದಕ್ಕೊಪ್ಪಿ 'ಹೇಳಿ ಬಾ' ಎಂದರು. ಬಂದೆ."

"ಆಗಲಿ. ನನ್ನ ಬಗ್ಗೆ ನಿನ್ನ ಶಿಫಾರಸೂ ಇದೆಯೆಂದಾಯಿತು" ಎಂದು ನಕ್ಕು, ಅವನನ್ನು ಕಳುಹಿಸಿಕೊಟ್ಟರು.

'ಆದರೆ ಇಷ್ಟುಮಾತನ್ನು ಹೇಳಲು, ಗುಟ್ಟಾಗಿ ಹೊರಗೇತಕ್ಕೆ ಕರೆದ?'

ಎಂದು ಶಿವಪ್ಪನವರಿಗೂ ಹೊಳೆಯಲಿಲ್ಲ. ಪ್ರಾಯಶಃ, ತನ್ನನ್ನು ಕರೆದ ಸುದ್ದಿ ಮುಡಗಾಂವಕರರಿಗೆ ತಿಳಿದು, ಅವರಿಗೆ ಸಿಟ್ಟುಬರಬಾರದು-ಎಂಬುದರಿಂದಿರ ಬಹುದು-ಎಂದು ಊಹಿಸಿದರು. ವೆಂಕಟು ಬರುವ ಹೊತ್ತಿಗೆ, ಮಾಧು ಡಾಕ್ಟರರ ಮೇಜಿನ ಹತ್ತಿರವೇ ಕುಳಿತಿದ್ದ. ಈ ಅನುಸಂಧಾನವನ್ನು ನೋಡಿ ಆತ "ಏನು, ನಮ್ಮ ಕಾರ್ವಿಯರ ಗುರಿಕಾರ ಬಂದದ್ದು?" ಎಂದು ಕೇಳಿದ.

"ಏನಿಲ್ಲ—ಒಂದು ಕೇಸಿಗೆ ಕರೆಯಲಿಕ್ಕೆ."

"ಎಲ್ಲಿಗೊ?"

"ನಮ್ಮ ಸಾಹೇಬರು ಇಟ್ಟುಕೊಂಡವಳಿಲ್ಲವೆ? . . . ಅವಳ ಹೆಸರೇನೇನೋ ಹೇಳಿದ—ಅವಳು ಗರ್ಭಿಣಿಯೆಂದು ಕಾಣುತ್ತದೆ. ನೋಡಿ ಬರಲು ಹೇಳಿದ." ಮುಂದೆ, ಅಲ್ಲಿ ನೆರೆದವರನ್ನು ಒಬ್ಬೊಬ್ಬರನ್ನಾಗಿ ಕರೆದು, ವಿಚಾರಿಸಿ, ಮದ್ದು ಕೊಡತೊಡಗಿದ.

ಅವರು ಊರಿಗೆ ಬಂದು ಮೂರು ವರ್ಷಗಳು ಸಂದಿವೆಯಾದರೂ ಇನ್ನೂ ಸಮನಾದ ಒಬ್ಬ ಕಂಪೌಂಡರನು ಅವನಿಗೆ ದೊರಕಿಲ್ಲ. ಅರ್ಧಮರ್ಧ ತರಬೇತಿಯಾದ ಒಬ್ಬ ಹುಡುಗ ಜತೆಗಿದ್ದಾನೆ. ಚಿಕಿತ್ಸೆಗಾಗಿ ಬರುವ ಜನರು ಸಾಕಷ್ಟು ಇದ್ದಾರೆ. ಜನವನ್ನು ಬೆದರಿಸುವ ಬೆಲೆ ಹೇಳುವವರಲ್ಲ. ಕೈಗುಣ ಚೆನ್ನಾಗಿದೆ—ಎಂಬ ಮಾತು ತುಂಬ ಪ್ರಚಾರವಾಗಿದ್ದುದರಿಂದ ದಿನವೆಲ್ಲ ತುಂಬ ದುಡಿಯಬೇಕಾಗುತ್ತದೆ. ಹೀಗಾಗಿ ದವಾಖಾನೆಯನ್ನು ಬಿಟ್ಟು ಸಂಜೆಯ ತನಕ ಹೊರಡುವುದಾಗಲಿಲ್ಲ. ಸಂಜೆಗೆ-ಬಂದವರಿಗೆಲ್ಲ ಮದ್ದು ಕೊಟ್ಟು, ಕಳುಹಿಸಿಕೊಡುವ ಗಳಿಗೆಗೆ ಸಮನಾಗಿ ವೆಂಕಟು ಅವರನ್ನು ಕರೆಯಲು ಬಂದ. ಅವನ ಜತೆಗೆ ಮದ್ದಿನ ಚೀಲವನ್ನು ಹಿಡಿದುಕೊಂಡು ಹೊರಟರು. ಗುಲಾಬಿಯ ಮನೆಗೆ ಹೋಗುವಾಗ, ಚಾವಡಿಯಲ್ಲಿ ಖುದ್ದು ಸಾಹೇಬರೇ ಕಾದು ಕುಳಿತಿದ್ದರು. ಅವರು ವಂದಿಸಿ "ಡಾಕ್ಟರರೇ, ನಿಮ್ಮ ಸ್ನೇಹ ಹೆಚ್ಚಿಲ್ಲದಿದ್ದರೂ ನಿಮ್ಮ ತಂದೆ ನಮಗೆ ತುಂಬ ಬೇಕಾದವರು; ಗುರುತಿನವರು" ಎಂದು ಪೀಠಿಕೆಹಾಕಿ, ಗುಲಾಬಿಯನ್ನು ಕರೆದು, ಅನಂತರ "ನಮ್ಮ ಗುಲಾಬಿಗೆ ನೋಡಿ, 'ಡಾಕ್ಟರರೇ, ನಾಲ್ಕಾರು ದಿನಗಳಿಂದ ತಪ್ಪದೆ ಜ್ವರ ಬರುತ್ತಿದೆ; ಮುಖದಲ್ಲಿ ರಕ್ತದ ಛಾಯೆಯಿಲ್ಲ. ತ್ರಾಣ ಏನೇನೂ ಇಲ್ಲ. ನಮ್ಮ ಮನೆಯ ಡಾಕ್ಟರರು ಮುಡಗಾಂವಕರರೆಂದು ನೀವು ಬೇಸರಮಾಡಬಾರದು. ಹೆರಿಗೆಯ ಬಾಬತ್ತಿನಲ್ಲಿ ಅವರಷ್ಟು ನಂಬಿಕೆಯವರಲ್ಲ ಎನ್ನುತ್ತಾರೆ.

ಈಕೆ ಚೊಚ್ಚಲು ಬಸಿರಿಯಾಗಿದ್ದರಿಂದ ನಿಮ್ಮನ್ನು ಕರೆಯಿಸಿದ್ದು. ನಮ್ಮ ವೆಂಕಟು ನಿಮ್ಮ ವಿಷಯವಾಗಿ ಬಹಳ ಹೊಗಳುತ್ತಾನೆ" ಎಂದು ಅವರನ್ನು ಹೊಗಳಿದರು. ಶಿವಪ್ಪನವರು ರೋಗಿಯನ್ನು ಪ್ರಶ್ನಿಸುತ್ತ, ಪರಿಶೀಲಿಸುತ್ತ, ನಡುನಡುವೆ ಬಾಯಿ ಹಾಕಿ ಕಾರಣ ಹೇಳುತ್ತಿರುವ ಚಂದುವಿಗೆ "ತಡೆಯಿರಿ, ಸುಮ್ಮನಿರಿ" ಎಂದು ಹೇಳುತ್ತ, ಪರೀಕ್ಷಿಸುತ್ತಿದ್ದಾಗ ಸಾಹೇಬರು "ಇದಕ್ಕೆ ಎಷ್ಟು ಖರ್ಚಾದರೂ ಚಿಂತೆಯಿಲ್ಲ. ಅವಳನ್ನು ಬಚಾಯಿಸುವ ಜವಾಬ್ದಾರಿ ನಿಮ್ಮದು" ಎಂದು ತಿರುಗಿ ವಿನಂತಿಮಾಡಿದರು.

"ನನ್ನಿಂದಾದ ಪ್ರಯತ್ನವನ್ನು ಮಾಡುತ್ತೇನೆ; ದೇವರು ಸಹಾಯ ಮಾಡುತ್ತಾನೆ"—ಎನ್ನುವುದರೊಳಗಾಗಿ, ಚಂದು "ದೇವರಿಗೊಂದು ರಂಗ ಪೂಜೆಯ ಹರಕೆ ಹೇಳಿಕೊಂಡಿದ್ದೇನೆ" ಎಂದೂ ಆಯಿತು.

ಅಲ್ಲಿಂದ ಒಂದು ತಿಂಗಳ ತನಕ, ಪ್ರತಿ ನಿತ್ಯವೆಂಬ ಹಾಗೆ, ಶಿವಪ್ಪನವರು ಆಕೆಯ ಮನೆಗೆ ಹೋಗಿ ಬರತೊಡಗಿದರು. ಕೆಲವು ಬಾರಿ ವೆಂಕಟು ಅವರ ಜತೆಗೂಡಿ ಹೋಗುವುದುಂಟು; ಕೆಲವು ಬಾರಿ ಒಬ್ಬರೇ ಹೋಗುವುದುಂಟು. ತಾತ್ಕಾಲಿಕ ಜ್ವರವನ್ನು ನಿಲ್ಲಿಸಿದರು. ಅಶಕ್ತಿಯ ನಿವಾರಣೆಗೆ ಕೆಲ್ಸಿಯಂ ಮೊದಲಾದ ಧಾತುಗಳ ಇಂಜೆಕ್ಷನ್ ಕೊಟ್ಟರು. ಹೆರಿಗೆಯ ಅವಧಿ ಸಮೀಪಿಸಿದ ಹಾಗೆ ಅವಳ ಶರೀರ ಪುಷ್ಟಿಗೊಂಡು ಬಂದಿತು. ಮೈಯ ಬೇನೆ ಮಾಯವಾಗುತ್ತ ಬಂದರೂ, ಗುಲಾಬಿಯ ಮಾನಸಿಕ ಬೇನೆ ಅಳಿದಂತೆ ಕಾಣದು. ಅದನ್ನು ತನ್ನಷ್ಟಕ್ಕೆ ಮೆಲುಕಾಡುತ್ತಿದ್ದವಳು ಅವಳೇ. ಆ ಕಾಲದಲ್ಲಿ— "ತಾನು ಸತ್ತರೇನು, ಉಳಿದರೇನು?" ಎಂಬ ಯೋಚನೆ ಅವಳ ಮನಸ್ಸಿನಲ್ಲಿ ಮಿಂಚಿಮಾಯವಾಗುತ್ತಲಿತ್ತು. ಮೊಮ್ಮಗಳ ಚಿಂತೆ, ಆತುರಗಳನ್ನು ಮೀರುವ ವ್ಯಾಕುಲ ಚಂದುವಿಗಿತ್ತು. "ಹೆರಿಗೆಯ ಕಾಲದಲ್ಲಿ ಏನಾಗುತ್ತದೆಯೋ ಏನೋ? ಏನೇನೂ ತ್ರಾಣವಿಲ್ಲ. ಆ ವೇಳೆಗೆ ಖಂಡಿತ ಬರುತ್ತೀರಲ್ಲ. ಊರಿನ ಅಗಸಗಿತ್ತಿಯರೂ ಬೇಡ; ಸೂಲಗಿತ್ತಿಯರೂ ಬೇಡ" ಎಂಬ ದಿನದಿನದ ಒತ್ತಾಯ ಅವಳದ್ದು. "ಹಾಗೇನೂ ಆಗಲಾರದು, ಯಾರೂ ಬೇಕಾಗಲಾರರು" ಎಂದು ಶಿವಪ್ಪನವರು ಹೇಳುತ್ತಿದ್ದರು.

ಹೆರಿಗೆಯ ವಿಚಾರದಲ್ಲಿ ಮುಡಗಾಂವಕರರಿಗೆ ಒಳ್ಳೆಯ ಹೆಸರು ಬಂದಿರಲಿಲ್ಲ. ಒಂದೆರಡು ಕಡೆಗಳಿಗೆ ಅವರು ಹೋಗಿ ಶಿಶುವೂ ಸತ್ತು, ಬಾಣಂತಿಯೂ ಸತ್ತು ಕೆಟ್ಟಮಾತು ಬಂದಿತ್ತು. ಆ ವಿಷಯದಲ್ಲಿ ಅವರಿಗೆ ಅಧೈರ್ಯ;

ಅಳುಕು. ಅಲ್ಲದೆ ಹಳ್ಳಿಯ ಜನರ ಬಾಯಲ್ಲಿ ಒಂದು ಯಶಸ್ಸು ಹತ್ತಾಗುವ ಮೊದಲೇ, ಅಪಯಶಸ್ಸು ಒಂದಕ್ಕೆ ನೂರಾಗುತ್ತದೆ. ಹೀಗಾಗಿ 'ಮಡಗಾಂವ ಕರರು ಅನೇಕ ವಿಚಾರಗಳಲ್ಲಿ ಬುದ್ಧಿವಂತರು ನಿಜ; ಹೆರಿಗೆಗೆ ನಾಲಾಯಕು, ನಂಬಿದರೆ ಪ್ರಾಣವೇ ಹೋದೀತು' ಎಂಬ ಸುದ್ದಿಯು ಕಾಳೂರಿನಲ್ಲೆಲ್ಲ ಪ್ರಚಾರವಾಗಿತ್ತು. ಆ ಸುದ್ದಿ ಚಂದುವಿನ ಕಿವಿಯನ್ನೂ ಸೇರಿತ್ತು. ಅಲ್ಲಿಂದ ಆಕೆ "ಡಾಕ್ಟರರನ್ನು ಕರೆಯಿಸುವುದಿದ್ದರೆ ಮಡಗಾಂವಕರರು ಬೇಡವೇ ಬೇಡ" ಎಂದು ವರಾತ ಹಿಡಿಯತೊಡಗಿದಳು. ಸಾಹೇಬರು ಅವರನ್ನೆಲ್ಲಾ ದರೂ ಕರೆಯಿಸಿಯಾರೆಂಬ ಭೀತಿಯಿಂದ, ವೆಂಕಟುವಿಗೆ ಶರಣುಹೋಗಿ, ಅವನ ಮಧ್ಯಸ್ತಿಕೆಯಿಂದಾಗಿ ಶಿವಪ್ಪಡಾಕ್ಟರರು ಮನೆಗೆ ಬರುವಂತಾಯಿತು. ಹಾಗೆ ಬಂದುದರಿಂದ ಚಂದುವಿಗೆ ತುಂಬ ಧೈರ್ಯವೂ ಆಯಿತು.

ಹೆರಿಗೆಯ ದಿನಕ್ಕೆ ಎರಡು, ಮೂರು ದಿನಗಳಿಗೆ ಮುಂಚಿತವಾಗಿಯೇ, ನೋವು ಬರತೊಡಗಿ ಗುಲಾಬಿ ಕಂಗಾಲಾದಳು. ಈ ತನಕ ಯಾವ ಬಗೆಯ ನೋವನ್ನೂ ಅವಳು ಕಂಡವಳಲ್ಲ. ನೋವು ಬಂದಾಗಲೆಲ್ಲ ಶಿವಪ್ಪನವರಲ್ಲಿಗೆ ಜನ ಹೋಗುತ್ತದೆ. ಅವರು ಬಂದು "ಏನಿಲ್ಲ, ಇನ್ನೂ ದಿನವಿದೆ?" ಎಂದು ಹೇಳಬೇಕಾಗುತ್ತಿತ್ತು. ತಮ್ಮ ಧನಿಗಳಿಗಾಗಿ ಈ ವಿಚಾರದಲ್ಲಿ ವೆಂಕಟು ವಹಿಸುತ್ತಿದ್ದ ಆಸಕ್ತಿಯು ಚಂದುವಿಗಿಂತ ಕಡಿಮೆಯಾಗಿರಲಿಲ್ಲ. ಈ ಬಗೆಯ ಆಸಕ್ತಿಯನ್ನು ವಹಿಸುತ್ತಿದ್ದ ಮೂರನೆಯ ವ್ಯಕ್ತಿಯೆಂದರೆ ಅದು ಮಾಧವ. ಆತ ಡಾಕ್ಟರರಲ್ಲಿಗೆ ಬಂದು, ಒಂದೆರಡು ತಾಸಿನ ಹರಟೆಹೊಡೆದು ಹೋಗು ವವನು. ಪ್ರತಿದಿನವೂ "ಇವತ್ತೆಲ್ಲಿಗೆ ಹೋಗಿದ್ದಿರಿ?" ಎಂದು ವಿವರ ಕೇಳು ವುದುಂಟು. "ನಿನ್ನೆ ಗುಲಾಬಿಯ ಮನೆಗೆ ಹೋಗಿದ್ದೀರಂತಲ್ಲ? ಅಂತಹ ಹೆಚ್ಚಿನ ಕಾಯಿಲೆಯೇನು?" ಎಂದು ಕೇಳುವುದುಂಟು. ಆ ಒಂದು ತಿಂಗಳ ಅವಧಿಯಲ್ಲಿ ಗುಲಾಬಿಯ ಆರೋಗ್ಯವನ್ನು ಕುರಿತಾಗಿ ಅಷ್ಟು ವಿಚಾರಿಸು ತ್ತಿದ್ದುದನ್ನು ಕಂಡು, ಶಿವಪ್ಪನವರು "ಏನು ಮುದ್ದು? ಮನೆಯವರು ಹುಷಾ ರಿಲ್ಲದೆ ಇದ್ದಾಗ ಕೇಳುವುದಕ್ಕಿಂತ ಹೆಚ್ಚಾಗಿ ಗುಲಾಬಿಯ ಸುದ್ದಿ ಕೇಳುತ್ತೀ ಯಲ್ಲ? ಅವಳ ಮೇಲೇನು ಕಣ್ಣೊ!" ಎಂದು ಪರಿಹಾಸ್ಯ ಮಾಡಿದರು. ಈ ಬಹಿರಂಗವಾದ ಚೇಷ್ಟೆಗೆ ಆತ ಏನು ಉತ್ತರ ಕೊಟ್ಟಾನು? "ಹೂಂ---ಬರಿದೆ ಕೇಳಿದೆ. ನನಗೆ ಅವಳು ಸತ್ತರೇನು? ಬದುಕಿದರೇನು" ಎಂದ ಮಾಧು.

ಮಾಧವ ಹೊರಟುಹೋದ ಬಳಿಕ, ಈ ಎಲ್ಲ ಸುದ್ದಿಗಳನ್ನು ಕಿವಿ

ನಿವಿುರಿಸಿ ಕೇಳುತ್ತ ನಿಂತ ಕಂಪೌಂಡರ್ ಶೀನು, ಡಾಕ್ಟರರ ಜ್ಞಾನ ಹೆಚ್ಚಿಸು ವುದಕ್ಕೆ—ತಾನು ಕೇಳಿದ, ಮಾಧು ಗುಲಾಬಿಯರ ಪ್ರಣಯದ ಹಳೆಯ ಕತೆ ಗಳನ್ನು ಬಿತ್ತರಿಸಿದ. ಅದರಿಂದ ಆತನ ಕುತೂಹಲಕ್ಕೆ ಕಾರಣವೇನೆಂದು ಡಾಕ್ಟರರಿಗೂ ತಿಳಿಯಿತು. ಆದರೂ "ಈ ಮಾಧು ಎಂತಹ ಹೆಣ್ಮರುಳ ನಪ್ಪ!" ಎಂದು ನಗದೆಹೋಗಲಿಲ್ಲ.

ಒಂದು ರಾತ್ರಿ ಡಾಕ್ಟರರು ಊಟ ಮುಗಿಸಿ ಇಂದುವಿನೊಡನೆ ಕುಳಿತು ಮಾತನಾಡುತ್ತಿದ್ದಾಗ "ಇವತ್ತು ಮಾತ್ರ ಸುಖವಾಗಿ ಮಲಗುವ ಹಾಗಿಲ್ಲ; ಯಾವ ಗಳಿಗೆಯಲ್ಲಿ ನೋಟೀಸು ಬಂದರೂ ಬಂದಿತೇ" ಎಂದರು.

"ಎಲ್ಲಿಂದ?" ಎಂದು ಕೇಳಿದಳು ಆಕೆ.

"ಅಲ್ಲೊಬ್ಬಳು ಗುಲಾಬಿ ಎಂಬವಳು ಇದ್ದಾಳಲ್ಲ. ಅವಳ ಬಾಣಂತಿ ತನವಾಗಬೇಕು. ಈ ಹೆರಿಗೆಯ ಕೆಲಸವೆಂದರೆ ಸಾಕುಬೇಕಾಗುತ್ತದೆ. ತರ ಬೇತಿಯಾದ ಒಬ್ಬ ಮಿಡ್‌ವೈಫ್ ಇದ್ದರೆ ಎಷ್ಟೆಲ್ಲ ಅನುಕೂಲವಿತ್ತು? ಅಂಥವ ರಿಗೆ ಕೊಡಲು ನನ್ನಲ್ಲಿ ಹಣವಿದೆಯೆ? ಊರಿನಲ್ಲಿ ತರಬೇತಾದವರೂ ಇಲ್ಲ. ಆಸ್ಪತ್ರೆಯಲ್ಲೊಬ್ಬಳಿದ್ದಾಳೆ. ಅವಳನ್ನು ನಾನು ಕರೆಯಿಸುವ ಹಾಗಿಲ್ಲವಲ್ಲ" ಎಂದು ಸುಖದುಃಖ ಹೇಳಿಕೊಳ್ಳುತ್ತಿದ್ದಾಗಲೇ ಅವನಿಗೆ ಕರೆ ಬಂದಿತು. ಮತ್ತಾರು? ವೆಂಕಟುವೇ ಬಂದಿದ್ದ. ಅವಸರ ಅವಸರವಾಗಿ ಹೊರಟರು. ಮದ್ದಿನ ಚೀಲವನ್ನು ಹಿಡಿದರು; ಕಂದೀಲನ್ನು ವೆಂಕಟು ಹಿಡಿದುಕೊಂಡ. ಅಂಗಡಿಗೆ ಹೋಗಿ, ಬಿಟ್ಟುಬಂದಿದ್ದ ಶಸ್ತ್ರಸಲಕರಣೆಗಳನ್ನು ಹಿಡಿದುಕೊಂಡು ಗುಲಾಬಿಯ ಮನೆಗೆ ಧಾವಿಸಿದರು. ಜಗುಲಿಯಲ್ಲಿ ಮುಗುದುಮ್ ಸಾಹೇ ಬರು ಭೀತರಾಗಿ ಕುಳಿತಿದ್ದರು. 'ಡಾಕ್ಟರು ಬಂದರು!' ಎಂದೊಡನೆಯೇ ಮುಖ ಪೆಚ್ಚುಗಟ್ಟಿದ ಚಂದುವು ಹೊರಕ್ಕೆ ಬಂದು, ತತ್ತರಿಸುತ್ತ ಅವರನ್ನು ಕರೆದುಕೊಂಡು ಹೋದಳು. ಒಳಗೆ ಹೋಗಿ ಗರ್ಭಿಣಿಗೆ ಮದ್ದನ್ನು ಚುಚ್ಚಿ, ಸಹಾಯಕ್ಕೆ ನೆರೆಕರೆಯ ಒಬ್ಬಿಬ್ಬರು ಹೆಂಗುಸರಿಗೆ ಬರಹೇಳಿ, ಮುಂದೆ ಬೇಕಾ ಗುವ ಲೋಶನು, ಕತ್ತರಿ, ಹಗ್ಗ ಮೊದಲಾದ ಸರಂಜಾಮುಗಳನ್ನು ತೆಗೆ ದಿರಿಸಿದರು. ಕಾದು, ಬೇಸರಿಸಿ, ಒಳಗೆ, ಹೊರಗೆ ಹೋಗಿಬರುತ್ತ "ಅಂಥ ಆತುರವೇನಿಲ್ಲ" ಎಂದು ಸಾಹೇಬರಿಗೆ ಹೇಳುತ್ತ, ಹೊತ್ತು ಕಳೆದರು.

ಹೆರಿಗೆಯ ವೇಳೆ ಬರುತ್ತಲೇ, ಒಳಕ್ಕೆ ಹೋದ ಅವರು, ಒಂದು ತಾಸು ಕಳೆದರೂ ಹೊರಕ್ಕೆ ಬರಲಿಲ್ಲ. ಇಕ್ಕಳದ ಬಲವಿಲ್ಲದೆ ಹೆರಿಗೆ ಸಾಗಲಿಲ್ಲ.

ಮಗು ಬಾರದೆ ಹೋದರೆ ಅದನ್ನು ಕತ್ತರಿಸಬೇಕಾದೀತೋ ಎಂಬ ಚಿಂತೆಯೂ ಉಂಟಾಯಿತು. ಅಂತೂ ಗುಲಾಬಿ ಒಮ್ಮೆ ಪಾರಾದಳು-ಮಗು ನೆಲಕ್ಕೆ ಬಿದ್ದು, ತಾನು ಜಗತ್ತಿಗೆ ಬಂದ ಸುದ್ದಿಯನ್ನು ಧ್ವನಿಸಿದಾಗ, ಹೊರಗಿನವರಿಗೆ ಸಂತೋಷವಾಯಿತು. ಬಾಣಂತಿಯ ಯಾವತ್ತೂ ಸೇವೆ ನಡೆಯಿಸಿ, ಡಾಕ್ಟರರು ಹೊರಕ್ಕೆ ಬರುವಾಗ ಅವರನ್ನು ನೋಡುವಂತಿರಲಿಲ್ಲ; ಮುಖ, ಮೈಗಳೆಲ್ಲ ಬೆವತಿದ್ದುವು; ಉಜ್ಜಿಕೊಳ್ಳುತ್ತಿದ್ದರು; ಉಡುಗೆಯೆಲ್ಲ ರಕ್ತಮಯವಾಗಿತ್ತು. ಅಲ್ಲೇ ನಿಂತು ಮನೆಗೆ ಜನ ಕಳುಹಿಸಿ ಬಟ್ಟೆಬರೆಗಳನ್ನು ತರಿಸಿಕೊಂಡು, ಸ್ನಾನ ಮುಗಿಸಿ, ವಸ್ತ್ರ ಬದಲಿಸಿಯೇ ಹೊರಬೀಳಬೇಕಾಯಿತು.

ಅನಂತರ ಮುಗುದುಮ್ ಸಾಹೇಬರ ಗೆಲುವನ್ನು ಹೇಳಲು ಮಾತೇ ಸಾಲದು. ವೆಂಕಟು ಹೊರಕ್ಕೆ ಬಂದು, ಡಾಕ್ಟರರ ರೂಪವನ್ನು ನೋಡಿಯೇ "ಭೇಷ್" ಎಂದುಕೊಂಡು, ಅವರ ಬಟ್ಟೆ ತಂದುಕೊಟ್ಟ. ನೀರು ಕಾಯಿಸಿದ್ದ. "ಒಂದು ಜೀವ ಉಳಿಸಿದಿರಿ" ಎಂದು ಮೇಲಿಂದ ಮೇಲೆ ಹೇಳಿದ. ಅಷ್ಟೆಲ್ಲ ತೃಪ್ತಿಯ ಮಾತುಗಳು ಅವರಿಬ್ಬರ ಬಾಯಿಂದ ಬಂದರೂ, ಅಡ್ಡಗೋಣು ಹಾಕಿ ಮುದುಕಿಯಾದ ಚಂದು ನುಡಿದೊಂದು ಮಾತು ತೀರ ಭಿನ್ನ ಶ್ರುತಿಯಲ್ಲಿತ್ತು: "ಹೆಣ್ಣಲ್ಲ; ಗಂಡು" ಎಂಬ ಪ್ರಲಾಪವದು.

ಶಿವಪ್ಪನವರು ನಗುತ್ತ "ಅದೊಂದು ವಿದ್ಯೆ ನಮಗೆ ಕಲಿಸಲಿಲ್ಲ" ಎಂದರು.

ಮರುದಿನ ಡಾಕ್ಟರರು ತಮ್ಮ ದವಾಖಾನೆಗೆ ಬರುವಾಗ ಹೊತ್ತು ಮೀರಿತ್ತು. ಹಿಂದಣ ರಾತ್ರಿ ಮನೆಗೆ ಹೋಗಿ ಮಲಗುವಾಗ ಮೂರು ಗಂಟೆಯಾಗಿತ್ತು; ಬೆಳಿಗ್ಗೆ ಏಳುವಾಗ ಎಂಟು ಗಂಟೆ. ಅಲ್ಲಿಂದ ಉಪಾಹಾರ ಮುಗಿಸಿ, ಬಾಣಂತಿಯನ್ನು ನೋಡಿಕೊಂಡು, ಎಚ್ಚರ ಹೇಳಿ, ದವಾಖಾನೆಯನ್ನು ಸೇರುವಾಗ ಗಂಟೆ ಹತ್ತಾಗಿತ್ತು. ಆದರೂ ಅವರು ಬರುವ ಗಳಿಗೆಗಾಗಿ ಮಾಧುವು ಕಾದು ಕುಳಿತಿದ್ದ. "ಏನಾಯಿತು, ನಿನ್ನೆಯ ಕೇಸು? ರಾತ್ರಿಯೂ ಹೋಗಿದ್ದೀರಂತಲ್ಲ?" ಎಂದು ಕೇಳಿದ.

"ನಿನಗೇನಾದರೇನು? ಮೊನ್ನೆಯೇ ಅಂದಿದ್ದೆ — ಅವಳು ಸತ್ತರೇನು? ಬದುಕಿದರೇನು?" ಎಂದು.

"ಹಾಗೆ ಯಾರ್ಯಾರು ಸತ್ತರೆ ನನಗೇನು ಲಾಭವಂತೆ? ಅಲ್ಲ; ಹೆರಿಗೆ ಸುಲಭವಾಯಿತೇ, ಕಷ್ಟವಾಯಿತೇ?" ಎಂದು ತಿರುಗಿ ನಮ್ರವಾಗಿಯೇ

ಕೇಳಿದ. 'ನಾನು ಮಾಡಿಸಿದ ಹೆರಿಗೆಗಳಲ್ಲಿ ಇದು ತೀರ ತಾಪತ್ರಯದ್ದು' ಎಂದು ಅವರು ಬಣ್ಣಿಸಿದರು. ಆ ಯಾವತ್ತು ಕಥಾನಕವನ್ನು ಕುತೂಹಲ ದಿಂದ ಕೇಳಿದ ಮಾಧವ ತನ್ನ ಅಂಗಡಿಗೆ ಹೊರಡುತ್ತ, ಮಾಡಿದೊಂದು ಕುಚೋದ್ಯವನ್ನು ಮಾತ್ರ ಮರೆಯುವಂತಿರಲಿಲ್ಲ.

"ಹೌದೇ, ಡಾಕ್ಟರರೇ, ಈ ವಯಸ್ಸಿನಲ್ಲಿ ಮುಗುದುಮ್ ಸಾಹೇಬ ರಿಗೆ ಮಕ್ಕಳಾಗುವುದು ಶಕ್ಯವೇ?" ಎಂದು ಹೇಳಿ ಹೋದ.

ಅವರು ನಕ್ಕರು. "ಯಾಕಾಗಬಾರದು? ಎಪ್ಪತ್ತರ ತಂದೆಯರಿಗೂ ಮಕ್ಕಳಾದದ್ದುಂಟು. ಆಗುವುದು ಅಪೂರ್ವವಷ್ಟೆ" ಎಂದು ಉತ್ತರವಿತ್ತರು.

---

# ಅಧ್ಯಾಯ ೪.

ಕಾಳೂರಿನ ಹೆಸರಾದ ಮನೆತನಗಳಲ್ಲಿ ಶ್ರೀಪತಿರಾಯರ ಮನೆತನವೂ ಒಂದು ಎಂದು ಈ ಮೊದಲೇ ಹೇಳಿದ್ದೆವು. ನಾಲ್ಕಾರು ತಲೆಮಾರುಗಳಿಂದ, ಜಮೀನುದಾರರಾಗಿ ಬಂದವರು ಅವರು. ಸುಮಾರು ಸಾವಿರ ರೂಪಾಯಿಗಳಷ್ಟು ಕಂದಾಯ ತೆರುವ ಹೊಲ, ಮನೆ, ತೋಟಗಳಿದ್ದುವು. ಅವೆಲ್ಲ ಒಂದೇ ಕಡೆಯಲ್ಲಿಲ್ಲ; ಸುತ್ತುಮುತ್ತಲಿನ ಗ್ರಾಮ ಸಮುದಾಯಗಳಲ್ಲಿ ಹಂಚಿಹೋಗಿವೆ. ಅದರಿಂದ ಅವರ ಪ್ರತಿಷ್ಠೆಯೂ ಅಷ್ಟೊಂದು ಗ್ರಾಮಗಳಿಗೆ ಪಸರಿಸಿದಂತಾಗಿದೆ. ಅವರ ಮನೆಯೂ ದೊಡ್ಡದು, ಮನೆಯ ನಿವಾಸಿಗಳ ಸಂಖ್ಯೆಯೂ ಅಧಿಕ. ವಾಸಪ್ಪ ಸಾಹುಕಾರರಲ್ಲಿರುವ ಹಾಗೆ ಅಣ್ಣತಮ್ಮಂದಿರ ಮಕ್ಕಳೆಲ್ಲರು ಸೇರಿ ಈ ಕುಟುಂಬದ ಮನೆಯಲ್ಲಿ ವಾಸವಾಗಿದ್ದಾರೆ. ಊಟಕ್ಕೆ ಎಲೆ ಬಡಿಸಿದರೆ, ಒಂದೊಂದು ಹೊತ್ತಿಗೆ ನಾಲ್ವತ್ತು ಐವತ್ತು ಎಲೆಗಳ ತನಕ ಹಾಕಬೇಕಾಗುತ್ತದೆ. ಎಲೆಯ ಸಂಖ್ಯೆಗಳಲ್ಲಿ ಆಗುವ ಅಂತರ ಮನೆಯವರಿಂದುಂಟಾಗುವಂತಹದಲ್ಲ. ಮನೆಗೆ ಬಂದು ಹೋಗುವ ಅತಿಥಿಗಳಿಂದಾಗಿ. ಆ ದಿನಗಳಲ್ಲಿ ಕೆಲವೇ ರಾಜಮಾರ್ಗಗಳಲ್ಲಿ ಬಸ್ಸು ಚಲಾವಣೆ ಇದ್ದರೂ, ಹಳ್ಳಿಯ ಜನ ಹೆಚ್ಚಾಗಿ ತಮ್ಮ ಕಾಲನ್ನೇ ನಂಬಿ ಚಲಿಸುವವರು. ಬರಿಗಾಲಿನಿಂದಲೋ, ಜೋಡು ಮೆಟ್ಟಿಕೊಂಡೋ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುವವರು. ಬೆಳಿಗ್ಗೆ ಹೊರಟವರು ಆ ಸಂಜೆಯೋ ಮರುದಿನವೋ ಗುರಿಯನ್ನು ಸೇರಿದರಾಯಿತು–ಎಂಬ ನಿರವಸರದ ಜನರಾದುದರಿಂದ, ದಾರಿಯಲ್ಲಿ ಒಂದೆರಡು ಊಟಗಳು ಬೇಕೇ ಬೇಕು. ಗ್ರಾಮಾಂತರದಲ್ಲಿರುವ ಹಳೆಯ ಮನೆತನಗಳೆಷ್ಟೋ ಈ ಧರ್ಮ ಬುದ್ಧಿಯನ್ನಿರಿಸಿಕೊಂಡಿದ್ದಾರೆ. ಮನೆಗೆ ಬಂದವರಿಗೆ ಅನ್ನಹಾಕಬೇಕೆಂಬ ಸಂಪ್ರದಾಯ, ಪರಿಪಾಠ ಬಹು ಹಿಂದಿನಿಂದ ಬಂದದ್ದು. ಅಂತಹ ಮನೆಗಳಲ್ಲಿ ಶ್ರೀಪತಿರಾಯರ ಮನೆಯೂ ಒಂದು. ಮನೆಗೆ ಬಂದವನು ಬಾಯಾರಿಕೆ ಕೇಳಿ, ನೀರು ಕುಡಿದು ಮತ್ತೂ ಕುಳಿತನಾದರೆ, ಆತ ಊಟಕ್ಕೆ ನಿಲ್ಲುವವನೆಂದರ್ಥ. ಒಳಗೆ ಊಟ ಮಾಡುವ ಸ್ವಜಾತಿಯವನಾದರೆ, ಮನೆಯವರ ಜತೆಯಲ್ಲೇ ಪಂಙ್ತಿಭೋಜನಕ್ಕೆ ಕುಳಿತಿರಬಹುದು. ಉಳಿದವರಿಗೆ ಎರಡನೆಯ ಪಂಙ್ತಿಯಿದೆ. ಅಲ್ಲಿಯೇ ಊಟಮಾಡದಿರುವವರುಂಟು; ಅಂಥವರು ಸೆರಗೊಡ್ಡಿ ನಿಲ್ಲುತ್ತಾರೆ. ಆ ಮನೆ

ಯವರು ಕೊಡುವ ಒಂದು ಪಾವು ಅಕ್ಕಿಯನ್ನು ತೆಗೆದುಕೊಂಡು, ತಮಗೆ ಅನುಕೂಲ ಕಂಡಲ್ಲಿ ಬೇಯಿಸಿ ತಿನ್ನುವುದಕ್ಕೆ ಆಕ್ಷೇಪವಿಲ್ಲ; ಹೀಗಾಗಿ ಮನೆಯ ಹುಟ್ಟುವಳಿಯಲ್ಲಿ ತೀರ ದೊಡ್ಡಪಾಲು ಈ ಅನ್ನದಾನಕ್ಕೆ ಮೀಸಲಾಗುತ್ತದೆ.

ಇನ್ನು ಇಂತಹ ನಿತ್ಯ ದಾನಗಳ ಜತೆಗೆ ಸಂಪ್ರದಾಯವಾಗಿ ಬರುವ ನವರಾತ್ರಿ, ಧನುರ್ಮಾಸ, ಚೌತಿ ಮೊದಲಾದ ಹಬ್ಬಹರಿದಿನಗಳಲ್ಲಿ, ಇನ್ನೂರು ಮುನ್ನೂರು ಮಂದಿ ಸಾಲಾಗಿ ಕುಳಿತು ಉಣ್ಣುವ ಸಮಾರಾಧನೆಗಳಿವೆ. ಜತೆಗೆ ಮನೆಯವರೇ ಆದ ಜನಗಳಿದ್ದಾರೆ. ಶ್ರೀಪತಿರಾಯರ ಅಣ್ಣ ಜನಾರ್ಧನ ರಾಯರು ಕಾಲವಾಗಿ ಬಹಳ ವರ್ಷಗಳಾದುವು. 'ಕೊಡುಗೈಯ್ಯ ದಾನಿ' ಎಂದು ಕೀರ್ತಿಗಳಿಸಿ ಅವರು ತೀರಿಕೊಂಡರು. ಅವರ ಮಕ್ಕಳು ನಾಲ್ವರು ಅದೇ ಮನೆಯಲ್ಲಿದ್ದಾರೆ. ಇನ್ನು ರಾಯರ ಮಕ್ಕಳು, ರಾಯರ ತಮ್ಮಂದಿರ ಮಕ್ಕಳು ಎಂದು ಸಂಸಾರ ತುಂಬಿರುವ ಮನೆಯಲ್ಲಿ ನಡೆಯುವ ಚವಲ, ಉಪನಯನ, ಮದುವೆಯೆಂಬವುಗಳೂ ಇವೆ. ಈ ಕಾಲದಲ್ಲಿ ನೆರೆಕರೆಯ ಗ್ರಾಮಸ್ಥರಿಗೆ ಅನ್ನ ಸಂತರ್ಪಣೆ ನಡೆಯಬೇಕು. ಅಷ್ಟೇ ವಿಜೃಂಭಣೆಯಿಂದ ತಮ್ಮ ಒಕ್ಕಲು ಮಕ್ಕಳಿಗೆ ಪರಮಾನ್ನದ ಊಟ ಆಗಬೇಕು. ಹೀಗಾಗಿ ಮನೆತನದ ವರಮಾನವೆಷ್ಟೇ ಇದ್ದರೂ ಈ ನಿತ್ಯ ನೈಮಿತ್ತಿಕ ದಾನಧರ್ಮಗಳಿಂದಾಗಿ ಕರಗಿಹೋಗುತ್ತಿತ್ತು. ಶ್ರೀಪತಿರಾಯರ ಅಣ್ಣಂದಿರು ದಾನದಲ್ಲಿ ಕೊಡುಗೈಯ್ಯಾಗಿದ್ದುದರಿಂದಲೇ ಮನೆಯು ಸಾಲಕ್ಕಿಳಿಯಬೇಕಾಯಿತು. ಹೀಗಾಗಿ ಅವರು ಕಣ್ಣುಮುಚ್ಚಿದಾಗ, ಅವರ ಹೆಸರನ್ನು ಕೀರ್ತಿ ಸುತ್ತಿಕೊಂಡಂತೆ, ಕುಟುಂಬದ ಆಸ್ತಿಗಳನ್ನು ಸುಮಾರು ಮುವ್ವತ್ತು ಸಾವಿರ ರೂಪಾಯಿಗಳಷ್ಟು ಸಾಲವೂ ಸುತ್ತಿಕೊಂಡಿತು ಎನ್ನುತ್ತಾರೆ. ಅಣ್ಣನಿದ್ದಾಗ—ಇದೊಂದನ್ನೂ ಶ್ರೀಪತಿರಾಯರು ಕೇಳಿದವರಲ್ಲ; ಅವರ ಕೈಯ್ಯನ್ನು ತಡೆದವರಲ್ಲ. ಆದರೆ ಯಜಮಾನಿಕೆ ಬಂದು, ಮನೆಯ ದಫ್ತರ ಬಿಡಿಸಿ, ನೋಟು, ದಸ್ತಾವೇಜುಗಳನ್ನು ಕಾಣುವಾಗ ಸತ್ಯದಲ್ಲಿದ್ದ ಸ್ಥಿತಿ ಗೋಚರಿಸಿತು. ಅಂದಿನಿಂದ ಅವರು ತುಸು ಜಾಣ್ಮೆಯಿಂದಲೇ ಯಜಮಾನಿಕೆ ನಡೆಯಿಸಿಕೊಂಡು ಬಂದರು. ಆದರೆ ಪರಂಪರೆಯ ನಡವಳಿಕೆಗೆ ಚ್ಯುತಿಬಾರದಂತೆ ನಡೆಯಿಸಿಕೊಂಡು ಹೋಗುವಾಗ ಕೈಕಟ್ಟದೆ ಉಪಾಯವಿಲ್ಲ. ಕರೆಯುವ ಮನೆಗಳನ್ನು ಎಂದೂ ಕರೆಯದೆ ಕುಳಿತಿರಲಿಲ್ಲ. ಆದರೆ ಹತ್ತು ಮಾಡಿ ಚೆಲ್ಲುವ, ಬದಲು ಐದೇ-ಮಾಡಿ

ಒಡಿಸಿದರು. 'ಅಣ್ಣನ ಧಾರಾಳತನ ತಮ್ಮನಲ್ಲಿಲ್ಲ' ಎಂದು ಉಂಡವರ ಬಾಯಿಂದ ಅನಿಸಿಕೊಂಡರೂ 'ಉಂಡಿಲ್ಲ' ಎಂಬ ಅಪವಾದಕ್ಕೆ ದೂರವಾದರು. ಸಾಲಸಲ್ಲಿಸದಿದ್ದರೂ ಸಾಲದಬಡ್ಡಿಯನ್ನು ನಿಲ್ಲಿಸಿಕೊಳ್ಳದೆ, ಆಯವ್ಯಯಗಳಿಗೆ ಮೇಳ ಹೊಂದಿಸಿಕೊಂಡು ಬಂದಿದ್ದಾರೆ. ಸಲಬೇಕಾದ ಮುಖ್ಯ ಸಾಲವು ಪರವೂರವರಿಗೆ ಅಲ್ಲ, ಮುಗುದುಮ್ ಸಾಹೇಬರಿಗೆ-ಎನ್ನುತ್ತಾರೆ ಜನ. ಬಹಿರಂಗದ ತೋರಿಕೆಯ ಮಟ್ಟಿಗೆ ಅವರು ಉಭಯತರಲ್ಲಿ ಅಂಥ ಅನ್ಯೋನ್ಯ ಸಂಬಂಧವಿದ್ದಂತೆ ಕಾಣಿಸುವುದಿಲ್ಲವಾದರೂ ವಿರಸವಿಲ್ಲ; ಜಗಳವಿಲ್ಲ. ಅವಿದ್ದರೆ ತುಂಬಾ ಕಷ್ಟಕ್ಕೆ ಬರುತಿತ್ತು. ಪೇಠಾ ಊರಾದ ಕಾಳೂರು ಹೆಸರಿಗೊಂದು ಮುನ್ಸಿಪಾಲಿಟಿಯಾಗಿದೆ, ಅದರಿಂದ ಚುನಾವಣೆ ನಡೆದಿದೆ; ಆದರೂ ಯಾವೊಂದೂ ಗದ್ದಲ ನಿಷ್ಠುರಗಳಿಲ್ಲದೆ ನಡೆದಿದೆ. ಊರಿನ ನಾಲ್ಕುಮಂದಿ ಹಿರಿಯರು ಉಮೇದುವಾರರಾಗಿ ನಿಂತರೆ ಪೈಪೋಟಿ ನಡೆಸುವವರಿಲ್ಲ. ಅಂಥಲ್ಲಿ ನಾಲ್ಕಾರು ಸಾರಿ ಮುಗುದುಮ್ ಸಾಹೇಬರೇ ಚೆಯರ್‌ಮೇನ್ ಆಗಿ ಆರಿಸಿ ಬಂದಿದ್ದಾರೆ. ಒಂದೇ ಒಂದು ಬಾರಿ, ತ್ರಾಣವಿದ್ದರೂ ವಾಸಪ್ಪ ಸಾಹುಕಾರರಾಗಲೀ ಶ್ರೀಪತಿರಾಯರಾಗಲೀ, ಅವರನ್ನು ಇದಿರಿಸಲು ನಿಂದಿರದ ಕಾರಣವೆಂದರೆ–ಈ ಬಗೆಯಲ್ಲಿ ಒಬ್ಬರಿಗೊಬ್ಬರಿಗಿರುವ ಹಂಗು ಎಂದು ಅನ್ನುತ್ತಾರೆ ಜನ. 'ಹಣವನ್ನು ಸಾಲವಾಗಿ ಕೊಟ್ಟ ಸಾಹೇಬರು ತಣ್ಣಗೆ ಬಡ್ಡಿಯನ್ನು ಪಡೆದು ಕುಳಿತಿದ್ದಾರೆಯೇ?' ಎಂದರೆ ಹಾಗೂ ಇಲ್ಲ. ಒಮ್ಮೊಮ್ಮೆ "ಹಣದ ತಗಾದೆಯಿದೆ; ಅಸಲು ಬಾಕಿಯಲ್ಲಿ ಏನೂ ಬಂದಿಲ್ಲವಲ್ಲ" ಎಂದು ತಮ್ಮ ದೂತರನ್ನು ಗುಟ್ಟಾಗಿ ಶ್ರೀಪತಿರಾಯರಲ್ಲಿಗೆ ಅಟ್ಟಿದ್ದುಂಟು. ಅದಕ್ಕೆ ಪ್ರತ್ಯುತ್ತರವಾಗಿ ಶ್ರೀಪತಿರಾಯರೇ ಮನೆಯಿಂದ ಹೊರಟು, ಅವರ ಮನೆಯ ತನಕ ಹೋಗಿ ಎಳನೀರು ಕುಡಿದು, ಮಲಗೋವ ಮಾವಿನ ಹಣ್ಣನ್ನು ತಿಂದು ಬಂದರಾದರೆ, ಇಬ್ಬರಿಗೂ ಸಾಲದ ವಿಚಾರ ಮರವೆಯಾಗುತ್ತದೆ. "ಏನು, ಬಹುದಿನಗಳಿಂದ ನಮ್ಮ ಮನೆಗೆ ಬಂದಿಲ್ಲ" ಎಂದ ಹಾಗೆ ಈ ತಗಾದೆಯ ಅರ್ಥ. ರಾಯರ ಮನೆಯಲ್ಲಾಗುವ ಮುಂಜಿ ಮದುವೆಯ ಸಂಭ್ರಮಗಳಿಗೆ ವರ್ಷ ಎರಡು ವರ್ಷಗಳಿಗೊಮ್ಮೆ ಸಾಹೇಬರು ಅವರ ಮನೆಗೆ ಹೋಗುವುದುಂಟು. ಮದುಮಕ್ಕಳಿಗೆ ಉಡುಗೊರೆ ಸಲ್ಲಿಸುವ ವಾಡಿಕೆ ಉಂಟು.

ಇಷ್ಟೆಲ್ಲ ಹೇಳಿದರೆ ಶ್ರೀಪತಿರಾಯರು 'ಅಪ್ಪಟ ಚಿನ್ನ' ಎಂದು ಯಾರೂ ತಿಳಿಯಬೇಕಾಗಿಲ್ಲ. ಮಾನವ ಸಹಜವಾದ ಕೊರತೆಗಳು ಅವರಲ್ಲಿವೆ. ನಿತ್ಯ

ಚಿಂತೆಗಳೂ ಇರುತ್ತವೆ. ಆಗಾಗ ತಾವು ಶ್ರೀಮಂತರೆಂಬ ಹೆಮ್ಮೆಯೂ ಕಾಣಿಸಿಕೊಳ್ಳುತ್ತದೆ.ಬಹು ದಿನಗಳಿಂದ ಅವರ ಒಕ್ಕಲೊಬ್ಬನು ಗೇಣಿಯನ್ನು ನಾಮಹಾಕುತ್ತ ಬಂದಿದ್ದನಾದರೆ, ಅವನನ್ನು ಮನೆಗೆ ಎಳೆದು ತರಿಸಿ, ಆ ಪೇಟೆಯ ಊರಿನಲ್ಲೂ, ಚಪ್ಪರದ ಕಂಭಕ್ಕೆ ಅವನನ್ನು ಬಿಗಿಸಿ ಚಡಿಯಿಂದ ನಾಲ್ಕು ಕಾಯಿಸಿದ್ದುಂಟು. ಅದರಿಂದಲೂ ಬಾಕಿ ಗೇಣಿ ಬಾರದೆ ಹೋದಾಗ, ಅವನನ್ನು ಒಕ್ಕಲು ಹೊರಡಿಸಿ ಓಡಿಸಿದ್ದುಂಟು. ಇಂತಹ ನೀತಿಯು ಅವರ ಊರಲ್ಲಿ ಆ ದಿನಗಳಲ್ಲಿ ಒಂದು ಅನ್ಯಾಯ ಎನಿಸುತ್ತಿರಲಿಲ್ಲ. ಹಾಗೇಕೆ? ಅದೇ ಬಗೆಯ ಬಿಗುವಿಲ್ಲದೆ ಹೋಗಿದ್ದರೆ ಮುಗುದುಮ್ ಸಾಹೇಬರ ಹೊಸಾಡಿ, ಗೆರೆಸೊಪ್ಪೆ ಆಸ್ತಿಗಳಿಂದ ಒಂದು ಹುಲ್ಲು ಸೂಡಿ ಸಹ ಮನೆಗೆ ಬರುತ್ತಿತ್ತೋ ಇಲ್ಲವೋ! ಕೇವಲ ಸಣ್ಣ ಪುಟ್ಟ ವರ್ಗದಾರರಷ್ಟೆ, ಗೇಣಿ ಬಾಕಿಯಾದಲ್ಲಿ ಕುಮಟೆ, ಕಾರವಾರ, ಹೊನ್ನಾವರಗಳ ಕೋರ್ಟುಗಳ ಮೆಟ್ಟಲುಗಳನ್ನೇರಿ, ವಕೀಲರಿಗೆ ಶರಣು ಹೊಡೆದು, ಕಳೆದುಕೊಂಡ ಗೇಣಿಗಾಗಿ ಒದ್ದಾಡಬೇಕು. ಇವರೂ ಹಾಗೆ ಮಾಡುವುದಾಗಿದ್ದರೆ, ಅಷ್ಟೊಂದು ಒಕ್ಕಲುಗಳಿರುವಾಗ ತಮ್ಮ ಬಿಡಾರವನ್ನೇ ಕೋರ್ಟಿನಲ್ಲಿ ಹೂಡಬೇಕಾಗುತ್ತಿತ್ತು.

ಕೋರ್ಟಿಗೆ ಹೋಗಬೇಕಾಗಿದ್ದರೆ ಈಗ ಅವರಿಗೆ ಒಂದು ಹೆಚ್ಚಿನ ಅನುಕೂಲತೆಯಾಗಿದೆ. ಅದೆಂದರೆ ಅವರ ಹಿರಿಯ ಮಗ ಚಲಪತಿ ಎಂ.ಎ. ಮುಗಿಸಿ ಎಲ್. ಎಲ್. ಬಿ. ಆಗಿ ಕುಮಟೆಯಲ್ಲಿ ವಕೀಲನಾಗಿದ್ದಾನೆ. ಆದರೆ ಅದಕ್ಕಿಂತ ಸುಲಭದ ದಾರಿಯಿಂದ ಒಕ್ಕಲುಗಳನ್ನು ಹದ್ದಿನಲ್ಲಿರಿಸಿ ಕೊಂಡಿರಲು ಸಾಧ್ಯವಿರುವಾಗ,ಅವರೇಕೆ ಈ ಮಾರ್ಗವನ್ನುಹಿಡಿಯುತ್ತಾರೆ?

ಇತರ ವಿಧಗಳಿಂದಲೂ ಊರಿನ ಪ್ರತಿಷ್ಠಾವಂತರ ಸ್ಥಾನಮಾನಗಳನ್ನು ಅವರೂ ಇರಿಸಿಕೊಂಡಿದ್ದಾರೆ. ಅವರ ಉಡುಗೆ, ತೊಡುಗೆ, ರುಮಾಲು ಮತ್ತೊಂದನ್ನು ನೋಡಿದಲ್ಲಿ ಹಳ್ಳಿಗರಾಗಿಯೇ ಕಾಣಿಸಿದರೂ, ವಿಲಾಸ ಪ್ರಿಯತೆ ಅವರಲ್ಲೂ ಇದ್ದಿರಬೇಕು. ಅಲ್ಲದೆ ಹೋದರೆ ಕಲಾವಂತರ ಕೇರಿಯ ಮಂಜಿ ಅವರಲ್ಲಿಗೆ ಬಂದು ಹೋಗುವ ಕಾರಣವಿಲ್ಲ. ಆಕೆಗೆ ಅವರ ಮನೆಯಲ್ಲಿ ಗರತಿಯರಷ್ಟೇ ಗೌರವ ಸಲ್ಲುತ್ತಿದೆ. ಅವಳ ಬಾಯಿಯಿಂದ 'ಯಜಮಾನರು' ಎಂದು ಬಂದರೆ, ಜನರಿಗೆ ಅದು ಶ್ರೀಪತಿರಾಯರ ವಿಚಾರ ದಲ್ಲಿ ಅನ್ನುವ ಮಾತು ಎಂದು ಗೊತ್ತು.

ಶ್ರೀಪತಿರಾಯರ ಮೂವರು ತಮ್ಮಂದಿರು ಅಲ್ಪಸ್ವಲ್ಪ ವಿದ್ಯಾಭ್ಯಾಸ

ವನ್ನು ಪಡೆದ ಮಹಾನುಭಾವರು. ಒಬ್ಬ ತಮ್ಮ ಅವರ ಯಾವತ್ತು ಆಸ್ತಿ ಪಾಸ್ತಿಗಳನ್ನು ಆಗಾಗ ಸಂದರ್ಶಿಸಿ ನೋಡಿಕೊಂಡು ಬರುವವನು. ಆತ ನಿಗೆ ಒಕ್ಕಲು ಮನೆಗಳ ಮಾಡಿನ ಬಿದಿರಿನ ಸಂಖ್ಯೆಯಿಂದ ಹಿಡಿದು, ಹಟ್ಟಿಯ ದನಕರುಗಳ ಸಂಖ್ಯೆಗಳೆಲ್ಲ ಗೊತ್ತು. ಇನ್ನೊಬ್ಬ–ಆಚೀಚಿನ ಜನಗಳಿಂದ ಅಡಿಕೆಯನ್ನು ಕೊಂಡು, ಕೊಡುವ ಅಂಗಡಿಯಿಲ್ಲದೆಯೂ ವ್ಯಾಪಾರ ನಡೆ ಯಿಸಿಕೊಂಡಿರುವವ. ಮೂರನೆಯವನು ಅಣ್ಣನಿಗೆ ನೆರಳಾಗಿ ಬಾಳುವವ. ಅವನ ಹೆಸರು ರಾಮಚಂದ್ರ ಎಂದು. ರಾಮಚಂದ್ರ ತುಸು ಕಾರುಭಾರಿ. ಅಣ್ಣನಿಗಿಂತ ಹೆಚ್ಚು ಪ್ರತಿಷ್ಠೆಯಿಂದ ವರ್ತಿಸಬಲ್ಲ. ಅಣ್ಣ ಗಂಟಲನ್ನು ತೆರೆ ಯಲು ಅಂಜುವಾಗ, ಈತ ಧಾರಾಳವಾಗಿ ತೆರೆದು, ಕಾರ್ಯ ಸಾಧಿಸುವವ. ಅವನ ವಿಚಾರವಲ್ಲಿ ಉಳಿದ ಸೋದರರಿಗೂ, ಜನಾರ್ಧನ ರಾಯರ ಮಕ್ಕ ಳಿಗೂ ಅಸಮಾಧಾನ. ಆತ ಮನೆಯ ಸಂಪತ್ತನ್ನು ಕದ್ದು ಕದ್ದು ತನ್ನ ಹಾಳು ಹವ್ಯಾಸಗಳಿಗೆ ವ್ಯಯಿಸುತ್ತಿದ್ದಾನೆಂದು ಅವರ ದೂರು. ಈ ರಾಮಚಂದ್ರನ ಹೆಸರಿನೊಡನೆ ನಾಲ್ಕಾರು ಮಾನಗೇಡಿ ಹೆಂಗುಸರ ಹೆಸರುಗಳನ್ನೂ ಹೊಂ ದಿಸಿ ಹೇಳುವವರುಂಟು. 'ನಮ್ಮ ವಾಸಪ್ಪಯ್ಯನವರ ಮಗ ಮುದ್ದು, ಶ್ರೀಪತಿ ರಾಯರ ತಮ್ಮ ಜತೆ. ತಳಿಕೆ ಹಾಕಿದ ಗಾಡಿಯೆತ್ತುಗಳ ಹಾಗೆ' ಅನ್ನುವ ಜನಗಳೂ ಇದ್ದಾರೆ. ಆದರೆ ಆಡಳಿತೆಯ ಪ್ರತಿಯೊಂದನ್ನೂ ತಾನೇ ನಡೆಯಿಸ ಲಾರದೆ, ಕೇವಲ ಮೇಲು ತನಿಖೆ ನಡೆಸಬೇಕಾಗಿದ್ದ ಶ್ರೀಪತಿರಾಯರು, ತಮ್ಮೆ ದುರಿಗೆ ಪಿಟ್ಟೆಂದು ವಾದಿಸದ ತಮ್ಮನಿಗೆ, ಅಪರೋಕ್ಷವಾಗಿ ಬುದ್ಧಿ ಹೇಳಿಸಿ ನೋಡಿದರು. ಅದರ ಬದಲು ಖಂಡು ತುಂಡಾಗಿ "ನೀನು ಹುಟ್ಟುವಳಿಯ ಇಷ್ಟು ಅಂಶವನ್ನು ತೆಗೆದುಕೊಂಡು ಸ್ವಂತ ಏರ್ಪಾಡು ಮಾಡಿಕೋ" ಎನ್ನುವ ಧೈರ್ಯ ಅವರಿಗೂ ಬಂದಿಲ್ಲ. ಹಾಗೆ ಹೇಳಿದ್ದಾದರೆ, ಆಸ್ತಿ ಪಂಚಂಪಾಡಾಗಿ, ಒಂದೊಂದು ಹಿಸೆಗೆ ಐವತ್ತು ವರಹಗಳ ಕಂದಾಯ ಸಲುವ ಭೂಮಿ ಬರು ತ್ತಿತ್ತು. ಅನಂತರ 'ರಾಯರ ಮನೆ' ಎಂಬ ಹೆಸರು ಉಳಿಯುವುದು ಕಷ್ಟ. ಏನಿದ್ದರೂ ಮನೆ ಮುರಿಯಬಾರದು, ಮನೆಯ ಗೌರವ ಕೆಡಬಾರದು, ಒಟ್ಟಿಗೆ ಇದ್ದು ಒಟ್ಟಿಗೆ ಉಣ್ಣಬೇಕು–ಎನ್ನುವ ಮನೋಧರ್ಮ ಅವರದ್ದು. ಹಾಗೆಂ ದು ಉಳಿದ ತಮ್ಮಂದಿರು ನಿಷ್ಕಪಟಿಗಳು, ಭೋಳೇರಾಯರು ಎಂದು ತಿಳಿ ಯಬೇಕಾಗಿಲ್ಲ. ಪ್ರಾಯಕ್ಕೆ ಬಂದವರು, ಶಕ್ತಿಯಿದ್ದವರು, ಬುದ್ಧಿ ಹೊಳೆ ದವರು ಕುಟುಂಬದ ಮನೆಯಲ್ಲಿಯೇ ಇದ್ದು ತಮ್ಮದೇ ಆದ ಸಂಪಾದನೆಯ

ದಾರಿಯಿಂದ ಕೊಟ್ಟು, ಕೊಳ್ಳುವ ವ್ಯವಹಾರ ಮಾಡುತ್ತಿದ್ದಾರೆ. ಅವರನ್ನು "ಎಷ್ಟು ದುಡಿದಿದ್ದೀಯಾ, ಇಲ್ಲಿ ಕೊಡು" ಎಂದವರಲ್ಲ. ರಾಯರ ಯಜಮಾನಿಕೆಯ ವಿಚಾರದಲ್ಲಿ ಅವರೂ ಆಕ್ಷೇಪವೆತ್ತಿದವರಲ್ಲ.

ಅವರ ಮಗನಾದ ಚಲಪತಿಯು ಇಂಗ್ಲಿಷ್ ಶಾಲೆಗೆ ಹೋಗತೊಡಗಿದೊಡನೆಯೇ, ಅವನ ಬೆನ್ನಿಗೆ ಅಣ್ಣತಮ್ಮಂದಿರ ಮಕ್ಕಳೂ ಒಬ್ಬೊಬ್ಬರಾಗಿ ಶಾಲೆಯನ್ನು ಸೇರತೊಡಗಿದರು. ಊರ ಶಾಲೆಯಲ್ಲಿ ಓದು ಸಾಗುತ್ತಿರುವಷ್ಟು ದಿನ ಹೆಚ್ಚಿನ ಖರ್ಚು ವೆಚ್ಚಗಳಿರಲಿಲ್ಲವಾದರೂ, ಈಗ ನಾಲ್ಕು ಮಂದಿ ಧಾರವಾಡ, ಪೂನೆ, ಮುಂಬಯಿಗಳಲ್ಲಿ ಓದುತಿದ್ದಾರೆ. ತಮ್ಮ ಮಗನಿಗೆ ವಕೀಲಿ ವಿದ್ಯಾಭ್ಯಾಸ ಕೊಡಿಸಿದಮೇಲೆ ಉಳಿದವರ ಹಕ್ಕನ್ನು ನಿರಾಕರಿಸುವಂತಿಲ್ಲ. ಇದರಿಂದಲೂ ಅವರ ಮನೆಯ ಖರ್ಚುವೆಚ್ಚಗಳು ಹೆಚ್ಚುವುದು ಸ್ವಾಭಾವಿಕ. ಹೊರಗಿನ ಬಡ್ಡಿಯು ಇಷ್ಟುವರ್ಷ ಸಂದುಬಂದಿದೆಯಾದರೂ ಇನ್ನು ಮುಂದೆ ಹಾಗೆಯೇ ನಡೆಯುವುದು ಕಷ್ಟ. ಈ ವಿಚಾರದಲ್ಲಿ ವಕೀಲನಾಗಿ ಕುಮಟೆ ನಗರವನ್ನು ಸೇರಿದ ಚಲಪತಿಯು ಸಹ ತಲೆಗೆ ಹಾಕಿಕೊಳ್ಳತೊಡಗಿದ್ದಾನೆ. ತಿಂಗಳು ಎರಡು ತಿಂಗಳಿಗೊಮ್ಮೆ ಮನೆಗೆ ಬಂದು ತಂದೆಯೊಡನೆ ಮಂತ್ರಾಲೋಚನೆಯನ್ನು ನಡೆಸತೊಡಗಿದ್ದಾನೆ. ಅವನಿಗೂ ನಾಲ್ವರು ತಮ್ಮಂದಿರು ಇದ್ದಾರೆ. ತಮ್ಮ ಮನೆ ಬಹುದಿನ ಹಿಸೆಯಾಗದೆ ಉಳಿಯಲಾರದೆಂದು ತಿಳಿದು ಬಂದಿದೆ. ಹಿಸೆಯಾದರೆ ಒಬ್ಬೊಬ್ಬರ ಪಾಲಿಗೆ ಬರುವುದು ಬಹು ಸ್ವಲ್ಪ. ಆದುದರಿಂದ ಹಿಂದಿನಂತೆ ಬರಿಯ ಜಮೀನೊಂದನ್ನೇ ತಾವು ಹೊಂದಿಕೊಳ್ಳದೆ, ಬೇರೆ ಏನಾದರೂ ಉದ್ಯೋಗವನ್ನೋ ವ್ಯಾಪಾರವನ್ನೋ ತೊಡಗಬೇಕು. ಓದಿದ ಹುಡುಗರು ಸ್ವತಂತ್ರ ಜೀವನ ಮಾಡಬಲ್ಲರಾದರೂ ಓದದವರ ಜೀವನವು ಕಷ್ಟವಾದೀತು—ಎಂದೆಲ್ಲ ಯೋಚಿಸುತ್ತಿದ್ದಾನೆ.

ಆ ವಿಚಾರವಾಗಿ ಎಷ್ಟೆಷ್ಟು ವಿಚಾರಮಾಡಿದರೂ ತಾವು ಇಂತಹದೇ ಉದ್ಯೋಗನಡೆಯಿಸಬೇಕೆಂದು ಹೊಳೆಯುವುದಿಲ್ಲ. ಅಲ್ಲದೆ ಹೀಗೆಯೇ ಉಳಿದರೆ, ಒಟ್ಟು ಕುಟುಂಬದ ಹೆಸರಿನಲ್ಲಿ ಅದನ್ನು ನಡೆಸಬೇಕಾಗುತ್ತದೆ. ಅಂತಹ ವೇಳೆ ದುಡಿಯುವವರು ಒಬ್ಬಿಬ್ಬರಾದರೆ, ಅದರ ಲಾಭ ಕುಟುಂಬಕ್ಕೆಲ್ಲಾ ಹಂಚಿಹೋಗುತ್ತದೆ. ಇಂಥದೇ ಮೊದಲಾದ ಹಲವಾರು ತೊಡಕುಗಳನ್ನು ಇದಿರುಗಾಣುತಿದ್ದಾನೆ. ಊರಿಗೆ ಬಂದಾಗ ಆತ ತನ್ನ ಹಳೆಯ ಮಿತ್ರನಾದ ಶಿವಪ್ಪನೊಡನೆ ಮಾತನಾಡಿ ಕುಳಿತಿರುವುದುಂಟು. ಆತನಿಗೆ ಮದುವೆಯಾದ

ಒಂದು ವರ್ಷಕಾಲ, ಮನಸ್ತಾಪದಿಂದ ಮಾತನ್ನು ಬಿಟ್ಟಿದ್ದನಾದರೂ, ಈಗ ಹಾಗೇನಿಲ್ಲ. ಊರಿಗೆ ಬಂದಾಗ ತನ್ನ ಅಂತಸ್ತಿಗೆ ಸಮಸಾದ ಜನಗಳೊಡನೆ ಬೆರೆಯಬೇಕೆಂದರೆ ಎಷ್ಟು ಜನ ಸಿಗುತ್ತಾರೆ? "ಶಿವು, ಮದುವೆಯ ವಿಚಾರ ಮರೆತು ಬಿಡು. ನನಗೊಮ್ಮೆ ಬೇಸರವಾದದ್ದು ನಿಜ. ಆದರೆ ನಿನ್ನ ರಂಗ ರಾಯರು ಕೊಟ್ಟಹಾಗೆ, ಐದುವರ್ಷಗಳ ವಿದ್ಯಾಭ್ಯಾಸಕ್ಕೆ ಹಣಕೊಡಲು ನಮ್ಮಿಂದ ಕಷ್ಟವಾಗುತಿತ್ತು. ಆದದ್ದೆಲ್ಲ ಒಳ್ಳೆಯದಕ್ಕೇ. ಈಗ ನೋಡು, ನನ್ನ ತಮ್ಮನೇ ಮೆಡಿಕಲ್ ಓದುತಿದ್ದಾನಲ್ಲ, ಅವನಿಗೆ ತಿಂಗಳು ತಿಂಗಳು ಹಣ ಒದಗಿಸುವ ಕೆಲಸ ಸುಲಭವಾಗಿಲ್ಲ" ಎಂದು ಅವನೊಡನೆ, ತಮ್ಮ ಸುಖ ದು:ಖಗಳನ್ನು ಆತ ಚರ್ಚಿಸುತ್ತಾನೆ. ಇದರಿಂದ ಶಿವಪ್ಪನಿಗೂ ಯೋಚನೆ ಹೊಳೆಯಬೇಕಾಗುತ್ತದೆ. ತಮ್ಮೂರವರ ಪಾಲಿಗೆ ಶ್ರೀಪತಿರಾಯರು ಅಷ್ಟೊಂದು ದೊಡ್ಡ ಸಿರಿವಂತರೆಂದು ಕಾಣಿಸಿದರೂ, ನಿಜದ ಸಂಗತಿ ಹಾಗಿಲ್ಲವಲ್ಲ ಎಂದು ಎನಿಸುತ್ತದೆ. ಅನೇಕ ಬಾರಿ ಊರಿನ ಬಡತನದ ಚಿತ್ರ ಅವನ ಕಣ್ಣ ಮುಂದೆ ಕಟ್ಟುತ್ತಿದ್ದು ಖೇದವುಂಟಾಗುತ್ತದೆ. ಚಲಪತಿಯೊಡನೆ ಆ ಕುರಿತು ಚರ್ಚೆಮಾಡುವುದುಂಟು. "ನೋಡು, ನಮ್ಮೂರು ಹೀಗೆಯೇ ಇದ್ದರೆ ದಿನಹೋದಂತೆ ದರಿದ್ರವಾಗುವುದು ನಿಶ್ಚಯ. ಜನಗಳ ಖರ್ಚುವೆಚ್ಚ ಹೆಚ್ಚುತ್ತಿದೆ. ಊರಲ್ಲಿ ಏನಾದರೂ ಉದ್ಯೋಗವೋ ಕಾರ್ಖಾನೆಯೋ ಹೆಚ್ಚದೆ ಹೋದರೆ ಅವರ ಜೀವನಕ್ಕೇನು ದಾರಿ? ಊರು ಬಿಟ್ಟು ಎಲ್ಲೆಲ್ಲಿಗೆ ಹೋಗಬೇಕು."

"ಈಗಾಗಲೇ ಅಂತಹ ಚಿತ್ರ ಕಾಣುತ್ತಿದೆ. ಹೈಸ್ಕೂಲು ಮುಗಿಸಿದ ಹುಡುಗರನೇಕರು ಜೀವನ ಅರಸಿಕೊಂಡು ಮುಂಬಯಿಗೆ ಹೋಗುತ್ತಿದ್ದಾರೆ. ಹಾಗಾದರೇನು ಚಂದ! ಊರಲ್ಲಿ ಹುಟ್ಟಿದ ಹತ್ತೆಂಟು ಮಕ್ಕಳನ್ನು ಊರು ಸಾಕಲಾರದೆ ಹೋದರೆ ನಿರಾಶೆಯೇ ಗತಿಯಲ್ಲವೆ?" ಎಂದು ಚಿಂತೆ ವಹಿಸುವುದೂ ಉಂಟು.

"ನನ್ನ ಕಣ್ಣೆದುರಿಗೂ ಯಾವ ಯೋಚನೆ ಹೊಳೆಯುವುದಿಲ್ಲ. ಬರಿದೆ ಮೆಟ್ರಿಕ್ ಓದಿಕೊಂಡ ಹುಡುಗರು ಮುಂಬಯಿಗೆ ಹೋಗಿ ಗುಮಾಸ್ತರಾಗುವುದು ಒಂದೇ ದಾರಿ. ಇಲ್ಲದೆ ಹೋದರೆ ಅವರೂ ಊರಲ್ಲಿ ಕುಳಿತಿರಬೇಕು. ಓದಿ, ಉದ್ಯೋಗ ದೊರಕದೆ, ಊರಲ್ಲಿದ್ದು ಪೋಲಿಗಳಾಗುವುದಕ್ಕಿಂತ ಮುಂಬಯಿಗಾದರೂ ಹೋಗಿ ತಮ್ಮ ಜೀವನವನ್ನಾದರೂ ಸಾಗಿಸುತ್ತಿ

ದ್ದಾರಲ್ಲ. ನೋಡು ನಾನೀಗ ಊರಿಗೆ ಬಂದು ನಾಲ್ಕು ವರ್ಷಗಳಾದುವು. ನನಗೇನೊ ಕೈತುಂಬ ಕೆಲಸವಿದೆ. ಜನ ಬರುತ್ತಾರೆ. ಹೋಗುತ್ತಾರೆ. ಪುಣ್ಯ ವಶಾತ್ ಕಾಯಿಲೆಯಾದರೆ–ದೈವ, ಮಂತ್ರವಾದಿಗಳನ್ನು ಕೇಳುವ ಬದಲು ಡಾಕ್ಟರರನ್ನು ಕೇಳುವ ಬುದ್ಧಿ ಜನಕ್ಕೆ ಬರುತ್ತಾ ಇದೆ. ಆದರೆ ಬರುತ್ತಿರುವ ಬಹು ಮಂದಿಯ ಸ್ಥಿತಿಗತಿಗಳನ್ನು ನೋಡಿದರೆ ಅವರಿಂದ ಕಾಸನ್ನೇ ಕೇಳುವು ದಕ್ಕೆ ಮನಸ್ಸು ಬರುವುದಿಲ್ಲ. ನಮ್ಮ ಊರಿನ ಎಲ್ಲ ಮನೆಗಳಿಗೆ ಹೋಗಿಬರು ತ್ತಿದ್ದೇನಲ್ಲ–ಇಂತಹ ನಿಕೃಷ್ಟಸ್ಥಿತಿಯಲ್ಲಿ ನಮ್ಮ ಜನ ಜೀವಿಸುತ್ತಿದ್ದಾರೆ ಎಂಬ ಅನುಭವವೇ ಹಿಂದೆ ನನಗೆ ಇದ್ದಿರಲಿಲ್ಲ. ಕೊಂಡ ಔಷಧಕ್ಕೆ ಬೆಲೆ ಕೊಡುವ ಯೋಗ್ಯತೆ ಇಲ್ಲದವರು ಎಷ್ಟು ಮಂದಿ ಬೇಕು? ಇನ್ನು ಅವರ ಮನೆಗೆ ಹೋದ ಬಗ್ಗೆ ಒಂದೆರಡು ರೂಪಾಯಿಗಳನ್ನು ಕೊಟ್ಟರೆ ಬಹಳ ಹೆಚ್ಚು. ಅದನ್ನು ಹೇಗೆ ಕೊಡುತ್ತಾರೆಂದು ಗೊತ್ತೇ? ನಾಲ್ಕಾಣೆ, ಎರಡಾಣೆ ಪಾವಲಿಗಳನ್ನು, ಕಿಲುಬು ಹಿಡಿದ ಪಾವಾಣೆಗಳನ್ನೂ, ಮಸಿ ಹಿಡಿದ ಸಂದುಕುಳಿಗಳಿಂದ ತೆಗೆದು, ಒಟ್ಟುಮಾಡಿ, ಎಣಿಸಿ,ಕೊಡುವಾಗಲೇ ಕೊಡುವ ಕೈಯೂ ನಡುಗು ತ್ತಿರುತ್ತದೆ.

"ಹಾಗೆ ನಾನು ಇಲ್ಲಿಗೆ ಬರುವಾಗ ಒಂದು ಕನಸನ್ನು ಕಟ್ಟಿಕೊಂಡೇ ಬಂದಿರುತ್ತೇನೆ. ಅದು ಕನಸಾಗಿಯೇ ಉಳಿಯಬಹುದು ಅಥವಾ ಬಹು ಕಾಲದ ಬಳಿಕ ಸಾಧ್ಯವಾಗಲೂ ಬಹುದು. ಬಂದ ರೋಗಿಗಳಿಗೆ ಮಲಗಿ ವಿರಮಿಸುವುದಕ್ಕೆ ನಾಲ್ಕೆಂಟು ಹಾಸಿಗೆಗಳುಳ್ಳ ಒಂದು ವಾರ್ಡನ್ನು ಕಟ್ಟಿಸ ಬೇಕು. ಶಸ್ತ್ರಕ್ರಿಯೆಗೊಂದು ಕೊಠಡಿಯಾಗಬೇಕು. ಚೆನ್ನಾದ ದವಾಖಾನೆ ಬೇಕು. ತಕ್ಕ ಪರಿಚಾರಕರೂ ಬೇಕು. ಎಂದೆಲ್ಲ ನೆನೆದೇ ಬಂದೆ. ಈ ಹೊತ್ತು ಕೆಲಸಮಾಡುತ್ತ ಹೋದಂತೆ 'ಇಂತಹ ಮದ್ದನ್ನು ತರಿಸಿಕೊಡಿ' ಎನ್ನುವುದ ಕ್ಕಿಲ್ಲ, ಸಾಕಷ್ಟು ಔಷಧ ಸಂಗ್ರಹ ಮಾಡಿರಿಸಿಕೊಳ್ಳುವುದಕ್ಕೂ, ತಕ್ಕಷ್ಟು ಶಸ್ತ್ರೋಪಕರಣಗಳ ತಂದಿರಿಸಿಕೊಳ್ಳುವುದಕ್ಕೂ ತ್ರಾಣವಿಲ್ಲದೆ ತಣ್ಣಗೆ ಕುಳಿ ತ್ತಿದ್ದೇನೆ.

ಎಷ್ಟೋಬಾರಿ ರೋಗಿಗಳ ಮನೆಗೆ ಹೋಗಿ, ಅವರನ್ನು ಅಲ್ಲೇಬಿಟ್ಟು ಬರುವುದಕ್ಕೆವ್ಯಥೆಯಾಗುತ್ತದೆ.ಅಲ್ಲಿ ಮಲಗುವುದಕ್ಕೆ ಒಂದು ಹಾಸಿಗೆಯಿಲ್ಲ, ಒರಗುವುದಕ್ಕೆ ಒಂದು ದಿಂಬಿಲ್ಲ, ಗಾಳಿಬೆಳಕುಗಳ ಸುದ್ದಿಯನ್ನು ಕೇಳ ಬೇಡಿ. ತಕ್ಕ ಅನುಪಾನವಿಲ್ಲದೆ ಇವನನ್ನಿಲ್ಲಿ ಬಿಟ್ಟರೆ ಸಾಯುವುದು ಖಂಡಿತ–

ಎಂದು ಮನಸ್ಸನ್ನು ಕಠಿಣಮಾಡಿಕೊಂಡು ಮನೆಗೆ ಮರಳಬೇಕಾಗುತ್ತಿದೆ. ಅವನ ಮನೆಯವರು ತಿರುಗಿ ಮದ್ದಿಗೆ ಬರುವುದಿಲ್ಲ; ಬಂದರೂ ಒಂದೆರಡು ಸಾರಿ ಮಾತ್ರ. ಆದರೆ ಎರಡು ಮೂರು ತಿಂಗಳು ಕಳೆದ ಮೇಲೆ ಅದೇ ಜೀವ ಹೇಗೋ ಹೇಗೋ ಚೇತರಿಸಿಕೊಂಡು ಎರಡು ಸೌತೆಕಾಯಿಗಳನ್ನೊ, ನಾಲ್ಕು ಹಾಗಲಕಾಯಿಗಳನ್ನೊ ಹಿಡಿದುಕೊಂಡು ಬಂದು ವೈ ಬಗ್ಗಿಸಿ ನಮಸ್ಕಾರ ಮಾಡಿ 'ನಾನು ಒಡೆಯ, ನೀವು ಬಂದು ಮದ್ದು ಕೊಟ್ಟಿರಲ್ಲ. ನಾನು ಅದು–ಕೋಡಿಬೈಲಿನವ ಗಣಪ, ನಿಮಗೆ ಮರೆತು ಹೋಯಿತೆಂದು ಕಾಣುತ್ತದೆ' ಎನ್ನುವಾಗ ನನಗೆ ವಿಚಿತ್ರವೆನಿಸುತ್ತದೆ. 'ಅವನನ್ನುಳಿಸಿದವನು ನಾನಲ್ಲ, ಅವನು ನಂಬಿದ ದೈವ' ಎಂದೆನಿಸುತ್ತದೆ. ಹೀಗಿದೆ ಊರ ಸ್ಥಿತಿ."

ಇಂಥ ಮಾತುಗಳು ಬಂದಾಗ, ಚಲಪತಿಗೂ ತುಸು ಆಸಕ್ತಿಯು ಹುಟ್ಟುತ್ತದೆ. ಆತ ಕೇಳುತ್ತಾನೆ–"ಹಾಗೆ ಒಂದು ಚೆನ್ನಾದ Lying-in hospital ಮಾಡಿದರೆ, ವ್ಯವಹಾರದೃಷ್ಟಿಯಿಂದ ಪ್ರಯೋಜನವಾಗಲಾರದು ಎನ್ನುತ್ತೀಯ" ಎಂದು.

"ಈ ಊರಿನಲ್ಲೇ? ಪ್ರಯೋಜನ ಜನಕ್ಕಂತು ಅದರಿಂದ ಬಹಳವಾಗಿ ಆದೀತು. ಆದರೆ ನಮಗೂ ಆದೀತು ಹಣಕಾಸು, ವ್ಯವಹಾರ–ಎನ್ನುವುದು ಕಷ್ಟ."

"ನನ್ನ ತಮ್ಮನ ಅಭ್ಯಾಸವನ್ನು ಮುಗಿಸಿ ಬಂದ ಮೇಲೆ ನೀನೂ ಅವನೂ ಸೇರಿ ಒಳ್ಳೆಯ ಗ್ರೇಂಡ್ ಸ್ಕೇಲಿನಲ್ಲಿ ಒಂದು ಆಸ್ಪತ್ರೆಮಾಡಿದರೇನು?"

"ಗ್ರೇಂಡ್, ಗ್ರೀಂಡ್ ಎಂಬ ಪದವೆಲ್ಲ ಹೆಚ್ಚಿನದು. ತೀರ ಕಟ್ಟುಕಟ್ಟಲೆಯ ರೀತಿಯಿಂದ ಮಾಡಬಹುದು; ನಡೆಯಿಸಬಹುದು. ಅದರಿಂದ ಜನಕ್ಕಂತೂ ತುಂಬ ಉಪಕಾರವಾದೀತು. ಆದರೆ ವಿಶೇಷ ಲಾಭ ಬರಬೇಕು ಎಂದು ಎಣಿಸುವುದು ಈ ಊರಿನ ಮಟ್ಟಿಗೆ ತೀರ ತಪ್ಪೇ ಸರಿ."

"ಮತ್ತೇತಕ್ಕಾಗಿ ಒದ್ದಾಟ, ಹಣ ಬಾರದೆ ಹೋದರೆ? ನಾವು ಬದುಕ ಬೇಡವೇ?" ಈ ಊರು ಬೇಡವಾದರೆ ಕುಮಟೆ ಯಾಕಾಗಬಾರದು?

"ಇಲ್ಲಿಗಿಂತ ಕುಮಟೆಯಲ್ಲಿಯೆ ಚೆನ್ನಾಗಿ ನಡೆದೀತು. ಅಲ್ಲಿ ಚೆನ್ನಾದ ಒಂದು ಹೆರಿಗೆಯ ಆಸ್ಪತ್ರೆಯನ್ನು ತೆರೆಯಲೂಬಹುದು. Lying-in hospital ನ್ನು ತೆರೆಯಬಹುದು. ದೊಡ್ಡ ಊರು. ಶ್ರೀಮಂತರಿದ್ದಾರೆ, ಓದಿದವರೂ ಇದ್ದಾರೆ. ಎಲೋಪೆಥಿಯ ಮೇಲೆ ಜನಕ್ಕೆ ವಿಶ್ವಾಸವೂ ಬೆಳೆದು

ಬಂದಿದೆ."

"ಹಾಗೆ ಮಾಡುವುದಾದರೆ ನೀನು ಜತೆಗೆ ಸೇರುತ್ತೀಯಾ? ನೀನೂ ನನ್ನ ತಮ್ಮನೂ ಸೇರಿ ಮಾಡಿರಿ; ನಾನೂ ಇದ್ದೇನೆ. ಅದರ ಬಿಸ್‌ನೆಸ್ ಮೆನೇಜ್ ಮೆಂಟ್ ಬೇಕಾದರೆ ನಾನು ನೋಡಬಲ್ಲೆ. ಸರಕಾರಿ ಆಸ್ಪತ್ರೆಗಳಿಗಿಂತ ಚೆನ್ನಾಗಿ ನಡೆಸಬಹುದು. ಮಿರಜ್ ಮೊದಲಾದ ಊರುಗಳಲ್ಲಿ ಮಿಷನೆರಿಗಳು ಎಷ್ಟು ಚೆನ್ನಾಗಿ ಆಸ್ಪತ್ರೆ ನಡೆಸುತ್ತಾ ಇಲ್ಲ; ಅವನ್ನೇನು ತೀರ ಧರ್ಮಕ್ಕಾಗಿ ನಡೆಸುತ್ತಾರೆಯೇ."

"ಅವರು ನಡೆಯಿಸುತಿದ್ದಾರೆ.ಅವರಿಗೆ ಆರಂಭದಲ್ಲಿ ಒಳ್ಳೆಯ ಸಹಾಯ ದೊರೆತಿದೆ. ಹಣ ಇರಲಿ ಇಲ್ಲದಿರಲಿ, ಅವರ ಸಂಸ್ಥೆಗಳಲ್ಲಿ ದುಡಿಯುವಂಥ ಜನಗಳೂ ತುಂಬ ಇದ್ದಾರೆ. ಹಾಗೆಯೇ ನಾವೂ ಕೆಲವು ವರ್ಷ ದುಡಿದು ಯಶಸ್ಸು ಗಳಿಸಿದರೆ ಮುಂದೆ ಹಣವೂ ಬಂದೀತು. ಆದರೆ ಕಾಳೂರಿನಂಥ ಚಿಕ್ಕ ಊರು ಅದಾವುದಕ್ಕೂ ಹೇಳಿದ್ದಲ್ಲ."

"ಹಾಗಿದ್ದರೆ ನೀನು ಈ ಕಾಳೂರನ್ನು ಹಚ್ಚಿಕೊಂಡು ಮಾಡುತ್ತೀಯೇನು?ಮೂಡಣ ಊರುಗಳಿಂದ ಒಂದಿಷ್ಟು ಮಲೇರಿಯಾ ಹಿಡಿಸಿಕೊಂಡ ರೋಗಿಗಳು ಮಾತ್ರ ಇಲ್ಲಿ ಸಿಕ್ಕಬಹುದು."

"ರೋಗಿಗಳೇ? ಎಲ್ಲ ತೆರನ ರೋಗಿಗಳೂ ಇಲ್ಲಿದ್ದಾರೆ; ಹಳ್ಳಿಯಾಗಲಿ, ಪೇಟೆಯಾಗಲಿ, ಇರುವವರೆಲ್ಲ ಮನುಷ್ಯರೇ ಅಷ್ಟೆ. ಮನುಷ್ಯ ಸಹಜವಾದ ರೋಗಗಳೆಲ್ಲಾ ಇವೆ. ಗುಪ್ತ ಕಾಯಿಲೆಗಳೂ ಇವೆ. ಸಾಮಾನ್ಯವಾಗಿ ಅಂಥವರನ್ನೇ ಹಿಂಡಿ ಡಾಕ್ಟರುಗಳು ಕಾಸುಮಾಡುವುದು. ಆದರೆ ಇಲ್ಲಿ ಇರುವ ಬೇನೆಗಳಿಗೆ ಮುಖ್ಯಕಾರಣ ಬಡತನ; ಅದರಿಂದ ಬರುವ ಅಶಕ್ತಿ ಮೊದಲಾದವುಗಳಿಂದ(Malnutrition)ಬರುವ ಹತ್ತೆಂಟು ವ್ಯಾಧಿಗಳು. ಜನಕ್ಕೆ ಏನು ಬೇನೆ ಬಂದರೂ ತಡೆದುಕೊಳ್ಳುವ ತ್ರಾಣವಿಲ್ಲ. ಬಾಣಂತಿ ಮರಣಗಳ ಸಂಖ್ಯೆಯೆಷ್ಟೆನ್ನುತ್ತೀಯಾ? ಕಾಮಿಲೆ ಸಾರ್ವತ್ರಿಕವಾಗಿ ಹಬ್ಬಿದೆ.ಘಟ್ಟಕ್ಕೆ ಹೋಗಿ ಬರುವವರಲ್ಲಿ ಅದಂತೂ ವಿಪರೀತ ಹೆಚ್ಚು. ಆದರೆ ಈ ಬಡವರ ಬೇನೆಗಳನ್ನು ಕಟ್ಟಿಕೊಂಡು,ಸೇವೆಯಿಂದ ಬರುವ ತೃಪ್ತಿಯನ್ನು ಪಡೆಯಬಹುದೇ ಹೊರತು ದುಡ್ಡಿನಿಂದಲ್ಲ. ಕಷ್ಟದಲ್ಲಿದ್ದವರಿಂದ ನಾವು ದುಡ್ಡನ್ನು ಹಿಂಡಬಹುದು. ಹಾಗೆ ಹಿಂಡುವುದಾದರೆ ದುಡ್ಡು ಮಾಡುವುದಕ್ಕೆ ಇದೊಂದೇ ದಾರಿಯೇನು?

"ಎಷ್ಟೋ ಸಾರಿ, ಅನುಕೂಲವಂತರೂ ಸಹ ನಮ್ಮಿಂದ ಬಿಟ್ಟಿ ಸೇವೆ

ಮಾಡಿಸಿಕೊಳ್ಳುವುದಕ್ಕೆ ಸಿದ್ಧರೇ. ಒಬ್ಬ ಶ್ರೀಮಂತರಲ್ಲಿ ಒಮ್ಮೆ ಹೆರಿಗೆಯ ಕೇಸಿಗೆ ಹೋಗಿದ್ದೆ. ಒಂದು ತಿಂಗಳಿಂದ ಗರ್ಭಿಣಿಗೆ ಮದ್ದು, ಇಂಜಕ್ಷನು ಕೊಟ್ಟಿದ್ದೆ. ಫಾರ್ಸೆಪ್ಸ್ ಡೆಲಿವರಿಯಾಗಬೇಕಾಯಿತು. ಈಗ ಮೂರು ತಿಂಗಳಿನಿಂದಲೂ ಏನೇನೋ ಚಿಕಿತ್ಸೆಯ ಒದ್ದಾಟ ನಡೆಯುತ್ತಾ ಇದೆ. ಕೈ ತುಂಬ ಹಣ ಕೊಡಬಹುದಾದವರು ಅವರು. ಆದರೆ ಈ ತನಕ ಏನೇನೂ ಕೊಟ್ಟಿಲ್ಲ. ಹೋಗದೆ ಕುಳಿತಿರಲಾರೆ. ನಿರಪರಾಧಿಯಾದ ಆ ನರಳುವ ಜೀವಿಯನ್ನು ಕಂಡು ದುಃಖವಾಗುತ್ತದೆ."

"ಯಾರಪ್ಪಾ ಅದು?"

"ಯಾರು ಅನ್ನುವ ಹಾಗಿಲ್ಲ. ನನಗೂ ಅವರ ಹಂಗಿದೆ. ಕೇಳದೆಯೇ ಕುಳಿತಿದ್ದೇನೆ. ಕೊಟ್ಟಾರು, ಕೊಡದೆ ಇರಲಾರರು ಅನಿಸುತ್ತಿದೆ. ನಿನಗೆ ಉದಾಹರಣೆಗಷ್ಟೇ ಹೇಳಿದೆ. ಈ ಊರಿನ ಸಂಗತಿಗಳೆಲ್ಲ ಹೀಗಿವೆ. ದುಡ್ಡು ಒಂದರದೇ ಭ್ರಮೆಯನ್ನಿರಿಸಿಕೊಂಡರೆ ಇಲ್ಲಿ ಯಾರೂ ಬಹುಕಾಲ ನಿಲ್ಲಲಾರರು."

"ಹಾಗಿದ್ದರೆ ನೀನು ಖಂಡಿತವಾಗಿ ಯೋಚನೆಮಾಡು—ಕುಮಟೆಗೇನೆ ಬಂದುಬಿಡು. ಒಂದು ವರ್ಷದೊಳಗಾಗಿ ಒಳ್ಳೆಯ ಕಟ್ಟಡದ ಏರ್ಪಾಟನ್ನು ಮಾಡಬಹುದು. ಅದಕ್ಕೆ ಮೂಲಧನ ನಾವು ಹಾಕಬೇಕಾಗಿ ಇಲ್ಲ. ನಮ್ಮ ಆಯಕ್ಕೆ ಸರಿಯಾಗಿ ನಮಗೆ ಬೇಕಾದ ರೀತಿಯ ಕಟ್ಟಡ ಕಟ್ಟಿಸಿ ಬಾಡಿಗೆಗೆ ಕೊಡಬಲ್ಲವರಿದ್ದಾರೆ. ಅಲ್ಲಿ ನನಗೆ ನಾಲ್ಕು ಜನಗಳ ಗುರುತಿದೆ. ಅದೊಂದು ಕಷ್ಟದ ಕೆಲಸವಲ್ಲ."

"ಹೂಂ, ನಿನ್ನ ತಮ್ಮನಿಗೋಸ್ಕರ ಹಾಗೆ ಮಾಡಬಹುದಲ್ಲ."

"ಅಂದರೆ ನೀನು?"

"ನನಗೆ, ಸುಖವೋ ದುಃಖವೊ, ಈ ಊರಲ್ಲಿಯೇ ಇರಬೇಕು; ನನ್ನಿಂದಾಗುವ ಸೇವೆ ಇಲ್ಲಿಯೇ ನಡೆಯಬೇಕು ಎಂದಿಚ್ಛೆ."

"ಏನು ಹುಚ್ಚು ಸೆಂಟಿಮೆಂಟ್—ಇಷ್ಟೆಲ್ಲ ತಿಳಿದು ತಿಳಿದೂ!"

"ನನಗೆ ನೋಡು, ಚಲಪತಿ, ಅತಿಯಾಸೆಯಿಲ್ಲ; ಇವತ್ತು ನಾನು ಉಪವಾಸಬಿದ್ದಿಲ್ಲ. ಅಷ್ಟರಮಟ್ಟಿಗೆ ಅನುಕೂಲವಾಗಿದೆ. ಎಷ್ಟೋ ಹೊಸಬರು ಒಂದು ಊರಿಗೆ ಹೋಗಿ, ಅಲ್ಲಿ ಎರಡುಮೂರು ವರ್ಷಕಾಲ ಒದ್ದಾಡಿ, ಸಂಪಾದನೆಯಿಲ್ಲದೆ ಆ ಊರನ್ನೇ ಬಿಟ್ಟದ್ದಿಲ್ಲವೆ? ಅಷ್ಟು ಕೆಟ್ಟದಾಗಿಲ್ಲ ನನ್ನ ಸ್ಥಿತಿ.

ನನ್ನ ಕನಸುಗಳೆಲ್ಲವು ನಿಜವಾಗಲಾರವು. ನನಗೆ ಹೆಚ್ಚಿಗೆ ಏನೂ ಬೇಡ, ಸದ್ಯಕ್ಕೆ ನಾನು ಹೇಳಿದಂತೆ ಮದ್ದು ಸಿಗುವ ಒಂದು ಅಂಗಡಿ, ಒಳ್ಳೆಯ ಒಬ್ಬಳು ಸೂಲಗಿತ್ತಿ, ಬುದ್ಧಿ ಇರುವಂಥ ಒಬ್ಬ ಕಂಪೌಂಡರ—ಇಷ್ಟಿದ್ದರೆ ಸಾಕು. ಇವತ್ತು ತ್ವರಿತಕ್ಕೆ ಒಂದು ಔಷಧ ಬೇಕಾದರೆ ನನ್ನಲ್ಲಿಲ್ಲ; ಅಂದರೆ ದುಡ್ಡಿಲ್ಲ.ಹುಬ್ಬಳ್ಳಿಗೆ ಜನ ಓಡಿಸಬೇಕು. ಅದಕ್ಕೇನೆ ಮದ್ದು ಸಾಹುಕಾರನಿಗೆ ಗಾಳಿ ಹಾಕಿದ್ದೇನೆ—ನನಗೆ ಆಗಾಗ ಬೇಕಾಗುವ ಕೆಲವೊಂದು ಪೇಟೆಂಟ್ ಔಷಧಗಳನ್ನು ತರಿಸಲು. ಹೇಗೂ ಅಂಗಡಿಯಿದೆ. ಜತೆಯಲ್ಲಿ ಒಂದೆರಡು ಕಪಾಟುಗಳನ್ನು ಸೇರಿಸಿದರಾಯಿತು. ಆಗಾಗ ಹುಬ್ಬಳ್ಳಿಗೆ ಹೋಗಿ ಬರುತ್ತಾನೆ. 'ಆಗಲಿ, ನೋಡುವ' ಎಂದಿದ್ದಾನೆ."

"ಡ್ರಗ್ ಶೋಪಿನಿಂದ ಒಳ್ಳೆಯ ಲಾಭವಿದೆ ಅನ್ನುತ್ತಾರೆ.ನಮ್ಮ ಕುಮಟೆಯಲ್ಲಿ ಒಂದೆರಡು ಅಂಗಡಿಗಳು ಇವೆಯಲ್ಲ, ಬಹಳ ಒಳ್ಳೆಯ ವ್ಯಾಪಾರ ನಡೆಯುತ್ತಾ ಇದೆ."

"ಮುನಾಫೆ ಇರಬಹುದು. ಮುನಾಫೆ—ಎಷ್ಟಕ್ಕೆ ಕೊಂಡು ಎಷ್ಟಕ್ಕೆ ಮಾರುತ್ತಾರೆ ಎನ್ನುವುದರ ಮೇಲಿದೆ. ಆಚೀಚೆ, ಬೇಕಾದಂಥ ಮದ್ದು ಸಿಗದೆ ಹೋದರೆ ಒಂದಕ್ಕೆ ನಾಲ್ಕು ಬೆಲೆಗೆ ಮಾರುವವರೂ ಇದ್ದಾರೆ. ನನಗೆ ನಿತ್ಯದ ಔಷಧಿಗಳನ್ನು ತರಿಸಿಕೊಂಡು, ಈ ಪೇಟೆಂಟ್ ಔಷಧಗಳನ್ನೂ ತಂದಿರಿಸಿಕೊಳ್ಳುವ ತ್ರಾಣವಿಲ್ಲ–ಹಾಗಾಗಿ ಸೋತಿದ್ದೇನೆ."

"ಏನೋಪ್ಪ, ನೀನೇ ಹೀಗೆ ಹೇಳುತ್ತೀ–ಹಣವಿಲ್ಲ ಹಣವಿಲ್ಲ ಎಂದು ರಾಗ ಎಳೆಯುತ್ತೀ, ಊರಲ್ಲಿ ಕೇಳಿದರೆ ಎಲ್ಲರೂ ನಿನ್ನ ಹೆಸರು ಹೇಳುತ್ತಾರೆ. ಶಿವಪ್ಪ ಡಾಕ್ಟರರ ಪ್ರೇಕ್ಟಿಸು ಇನ್ನೊಬ್ಬರಿಗೂ ಇಲ್ಲ ಅನ್ನುತ್ತಾರೆ. ಡಾಕ್ಟರ್ ಮಡಗಾಂವಕರರಿಗೆ ಬಂದಾಗ ಇದ್ದ ಪ್ರೇಕ್ಟಿಸಿನ ಕಾಲಂಶವೂ ಈಗ ಇಲ್ಲ ಅನ್ನುತ್ತಾರೆ."

"ಹಾಗೆ ನಾನಾದರೂ ಬಂದವರಿಗೆಲ್ಲ ಧರ್ಮಾರ್ಥ ಚಿಕಿತ್ಸೆಯನ್ನು ಮಾಡುತ್ತಿದ್ದೇನೆಂದು ತಿಳಿಯಬೇಕಾಗಿಲ್ಲ. ನನ್ನ ಜೀವನವೂ ಸಾಗಬೇಕಲ್ಲವೆ. ನನಗೂ ಅನುಭವವಿದೆ–ನನ್ನಲ್ಲಿಗೆ ಬಂದು ಚಿಕಿತ್ಸೆ ಪಡೆದು, ಬಡತನ ನಟಿಸಿ ಹೋಗುವಂತಹ ಜನಗಳಲ್ಲಿ ಕೆಲವರು ನಿಜಕ್ಕೂ ಕೊಡುವಂಥ ಶಕ್ತಿ ಇದ್ದೂ ನಾಮಹಾಕಲು ಕಲಿತವರಿದ್ದಾರೆಂದು. ಹಾಗೆಂದು, ನನ್ನಲ್ಲಿಗೆ ಬರುವ ಪ್ರತಿಯೊಬ್ಬರನ್ನು ಅನುಮಾನದ ಕಣ್ಣುಗಳಿಂದಲೇ ಕಾಣುವುದಕ್ಕಾಗುತ್ತ

ದೆಯೇ? ಹೇಗಿದ್ದರೂ ನನ್ನ ದುಡಿತದಲ್ಲಿ, ಸಂಪಾದನೆಯಲ್ಲಿ, ನನಗೆ ತೃಪ್ತಿಯಿದೆ. ಆದರೆ ನಾನು ದುಡಿದು ಸಲ್ಲಿಸಬೇಕಾದ ಸಾಲವೂ ಇದೆ.

"ಯಾರಿಗೆ?"

"ನಿನ್ನಲ್ಲಿ ಹೇಳದೆಯೇನು? ನನ್ನ ಮಾವಂದಿರು ಯಾವ ಒಂದು ಶರ್ತವನ್ನು ಹಾಕದೆ, ವಿದ್ಯಾಭ್ಯಾಸದ ಖರ್ಚಿಗೆಕೊಟ್ಟರು. ಅದೇನು ಕಡಿಮೆಯಾಗಿರಲಿಲ್ಲ. ಸುಮಾರು ಐದುಸಾವಿರ ರೂಪಾಯಿಗಳಿಗಿಂತ ಮಿಕ್ಕಿದೆ. ಅದನ್ನು ವರದಕ್ಷಿಣೆಯೆಂದು ತಿಳಿದು, ನಾನು ದಕ್ಕಿಸಿಕೊಳ್ಳುವುದೇ? ಮೊದಲಿಗೆ ಅವರ ಈ ಋಣವನ್ನು ಸಲ್ಲಿಸಿ, ಅನಂತರ ನನ್ನ ಕನಸುಗಳನ್ನು ಸಾಧಿಸಬೇಕು."

"ಅವರು ತಿರುಗಿ ಕೊಡಬೇಕೆಂದು ಕೇಳಿದರೇ?"

"ಹಾಗೆ ಕೇಳಬೇಕೇ?—ಅವರು ಕೇಳಲಾರರು. ಆದರೆ ನನ್ನ ಹೆಂಡತಿ 'ತನ್ನ ತಂದೆಯ ದುಡ್ಡಿನಿಂದ ಸೀವು ದೊಡ್ಡವರಾದಿರಿ' ಎಂದು ತಿಳಿಯುವಂತಾಗಬಾರದಲ್ಲ. ಅದರಲ್ಲಿ ಆತ್ಮಗೌರವವಿಲ್ಲ. ನಾನು ಮರಳಿಕೊಟ್ಟ ಹಣವನ್ನು ಅವರು ಕೊಳ್ಳದೆಹೋದರೆ ಅದನ್ನು ಬೇರೆಯಾಗಿಯೇ ಇರಿಸಬೇಕು, ಅವರ ಹೆಸರಿನಲ್ಲಿ ಸದ್ವಿನಿಯೋಗವನ್ನು ಮಾಡಬೇಕೇ ಹೊರತು ನಾನು ಅದನ್ನು ಅರಗಿಸಿಕೊಳ್ಳುವುದಲ್ಲ."

"ನೀಸಿರಿಸಿಕೊಳ್ಳಬೇಕೆಂದು ನಾನು ಹೇಳಿದೆನೇ? ಅವರ ಮಗಳ ಕೊರಳಿಗೆ ಚಿನ್ನಮಾಡಿಸಿ ಹಾಕು."

"ಒಳ್ಳೆಯ ಲೆಕ್ಕಾಚಾರ ನಿನ್ನದು!"

ಆ ದಿನ ಅವರಿಬ್ಬರು ಔಷಧದ ಅಂಗಡಿ ತೆರೆಯುವ ವಿಚಾರದಲ್ಲಿ ಬಹುಹೊತ್ತು ಮಾತನಾಡಿದರು. ಇದರಿಂದ ಚಲಪತಿಗೆ ಒಂದು ಸುಲಭದ ದಾರಿ ಹೊಳೆದಂತಾಯಿತು. 'ಯಾಕೆ ತಮ್ಮ ಅಣ್ಣ ತಮ್ಮಂದಿರಲ್ಲೇ ಒಬ್ಬನನ್ನು ಆ ಕೆಲಸಕ್ಕೆ ತೊಡಗಿಸಬಾರದು? ಓದನ್ನು ಅರ್ಧ ನಿಲ್ಲಿಸಿದವರಿದ್ದಾರೆ. ಅವರಿಗೊಂದು ಉದ್ಯೋಗವಾಯಿತು. ಸಾವಿರ ಎರಡುಸಾವಿರ ಭಂಡವಳ ಹಾಕಿದಲ್ಲಿ ಒಬ್ಬನ ಜೀವನವಾದರೂ ಸುಖಮಯವಾದೀತು, ಹೀಗೆ ವಿಚಾರ ಮಾಡುತ್ತ, ಚಲಪತಿಯು ತನ್ನ ಮನೆಯನ್ನು ಸೇರಿದ. ಮನಸ್ಸಿನಲ್ಲೇ ಲಾಭದ ಎಣಿಕೆ ಹಾಕತೊಡಗಿದ. ಯಾವ ಸೋದರನನ್ನು ಅದಕ್ಕೆ ನಿಯೋಜಿಸಬಹುದೆಂದೂ ಯೋಚಿಸಿದ. ಸಂಜೆಯ ತನಕ ಅದೇ ವಿಚಾರವು ಅವನ ತಲೆಯಲ್ಲಿ

ಸುತ್ತಿ ಸುಳಿದು, ಆತ ಇನ್ನೊಮ್ಮೆ ಗೆಳೆಯನ ದವಾಖಾನೆಗೆ ಬಂದ. ಬಂದವನೇ "ಶಿವೂ, ಈಗ ಮಾಧು ಡ್ರಗ್ ಶೋಪ್ ತೆರೆಯುವುದು ನಿಶ್ಚಯವಾಗಿಲ್ಲವಲ್ಲ. ಅದರಿಂದ ತೊಂದರೆಯೇನೂ ಇಲ್ಲ. ಒಬ್ಬನು ಮದ್ದಿನ ಅಂಗಡಿಯನ್ನು ತೆರೆದರೆ ಇನ್ನೊಬ್ಬನು ತೆರೆಯಬಾರದೆಂದಿಯೆ?"ಎಂದು ಕೇಳಿದ.

"ಯಾಕೆ ಹಾಗೆನ್ನುತ್ತೀಯಾ?"

"ಅಲ್ಲ-ನಮ್ಮ ಮನೆಯಲ್ಲಿ ನನ್ನ ತಮ್ಮಂದಿರ ದೊಡ್ಡದೊಂದು ಹಿಂಡೇ ಇದೆಯಲ್ಲ. ಒಬ್ಬನಿಗೆ ಅಂತಹ ಒಂದು ಅಂಗಡಿ ಮಾಡಿಸಿಕೊಡಬಹುದು-ಎಂದು ನನಗನಿಸಿತು. ಆದರೆ ಅದಕ್ಕೆ ನಿನ್ನ ಮನಃಪೂರ್ವಕವಾದ ಬೆಂಬಲ ವಿದ್ದರೆ ಮಾತ್ರ ಅದು ಸಾಧ್ಯ. ನಾನು ನಿನ್ನೊಡನೆ ಮಾತನಾಡಿ ಹೋದ ಮೇಲೆ ಅದೇ ಸಂಗತಿಯನ್ನು ಯೋಚಿಸಿ, ಯೋಚಿಸಿ, ಆ ಕೆಲಸವನ್ನು ಮಾಡಿದರೂ ಮಾಡಬಹುದು-ಎಂದು ನಿರ್ಧರಿಸಿ ಈಗ ನಿನ್ನನ್ನೇ ಕೇಳುವ ಎಂದು ಬಂದೆ."

"ಚಲಪತಿ, ಈ ಊರಲ್ಲಿಡುವುದು ಬೇಡ. ನಾನು ಮಾಧುವಿಗೆ ಆ ಸೂಚನೆ ಕೊಟ್ಟದ್ದಾಯಿತು. ಕೊಟ್ಟ ಮೇಲೆ ನಾನೇ ಅವನ ಕೈಯನ್ನು ಬಿಡ ಬಾರದು. ಅವನಾಗಿ ಆ ಕೆಲಸವನ್ನು ಮಾಡದೆಹೋದರೆ ಆಗ ನಿನಗೆ ತಿಳಿಸು ತ್ತೇನೆ. ಇಲ್ಲದೆಹೋದರೆ, ನಾನು ಅವನನ್ನು ಅನಾವಶ್ಯಕವಾಗಿ ನಷ್ಟಕ್ಕೆ ತಳ್ಳಿ ದಂತಾಗುತ್ತದೆ. ಇಬ್ಬಿಬ್ಬರು ಆ ವ್ಯಾಪಾರವನ್ನು ಮಾಡುವಷ್ಟು ದೊಡ್ಡ ಊರಲ್ಲ ನಮ್ಮದು."

ಸಂಜೆ ಸ್ವಲ್ಪ ಹೊತ್ತು ಅಲ್ಲಿಯೆ ಮಾತನಾಡುತಿದ್ದು, ಚಲಪತಿ ಮನೆಗೆ ಹಿಂದಿರುಗಿದ. 'ಶಿವಪ್ಪ ತನ್ನ ಆಪ್ತ ಗೆಳೆಯನಾಗಿದ್ದು, ಇಂಟರ್ ಓದುವಾಗ ತನಗೂ ಸ್ವಲ್ಪ ಋಣಿಯಾಗಿದ್ದು, ಈಗ ಅದನ್ನೆಲ್ಲ ಮರೆತ ಹಾಗೆ ಕಾಣುತ್ತದೆ, ಎಂದೆನಿಸಿತು. ಇನ್ನೊತ್ತಟ್ಟಿ 'ಈ ಶಿವು ವ್ಯವಹಾರ, ಲೌಕಿಕ ಚೆನ್ನಾಗಿ ಬಲ್ಲವ ನಲ್ಲವೇ ಅಲ್ಲ' ಎಂದೂ ಕಂಡಿತು. ಒಬ್ಬ ಬರಿಯ ಆದರ್ಶವನ್ನು ಹಿಂಬಾಲಿಸಿ ಕೊಂಡು ಹೋದರೆ, ಸುಗಮವಾಗಿ ಬದುಕುವುದು ಸಾಧ್ಯವಿಲ್ಲವೆಂದು ಅವನಿಗನಿಸುತ್ತಿತ್ತು. ಹಾಗಲ್ಲದೆ ಹೋದರೂ 'ಶಿವನನ್ನು ಕುರಿತು ಅನಾದರ ತಾಳುವುದು ತಪ್ಪು. ಆತ ಆದರ್ಶವಾದಿ ನಿಜ. ಅವನ ವಿಚಾರದಲ್ಲಿ ಗೌರವ ವನ್ನೇ ತಾಳಬೇಕಾಗುತ್ತದೆ' ಎಂದೂ ತೋರಿತು. ಆದರೆ ಆ ಸಂಗತಿಗಳನ್ನು ಎಣಿಸುತ್ತ ಹೋದಂತೆ, ಅವನಿಗೆ ಒಪ್ಪದಿದ್ದ ಸಂಗತಿಯೆಂದರೆ, ಶಿವು ಮಾಧವ ನಂತಹ ವ್ಯಕ್ತಿಯನ್ನು ಮುಂದಿಟ್ಟುಕೊಂಡು ಕೆಲಸಮಾಡುವುದು. ಅವ

ನಿಗೆ ಚೆನ್ನಾದ ಹೆಸರೂ ಇಲ್ಲ. ಅವನ ಸಂಗತಿಗಳನ್ನು ತಿಳಿಯದವರಿಲ್ಲ. ಆ ಮದ್ದುವಿನಂತಹ ಉಂಡಾಡಿಯ ಸ್ನೇಹವನ್ನು ಶಿವು ಮಾಡುವುದಾಗಲೀ, ಅವನ ಔಷಧದ ಅಂಗಡಿಗೆ ಆತ ಬೆಂಬಲ ಕೊಡುವುದಾಗಲೀ ಒಳಿತಲ್ಲ. ಅವರಿಬ್ಬರ ಸ್ನೇಹದ ಪರಿಣಾಮವು ಒಳ್ಳೆಯದಾಗಲಾರದು-ಎಂದು ತೋರ ತೊಡಗಿತು. ಮಾಧವ ದುಂದುಗಾರ, ವ್ಯಸನಿ, ಎಂದು ಜಗಜ್ಜಾಹೀರಾಗಿದೆ. ಆತ ತನ್ನ ಮನೆಯನ್ನುಳಿಸಿಕೊಳ್ಳುವುದೇ ಕಷ್ಟದ ಮಾತು. ಆದುದರಿಂದ ಇನ್ನೊಮ್ಮೆ ಶಿವನಲ್ಲಿ ಹೋದಾಗ'ಅವನ ಸ್ನೇಹ ಒಳ್ಳೆಯದಲ್ಲ', ಎಂದು ಬೋಧಿಸುವೆನಾಗಿ ಯೋಚಿಸಿದ. ಅಂತೂ ಆ ಬಾರಿ ಬಂದಾಗ ಯಾವ ಸಂಗತಿಯೂ ನಿಶ್ಚಯವಾಗದೆ, ಅವನು ಕುಮಟೆಗೆ ಮರಳಿದ. ತನ್ನ ಉದ್ಯೋಗದಲ್ಲಿ ನಿರತನಾದ.

ಶಿವಪ್ಪನವರ ತಂದೆ ಕಿಟ್ಟಪ್ಪಮಾಸ್ತರರಿಗೂ ಸಹ ಮಾಧವನ ಸ್ನೇಹದ ವಿಚಾರದಲ್ಲಿ ಸಮಾಧಾನವಾವಿದ್ದಿರಲಿಲ್ಲ. ಮಗನಿಗೆ ಅವರು ಹೇಳಿಯೂ ಹೇಳಿದರು: "ನೀನು ಆ ಮದ್ದುವಿನೊಡನೆ ತುಂಬ ಸ್ನೇಹದಲ್ಲಿರುವುದನ್ನು ಕಂಡು ನಮ್ಮ ಸಾಹುಕಾರರಿಗೂ ಬೇಸರವಾಗಿದೆ. ಈ ಸ್ನೇಹ ಒಳ್ಳೆಯದಕ್ಕಲ್ಲ- ಎಂದು ಅವರು ಹೇಳುತ್ತಾರೆ. ಅವನು ದಿನವೆಲ್ಲ ನಿನ್ನ ಅಂಗಡಿಗೆ ಬಂದು ಹೋಗುವುದು ಚಂದವಲ್ಲ. ಅವನು ತೀರ ಅಪಾಪೋಲಿ. ಅವನಿಗೆ ಯಾವ ಚಾಳಿಯುಂಟು, ಯಾವುದು ಇಲ್ಲ-ಎನ್ನುವ ಹಾಗಿಲ್ಲ" ಎಂದೂ ಅಂದರು. ಶಿವು ಅದಕ್ಕೆ "ನಾನಾಗಿ ಅವನಿರುವಲ್ಲಿಗೆ ಹೋಗುತಿದ್ದೇನೆಯೆ? ಕೆಲಸವಿಲ್ಲದೆಯೇ ಹಾಗೆ ಹೋದದ್ದೆಂಬುದೇ ಇಲ್ಲ. ಮನೆಯಲ್ಲಿ ಅವನ ಹೆಂಡತಿಗೆ ಹುಶಾರಿಲ್ಲ, ಮಗುವಿಗೆ ಹುಶಾರಿಲ್ಲ ಎಂದರೆ ಹೋಗಿಬರುತ್ತಿದ್ದೇನೆ ಹೊರತು ಹರಟೆಗೆ ಹೋಗಿಲ್ಲ. ನನ್ನ ಕೆಲಸಬಿಟ್ಟು ಕದಲುವುದಕ್ಕೆ ನನಗೆ ವ್ಯವಧಾನವಿಲ್ಲ. ದವಾಖಾನೆಯಲ್ಲಿ ನಾನಿರುವಾಗ ಆತ ಬರುತ್ತಾನೆ, ಒಂದಿಷ್ಟು ಹರಟೆ ಹೊಡೆಯುತ್ತಾನೆ; ಹೋಗುತ್ತಾನೆ. ಬರಬೇಡ ಎನ್ನಲಿಕ್ಕಾಗುತ್ತದೆಯೆ? ಅವನು ಎಂಥವನೆಂಬುದೂ ನನಗೆ ಗೊತ್ತು. ವ್ಯಸನಿ-ನಿಜ. ಆದರೆ ಅವನ ಸ್ವಭಾವ ಜನ ಹೇಳುವಷ್ಟು ಕೆಟ್ಟದಲ್ಲ. ಯಾರು ಏನು ಸಹಾಯ ಕೇಳಿದರೂ ಆ ಕ್ಷಣಕ್ಕೆ ತನ್ನಿಂದಾದರೆ ಮಾಡಿಯೇ ಮಾಡುವಂಥವ."

"ಅದೇನೋ ನಿಜ. ನನ್ನ ಕಣ್ಣ ಮುಂದೆ ಬೆಳೆದ ಹುಡುಗನಲ್ಲವೆ? ನಾನು ಕಂಡಿಲ್ಲವೇ? ಆದರೆ ಅವನಿಗೆ ಹುಡುಗಿಯರ ವ್ಯಾಮೋಹ ಹೆಚ್ಚು.

ಈಚೀಚೆಗೆ ಅವನೂ ಕೆಲವರೂ ಸೇರಿ ಇಸ್ಪೀಟಾಟಕ್ಕೆ ತೊಡಗಿದ್ದಾರೆ ಎಂದೂ ಕೇಳಿದೆ. ಹೀಗೆ ಜುಗಾರಿಯ ಚಟ ಹಚ್ಚಿಕೊಂಡವರು ಮೇಲಕ್ಕೆ ಬರುವುದು ಸಾಧ್ಯವೇ? ಅದಕ್ಕಲ್ಲವೆ ಅವನ ಮನೆಯವರು ಅವನನ್ನು ಬೇರೆಯಾಗಿಯೇ ಇರಿಸಿದ್ದು? ಅವನ ಪಾಲಿನ ಭೂಮಿಯ ಹುಟ್ಟುವಳಿಯನ್ನುಅವನ ಮುಖಕ್ಕೆ ಎಸೆಯುತ್ತಿರುವುದು? ಮೊನ್ನೆ ಅವನ ತಂದೆಯೇ ಅಂದರು–ಆದಷ್ಟು ಬೇಗ ಅವನ ಪಾಲುಕೊಟ್ಟು ರಿಜಿಸ್ತ್ರಿ ನಿಶಿ ಬಿಡುಗಡೆಮಾಡುವುದೊಳ್ಳೆಯದೆಂದು.

ತಂದೆಯ ಮಾತುಗಳನ್ನು ಕೇಳಿ ಶಿವಪ್ಪನವರ ಮನಸ್ಸು ತುಸು ಚಂಚಲಿಸಿತು. ಮಾಧು ಇಸ್ಪೀಟು ಆಟಕ್ಕೆ ದುಡುಕಿದ್ದಾನೆ-ಎಂಬ ಸಂಗತಿ ಅವನಿಗೆ ತಿಳಿಯದೇ ತಿಳಿಯದು. ಅದನ್ನು ಕೇಳಿಯೂ ನಂಬುವುದು ಕಷ್ಟ. ವ್ಯಾಪಾರದಲ್ಲಿ ಸಾಟಿಯ ಗೊಂದಲಕ್ಕಿಳಿದು ಕೈ ಸುಟ್ಟುಕೊಂಡಿದ್ದಾನೆ–ಎಂಬದು ಅವರಿಗೆ ತಿಳಿದ ಸಂಗತಿ. ಆತ ಜುಗಾರು ಆಡುತ್ತಾನೆ ಎಂಬುದು ಹೊಸ ಸುದ್ದಿ. ಅದು ನಿಜವಾದರೆ ಅದನ್ನು ತಪ್ಪಿಸಬೇಕೆಂದು ಅವರಿಗೆ ತೋರಿತು.

ತಾವು ಕೇಳಿದ ಸುದ್ದಿಯನ್ನು ತಮ್ಮಲ್ಲಿ ಬಚ್ಚಿಟ್ಟುಕೊಳ್ಳುವ ಸ್ವಭಾವ ಅವರದ್ದಲ್ಲ. ಮಾಧು ತನಗೆ ಬೇಕಾದವ, ತನಗೆ ಸಹಾಯ ಮಾಡಿದವ, ಆದುದರಿಂದ ಮರುದಿನವೇ ಅವನನ್ನು ಕರೆದು ಕೇಳಿದರು:“ನೀನು ಆ ಚಟ ಬಿಡದೆ ಹೋದರೆ ನಾನು ನಿನ್ನ ತಂಟೆಗೇ ಬರುವುದಿಲ್ಲ” ಎಂದು ಗದರಿಸಿದರು. ಅವನ ಮುಖ ಸಪ್ಪಗಾಯಿತು. ತನ್ನ ಗುಟ್ಟಿನ ಆಟದ ಸಂಗತಿಯನ್ನೆಲ್ಲ ಡಾಕ್ಟರರಿಗೆ ಯಾರು ತಿಳಿಸಿರಬಹುದು-ಎಂದು ಬೇಸರವಾಯಿತು. ಅದರ ಇಮ್ಮಡಿಯಾದ ವ್ಯಥೆ—ಶಿವಪ್ಪ ಡಾಕ್ಟರರಿಗೆ ತನ್ನ ವಿಷಯದಲ್ಲಿ ಬೇಸರವಾಯಿತಲ್ಲ, ಅಭಿಮಾನ ಹೊರಟು ಹೋಯಿತಲ್ಲ ಎಂಬುದರಿಂದ ಉಂಟಾಯಿತು. ಆ ದಿನ ಆತ ಯಾರೊಡನೆಯೂ ಮುಖವೆತ್ತಿ ಮಾತನಾಡಲಿಲ್ಲ. ಆ ಸಂಜೆ ಡಾಕ್ಟರರು ಮನೆಗೆ ಹೋಗುವಾಗ ಅವರ ಜತೆಯಲ್ಲೇ ಹೊರಟು ಹೋದ. ಅವರೊಡನೆ ಆಣೆಮಾಡಿ ಹೇಳಿದ: “ನಾನು ತಪ್ಪಿದ್ದು ನಿಜ, ಇನ್ನು ಮುಂದೆ ಆ ಕೆಲಸಕ್ಕೆ ಹೋಗುವುದಿಲ್ಲ” ಎಂದ. ಶಿವಪ್ಪನವರಿಗೆ ತುಂಬ ಆನಂದವಾಯಿತು. ಸಂತೋಷದಿಂದ ತಮ್ಮ ಮನೆಗೆ ತೆರಳಿದರು.

ಮನೆಗೆ ಹೋದ ಅವರು ವಾಡಿಕೆಯಂತೆ ಅಂಗಿ ಕಳಚಿದರು. ಕಾಲು ತೊಳೆದುಕೊಂಡು ಬಂದು,ಊಟ ಮುಗಿಸಿ ಮಡದಿಯೊಡನೆ ಹರಟೆಗೆ ಕುಳಿತುಕೊಂಡರು. ಈಗೀಗ ಅವಳನ್ನು ಗೆಲುವಾಗಿರಿಸುವುದಕ್ಕೆ ತಮ್ಮ ಮಾತಿನ

ಪ್ರಯತ್ನವನ್ನೆಲ್ಲ ಮಾಡುತ್ತಿದ್ದಾರೆ. ಅಂದರೆ ಹೊಸ ಬಂಗಲೆಯನ್ನು ಕಟ್ಟಿಸಿ, ಮಡದಿಯನ್ನು ಚಿನ್ನಾಭರಣಗಳಿಂದ ತೃಪ್ತಿಪಡಿಸುವಂತಹ ಯೋಗ ತನಗಿಲ್ಲ ವೆಂದು ಅವರು ತಿಳಿದುಕೊಂಡಂತಿದೆ. ಇಂದುಮತಿ ಅದನ್ನು ಹೇಳಿ, ನೋಡಿ, ಮೂಕಿಯಾಗಿದ್ದಾಳೆ. ಆದರೆ ಅವಳ ಜೀವನದಲ್ಲಿ ಹೊಸ ಆನಂದದ ಕುರುಹು ಮೂಡಿದೆ. ಆಕೆ ತಾಯಿಯಾಗುವವಳಿದ್ದಾಳೆ. ಅಂಥವಳ ಮನಸ್ಸನ್ನು ಉಲ್ಲಾಸವಾಗಿರಿಸಬೇಕು ಎಂಬ ಪ್ರಯತ್ನ ಶಿವಪ್ಪನವರದು. ತಮ್ಮ ವಿರಾಮ ವನ್ನೆಲ್ಲ ಹೆಚ್ಚಾಗಿ ಅವಳೊಡನೆ ಮಾತು ಕತೆಯಲ್ಲಿ ಕಳೆಯುತ್ತಾರೆ. ಅವಳಿಗೆ ಉತ್ತಮ ಆಹಾರ ಒದಗಿಸುತಿದ್ದಾರೆ; ತಮ್ಮ ಉದ್ಯೋಗದ ಕಷ್ಟನಿಷ್ಠುರ ಗಳನ್ನು ಅವಳಿಂದ ಮರೆಯಾಗಿರಿಸುತ್ತಾರೆ. ಆಕೆಗೆ ತಾನು ಗರ್ಭಿಣಿ ಎಂದು ತಿಳಿದಂದಿನಿಂದ ಧಾರವಾಡದ ಹಂಬಲ ಮೇಲಿಂದ ಮೇಲೆ ಬರತೊಡಗಿದೆ. ಗಂಡನೊಡನೆ ಕಾಳೂರನ್ನು ಬಂದು ಸೇರಿದ ಬಳಿಕ, ವರ್ಷಕ್ಕೊಮ್ಮೆ ತಂದೆಯ ಮನೆಗೆ ಹೋಗಿ, ತಿಂಗಳಕಾಲ ತಂದೆ ತಾಯರೊಡನೆ ಹೊತ್ತು ಕಳೆದು ಬಂದಿ ದ್ದಾಳೆ. ಮೊದಲ ಯಾತ್ರೆ ಮಾಡಿದಾಗಲೇ ಅವಳಿಗೆ ತಿಳಿಯಿತು-ತನ್ನ ಯಜ ಮಾನರು ಮಾವನ ಋಣ ತೀರಿಸುವ ಉದ್ದಾಮ ಪ್ರಯತ್ನ ಮಾಡುತ್ತಿದ್ದಾರೆ ಎಂದು. ಮೊದಲನೆಯ ಎರಡು ವರ್ಷಗಳಲ್ಲಿ, ರಂಗರಾಯರು ಬೇಡವೆಂದರೂ ಐನೂರು ರೂಪಾಯಿಗಳ ಎರಡು ಕಂತುಗಳನ್ನು ಮಾವನಿಗೆ ಕಳುಹಿಸಿದ್ದರು. "ಬೇಡ, ನಿನ್ನ ಹೆಂಡತಿಗೆ ಅದರಿಂದ ಚಿನ್ನ ಮಾಡಿಸಿ ಹಾಕು" ಎಂದು ರಂಗ ರಾಯರು ಅಳಿಯನಿಗೆ ಬರೆದರು. "ಸಾಲ ತೀರಿಸುವ ತನಕ ಚಿನ್ನಾಭರಣದ ಮಾತಿಲ್ಲ" ಎಂಬ ಮಾರುತ್ತರ ಬಂದಿತು. ಇದರಿಂದಾಗಿ ಅವರು ಆ ಹಣವನ್ನು ಅವನದೆಂದೇ ತಿಳಿದು ತಮ್ಮ ಬಳಿ ಇರಿಸಿಕೊಂಡರು. ಹಣ ಕಳುಹಿಸಿದ ಸಂಗತಿ ಯನ್ನು ಶಿವಪ್ಪನವರು ಇಂದುವಿಗೂ ಹೇಳಿರಲಿಲ್ಲ. ಅವಳು ಬೇಡವೆಂದಾಳು ಎಂದೋ, ತಾನು ಹಣವನ್ನು ಬೇರೆಯೇ ಕೂಡಿರಿಸುತ್ತಿದ್ದೆನೆಂದು ತಿಳಿದಾ ಳೆಂದೋ ಆ ಸುದ್ದಿಯನ್ನೂ ಹೇಳಿರಲಿಲ್ಲ. ಅದರಿಂದ ಒಂದು ಪ್ರಯೋಜನ ವಾಯಿತು. ತವರಿಗೆ ಹೋದಾಗ ಇಂದುವಿಗೆ ಆ ಸಂಗತಿಗಳೆಲ್ಲ ತಿಳಿದು ಬಂದು, ತನ್ನ ಗಂಡನ ದುಡಿಮೆ ವ್ಯರ್ಥ ಶ್ರಮವಾಗಿಲ್ಲ. ಎಂದೆನಿಸಿತು. ಅದರ ಜತೆಗೆ ತನ್ನ ಗಂಡನು ಪರರ ಋಣವನ್ನು ಇರಿಸಿಕೊಳ್ಳದಂತಹ ಧೀರ ಎಂಬ ಹೆಮ್ಮೆಯೂ ಮೂಡಿತು.

ಹೀಗಾಗಿ ಎರಡನೆಯ ಬಾರಿ ತವರು ಮನೆಯ ಪಯಣಮಾಡಿ ಬಂದ

ಬಳಿಕ, ಮೊದಲಿನ ಬೇಸರದಲ್ಲಿ ಎಷ್ಟೋ ಕಡಿಮೆಯಾಗಿತ್ತು. ಉಲ್ಲಾಸವಾಗಿ ದ್ದಾಳೆ. ಸಂತೋಷವನ್ನು ತನ್ನಲ್ಲಿರಿಸಿಕೊಳ್ಳಲಾರದೆ ಅವಳು ಹಿಗ್ಗಿನಿಂದೊಮ್ಮೆ "ಅಪ್ಪನ ಸಾಲ ತೀರಿದ ಬಳಿಕವಾದರೂ ಮನೆ ಕಟ್ಟಿಸುತ್ತೀರಲ್ಲ?" ಎಂದು ಕೇಳಿದಳು. ಶಿವಪ್ಪನವರು ಚಕಿತರಾದರು. ಮರುಕ್ಷಣ, ಇಂದು ತವರು ಮನೆಯಿಂದ ಬಂದುದರ ಪರಿಣಾಮವಾದ ಮಾತಿದು ಎಂದೆನಿಸಿ ನಕ್ಕರು. "ಹೂಂ. ಮೇಲೆ ನಾನು ದುಡಿದದ್ದನ್ನೆಲ್ಲ ನಿನ್ನ ಕೈಗೇ ಕೊಟ್ಟುಬಿಡುತ್ತೇನೆ. ನಿನ್ನನ್ನು ಕೇಳಿಯೇ ಬೇರೆ ಖರ್ಚುಮಾಡುವುದು" ಎಂದರು.

"ಅದೆಲ್ಲ ಬಲ್ಲೆ. ನೀವು ಗಂಡಸರು–ನೂರು ರೂಪಾಯಿ ಸಂಪಾದಿಸಿ ಹತ್ತನ್ನು ನಮ್ಮ ಕೈ ಮೇಲಿಟ್ಟು, ಅಷ್ಟೇ ಬಂದದ್ದು ಎಂದು ಹೇಳಿ ಎಂಟನ್ನು ಮರಳಿ ಒಯ್ಯುವವರು" ಎಂದು ಆಕೆ ಪರಿಹಾಸ್ಯ ಮಾಡಿದಳು.

"ಹಾಗೂ ಮಾಡುವವರು ಇದ್ದಾರೆ–ನಿಜ. ಆದರೆ ಅದೆಲ್ಲ ಬರುವುದು ಗಂಡ ಹೆಂಡಿರಲ್ಲಿ ಪರಸ್ಪರ ನಂಬಿಕೆ ಇಲ್ಲದಾಗ ಮಾತ್ರ. ಅವರು ಒಬ್ಬರನ್ನೊಬ್ಬರು ನಂಬುವುದಕ್ಕೆ ಕಲಿತರೆ ಅಂಥ ಮುಚ್ಚುಮರೆ ಯಾತಕ್ಕೆ ಬೇಕಾಗುತ್ತದೆ?" ಎಂಪು ಉತ್ತರಿಸಿದರು. ಆಕೆಯ ಪಾಲಿಗೆ ಈ ಮಾತುಗಳು ಅರ್ಥಪೂರ್ಣವಾಗಿ ಕಂಡುವು; ಮನಸ್ಸಿಗೆ ಸಂತೋಷವನ್ನುಂಟುಮಾಡಿದುವು. ಬಹುದಿನ ಅದರ ಸವಿ ಮನಸ್ಸಿನಲ್ಲುಳಿಯಿತು.

ಹೀಗೆ ಒಂದೊಂದು ದಿನ ಗಂಡಹೆಂಡಿರ ಮಾತಿನ ಸೆರಗು ಒಂದೊಂದು ಕಡೆಗೆ ಸರಿಯುತ್ತದೆ. ವಾದ, ವಿವಾದ, ಹಾಸ್ಯ, ಪರಿಹಾಸ್ಯಗಳಾಗಿ ಸಮಯ ಲಘುವಾಗಿ ಹೋಗುತ್ತದೆ.ಹಾಗೆಯೇ ಶಿವಪ್ಪನವರು ಒಂದು ದಿವಸ ಇಂದುವಿನೊಡನೆ "ಏನು ಇಂದೂ, ನಿನಗೆ ಆರು ತಿಂಗಳಾಗುತ್ತ ಬಂದಿತು. ತವರಿಗೆ ಹೋಗಬೇಕೆಂದು ಬಯಸುತ್ತೀಯಾದರೆ ಈ ತಿಂಗಳಲ್ಲಿಯೇ ಹೋಗುವುದು ಒಳ್ಳೆಯದು. ಮಾವನವರಿಂದಲೂ ಕಾಗದ ಬಂದಿದೆ. ನಾನು ಉತ್ತರವನ್ನು ಕೊಟ್ಟಿಲ್ಲ. ಕೇಳಿ ಉತ್ತರ ಹಾಕಬೇಕೆಂದಿದ್ದೆ. ನಾನು ಡಾಕ್ಟರನಾದರೇನಾಯಿತು? ತಾಯಿ ಮನೆಯವರು, ಮೊದಲ ಹೆರಿಗೆಗೆ ಅಲ್ಲಿಗೆ ಬರಲಿ ಎಂದು ಬಯಸುವುದು ತಪ್ಪಲ್ಲ. ಮೊದಲನೇ ಹೆರಿಗೆ! ಇಲ್ಲಿದ್ದರೆ ಒಳ್ಳೆಯದೆಂದು ನನಗನಿಸಿದರೂ,ನೀನು ಅಲ್ಲಿಗೆ ಹೋಗುವುದಾದರೆ ಹೋಗು. ಒಳ್ಳೆಯ ಹೆರಿಗೆಯ ಆಸ್ಪತ್ರೆಯೂ ಅಲ್ಲಿದೆಯಲ್ಲ" ಎಂದರು.

"ಹೋ, ಈಗ ನಾನು ಹೆರಿಗೆಗೆ ಧಾರವಾಡಕ್ಕೆ ಹೋಗಬೇಕೆಂದೋ?

ಈ ಊರವರು ಹೇಳುತ್ತಾರೆ–ನೀವು ಹೆರಿಗೆ ಮಾಡಿಸುವುದರಲ್ಲಿ ಅದ್ವಿತೀಯ ರೆಂದು. ಹಾಗಿದ್ದರೆ ನನ್ನನ್ನು ಧಾರವಾಡಕ್ಕೇಕೆ ಓಡಿಸಬೇಕು?"

"ಅಲ್ಲೇನು–ಡಾಕ್ಟರ್ ಮೋರೆಯವರು ಇದ್ದಾರಲ್ಲ. ತುಂಬ ಹೆಸರಾದವರು. ತಾಯಿಯೋ, ನಿನ್ನ ಅಕ್ಕಂದಿರೋ, ಸಮೀಪವಿದ್ದರೆ ನಿನಗೂ ಸಮಾಧಾನ."

"ನಾನು ಯಾರ ಮೋರೆಯನ್ನೂ ನೋಡುವವಳಲ್ಲ. ಇಲ್ಲಿಯೇ ನನ್ನ ಬಿಡಾರ ಗಟ್ಟಿ. ಹೆರಿಗೆಯಾಗಿ ಮಗುವಿಗೆ ಆರು ತಿಂಗಳಾದ ಮೇಲೆ ಹೋದರೆ ಹೋದೆ."

ಈ ರೀತಿಯ ಮಾನಸಿಕ ಪರಿವರ್ತನೆಗೆ ಕಾರಣವೆಂದರೆ ಊರ ಜನಗಳ ಮಾತು. ಗುಲಾಬಿ ಮೊದಲಾದವರ ಅತಿ ಕಷ್ಟದ ಹೆರಿಗೆಗಳ ವಿಚಾರದಲ್ಲಿ ಶಿವಪ್ಪನವರಿಗೆ ದೊರೆತ ಪ್ರಶಂಸೆ. ಅದರಿಂದ ಆಕೆಗೆ ಯಾವ ಭೀತಿಯೂ ಬಾರದೆ ತಾನು ಗಂಡನ ಮನೆಯಲ್ಲೇ ಹಡೆಯುವುದು ಹಿತವೆಂದೆನಿಸಿತು.

"ಹೋ, ಹಾಗೋ, ಈ ಊರಲ್ಲಿಯೇ ಇದ್ದರೆ ಕಾಸು ಕೊಡದೆ ಹೆರಿಗೆಯಾಗುತ್ತದೆ ಎಂದೋ ನಿನ್ನ ಯೋಚನೆ?" ಎಂದು ಶಿವಪ್ಪನವರು ನಕ್ಕರು.

"ಅಂದರೆ ಗುಲಾಬಿಯ ಹೆರಿಗೆಯಲ್ಲಿ ನಿಮಗೆ ಕಾಸು ಸಿಗಲೇ ಇಲ್ಲವೆ?"

"ಅವಳೇ? ಮುಗುದುಮ್ ಸಾಹೇಬರ ಆಸಾಮಿ. ಅವರ ಅಂಗಡಿಯಲ್ಲಿ ನಾನು ದವಾಖಾನೆಯನ್ನು ತೆರೆದದ್ದು. ವರ್ಷಕ್ಕೆ ಎಪ್ಪತ್ತೆರಡು ರೂಪಾಯಿ ಆಗುತ್ತದೆ. ಬಾಡಿಗೆಯನ್ನೇನೊ ಕೊಡುತ್ತ ಬಂದಿದ್ದೇನೆ. ಈ ವರ್ಷದ್ದು ಮಾತ್ರ ಕೊಟ್ಟಿಲ್ಲ. ಆದರೆ ಗುಲಾಬಿಗಾಗಿ ಕೊಟ್ಟ ಮದ್ದೇನೆ ಐವತ್ತು ಅರವತ್ತು ರೂಪಾಯಿಗಳಿಗೆ ಕಡಿಮೆಯಾಗದು. ಬಿಲ್ ಕಳುಹಿಸಲೇ ಬಿಡಲೇ, ಎಂಬ ಅನುಮಾನ ನನಗೆ. ಹಣದ ಸಂಗತಿ ದೊಡ್ಡದಲ್ಲ, ಕೊಟ್ಟಾರು. ಕೊಡದಿದ್ದರೆ ಬಾಡಿಗೆಯಿಂದ ವಜ ಹೋದೀತು. ಆದರೆ ಅವಳ ಕಾಯಿಲೆಯೇ ಎಂಥದೆಂದು ನನಗೆ ಅರ್ಥವಾಗಿಲ್ಲ."

"ಏನು ಕಾಯಿಲೆಯಂತೆ? ಹೆರಿಗೆಯಾದ ಮೇಲೆ ಸುಖವಾಗಿದ್ದಾಳಂತೆ; ಮಗು ತುಂಬ ಮುದ್ದಾಗಿದೆ ಎಂದು ನಮ್ಮ ಕೆಲಸದವಳು ಹೇಳಿದಳು."

"ಕೆಲಸದವಳಿಗದೆಲ್ಲ ಏನು ಗೊತ್ತು? ಆಕೆ ಬಾಣಂತಿಯಾಗುವ ಮುಂಚೆ, ಅನಂತರ, ದಿನ ಬಿಟ್ಟು ದಿನ ಹೋಗಿ ಬರುತ್ತಿದ್ದೇನೆ–ಸಾಹೇಬರ ಒತ್ತಾಯಕ್ಕೆ. ಹೆರಿಗೆಗೆ ಮೊದಲಂತೂ ಕೆಲವು ದಿನ ತುಂಬ ಕ್ಷೀಣವಾಗಿದ್ದಳು.

ಈಗ ಹಾಗಿಲ್ಲ. ತೋರಿಕೆಗೆ ಆಕೆ ಆರೋಗ್ಯವಾಗಿಯೇ ಕಾಣುತ್ತಾಳೆ. ಮೈ ತುಂಬಿದೆ. ತೂಕ ಹೆಚ್ಚಿದೆ. ಅವಳನ್ನು ಕೇಳಿದರೆ 'ತನಗೆ ತುಂಬ ಕಷ್ಟವಾಗುತ್ತದೆ, ನಡೆಯುವುದಕ್ಕಾಗುವುದಿಲ್ಲ, ಮೈ ನಡುಗುತ್ತದೆ, ಉಸಿರಾಟ ಇನ್ನಷ್ಟು ಕಷ್ಟ' ಎನ್ನುತ್ತಿದ್ದಾಳೆ. ಪರೀಕ್ಷಿಸಿದರೆ ಅಂತಹ ಯಾವ ಕಾಯಿಲೆಯೂ ಕಾಣುವುದಿಲ್ಲ. ಅಪೂರ್ವಕ್ಕೊಮ್ಮೊಮ್ಮೆ ಎದೆ ಬಡಿಯಬಹುದು, ನಾಡಿಯ ಬಡಿತವೂ ಹೆಚ್ಚಾಗಬಹುದು. ಹಾಗೆ ನಾನೇ ಒಮ್ಮೆಗೇ ನಾಲ್ಕು ಸಿಗರೇಟುಗಳನ್ನು ಹೊತ್ತಿಸಿದರೆ ಎದೆಯ ಬಡಿತದಲ್ಲಿ ವ್ಯತ್ಯಾಸ ಕಾಣಿಸಬಹುದು. ಏನಾದರೂ ಮಾನಸಿಕ ಅಸಮಾಧಾನ ಅವಳ ಬೇನೆಗೆ ಕಾರಣವಿದ್ದೀತು."

"ಅವಳಿಗೇನು ಧಾಡಿ? ರಾಣಿಯ ಹಾಗಿದ್ದಾಳಂತೆ. ಕರೆಯಲು ಎಮ್ಮೆ ದನಗಳಿವೆಯಂತೆ. ಕೆಲಸಕ್ಕೆ ಆಳುಗಳಿದ್ದಾರಂತೆ. ಅಲ್ಲದೆ ಹಣ್ಣು, ತರಕಾರಿ ಪ್ರತಿಯೊಂದೂ ಸಾಹೇಬರ ವರಪ್ರಸಾದದಿಂದ ರಾಶಿಗಟ್ಟಲೆ ಮನೆಗೆ ಬಂದು ಬೀಳುತ್ತವೆಯಂತೆ."

"ಅಯ್ಯೋ ಇಂದು, ಸುಖ, ಸಂತೋಷಗಳು ಬರಿದೆ ಉಂಡುಡುವುದರಿಂದಲೇ ಬರುವುದಾದರೆ ಇನ್ನೇನು ಉಳಿಯಿತು! ದುಡ್ಡಿದ್ದವರೆಲ್ಲರೂ ಸುಖವಾಗಿದ್ದಾರೆ ಅನ್ನುತ್ತೀಯಾ? ನಾನು ನೋಡುತ್ತಿದ್ದೇನಲ್ಲ-ಅವರಿಗಿಂತ ಬಡವರು ಎಷ್ಟೋ ಪಾಲಿಗೆ ವಾಸಿ. ತಮಗೆ ಹೊಟ್ಟೆಗೆ ಕಷ್ಟವಾದರೂ ಚಿಂತೆಯಿಲ್ಲದೆ ಸುಖವಾಗಿರುವವರು ಇದ್ದಾರೆ."

"ಇರಬಹುದು. ಆದರೆ ಅವಳಂಥವಳಿಗೆ ಏನು ಚಿಂತೆ ಇದ್ದೀತು? ಜೀವನಕ್ಕೆ ಕಷ್ಟವಾಯಿತೆಂದು ದುಡಿಯಬೇಕೆ? ಮುಸುಡು ನೋಡಿ ದುಡ್ಡು ತಂದು ಸುರಿಯುವವರಿರುವಾಗ?"ಎಂದು ಇಂದುಮತಿ ವಾದಿಸಿದಳು. ಆದಿನ ಆ ವಾದಸರಣಿ ಹೆಚ್ಚಿಗೆ ಮುಂದುವರಿಯಲಿಲ್ಲವಾದರೂ, ಶಿವಪ್ಪನವರ ಮನಸ್ಸಿಗೆ ತಮ್ಮ ರೋಗಿಯನ್ನು ಕುರಿತು ಹುಟ್ಟಿಸಿದ ಚಿಂತೆ ಬಹುದಿನಗಳಿಂದಲೂ ವ್ಯಾಪಿಸಿತ್ತು.

"ಏನು ಡಾಕ್ಟರರೇ, ನೋಡಲಿಕ್ಕೆ ಚೆನ್ನಾಗಿದ್ದಾಳೆ ಅನ್ನುತ್ತೀರಿ, ನನಗೂ ಮೊದಲಿನಂತೆ ಕಾಣಿಸುತ್ತಾಳೆ. ಆದರೆ ಅವಳೆನ್ನುತ್ತಾಳೆ— ಉಸಿರು ಕಟ್ಟಿ ಬರುತ್ತದೆ, ಎಲ್ಲಿಲ್ಲದ ಹೆದರಿಕೆ ಆಗುತ್ತದೆ ಎಂದು. ಆರೋಗ್ಯ ಚೆನ್ನಾಗಿದ್ದರೆ ಹಾಗಾಗುವುದು ಶಕ್ಯವೇ?" ಎಂದು ಸಾಹೇಬರು ಅಸಮಾಧಾನ ತಾಳಿದ್ದಾರೆ.

ಕೊನೆಗೆ ಅವರ ಮನಸ್ಸಿಗೆ ಏನು ಸಂಶಯ ಹೊಳೆಯಿತೋ-ಪ್ರಾಯಶಃ

ಈ ಡಾಕ್ಟರರು ಅವಳ ಚಿಕಿತ್ಸೆಯ ಬಗ್ಗೆ ಏನೂ ಹಣ ಕೊಟ್ಟಿಲ್ಲ ಎಂಬುದರಿಂದ ಉದಾಸೀನರಾಗಿರಬಹುದು—ಎಂದು ಊಹಿಸಿ, ಅವಳ ಮೂಲಕವೇ ನೂರು ರೂಪಾಯಿಗಳ ಒಂದು ನೋಟನ್ನು ಕೊಡಿಸಲು ಏರ್ಪಡಿಸಿದರು. ಹಣಕ್ಕಾಗಿ ಶಿವಪ್ಪ ಡಾಕ್ಟರರ ಪ್ರಯತ್ನ ಎಂದೂ ಕಡಿಮೆಯಾಗಿರಲಿಲ್ಲ. ಇನ್ನೂ ಕಡಿಮೆಯಾಗಲಾರದು. ಒಂದು ದಿನ ಆಸ್ಪತ್ರೆಗೆ ಹೋಗುವ ಮುಂಚೆ, ಅವಳ ಮನೆಯನ್ನು ಹೊಕ್ಕು ನೋಡಲು ಹೋದಾಗ, ಮುದುಕಿ ಅಜ್ಜಿ "ಏನು ಡಾಕ್ಟರರೇ? ನಿಮ್ಮ ಕೈಗುಣದಿಂದ ಗುಣವಾದೀತೆಂದು ಎಣಿಸಿದ್ದೆ. ತನಗೇನೂ ಗುಣವಿಲ್ಲ ಅನ್ನುತ್ತಾಳೆ ಅವಳು" ಎಂದಳು. ವಿರಮಿಸುತ್ತಿದ್ದ ಗುಲಾಬಿ ತನ್ನ ಹಾಸಿಗೆಯನ್ನುಬಿಟ್ಟೆದ್ದು ಬಂದಳು. ಕೈಯಲ್ಲಿದ್ದ ಮಗುವನ್ನು ಎತ್ತಿತೋರಿಸಿ 'ಇದಕ್ಕೆ ಶೀತವಾಗುವ ಹಾಗಿದೆ. ಏನಾದರೂ ಮದ್ದು ಕೊಡಿ' ಎಂದು ಬೇಡಿದಳು. ಡಾಕ್ಟರರು "ಏನಾಗದು-ಇಷ್ಟು ಚಿಕ್ಕಕೂಸಿಗೆ ಈಗಿನಿಂದಲೇ ಮದ್ದು ಕೊಡಿಸುವುದುಬೇಡ. ನೀನು ಆಹಾರದಲ್ಲಿ ಸ್ವಲ್ಪ ಜಾಗ್ರತೆಯಿದ್ದರಾಯಿತು"ಎಂದರು. ಆ ಬಳಿಕ ಅವಳು ಹರಿವಾಣದಲ್ಲಿ ಒಂದು ಹಸುರು ನೋಟನ್ನಿರಿಸಿ ಅವರ ಮುಂದಕ್ಕಿರಿಸಿದಳು. "ಇಷ್ಟು ದಿನ ನಿಮಗೇನೂ ಕೊಟ್ಟಿಲ್ಲ. ಆ ಪ್ರಸ್ತಾಪವನ್ನೇ ಮಾಡಿಲ್ಲ ಎಂದು ಬೇಸರಿಸಬೇಡಿ. ನಾನಾದರೂ ಕೊಡುವುದೆಲ್ಲಿಂದ? ಅಲ್ಲಿಂದ ಬಂದರೆ ಇಲ್ಲಿದೆ" ಎಂದು ಅದನ್ನು ಸ್ವೀಕರಿಸಲು ಒತ್ತಾಯಿಸಿದಳು.

ಶಿವಪ್ಪನವರಿಗೆ ಏನೇನೋ ಅನಿಸಿತು. ತಮ್ಮ ಶ್ರಮಕ್ಕೆ ಒಪ್ಪಿಸಿದ ನೂರು ರೂಪಾಯಿಗಳು ಹೆಚ್ಚಲ್ಲವಾದರೂ, ಬೇನೆ ಸಂಪೂರ್ಣವಾಸಿಯಾಗಿಲ್ಲ ಎಂದೆನ್ನುತ್ತಿದ್ದಾಗಲೇ ಅದನ್ನು ಸ್ವೀಕರಿಸುವುದು ಹೇಗೆ ಎಂಬ ಅಳುಕುಂಟಾಯಿತು. ಅದರಿಂದ "ಅದಿರಲಿ ಈಗ" ಎಂದರು.

"ನಾನು ಕೊಡುವುದಲ್ಲ. ಅವರೇ ಕೊಡು ಎಂದದ್ದು"

"ಅದು ತಿಳಿಯಿತು, ನಿನ್ನಮಾತಿನಿಂದ. ನಿನಗೆ ಚೆನ್ನಾಗಿ ಆರೋಗ್ಯವಾದ ಮೇಲೆ ನಾನು ಹಣ ತೆಗೆದುಕೊಂಡರೆ ನನಗೊಂದು ಸಂತೋಷ"

ಗುಲಾಬಿ ತೀರ ಸರಳೆ. ಇನ್ನೂ ಜೀವನದಲ್ಲಿ ವಂಚನೆಯನ್ನಾಗಲಿ, ಹಣದಾಸೆಯನ್ನಾಗಲಿ ಕಲಿತವಳಲ್ಲ. ತನ್ನ ಜೀವ ಉಳಿದುದು ಶಿವಪ್ಪ ಡಾಕ್ಟರರಿಂದ ಎಂದರಿತು ಅವಳೆಂದಳು: "ಅವರ ಮನಸ್ಸಿಗೆ ತೋರಿದೆ—ಕೊಡುವುದು ಬಾಕಿಯಾದ್ದರಿಂದ ಡಾಕ್ಟರು ಉದಾಸೀನ ಮಾಡುತಿದ್ದಾರೆ—ಎಂದು. ಅದಕ್ಕಾಗಿ ಅವರೇ ಬಂದು, ಹೇಳಿ, ಹಣ ಕೊಟ್ಟು ಹೋದರು."

"ಹಾಗೂ ಎಣಿಸಿದರೆ? ಅವರು ಕೊಟ್ಟಿಲ್ಲ ಎಂದು ನಾನು ನನ್ನ ಚಿಕಿತ್ಸೆಯ ವಿಚಾರದಲ್ಲಿ ಉದಾಸೀನನಾದರೆ ನನ್ನ ಉದ್ಯೋಗದ ಗತಿಯೇನು? ಕೊಡುವ ತ್ರಾಣವಿದ್ದವರು ಕೊಟ್ಟೇ ಕೊಡುತ್ತಾರೆ. ನಾಲ್ಕು ದಿನ ಹೆಚ್ಚು ಕಡಿಮೆಯಾದೀತು. ನನ್ನ ಬೇಸರ ಅದಲ್ಲ—ನಿನಗಿನ್ನೂ ಗುಣವಾಗಲಿಲ್ಲವೆಂದು. ನಿನ್ನ ಶರೀರದಲ್ಲಿ ಯಾವ ಬೇನೆ ಇದ್ದಂತೆಯೂ ನನಗನಿಸುವುದಿಲ್ಲ. ಹಣದ ಆಸೆಗಷ್ಟೇ ನಾನು ನಿನಗೆ ಮದ್ದು ಕೊಡಬೇಕಾಗಿದೆ. ನಾನು ಯೋಚಿಸಿ ಒಂದು ಸಿದ್ಧಾಂತಕ್ಕೆ ಬಂದಿದ್ದೇನೆ. ಇದು ಶರೀರಕ್ಕೆ ಸಂಬಂಧಿಸಿದ ಬೇನೆಯೇ ಅಲ್ಲವೆಂದು."

"ಅಂದರೆ!"

"ನಿನ್ನ ಮನಸ್ಸೇ ಸಮಾಧಾನವಾಗಿಲ್ಲ. ಮನಸ್ಸಿನಲ್ಲಿ ಹೆಚ್ಚಾಗಿ ಅತೃಪ್ತಿಯೋ, ಚಿಂತೆಯೋ ತುಂಬಿದ್ದರೆ ಹೀಗಾಗುವುದುಂಟು. ಬೇಸರವಾದಾಗ ಹೇಳುವುದಕ್ಕಾಗದೆ, ಸಿಟ್ಟು ಬಂದಾಗ ತೋರಿಸಿಕೊಳ್ಳುವುದಕ್ಕಾಗದೆ, ಸೇಡಿನ ಹಂಬಲವಾದಾಗ ತೀರಿಸಿಕೊಳ್ಳಲಾರದೆ ಇರಬೇಕಾಗಿ ಬಂದಾಗ, ಮನಸ್ಸಿಗೆ ತೃಪ್ತಿಯಾಗುವುದಿಲ್ಲ. ಹಾಗೆ ತೃಪ್ತಿ ಬಾರದಾಗ, ಮೂಕರಾಗಿಯೇ ಕುಳಿತಿರಬೇಕಾದಾಗ,ಹೀಗೆಲ್ಲ ವಿಕಾರಗಳಾಗುತ್ತವೆ. ಆಗ ಎದೆಯೂ ಬಡಿಯಬಹುದು, ಉಸಿರೂ ಕಟ್ಟಬಹುದು, ಹೆದರಿಕೆಯೂ ಕಾಣಿಸಬಹುದು."

ಒಂದೆರಡು ಕ್ಷಣಗಳ ಕಾಲ ಗುಲಾಬಿ ಡಾಕ್ಟರರ ಮುಖವನ್ನೇ ನೋಡಿದಳು. ಏನೂ ಪ್ರತ್ಯುತ್ತರ ಕೊಡಲಿಲ್ಲ. ಕೊನೆಗೂ ನಿಜವನ್ನಡಗಿಸುವವಳಂತೆ "ನನಗೇನಾಗಿದೆ ಡಾಕ್ಟರರೇ, ಮನಸ್ಸಿಗೆ?" ಎಂದಳು. ಅನ್ನುವಾಗಲೇ ನಿಟ್ಟುಸಿರು ಮೂಡಿತು. ಅದೇನೆ ಪ್ರತ್ಯಕ್ಷ ನಿದರ್ಶನ! ಅವರೆಂದರು "ಅದೇನೆಂದು ನೀನೇ ಹೇಳಬೇಕಮ್ಮ. ನಿನ್ನ ಮನಸ್ಸನ್ನು ನಾನು ತಿಳಿಯುವಂತಿದ್ದರೆ ಇಷ್ಟು ಕಷ್ಟವಿತ್ತೇ? ನೀನು—'ನನಗೇನಾಗಿದೆ' ಎನ್ನುವಾಗಲೇ ಒಂದು ಉತ್ಸಾಹದ ಧ್ವನಿ ಸಹ ಇಲ್ಲ. ಬದಲು ನಿಟ್ಟುಸಿರು ಬಂದಿತು. ನಿನ್ನ ಮನಸ್ಸಿನಲ್ಲೇನೋ ಕೊರೆಯುತ್ತಿದೆ . . . . ."

ಗುಲಾಬಿಯು ಹಣವನ್ನು ಮುಂದಕ್ಕೆ ತಳ್ಳುತ್ತಾ "ತಕೊಳ್ಳಿ ಡಾಕ್ಟ್ರೆ, ನೀವೊಬ್ಬರಾದರೂ ಹಾಗೆಂದಿರಲ್ಲ—ನೀನು ಸುಖವಾಗಿಲ್ಲ ಎಂದು" ಹಾಗೆಂದು ಎದ್ದುಬಿಟ್ಟಳು.

"ಈಗ ಬೇಡ ಈ ಹಣ" ಎಂದು ಹರಿವಾಣವನ್ನು ಮುಟ್ಟದೆ ಶಿವಪ್ಪ

ನವರೂ ಎದ್ದರು. ಏಳುತ್ತ ಅವಳನ್ನುದ್ದೇಶಿಸಿ "ನಾನು ಇನ್ನೊಮ್ಮೆ ಬಂದಾಗ, ನೀನು ವಿರಾಮವಾಗಿ ಇರುವಾಗ, ಎಲ್ಲವನ್ನೂ ಹೇಳು. ಅದೇನು ಸಂಗತಿ ಎಂದು ಕೇಳುವ. ಮನಸ್ಸಿನ ಕೊರಗನ್ನು ನೀನೆ ತೊಡೆದುಹಾಕುವ ತನಕ ಈ ಸ್ಥಿತಿ ಹೋಗಲಾರದು" ಎಂದರು.

ಆ ಸಂಜೆ ಸಾಹೇಬರು ಬಂದಿದ್ದರು. ಗುಲಾಬಿ ತಾನಾಗಿ "ನೋಟನ್ನು ಕೊಟ್ಟೆ, ಈಗ ಬೇಡ ಎಂದರು" ಎಂದಳು. ಮರುದಿವಸ 'ನಿನ್ನೆಗಿಂತ ಇಂದು ತುಸು ವಾಸಿ' ಎಂದೂ ಅಂದಳು. ಹಾಗೆ ನಿನ್ನೆಗಿಂತ ಇಂದು ವಾಸಿ, ಇಂದಿಗಿಂತ ನಿನ್ನೆ ವಾಸಿ ಎನ್ನುತ್ತ ಕೆಲವು ದಿನಗಳು ಸರಿದುವು. ಸಾಹೇಬರ ಮನಸ್ಸಿಗೆ ಇದು ಶಿವಪ್ಪ ಡಾಕ್ಟರರಿಂದಾಗದ ಕೆಲಸ ಎಂದು ತೋರಿ "ಮಡಗಾಂವಕರನ್ನು ಕರೆಯಿಸುವುದೇ ಒಳ್ಳೆಯದೆಂದು ಕಾಣುತ್ತದೆ" ಎಂದರು. ಅದಕ್ಕೆ ಗುಲಾಬಿ "ಬೇಡ, ಮೂರುದಿನಗಳಿಗೊಮ್ಮೆ ಡಾಕ್ಟರರನ್ನು ಬದಲಿಸಿ ಬರುವುದೇನು? ಅವರಿಂದ ಇಷ್ಟೆಲ್ಲ ಗುಣವಾಗಿ ಬಂದಿರುವಾಗ?"

"ಹಾಗಿದ್ದರೆ ಮಿರಜಿಗೆ ಕಳುಹಿಸುವ ಏರ್ಪಾಟು ಮಾಡಲೇ?"

"ನಾನು ಈ ಸಣ್ಣ ಮಗುವನ್ನು ಹಿಡಿದುಕೊಂಡು, ಯಾರ್‍ಯಾರನ್ನು ನಂಬಿ, ಅಲ್ಲಿಗೆ ಹೋದರೆ ಹೇಗೆ? ಮಾವನಾದರೂ ಇರುತ್ತಿದ್ದರೆ ಅದೊಂದು ಲೆಕ್ಕ. ಯಾರೂ ಇಲ್ಲದೆ ನಾನೊಬ್ಬಳು ಹೋಗಲೇ!" ಎಂದು ಬೇಸರಿಸಿದಳು. ಸಾಹೇಬರು ನಿರುತ್ಸಾಹಿತರಾಗಿ ತಮ್ಮ ಮನೆಗೆ ಮರಳಬೇಕಾಯಿತು.

ಮುಂದೆರಡು ದಿವಸಗಳ ಬಳಿಕ, ಮಧ್ಯಾಹ್ನ ಮನೆಗೆ ಹೋಗುತ್ತ ಡಾಕ್ಟರ್ ಶಿವಪ್ಪನವರು ಗುಲಾಬಿಯ ಮನೆಗೆ ಹೋದರು. ಜಗುಲಿಯಲ್ಲಿ ಅವಳೊಬ್ಬಳೇ ಕುಳಿತಿರುವುದನ್ನು ಕಂಡು "ಅಜ್ಜಿ ಇಲ್ಲವೇ?" ಎಂದು ಕೇಳಿದರೆ "ಆಕೆ ದೇವಸ್ಥಾನದ ಸುತ್ತಿಗೆ ಹೋಗಿರಬೇಕು" ಎಂದಳು ಮೊಮ್ಮಗಳು.

ಮಾತಿಗೆ ಅನುಕೂಲವಾದ ಗಳಿಗೆ ಅದೇನೆ ಎಂದು ಯೋಚಿಸಿ, ಅವರು "ಏನೋ, ನಾನೆಷ್ಟು ಯೋಚಿಸಿದರೂ ನನಗೆ ಮೊನ್ನೆ ಹೇಳಿದ ಕಾರಣವೇ ನಿನ್ನ ಅನಾರೋಗ್ಯದ ಕಾರಣ ಎಂದೆನಿಸುತ್ತಿದೆ. ಇನ್ನೊಬ್ಬರ ಹತ್ತಿರ ಹೇಳಲಾರದಂತಹ ಚಿಂತೆ ನಿನಗೇನಿದೆ ಹೇಳು?" ಎಂದು ಕೇಳಿದರು.

ಗುಲಾಬಿಯು ಮಾತನಾಡಲಿಲ್ಲ; ಅವರನ್ನೆ ಮಿಕಿ ಮಿಕಿ ನೋಡಿದಳು. ತುಸು ಹೊತ್ತಿನ ಬಳಿಕ "ಏನು ಚಿಂತೆ ಇದ್ದರೂ ಯಾರೇನು ಮಾಡಬಲ್ಲರು? ಯಾರೂ, ಏನೂ ಮಾಡಲಾರದ್ದನ್ನು ನಾನೇ ಅನುಭವಿಸಬೇಕು" ಎಂದಳು.

"ಅದೇನೆಂದು ಹೇಳಿಯಾದರೂ ಹೇಳು. ಮನಸ್ಸಿನ ಭಾರವಾದರೂ ಕಡಿಮೆಯಾಗುತ್ತದೆ. ನನ್ನ ಹತ್ತಿರ ಹೇಳಬಾರದಂಥ ಸಂಗತಿಯಾದರೆ ನಿನ್ನ ಅಜ್ಜಿಗಾದರೂ ಹೇಳು. ಚಿಂತೆಯನ್ನು ನಿನ್ನ ಮನಸ್ಸಿನಲ್ಲೇ ನುಂಗಿಕೊಂಡಿರ ಬೇಡ. ಅದು ಮಾತ್ರ ಒಳ್ಳೆಯದಲ್ಲ."

"ಅಜ್ಜಿಯ ಹತ್ತಿರವೆ? ಅಜ್ಜಿಯೂ, ಮಾವನೂ ಸೇರಿಕೊಂಡು ನನ್ನ ಕತ್ತನ್ನು ಕೊಯ್ದರು. ಅದರಿಂದಲೇ ಈ ಸೆರೆಮನೆಯನ್ನನುಭವಿಸುತ್ತಿದ್ದೇನೆ. ನನ್ನ ಮನಸ್ಸೆಲ್ಲೋ, ನಾನೆಲ್ಲೋ."

"ಅಂದರೆ! . . . . ನೀನು ಸಾಹೇಬರವಳಾದುದು ನಿನ್ನ ಖುಷಿಯಿಂದ ಲ್ಲವೆ?" ಎಂದು ನೇರಾಗಿ ಕೇಳಿದರು. ಯಾವುದೇ ಒಂದು ಅಂಥ ಹಲುಬು ಅವಳನ್ನು ಕಾಡುತ್ತಿದೆ ಎಂದು ಅವರಿಗೆ ಊಹೆಯಾಗಿತ್ತು. ಕೇಳುವ ಧೈರ್ಯ ಇದ್ದಿರಲಿಲ್ಲ, ಈಗ ಕೇಳಿದರು.

"ನಾನು ಅವರ ಪಂಜರದ ಗಿಳಿ. ಆದರೆ ನನ್ನ ಮನಸ್ಸು ಎಂದಾದರೂ ಅವರ ಕಡೆಗೆ ಒಲಿದೀತೆ? ಕಾಣುವವರಿಗೇನು—ನಾನು ಸೂಳೆ; ದುಡ್ಡು ಕೊಟ್ಟವರ ಬದುಕು ಎನಿಸಬಹುದು. ನನಗೂ ಒಂದು ಸ್ವಂತ ಮನಸ್ಸಿದೆ ಯಲ್ಲ. ಹಾಗಿರುವುದು ಸಾಧ್ಯವಲ್ಲ ಎಂಬುದು ಈಗ ಗೊತ್ತಾಯಿತು—ಇನ್ನು ಇದರಿಂದ ಬಿಡುಗಡೆಯಿಲ್ಲ ಎಂಬುದೂ ನನಗೆ ಗೊತ್ತು."

"ನೀನು ಯಾರನ್ನು ಬಯಸಿದ್ದೆ?"

"ಯಾರೆಂದು ಹೇಳಲಿ? ಏನು ಪ್ರಯೋಜನ ಅದರಿಂದ—ತೊಂದರೆ ಯಲ್ಲದೆ. ನನಗೀಗ ಸತ್ತರೂ ಬೇಸರವಿಲ್ಲ. ಈ ಮಗುವೊಂದು ಉಳಿದು ಅದನ್ನು ಯಾರಾದರೂ ಸಾಕುವವರಿದ್ದರೆ ಆಗುತಿತ್ತು. ನನ್ನ ಪಾಲಿಗೆ ಸಾವೇ ಸುಖ" ಎಂದು ನುಡಿದಳು. ಕಂಠ ಬಿಗಿದು, ಮಾತನ್ನು ನಿಲ್ಲಿಸಿ, ತಲೆತಗ್ಗಿಸಿ, ಕಂಬನಿಯನ್ನು ಮಿಡಿಯುತ್ತಿದ್ದ ಅವಳ ಮುಖವನ್ನು ಕಂಡು ಡಾಕ್ಟರರ ಮನಸ್ಸಿಗೂ ತುಂಬ ವ್ಯಥೆಯಾಯಿತು. ಅಂತಹ ವಿಷಯಗಳಲ್ಲಿ ಅವರು ಏನು ಸಮಾಧಾನ ಹೇಳುವುದಕ್ಕೂ ಶಕ್ಯವಿಲ್ಲ. ಯಾರಿರಬಹುದು, ಏನಿರಬಹುದು- ಎಂದು ಅವರು ತಮ್ಮ ಊಹೆಯನ್ನು ನಾಲ್ಕು ಕಡೆಗಳಿಗೆ ಚಾಚಲು ಪ್ರಯತ್ನಿ ಸುತ್ತಿದ್ದಾಗ ಥಟ್ಟನೆ ಇನ್ನೊಂದು ಪ್ರಶ್ನೆ ಅವಳ ಬಾಯಿಯಿಂದುದುರಿತು:-

"ಡಾಕ್ಟರರೇ, ಈ ಮಗು ಯಾರ ಹಾಗೆ ಕಾಣುತ್ತದೆ ಹೇಳುತ್ತೀರಾ?" ಎಂದಳು.

ಶಿವಪ್ಪನವರು ಚಿತ್ತವಿಹ್ವಲರಾದರು.

"ಅವರ ಹಾಗಿದೆಯೇ?"

"ಇಷ್ಟು ಚಿಕ್ಕದರಲ್ಲಿ ನನಗೇನೂ ತಿಳಿಯುವುದಿಲ್ಲ."

"ಅವರ ಹಾಗೆ ಇಲ್ಲದಿದ್ದರೆ ಚೆನ್ನ."

ಕಾರಣವನ್ನು ಹೊಂಚುಹಾಕುತ್ತಿದ್ದ ಡಾಕ್ಟರರ ಮನಸ್ಸಿಗೆ ಮಿಂಚಿ ಬಂದ ಅವಳ ಈ ಮಾತು, ಸಂಪೂರ್ಣ ರಹಸ್ಯವನ್ನು ಹೊರಗೆಡವಿತು. ಮನದೊಳಗೆ ಬಚ್ಚಿಟ್ಟುಕೊಂಡ ಯಾವುದೋ ಒಂದು ತೀಕ್ಷ್ಣವಾದ, ಕಟುವಾದ, ಅಸಹನೀಯವಾದ ದ್ವೇಷ ಅವಳಲ್ಲಿ ತುಂಬಿಕೊಂಡಿದ್ದು, ಅವಳ ಜೀವನವನ್ನು ಕಲುಕಿಬಿಟ್ಟಿದೆ–ಎಂಬುದನ್ನು ಅವರು ತಿಳಿದುಕೊಂಡಿದ್ದರು. ಈಗ ಆ ಕಟುವಾದ ನೋವೇನೆಂಬುದು ಹೊರಗೆ ಬಂದಿತು. ಅವರ ಮನಸ್ಸು ಈ ಪ್ರಶ್ನೆಯನ್ನೇ ನೆನೆಯಿತು; ಮತ್ತೂ ಯೋಚಿಸಿದಾಗ ಇನ್ನೆಲ್ಲೋ ಕೇಳಿದ ಕತೆಯೊಂದನ್ನು ನೆನೆದರು. ಅವರಿಗೆ ಮನಸ್ಸಿನಲ್ಲಿ ನಗುವೂ ಮೂಡಿತು. ಅವರು ನಗುತ್ತ ಹೇಳಿದರು: "ನಾನು ಕೇಳಿದ ಕತೆ, ಕೇಳಿದ ಮಾತು. ತಪ್ಪನ್ನೆಣಿಸಬೇಡ. ನಿನ್ನ ಮನಸ್ಸಿನ ಕಷ್ಟವೆಲ್ಲ, ನನಗೆ ಗೊತ್ತಾಗುತ್ತದೆ. ಆದುದರಿಂದಲೇ ಕೇಳುತಿದ್ದೇನೆ: ನೀನು ಮದ್ದುರಾಯನನ್ನು ಒಂದು ಕಾಲದಲ್ಲಿ ಬಯಸಿದ್ದುಂಟೆ?" ಎಂದರು.

"ನಿಮಗೆ ಹೇಗೆ ತಿಳಿಯಿತು?"

"ಊರಿನ ಸುದ್ದಿ. ಅಲ್ಲದೆ ಹತ್ತೆಂಟು ಸಾರಿ ನೀನು ಕಾಯಿಲೆಯಾಗಿರುವಾಗ, ಅವನೂ ವಿಚಾರಿಸಿದ್ದ. ಅದರಿಂದ ತರ್ಕಿಸಿದೆ."

ನಾಲ್ಕು ಕ್ಷಣ ಕಾಲ ಆಕೆ ಕ್ಷಮಾಯಾಚನೆಮಾಡುವವಳಂತೆ, ಸಹಾಯ ಬೇಡುವವಳಂತೆ, ಅವರ ಮುಖವನ್ನೇ ನೋಡಿ, ಆಚೀಚೆ ಕಂಡು, ಅಜ್ಜಿಯ ಸುಳಿವಿಲ್ಲವೆಂದು ಧೈರ್ಯಗೊಂಡು, ಮಗುವಿನ ಕಡೆಗೆ ಮೋರೆಮಾಡಿ "ಇದು ಅವರದ್ದಾಗ ಬೇಕೆಂದು ನನ್ನ ಇಷ್ಟವಿತ್ತು."

ಶಿವನಿಗೆ ವಿಸ್ಮಯವಾಯಿತು. ಆದರೆ ಪ್ರೇಮವು ಕುರುಡೆಂದು ಅವರು ತಿಳಿಯದವರಲ್ಲ. ಆದರು ಅದಕ್ಕಾಗಿ "ಮದ್ದು ಏನು ಮಹಾ ವ್ಯಕ್ತಿ? ನಾನು ತಿಳಿಯದವನೇ? ತುಂಬ ಚಂಚಲ ಸ್ವಭಾವದವನು. ಹೀಗೆ ಎಷ್ಟು ಮಂದಿಯನ್ನು ಮೋಸಕ್ಕಿಳಿಸಿದ್ದಾನೋ" ಎಂದರು.

"ಇಲ್ಲ, ಹಾಗೆನ್ನಬೇಡಿ. ಮೋಸ ಅವರಿಂದಾಗಲಿಲ್ಲ. ನಾನು ಅವರಿಗೆ

ಮಾತು ಕೊಟ್ಟಿದ್ದೆ. ಆ ಮಾತನ್ನು ಮುರಿಯುವಂತೆ ನಮ್ಮ ಮಾವ ಮಾಡಿದರು. ಇಂಥ ಪ್ರಸಂಗ ತಂದು ಹಾಕಿದರು. ನಾನು ಅವರಿಗೆ ಸಮನಾಗಿ ನಡೆಯುತ್ತಿದ್ದರೆ ಅವರು ಹೀಗೆ ಮಾಡುತ್ತಿರಲಿಲ್ಲ" ಎಂದು ನುಡಿದು, ನಷ್ಟಗೊಂಡ ವಸ್ತುವಿಗಾಗಿ ಹಲುಬುವವಳಂತೆ "ಈ ಮಗು ಅವರದ್ದಾಗಬೇಕು ಎಂದು ನನ್ನ ಇಚ್ಛೆ ಇತ್ತು. ಹಾಗೆನ್ನುವಾಗ ನಿಮಗೇನು ಕಾಣುತ್ತದೋ ನನ್ನ ವಿಚಾರದಲ್ಲಿ. ನಾನು ಅವರಿಗಾಗಿ ಹಸಿದಿದ್ದೆ. ನಮ್ಮ ಅಜ್ಜಿ ಈ ಮಗುವನ್ನು ಕಂಡಾಗಲೆಲ್ಲ 'ಇದು ಥೇಟು ಸಾಹೇಬರ ಹಾಗಿದೆ" ಎಂದು ಅನ್ನುವಾಗಲೆಲ್ಲ, ನನ್ನೆದೆಗೆ ಚೂರಿಯಿಂದ ತಿವಿದಂತಾಗುತ್ತದೆ; ಕಿವಿಯಲ್ಲಿ ಕರಗಿಸಿದ ಸೀಸವನ್ನು ಹೊಯ್ದಂತಾಗುತ್ತದೆ" ಎಂದು ಭೀತಳಾಗಿ ನುಡಿದಳು.

"ಅವನು ಬಂದಿದ್ದನೇ ಇಲ್ಲಿಗೆ?"

"ಯಾರಿಗಾದರೂ ಹೇಳಿದರೆ ನನ್ನ ಮೇಲಿನ ಆಣೆಯಿದೆ. ನೀವು ನನ್ನ ಅಣ್ಣನೊ, ತಂದೆಯೊ ಎಂದು ಹೇಳುತ್ತಿದ್ದೇನೆ. ಬಂದಿದ್ದರು, ಮಿಂಚಿನಂತೆ ಬಂದು ಹೋದರು. ಇನ್ನು ಅವರು ಬರಲಾರರು. ಆದರೆ ಈ ಜೀವ ಅವರನ್ನ ನೆನಪಿಸ ಗುರುತಾದರೆ ಸಾಕಿತ್ತು" ಎಂದಳು. ಹೀಗೆಂದು ಆ ಮಗುವನ್ನೆತ್ತಿ, ತಂದು, ಅವರ ಕೈಮೇಲಿರಿಸಿದಳು. ಅವರೂ ಅದನ್ನು ಹಿಡಿದರು. ಅವರಿಗೇನು ಮಾಡುವುದೆಂದೂ ತೋರಲಿಲ್ಲ. "ಖಂಡಿತವಾಗಿ ಹೇಳಿ" ಎನ್ನುತ್ತಾಳೆ ಅವಳು. ಹಾಗೆ ಖಂಡಿತ, ಸತ್ಯ ಹೇಳುವುದಕ್ಕೆ ರಕ್ತ ಪರೀಕ್ಷೆಗೆ ಹೊರಟವರೇನು–ಅವರು? ಏನು ಹೇಳಿದರೂ ಒಂದೊಂದು ಮಾತಿನ ಪರಿಣಾಮ ಒಂದೊಂದು ತೆರನಾದೀತು. ಹೇಳುವುದು ಕೇವಲ ಊಹೆಯ ಮೇಲಿಂದ. ಊಹೆ ತಪ್ಪಿದರೆ? 'ಸಾಹೇಬರ ಹಾಗಿದೆ ಎಂದರೆ' ಗುಲಾಬಿಯ ಅಂದಿನ ಸ್ಥಿತಿಯಲ್ಲಿ ಅದಕ್ಕೆ ಹೊಟ್ಟೆಗೆ ಹಾಲು ಕೊಡದೆ ಅದನ್ನು ಸಾಯಿಸುವುದು ನಿಜ; ತಾನೂ ಸಾಯುತ್ತಾಳೆ ಚಿಂತೆಯಿಂದ. ಎರಡೆರಡು ಜೀವಗಳು ಹಾನಿಗೊಳಗಾಗುತ್ತವೆ-ಎಂದೆನಿಸಿ "ನೀನೇನು ಯೋಚಿಸ ಬೇಡ. ನಿಧಾನವಾಗಿ ಹೇಳಿದರಾಗದೇ? ಪರೀಕ್ಷೆ ಮಾಡದೆ ಹೇಳುವುದು ಸಾಧ್ಯವಲ್ಲ" ಎಂದರು. ಆಕೆ ಹುಚ್ಚಿಯಂತೆ "ಅನ್ನಿ ಡಾಕ್ಟರರೇ, ನನ್ನನ್ನು ಉಳಿಸುವುದಕ್ಕಾದರೂ ಅನ್ನಿ" ಎಂದಳು ಬಿಕ್ಕಿ ಬಿಕ್ಕಿ ಅಳುತ್ತ. ಅಷ್ಟಕ್ಕೆ, ಸುತ್ತಾಡಲು ಹೋದ ಚಂದುವು ಮನೆಗೆ ಬಂದುದರಿಂದ ಡಾಕ್ಟರರು ಅಲ್ಲಿಂದೆದ್ದರು. "ಊಟಕ್ಕೆ ಹೊತ್ತಾಯಿತು, ಇನ್ನೆರಡು ದಿನಗಳಲ್ಲಿ ಬರುತ್ತೇನೆ" ಎಂದೆದ್ದು ಹೋದರು. ಆ ದಿನ

ವಂತು ಮನೆಗೆ ಮರಳುವಾಗ ಶಿವಪ್ಪ ಡಾಕ್ಟರರು ತಮ್ಮ ವೈದ್ಯವೃತ್ತಿಯನ್ನೇ ಹಳಿದುಕೊಂಡರು. ಮನಸ್ಸಿನಲ್ಲಿ ಮತ್ತೊಂದು ಸಂಶಯವೂ ಮೂಡಿತು. ಇದರ ಬದಲು, ಸಾಹೇಬರೇ ಅನುಮಾನಿಸಿ 'ಇದು ಯಾರ ಮಗು' ಎಂದು ಕೇಳಿದರೆ ಗತಿಯೇನು? ತಾನು ಅದನ್ನು ಖಂಡಿತವಾಗಿ, ಸುಲಭದಲ್ಲಿ ಹೇಳ ಬಲ್ಲೆನೆ? ಪ್ರಾಯಶಃ ಉತ್ಕಟವಾದ ಬಯಕೆಯಿಂದ, ಅವಳು ಬೇಡಿದಂಥ ವರವೇ ಆ ಮಗುವಾಗಿರಬಹುದು. ಹಾಗೆಂದು ನಾನು ಹೇಳಿದರೆ ಗುಲಾಬಿಯ ಉಳಿಗಾಲವೇ ಕಷ್ಟವಾದೀತು. ತದ್ವಿರುದ್ಧವಾದಲ್ಲಿ ಅವಳ ಆತ್ಮಹತ್ಯೆಗೂ ಅವ ಕಾಶವಿದೆ. ಹೀಗೆ ಯೋಚಿಸಿ, ಯೋಚಿಸಿ ದಣಿದು ಮನೆಗೆ ಕಾಲಿಡುವಾಗ 'ಸಂಸಾರವೆಂಬುದು ಬಹು ವಿಚಿತ್ರ' ಎಂಬ ಭಾವನೆ ಅವರಲ್ಲಿ ಮೂಡಿತ್ತು.

ತುಂಬ ಯೋಚನಾಪರರಾಗಿ ಮನೆಗೆ ಕಾಲಿರಿಸಿದ ಗಂಡನನ್ನು ಕಂಡು ಇಂದುಮತಿಗೆ ಆಶ್ಚರ್ಯವಾಗದೆ ಇರಲಿಲ್ಲ. ಆ ಮುಖದಲ್ಲಿ ಗಾಢವಾದ ಚಿಂತೆಯೂ ಕೂಡಿತ್ತು. "ಏನು, ನೀವು ಇವತ್ತು ಬಹಳ ಯೋಚನೆಯಲ್ಲಿ ದ್ದೀರಿ? ಚಿಂತೆಯೇ?" ಎಂದು ಕೇಳಿದಳು.

"ಏನೋ!" ಎಂದು ಅರ್ಧಮನಸ್ಸಿನಿಂದ ನುಡಿದು, ಅವರು ಕಾಲು ತೊಳೆದು ಬಂದರು. ಊಟ ಮುಗಿಸಿ, ವಿರಾಮ ಕುರ್ಚಿಯಲ್ಲಿ ಕುಳಿತ ಕೆಲವೇ ನಿಮಿಷಗಳಲ್ಲಿ ಎಲ್ಲಿಂದಲೋ ಒಂದು ಕರೆ ಬಂದಿತು. ಬಂದ ಕ್ಷಣವೇ,ಬಂದವ ರೊಡನೆ ಎದ್ದು ಹೊರಟರು. ಕರೆದಲ್ಲಿಗೆ ಹೋಗಿ, ಅಲ್ಲಿಂದ ಅಂಗಡಿಗೆ ಬಂದು, ದಿನದ ಕೆಲಸವನ್ನೆಲ್ಲ ಮುಗಿಸಿಕೊಂಡು ರಾತ್ರಿ ಮನೆಗೆ ಬಂದ ಮೇಲೆ, ಊಟ ಮುಗಿಸಿ, ಇಂದುಮತಿಗೆ ಎಲ್ಲ ಸಮಾಚಾರಗಳನ್ನು ಹೇಳುವೆನೆಂದು ಆತುರ ಪಟ್ಟರು. ಮರುಕ್ಷಣಕ್ಕೆ 'ಅನ್ಯರ ವಿಚಾರ; ಗುಟ್ಟಿನಿಂದ ಇಡಬೇಕಾದ ಸಂಗತಿ ಯನ್ನು ತಾನು ಬಹಿರಂಗಪಡಿಸಬಾರದು' ಎಂದೂ ತೋರಿತು. ಆ ಸಂಜೆ ಮಧ್ವ ಅವರ ಅಂಗಡಿಗೆ ಬಂದಿದ್ದ. ಶಿವಪ್ಪನವರು ಉದ್ದೇಶವಿಲ್ಲದೆಯೇ, ತಮ್ಮನ್ನು ಮರೆತವರಂತೆ, ಅವನೊಡನೆ ಮಾತಾಡುವುದಕ್ಕೆ ಹೋಗಿರಲಿಲ್ಲ. ಆದರೆ ಮಾಧವ ತಾನಾಗಿ "ಡಾಕ್ಟರರೇ, ನನ್ನ ಎರಡು ಮಕ್ಕಳಿಗೂ ಜ್ವರ ಬರುತ್ತಾ ಇದೆ. ಮನೆಗೆ ಹೋಗುವಾಗ ಬರುತ್ತೀರಲ್ಲ" ಎಂದು ಕೇಳಿದ್ದ "ಆಯಿತು" ಎಂದಿದ್ದರು. ಆ ಮಾತು ನೆನಪಿನಲ್ಲಿ ಉಳಿಯದೆ ಹೋಯಿತು. ಮರುದಿನ ಬೆಳಗ್ಗೆ ಆ ಸಂಗತಿ ಮನಸ್ಸಿಗೆ ಹೊಳೆದಾಗ, ತಮ್ಮ ತಪ್ಪು ತಮಗೆ ಅನಿಸಿತು."ನಾನೆಂತಹ ಮೂರ್ಖ! ನನ್ನ ಸಿಟ್ಟಿಂದ,ಬೇಸರದಿಂದ, ವೈದ್ಯಕೀಯ

ಕರ್ತವ್ಯವನ್ನು ಮರೆತುಬಿಟ್ಟೆನೆ? ಮದ್ದುವಿನ ಮನೆಗೆ ಹೋಗದೆ ಉಳಿದೆನೆ!" ಎಂದು ಕೊರಗಿದರು. ಮಾಧವನ ಮೇಲಿನ ಬೇಸರವೇ ಹಿಂದಣ ದಿನದ ಯಾವತ್ತೂ ಅನಾದರಕ್ಕೆ ಕಾರಣವಾಗಿತ್ತು ಎಂಬುದು ತಿಳಿದಿತ್ತು. ಆ ತಪ್ಪನ್ನು ಸರಿಪಡಿಸುವುದಕ್ಕಾಗಿ ಮರುದಿನ ಬೆಳಿಗ್ಗೆ, ತಾವು ದವಾಖಾನೆಗೆ ಹೋಗುವ ಮೊದಲೇ ಅವನ ಮನೆಗೆ ಹೋದರು. ಹೋದುದಂತು ಒಳಿತೇ ಆಯಿತು. ಮಾಧುವಿನ ಎರಡು ಕೂಸುಗಳಲ್ಲಿ ತೀರ ಕಿರಿದು, ಆರೆಂಟು ತಿಂಗಳ ಮಗು, ತೊಟ್ಟಿಲಿನಲ್ಲಿ ಮಲಗಿತ್ತು. ಮೊದಲ ದಿನ ಅದರ ಮೈಯ್ಯೂ ಬೆಚ್ಚಗಿತ್ತೆಂದು ತಾಯಿ ಹೇಳುತ್ತಿದ್ದಾಳೆ. ಆ ಮಗುವಿನ ಅಕ್ಕ, ಮೂರು ವರ್ಷದ ತಾರೆ, ಆಗಲೂ ಶೀತ, ಜ್ವರದಿಂದ ಮಲಗಿಕೊಂಡಿದ್ದಳು. ಕಷ್ಟದಿಂದ ಉಸಿರಾಡಿಸುತ್ತಿದ್ದಳು. ತಾಯಿ ಅದರ ನೆತ್ತಿಗೆ ಏನೋ ಲೇಪ ಹಚ್ಚಿದ್ದಳು. ಮಾಧವನೂ ಮನೆಯಲ್ಲಿದ್ದ. ಡಾಕ್ಟರರು ತಾರೆಯನ್ನು ಪರಿಶೀಲಿಸಿ "ಎರಡು ಮಕ್ಕಳೆಂದಿರಿ, ಯಾರು?" ಎಂದರು.

ಮಾಧುವಿನ ಹೆಂಡತಿ ಸುಂದರಿಯು "ಸಣ್ಣ ಮಗು ಚೆನ್ನಾಗಿದೆ ಇವತ್ತು. ನಿನ್ನೆ ಏಕೋ ಸ್ವಲ್ಪ ಜ್ವರ ಇದ್ದ ಹಾಗೆ ಕಾಣಿಸಿತು. ನಾನು ಗಾಬರಿಯಾದೆ" ಎಂದು ತೊಟ್ಟಿಲನ್ನು ತೋರಿಸಿದಳು. ಡಾಕ್ಟರರ ಕಣ್ಣು ತೊಟ್ಟಿಲಿನ ಕಡೆಗೆ ಹರಿಯಿತು. ಅಲ್ಲಿ ಆರು ತಿಂಗಳ ಮುದ್ದಾದ ಕೂಸೊಂದು ಮಲಗಿತ್ತು. ಆ ಮಗುವನ್ನು ಅವರು ಕಡಿಮೆ-ಕಡಿಮೆ ಹತ್ತು ಸಾರಿಯಾದರೂ ಕಂಡಿರಬೇಕು. ಆದರೆ ಈ ಬಾರಿ ಕಂಡಾಗ ಅದು ಬೇರೆಯೇ ವಿಧವಾಗಿ ಕಾಣಿಸಿತು. ಅದರ ಕಣ್ಣು, ತುಟಿ, ತಲೆಗೂದಲು, ಮೂಗು, ಹುಬ್ಬು ಒಂದೊಂದನ್ನೂ ನೋಡಿದರು. ಸಮೀಪಕ್ಕೆ ಸರಿದು, ಗಲ್ಲಕ್ಕೆ ಬೆರಳಿಟ್ಟು 'ಚಿಚ್ಚೀ' ಎಂದು ಅಲುಗಿಸಿದರು. ಕಿಲಕಿಲನೆ ನಕ್ಕಿತು ಆ ಮಗು. ಅದರ ಹತ್ತುಮಡಿ ನಗುವು ಅವರ ಅಂತರಾಳದಲ್ಲಿ, ಆ ಗಳಿಗೆಯಲ್ಲುಂಟಾಯಿತು.

ಅಲ್ಲಿಂದ ಹೊರಡುವಾಗ ಅವರ ಮನಸ್ಸಿನ ಗತಿಯೇ ಬೇರೆಯಾಗಿತ್ತು. ಹಿಂದಣ ದಿವಸ ಕಾಣಿಸಿದಂಥ ಬೇಸರಕ್ಕೆ ಪ್ರತಿಯಾಗಿತ್ತು. ಆಸ್ಪತ್ರೆಯಿಂದ ಮನೆಗೆ ಮರಳುವವರು, ಉದ್ದೇಶಪಟ್ಟು ಗುಲಾಬಿಯ ಮನೆಗೆ ಹೋದರು. ನೆಪಕ್ಕೊಂದು ಮದ್ದಿನ ಸೀಸೆಯನ್ನು ಚಾವಡಿಯ ಮೇಲಿರಿಸಿದರು. ಆಗಲೂ ಗುಲಾಬಿಯು ಕೇಳಿದ ಮಾತೊಂದೇ; "ಹೇಳುವುದಿಲ್ಲ ಅಲ್ಲವೆ?" ಎಂದು. ಅವಳ ದೀನ ಮುಖವನ್ನು ನೋಡಿದರು; ನೋಡಿ ನಕ್ಕರು. "ನೀನು ಎಣಿ

ಸಿದ್ದೇ ಮಗು" ಎಂದರು. ಅವಳಿಗೆ ಆ ಗಳಿಗೆಯಲ್ಲಾದ ತೃಪ್ತಿ ಅಷ್ಟಿಷ್ಟಲ್ಲ. ಆದರೂ ಕೇಳಿದಳು: "ಹೇಗೆ ಹೇಳುತ್ತೀರಿ?" ಎಂದು.

"ನಾನು ಈ ಬೆಳಗ್ಗೆ ಅವರ ಮನೆಗೆ ಹೋಗಿದ್ದೆ. ಅಲ್ಲಿ ಇದಕ್ಕಿಂತ ಮೂರು ತಿಂಗಳಿಗೆ ದೊಡ್ಡ ಕೂಸಿದೆ, ಅದೂ ಗಂಡು ಮಗುವೇ. ಅದನ್ನು ನೋಡಿದ ಬಳಿಕ ನನ್ನ ಕಣ್ಣು, ಮನಸ್ಸು ಎರಡೂ ಸೇರಿ ಹೇಳುತ್ತಿವೆ-ಅದರ ಹಾಗೆಯೇ ಇದೂ ಇದೆ ಎಂದು." ಆ ಮಾತಿನ ವಿಶದೀಕರಣವು ಯಾರ ಪಾಲಿಗೂ ಅವಶ್ಯವಾಗಿರಲಿಲ್ಲ.

ಮುಂದಣ ಶುಕ್ರವಾರ ಗುಲಾಬಿ, ತುಂಬ ಉತ್ಸಾಹದಿಂದ ಬಾಣಂತಿಯಾಗಿ ಹಾಸಿಗೆ ಹಿಡಿದವಳು, ಅದನ್ನು ಬಿಟ್ಟು ಎದ್ದಳು. ಬೆಳಗಾಗುತ್ತಲೇ ದೇವಾಲಯಕ್ಕೆ ಹೋಗಬೇಕೆಂಬ ಹಟ ಹಿಡಿದಳು. ಅವಳ ಅಜ್ಜಿ ಚಂದುವಿಗಾದ ಆನಂದ ಅಷ್ಟಿಷ್ಟಲ್ಲ. ಒಂದೆರಡು ದಿವಸಗಳಿಂದ ಆಕೆ ತುಸು ಸಂತೋಷವಾಗಿದ್ದಾಳೆಂದು ಸಾಹೇಬರಿಗೂ ಗೋಚರವಾಗಿತ್ತು. ಅಂದಿನ ಮಹಾಂಕಾಳಿ ಗುಡಿಯ ಯಾತ್ರೆ, ಚೊಚ್ಚಲು ಬಸಿರಿಯ ಯಾತ್ರೆಯಾದುದರಿಂದ, ತುಂಬ ವಿಧಿಯುಕ್ತವಾಗಿಯೇ ಸಾಗಿತು. ಅವಳು ಚೆನ್ನಾಗಿ ಅಲಂಕರಿಸಿಕೊಂಡು ಗುಡಿಗೆ ಹೊರಟಳು. ಜತೆಯಲ್ಲಿ ಅಜ್ಜಿಯೂ ಇದ್ದಳು; ಮಗುವನ್ನು ಹಿಡಿದ ಕೆಲಸದವಳೂ ಇದ್ದಳು. ಅವರೆಲ್ಲರು ಗುಡಿಗೆ ಸುತ್ತು ಬಂದು, ಹಣ್ಣುಕಾಯಿ ಸಲ್ಲಿಸಿದ ಮೇಲೆಯೂ ಅಲ್ಲಿಂದ ಹೊರಡಲಿಲ್ಲ. ನವರಂಗದಲ್ಲಿ ಯಾರಿಗಾಗಿಯೋ ಕಾದಂತೆ ಕಾದಿದ್ದರು. ವಾಸಪ್ಪಯ್ಯನವರ ಎರಡನೆಯ ಸೊಸೆ ಸುಂದರಿಯನ್ನು ಕಾಣಬೇಕೆಂಬ ಚಪಲ ಗುಲಾಬಿಗೆ; ಸುಂದರಿಯನ್ನಲ್ಲ;ಅವಳು ತನ್ನ ಕಿರಿಯಕೂಸನ್ನು ಕಟ್ಟಿಕೊಂಡು ಬಂದರೆ ಅದನ್ನು ನೋಡಬೇಕೆಂಬ ಚಪಲ. ಮಾಧುವಿನ ಮಗುವಲ್ಲವೆ!ಶುಕ್ರವಾರವೆಂದ ಮೇಲೆ ಊರ ಮುತ್ತೈದೆಯರು ಬಾರದಿರುತ್ತಾರೆಯೇ? ಸುಂದರಿಯೂ ಬಂದಿದ್ದಳು.ಒಬ್ಬರು ಇನ್ನೊಬ್ಬರ ಗುರುತಿಲ್ಲದವರಲ್ಲ. ಹೀಗಾಗಿ ಗುಲಾಬಿಯನ್ನು ಮಾತನಾಡಿಸಿದಳು; ಅವಳ ಚೊಚ್ಚಲು ಕೂಸನ್ನು ನೋಡಿದಳು. 'ಮುದ್ದಾಗಿದೆ'-ಎಂದಳು. "ನಿಮ್ಮ ಮಗುವನ್ನು ತರಲಿಲ್ಲವೆ?" ಎಂದು ಪ್ರಶ್ನಿಸಿದಳು ಗುಲಾಬಿ. ಅವಳ ಮಗು ಗೆಳತಿಯೊಬ್ಬಳ ಕೈಯಲ್ಲಿತ್ತು. ಆ ಗೆಳತಿಯನ್ನು ಕರೆಯಿಸಿ, ಹೆಮ್ಮೆಯಿಂದ ಆಕೆ ತನ್ನ ಮಗುವನ್ನು ಅವಳಿಗೆ ತೋರಿಸಿದಳು. ಗುಲಾಬಿ ಉಕ್ಕುವ ಮನದಿಂದ ಅದರ ಹಣೆಗೆ ಮುದ್ದಿಟ್ಟಳು. "ದೇವರು ಒಳ್ಳೆಯ ಆಯುಷ್ಯ

ಕೊಡಲಪ್ಪ" ಎಂದು ಬೇಡಿದಳು. ಅವಳ ಅಂತರಂಗವು ಅದೇ ಆಯುಷ್ಯವನ್ನು ತನ್ನ ಕೂಸಿಗಾಗಿಯೂ ಬೇಡಿತು. ಅದಕ್ಕೊಂದು ಹೊಸ ಜೀವ ಬಂದಂತಾಯಿತು. ಆ ದಿನ ಗುಲಾಬಿಯು ಸುಂದರಿಯು ಮಗುವನ್ನು ತನ್ನ ಕೈಗಳಿಂದೆತ್ತಿ ಎಂತಹ ಹಸಿದ ಕಣ್ಣುಗಳಿಂದ ನೋಡಿದಳೆಂದು ಹೇಳುವುದಕ್ಕಿಲ್ಲ. ಚಂದು ಹೊತ್ತಾಯಿತು, ಹೊತ್ತಾಯಿತು' ಎಂದು ಹತ್ತು ಸಾರಿ ಹೇಳಿದ ಮೇಲೆ, ತನ್ನ ಕಂದನನ್ನು ಎತ್ತಿಕೊಂಡು, ಇನ್ನೊಮ್ಮೆ ಅಮ್ಮನವರ ಗುಡಿಯ ಬಾಗಿಲಿನ ಮುಂದಕ್ಕೆ ನಿಂತು ಏನೇನೋ ಬೇಡಿದಳು; ಕ್ಷಮಾಯಾಚನೆ ಮಾಡಿದಳು. ತನ್ನ ಹೃದಯದಲ್ಲಿ ಮೂಡಿ, ಕಾಡಿದಂಥ ನೂರಾರು ವಿಷಮ ಯೋಚನೆಗಳ ಚಿಂತೆಯು ಅಂದಿಗೆ ಅಳಿದು, ಅವಳ ಮನಸ್ಸು ಉಲ್ಲಸಿತವಾಯಿತು.

ಗುಲಾಬಿಯ ಮನೋವ್ಯಥೆ ಇಷ್ಟು ಸುಲಭದಲ್ಲಿ ಮುಗಿದೀತೆಂದು ಶಿವಪ್ಪನವರು ಎಣಿಸಿರಲಿಲ್ಲ. ಆಕೆಯಂತು, ಇನ್ನೊಮ್ಮೆ ಡಾಕ್ಟರರು ತಮ್ಮ ಮನೆಗೆ ಬಂದಾಗ, ಬಾಯಿ ಬಿಟ್ಟು ತನಗಾದ ಸಂತೃಪ್ತಿಯನ್ನು ಹೇಳಿದಳು. ಆದರೆ ಅದರ ಜತೆಗೆ ಕಣ್ಣೀರೂ ಸೇರಿಕೊಂಡಿತ್ತು. "ಈ ಹುಲಿಗಳಿಂದ ನಾನು ಪಾರಾಗುವ ಬಗೆಯುಂಟೇ?" ಎಂಬ ನೋವಿನ ಮಾತು ಹೊರಟಿತು. ಡಾಕ್ಟರರು ಆ ಮಾತಿನ ಅರ್ಥವನ್ನರಿಯದವರಲ್ಲ. ಆಕೆ ತನ್ನ ಪ್ರಣಯಿಗಾಗಿ ಅಗೋಚರವಾದ ಸೆರೆಯನ್ನು ಅನುಭವಿಸುತ್ತಿದ್ದಳೆಂದು ತಿಳಿದೇ ಇತ್ತು.

ವಿಧಿಯ ಮನಸ್ಸಿನಲ್ಲಿ ಒಂದೊಂದು ಜೀವವನ್ನು ಎಂಥೆಂತಹ ವಿಲಾಸದಲ್ಲಿ ನಲಿಸಬೇಕೆಂಬ ಹವಣಿಕೆ ಇರುತ್ತದೋ—ಯಾರು ಬಲ್ಲರು? ಹಾಗೆ ಗುಲಾಬಿಯ ಜೀವನದಲ್ಲೂ ಒಂದೆರಡು ಹಿರಿಯ ಘಟನೆಗಳಾದುವು. ಮೊದಲನೆಯದು—ಒಂದು ದಿನ ಅನಿರೀಕ್ಷಿತವಾಗಿ ಆಕೆಯ ಅಜ್ಜಿಯು ತೀರಿಕೊಂಡದ್ದು. ಅವಳ ಮನೆಗೆ ಅವಳೊಬ್ಬಳೇ ಆದಳು. ಆದರೆ ಬೇಸರಕ್ಕೆ, ಸಹಾಯಕ್ಕೆ ನಾಲ್ಕು ಮಂದಿ ಗೆಳತಿಯರನ್ನು ಸಾಕುವ ಅನುಕೂಲತೆ ಅವಳಿಗಿತ್ತು. ಆ ಅನುಕೂಲತೆಯೇ ಅವಳ ಪಾಲಿನ ಬಂಧನವೂ ಆಗಿತ್ತು. ಅಂತಹ ಅನುಕೂಲತೆಯೂ ಇದ್ದಕ್ಕಿದ್ದ ಹಾಗೆ ಕಡಿದೀತು ಎಂದು ಅವಳು ಎಣಿಸಿರಲಿಲ್ಲ. ಬಂಧನ ಬೇಡವಾದರೂ ಅನುಕೂಲತೆ ಬೇಡವಾಗುವುದಿಲ್ಲ. ಅವಳ ಅಜ್ಜಿ ತೀರಿಕೊಂಡ ಒಂದು ತಿಂಗಳ ಅವಧಿಯಲ್ಲಿ, ಮನೆಗೆ ಬಂದ ವೆಂಕಟು ಒಂದು ವಿಷಾದದ ವಾರ್ತೆಯನ್ನು ಹೇಳಿದ: "ಅಕ್ಕ, ಸಾಹೇಬರಿಗೆ ಒಮ್ಮಿಂ

ದೊಮ್ಮೆ ಏನೋ ಆಗಿದೆ. ದೇಹದ ಒಂದು ಬದಿಯೇ ಮರಗಟ್ಟಿದೆ. ಇಬ್ಬರು ಡಾಕ್ಟರರೂ ಹೋಗಿದ್ದಾರೆ. ನಿಮಗೂ ತಿಳಿಸುವ-ಎಂದು ಆತುರದಿಂದ ಬಂದೆ. ಬರುತ್ತೀರಾ ಅವರನ್ನು ನೋಡುವುದಕ್ಕೆ?" ಎಂದು ತಿಳಿಸಿದ.

"ಹಾಂ!" ಎಂದು ಚಕಿತಳಾದಳು ಆಕೆ. "ಎಲ್ಲಿದ್ದಾರೆ? ಮನೆಯಲ್ಲೇ? ಅಲ್ಲಿಗೆ ನಾನು ಹೋಗುವುದೇ?" ಎಂದು ಅಳುಕಿದಳು. ನಿಜ ಈ ತನಕ ಅವಳು ಅಲ್ಲಿಗೆ ಹೋದವಳಲ್ಲ. ಆಪತ್ತಿನ ಗಳಿಗೆಯಲ್ಲಿ ಹೋಗು ಎಂದರೂ ಹೋಗಲು ಧೈರ್ಯ ಬರಲಿಲ್ಲ.

"ಅವರನ್ನು ಕೇಳಿ ನೋಡುತ್ತೇನೆ— ಈಗ ಬೇಡ. ನೀವಷ್ಟು ಗಾಬರಿಯಾಗುವುದು ಬೇಡ" ಎಂದು ವೆಂಕಟು ತಿಳಿಸಿಹೋದ.

ಆ ರಾತ್ರಿ ಗುಲಾಬಿಯು ತ್ರಿಶಂಕು ಸ್ವರ್ಗದಲ್ಲಿ ತೇಲುವಂತಾಯಿತು. ಮಾವ ಮೊದಲು ತೀರಿದ್ದ; ಅಜ್ಜಿ ತಿಂಗಳ ಹಿಂದೆ ಕಣ್ಮರೆಯಾದಳು. ತನ್ನವರೆಂದು ಯಾರೂ ಉಳಿದಿಲ್ಲ. "ಇನ್ನು ಸಾಹೇಬರಿಗೇನಾದರೂ ಆದರೆ ನನ್ನ ಗತಿಯೇನು" ಎಂಬ ಗಾಬರಿಯಾಯಿತು. ಗಾಬರಿಯ ಬೆನ್ನಿಗೆ ದುಃಖವಾಯಿತು. ತಾನು ಎರಡೆರಡು ಬಗೆಗಳಿಂದ ದೂಷಿತಳಾಗಿದ್ದೇನೆ — ಎನಿಸಿತು. ಸಾಹೇಬರ ಸ್ನೇಹದಿಂದ ದೋಷ ಪ್ರಾಪಿಸಿದ್ದೊಂದು; ನಂಬಿದ ಅವರನ್ನು ವಂಚಿಸಿದ್ದಾಯಿತಲ್ಲ-ಎಂಬ ದೋಷದ ಕಲ್ಪನೆ ಇನ್ನೊಂದು. ಇವುಗಳಿಗಿಂತ ನಾಳಿನ ತನ್ನ ಚಿಂತೆ. ಆ ದುಃಖದಲ್ಲಿ ತನ್ನ ಹಳೆಯ ಪ್ರಣಯಿಯ ಕಡೆಗೂ ಮನಸ್ಸು ಹರಿಯಿತು. 'ಅವರ ಸಂಸಾರವೂ ದೊಡ್ಡದು. ಅವರ ಮನಸ್ಸು ಇಂದು ಯಾರೊಬ್ಬರಿಗೂ ಮೀಸಲಾಗಿಲ್ಲ. ಚೆಲುವು ಕಂಡಲ್ಲೆಲ್ಲ ಅದು ಓಡುತ್ತಿದೆ. ತಾನು ಬಟ್ಟೆಗೆಟ್ಟಂಥ ವ್ಯಕ್ತಿ. ಇರುವುದು ಕೈ ತಪ್ಪುತ್ತಿದೆಯಾದರೆ, ಬರುವುದು ನಂಬಿಕೆಯದಲ್ಲ" ಎಂಬ ಹಲವಾರು ವಿಚಾರಗಳ ಸುಳಿವಿಗೆ ಸಿಲುಕಿ ನರಳಿದಳು.

'ಸಾಹೇಬರು ಹೇಗಿದ್ದಾರೆ' ಎಂದು ವೆಂಕಟು ಬಂದು ಹೇಳಿದರಾಯಿತು. ಹೇಳದಿದ್ದರೆ? ಇನ್ನೂ ವೆಂಕಟು ಬಂದಿಲ್ಲ. ರಾತ್ರಿ ಸರಿಯಿತು, ಬರುವ ಲಕ್ಷಣವಿಲ್ಲ ಡಾಕ್ಟರರ ಮನೆಗೋಡಿ ಅವರನ್ನಾದರೂ ಕೇಳಿ, ತಿಳಿದುಕೊಳ್ಳಲೇ, ಎಂಬ ಆತುರವೂ ಆಗಾಗ ಉಂಟಾಯಿತು.

---

## ಅಧ್ಯಾಯ ೫.

ಊರಿಗೆ ಹೊಸಬರಾಗಿ ಬಂದ ವೈದ್ಯರಲ್ಲಿ ಜನಗಳಿಗೆ ವಿಶ್ವಾಸವುಂಟಾಗಿ, ಅವರಿಂದ ಒಳ್ಳೆಯ ಮಾತುಗಳನ್ನು ಕೇಳುವುದಕ್ಕೆ ತುಂಬ ಸಮಯ ಬೇಕಾಗುತ್ತದೆ. ಶಿವಪ್ಪನಂತಹರು ವಿಶೇಷ ಅನುಭವವಿಲ್ಲದೆ, ನೇರಾಗಿ ದವಾಖಾನೆಯನ್ನು ತೊಡಗಿದ್ದುದರಿಂದ "ಅವರಿಗೇನು-ಸಣ್ಣ ಪ್ರಾಯ! ಕಾಲೇಜಿನಲ್ಲಿ ಓದಿರಬಹುದಾದರೂ ಒಂದು ಅನುಭವವೇ? ಮತ್ತೊಂದೇ?" ಎಂಬ ಮಾತಿಗೆ ಅವಕಾಶವಿತ್ತು. ಅಂತಹ ವಿಚಾರಗಳಲ್ಲಿ ನಿಜಕ್ಕೂ ಶಿವಪ್ಪನವರು ತೀರ ಅದೃಷ್ಟಶಾಲಿಗಳು. ಅದಕ್ಕೆ ಮೊದಲನೆಯ ಕಾರಣವೆಂದರೆ-ಬಹುಕಾಲ ಕಾಳೂರಿನಲ್ಲಿ ಯಾವ ವೈದ್ಯಕೀಯ ನೆರವೂ ಇಲ್ಲದೆ ಹೋದದ್ದು. ಊರಲ್ಲಿ ಧರ್ಮಾಸ್ಪತ್ರೆ ತೆರೆದ ಮೇಲೂ, ಅದರಲ್ಲಿ ಸಾಕಷ್ಟು ಔಷಧಗಳಿಲ್ಲದಿದ್ದುದರಿಂದ ರೋಗಿಗಳು ಹೋದರೆ ಡಾಕ್ಟರ್ ಮಡಗಾಂವಕರರು 'ಅದನ್ನು ತಾ, ಇದನ್ನು ತಾ' ಎಂದು ಹೇಳುತ್ತಿದ್ದರು. ಏನೂ ಕೈಲಾಗದವರಿಗೆ ಆಸ್ಪತ್ರೆಯ ಮದ್ದಿನಿಂದ ತೃಪ್ತಿಬರಬೇಕೇಹೊರತು,ಉಳಿದವರಿಗೆ-'ಹಣಕೊಟ್ಟು ಕೊಳ್ಳುವುದಾದರೆ ಮದ್ದು ಎಲ್ಲಿಂದಲಾದರೇನು?' ಎನ್ನುವ ವಿಚಾರ ಬಂದೇ ಬರುತ್ತದೆ. ಅಲ್ಲದೆ ಮಡಗಾಂವಕರರ ರೀವಿ, ಮರ್ಜಿಗಳು ಎಲ್ಲ ಜನಕ್ಕೆ, ಅದೂ ಬಡವರಿಗೆ ಹೆಚ್ಚಾಗಿ ಹಿಡಿಸುವುದಿಲ್ಲ. ಸಾಮಾನ್ಯವಾಗಿ ಬಡಜನರ ವಿಚಾರದಲ್ಲಿ ಅವರಿಗೂ ಹೆಚ್ಚಿನ ಆದರವಿಲ್ಲ. ಈ ವಿಚಾರದಲ್ಲೆಲ್ಲ ಶಿವಪ್ಪನವರು ಲೇಸು. ಹಳ್ಳಿಯ ಜನ, 'ತಮ್ಮವರಿಗೆ ಕುದಿಜ್ವರ ಬರುತ್ತಿದೆ' ಎಂದರೆ ಅದರ ಕಾರಣ ಶೀತವೋ, ಮಲೇರಿಯವೋ ಯಾವುದೇ ಇದ್ದರೂ, ಬಂದು ನೋಡಬೇಕೆಂದರೆ ಹೋಗುವುದಕ್ಕೆ ಉದಾಸೀನ ಮಾಡುವುದಿಲ್ಲ. ಡಾಕ್ಟರರಲ್ಲಿ ವಿಶ್ವಾಸ ಉಂಟಾದರೆ ರೋಗಿಯ ಪಾಲಿನ ಅರ್ಧ ಚಿಕಿತ್ಸೆಯಾದಂತೆ. ಜನಗಳೊಡನೆ ಸರಳವಾಗಿ ವ್ಯವಹರಿಸಲಾರದವರು ಅಂತಹ ವಿಶ್ವಾಸವನ್ನು ರೋಗಿಗಳಲ್ಲಿ ಪ್ರೇರಿಸಲಾರರು. "ಏನೂ ಗಾಬರಿಯಾಗಬೇಡ. ಈಗ ಮದ್ದು ಕೊಟ್ಟಿದ್ದೇನೆ-ನಾಳೆಗೇ ಜ್ವರ ಬಿಡುತ್ತದೆ-ನಾಡಿದ್ದು ಎದ್ದು ಕೂತುಕೊಳ್ಳುತ್ತೀಯ" ಎಂದು ಬರಿಯ ನೀರನ್ನು ಕುಡಿಯಲು ಕೊಟ್ಟರೂ, ರೋಗಿಗೆ ನಂಬಿಗೆಯಿದ್ದಲ್ಲಿ ಆತ ಎದ್ದು ಕುಳಿತುಕೊಳ್ಳುವ ಸಂಭವ ಹೆಚ್ಚು. ಎಷ್ಟೋ ಬೇನೆಗಳು ಚಿಕಿತ್ಸೆಯಿಲ್ಲದೆ ತಮ್ಮ ಕಾಲಾವಧಿ ಕಳೆಯುತ್ತಲೇ ಮಾಯವಾಗು

ತ್ತವೆ. ಅಲ್ಲಿಯೂ ಮದ್ದೆಂಬುದು ನೆಪಕ್ಕೆ ಮಾತ್ರ. ಮದ್ದನ್ನು ಕೊಡುತ್ತ, ರೋಗಿಗಳ ಪರಿಚಯವನ್ನು ಹೆಚ್ಚು ಹೆಚ್ಚಾಗಿ ಮಾಡಿಕೊಳ್ಳುತ್ತಿರುವ ಶಿವಪ್ಪ ನವರಿಗೆ, ಇಂತಹ ಅನೇಕ ಅನುಭವಗಳಾಗಿವೆ.

ಹಾಗೆ ಮಾಡುತ್ತಲಿರುವ ಯಾವನೇ ಡಾಕ್ಟರನಿಗೆ–ವಿರಾಮ ಬೇಕು, ವಿಶ್ರಾಂತಿ ಬೇಕು-ಎಂದರೆ, ಅದು ದೊರೆಯುವುದು ಮಾತ್ರ ಕಷ್ಟ. ವಕೀಲರು ಗಳು, ವೈದ್ಯರುಗಳು ಜನಕ್ಕೆ ಎಷ್ಟು ಸುಲಭಸಾಧ್ಯರಾಗುತ್ತಾರೋ ಅಷ್ಟು ಪೀಡೆ ಹೆಚ್ಚು. ಶಿವಪ್ಪನಂಥವರು, ಇಂತಿಷ್ಟೇ ಕೊಡಬೇಕು ಎಂದು ಕರಾರು ಮಾಡದೆ, ರೋಗ ಚಿಕಿತ್ಸೆ ಮಾಡುವವರು ಸಿಕ್ಕಿದರೆ, ಕರೆದಲ್ಲಿಗೆ ಹೋಗು ವವರು ದೊರೆತರೆ, ಬೇಡದಲ್ಲಿಯೂ ಅವರನ್ನು ಕರೆದೊಯ್ದು ಪೀಡೆಕೊಡು ವವರಿದ್ದಾರೆ. ಎಷ್ಟೋ ಬಾರಿ ರೋಗಿಯ ಗಾಬರಿಯನ್ನು ತಣಿಸುವುದಕ್ಕಷ್ಟೆ ಅವರು ಹೋಗಿ ಬರಬೇಕು. ಹೀಗೆ ದಿನವೆಲ್ಲ ದುಡಿಯುವಾಗ ವಿಶ್ರಾಂತಿಯ ಬಯಕೆಯಾಗುತ್ತದೆ. ಮನೆಯಲ್ಲಿ ನಾಲ್ಕು ನಿಮಿಷ ಕಾಲ ಹೆಂಡತಿಯೊಡನೆ ಸಲ್ಲಪಿಸಬೇಕು ಎಂಬ ಆಸೆಯಾಗುತ್ತದೆ. ಹಾಗೆಲ್ಲಾದರೂ ಮಾತನಾಡುತ್ತ ಕುಳಿತರೊ-ಅಷ್ಟರಲ್ಲಿ ಒಬ್ಬ ಬಂದಾಯಿತು: "ಅಯ್ಯ, ನನ್ನ ಹೆಂಡತಿಗೆ ಏನೋ ಆಗಿದೆ" ಎಂದು ಆ ಸುಖವನ್ನು ಹಾಳುಮಾಡಿಯಾಯಿತು. ಮನೆಗೆ ದಣಿದು ಬರುತ್ತಿರುವ ಮಗನನ್ನು ಕಂಡ ಕಿಟ್ಟಪ್ಪ ಮಾಸ್ತರರು ಎಷ್ಟೋಬಾರಿ, ಒಳಗೆ ವಿರಮಿಸುತ್ತಿರುವ ಶಿವಪ್ಪಗೆ ತೊಂದರೆಯಾಗಬಾರದೆಂದು, ಇಂತಹ ಪೀಡೆ ಗಳನ್ನು ನಿವಾರಿಸುವುದುಂಟು; "ಡಾಕ್ಟರರು ಬಂದಿಲ್ಲ, ಈಗ ಬಂದಾರು. ನಿನ್ನ ಮನೆ ಗೊತ್ತಿದೆ. ಬಂದ ಕೂಡಲೇ ಕಳುಹಿಸುತ್ತೇನೆ" ಎಂದು ಉಪಾಯವಾಗಿ ಅವರನ್ನು ಕಳುಹಿಸಿ ಕೊಡುವುದುಂಟು. ಆದರೆ ಶಿವುವಿನ ಕಿವಿಗೆ ಬಂದವರ ಸ್ವರ ಕೇಳಿಸಿದ್ದಾದರೆ "ಬಂದೆನಪ್ಪ; ಯಾರದು? ಈಗ ಬರುತ್ತೇನೆ" ಎಂದು ತಮ್ಮ ಸುಖವನ್ನು ತಾವೇ ಕೆಡಿಸಿಕೊಳ್ಳುತ್ತಾರೆ. ಇಂತಹ ಗುಣಗಳಿಂದ ಅವರು ಶ್ರೀಮಂತರಾಗಿಲ್ಲವಾದರೂ, ನಾಲ್ಕು ಜನರಿಗೆ ಬೇಕಾದವರೆನಿಸಿದ್ದಾರೆ.

ಈ ಎರಡು ತಿಂಗಳಿನಿಂದ ಅವರ ವಿರಾಮವೆಲ್ಲ ಧ್ವಂಸವಾಗಿದೆ. ಬಿಡು ವೆಂಬುದಿಲ್ಲ. ಅದಕ್ಕೆ ಮುಖ್ಯವಾದ ಕಾರಣ–ಮುಗುದುಮ್ ಸಾಹೇಬರು ಹಾಸಿಗೆ ಹಿಡಿದದ್ದು. ಸಾಲದುದಕ್ಕೆ ಶಿವಪ್ಪನವರ ತಾಯಿಯೂ ಹಾಸಿಗೆ ಹಿಡಿ ದುದು.

ಸಾಹೇಬರು ಒಂದು ದಿನ, ಇದ್ದಕ್ಕಿದ ಹಾಗೆ, ಪಾರ್ಶ್ವವಾತಕ್ಕೆ ಗುರಿ

ಯಾದರು; ಅವರ ಮಾತುಕತೆ ನಿಂತಿತು. ಮನೆಯವರಿಗೆಲ್ಲ ಹೇಳಲಾರದಷ್ಟು ಗಾಬರಿಯಾಯಿತು. ಕುಮಟೆಯಿಂದ ಕಾಸೀಮ್ ಸಾಹೇಬರು ಬಂದರು. ಕಾಸೀಮ್, ಕರೀಮರಿಬ್ಬರೂ ಕ್ಷಣಕಾಲವೂ ತಮ್ಮ ತಂದೆಯ ಮಗ್ಗುಲನ್ನು ಬಿಟ್ಟೇಳುವುದಿಲ್ಲ. ಶ್ರೀಮಂತರ ಕಾಯಿಲೆಯೆಂದ ಬಳಿಕ, ಊರಿನ ಇಬ್ಬರು ಡಾಕ್ಟರರೂ ದಿನಕ್ಕೆಂಟು ಬಾರಿ ಅವರ ಬಳಿಗೆ ಬಂದು ಹೋಗಬೇಕು. ಆಗ ಲೇನೆ ಶಿವಪ್ಪನವರಿಗೆ ಡಾಕ್ಟರ್ ಮಡಗಾಂವಕರರ ಸಮನಾದ ಪರಿಚಯ ವಾದುದು. ಅಲ್ಲದೆ ಸಹೋದ್ಯೋಗಿಗಳ ಜತೆಗೆ, ಅವರ ಮನಸ್ಸಿಗೆ ನೋವು ಬಾರದ ರೀತಿಯಲ್ಲಿ, ಹೊಂದಿಕೊಂಡು ಹೋಗಬೇಕಾದ ಪ್ರಸಂಗ ಒದ ಗಿದ್ದು . ಡಾಕ್ಟರ್ ಮಡಗಾಂವಕರರು ವಯಸ್ಸಾದವರು; ರೋಗ ನಿದಾನದಲ್ಲಿ, ಚಿಕಿತ್ಸೆಯಲ್ಲಿ, ಮನಸ್ಸಿಗೆ ಹೊಳೆದುದನ್ನು ಕೂಡಲೇ ಸೂಚಿಸುವವರು. ಹೀಗಾಗಿ 'ಈ ಮದ್ದು ಕೊಡುವ, ಆ ಇಂಜೆಕ್ಷನ್ ಕೊಡುವ' ಎಂದು ತೆಗೆದ ಬಾಯಿಗೆ ಅವರು ಹೇಳುವಾಗ, ಶಿವಪ್ಪನವರು ಅನುಮಾನಿಸಿ, ಯೋಚಿಸಿ, "ಕೊಡಬಹುದೋ ಏನೋ" ಎಂದು ಹೇಳಬೇಕಾಗುತ್ತದೆ. ತನಗೆ ಆ ಚಿಕಿತ್ಸೆ ಸರಿಯೆಂದು ಕಾಣಿಸದೆ ಹೋದರೆ ಮೂಕರಾಗಿಬಿಡುತ್ತಾರೆ. ಇನ್ನೊಬ್ಬರ ಮನೆ ಯಾಗಿದ್ದರೆ, ಅವರು ಅಂಥ ಪ್ರಸಂಗಕ್ಕೆ ಸಿಕ್ಕಿಕೊಳ್ಳುತ್ತಿರಲಿಲ್ಲ. ಚಿಕಿತ್ಸೆಗಿಂತ ಅವರ ಮುಖ್ಯ ಕೆಲಸ, ಅವರ ಮನೆಯವರಿಗೆ ಧೈರ್ಯಹೇಳುವುದು, 'ಗಾಬ ರಿಯಾಗಬೇಡಿ' ಎನ್ನುವುದು. ಹೀಗೆ ಒಂದು ವಾರ ಕಾಲ ಸರಿಯಿತು, ತಿಂಗಳು ಹೋಯಿತು. 'ಮೊದಲಿಗಿಂತ ಎಷ್ಟೋ ವಾಸಿ'–ಎಂದು ಮಡಗಾಂವಕರರು ಹೇಳುತ್ತಿದ್ದಾರಾದರೂ, ಮುಗುದುಮ್ ಸಾಹೇಬರ ನಾಲಗೆಗೆ ನುಡಿಯುವ ಶಕ್ತಿ ಬರಲಿಲ್ಲ. ಆ ಶಕ್ತಿಯು ಸಂಪೂರ್ಣ ಉಡುಗಿಹೋಗಿತ್ತು. ತಮ್ಮ ಇಂಗಿತ ವನ್ನೆಲ್ಲ ಕಣ್ಣಿಂದಲೋ, ಅಲುಗಿಸಲು ಬರುವ ಒಂದು ಕೈಯ ಬೆರಳಿನಿಂದ ಲೋ ಹೇಳಬೇಕಾಗಿತ್ತು. ಅವರ ಭಾವಂದಿರಾದ ವಿಸಾರಾ ಸಾಹೇಬರು ಭಟ್ಕಳದಿಂದ ಧಾವಿಸಿಬಂದರು. ಅವರು ಆಗಾಗ ಶಿವಪ್ಪನವರ ಹತ್ತಿರ ಕಿವಿ ಮಾತಿನಲ್ಲಿ "ಹೇಗೆ? ಮೇಲೆ ಬಿದ್ದಾರೆಯೇ? "ಎಂದು ವಿಚಾರಿಸುವುದುಂಟು. ಸ್ವತಃ ಅವರಿಗೆ ಆ ಧೈರ್ಯವಿಲ್ಲದಿದ್ದುದರಿಂದ ಈ ಪ್ರಶ್ನೆಯನ್ನು ಕೇಳು ತಿದ್ದಾರೆ. ಶಿವಪ್ಪನವರು "ದೇವರಿದ್ದಾನೆ, ನೋಡುವ" ಎಂದರೆ, "ಹಾಗಲ್ಲ ಡಾಕ್ಟರರೇ, ನನಗೆ ಖಂಡಿತ ಧೈರ್ಯಕಾಣುವುದಿಲ್ಲ. ಅವರ ಕಿರಿಯ ಮಗನು ಕೊಲಂಬೋವಿನಲ್ಲಿದ್ದಾನೆ. ಅವನನ್ನು ಕರೆಯಿಸಿಕೊಳ್ಳುವುದು ಒಳ್ಳೆಯ

ದಲ್ಲವೆ? ಅವರ ಅಂಗಡಿಯ ವಹಿವಾಟೂ, ಭಾವನ ಮನೆಯ ವಹಿವಾಟೂ, ನಮಗ್ಯಾರಿಗೂ ಏನೇನೂ ತಿಳಿದಿಲ್ಲ. ಭಾವ ಬಾಯಿತೆರೆಯುವ ಸ್ಥಿತಿಯಲ್ಲಿಲ್ಲ. ನಡುವೆ ಏನಾದರೂ ಹೆಚ್ಚುಕಡಿಮೆಯಾಗಿ ಬಿಟ್ಟರೆ, ಆ ಮಗನು ಓಡಿ ಬಂದು ನಮ್ಮನ್ನು ದೂರಬಾರದಲ್ಲ" ಎಂದು ಹೇಳಿದ್ದಕ್ಕೆ, ಶಿವಪ್ಪನವರು "ಹಾಗಾದರೆ ಕರೆಯಿಸಿ ಬಿಡಿ" ಎಂದರು.

ಕೊಲಂಬೋವಿಗೆ ತಂತಿ ಹೋಯಿತು. ಎಂಟು ದಿನಗಳಲ್ಲಿ ತಮ್ಮ ಎಲ್ಲ ವಹಿವಾಟುಗಳನ್ನು ಮರೆತುಬಿಟ್ಟು, ಆದಮ್ ಸಾಹೇಬರು ಧಾವಿಸಿ ಬಂದರು. ಮನೆಯ ಉಳಿದವರಿಗೆ ಹಾಗೆ ತಂತಿ ಹೋದದ್ದೇ ಗೊತ್ತಿಲ್ಲ. ಕಾಸೀಮ್ ಮತ್ತು ಕರೀಮರು 'ಯಾರು ಕರೆಯಿಸಿದರು, ಯಾರು ತಂತಿಕೊಟ್ಟರು' ಎಂದು ಒಳಗಿಂದೊಳಗೇ ವಿಚಾರಿಸುತ್ತಿದ್ದರು. ಹದಿನೈದು ವರ್ಷಗಳಿಗಿಂತಲೂ ಹೆಚ್ಚಾಗಿತ್ತು, ಆತ ಮನೆಯಿಂದ ಓಡಿಹೋಗಿ. ಅವನು ಬರಲಾರನೆಂಬ ಕನಸನ್ನು ಇಬ್ಬರು ಅಣ್ಣಂದಿರು ಕಾಣುತ್ತಿದ್ದಾಗ, ಆತ ಬಂದದ್ದು, ಹೆಚ್ಚಿನ ಆಶ್ಚರ್ಯಕ್ಕೆ ಕಾರಣವಾಯಿತು. ಆದರೆ ತಮ್ಮ ಹಾಸುಗೆಯ ಬಳಿಗೆ ಬಂದುನಿಂತ ದೀರ್ಘ ಕಾಯನಾದ ಕಿರಿಯ ಮಗನನ್ನು ಕಂಡಾಗ, ಮುಗುದುಮ್ ಸಾಹೇಬರಿಗೆ ಒಂದು ಕ್ಷಣಕ್ಕೆ ಅಪಾರ ಆನಂದವಾಯಿತು. ಅವರ ಅಂತರಂಗಕ್ಕೆ ತಮ್ಮ ಗಳಿಗೆ ಸಮೀಪಿಸಿದೆ-ಎಂಬ ತಿಳಿವು ಉಂಟಾಗಿತ್ತು. ಮಗನನ್ನು ಕಾಣಬೇಕೆಂಬ ಉತ್ಕಟ ಅಪೇಕ್ಷೆಯಾಗಿತ್ತು. ಆದರೆ ವಾಕ್‌ಶಕ್ತಿ ಉಡುಗಿ, ಅಂತರಂಗದ ಆಸೆ ಅಲ್ಲಿಯೇ ಕುದಿಯುತಿತ್ತು. ಅಲ್ಲಾ ಈ ಗಳಿಗೆಯಲ್ಲಿ ತಮ್ಮ ಬಯಕೆ ಸಲ್ಲಿಸಿದ ಬಗ್ಗೆ ಆನಂದಪಟ್ಟರು. ಒಂದು ಐದು ನಿಮಿಷಗಳ ಕಾಲ ನಾಲಿಗೆ ಬರುತ್ತಿದ್ದರೆ-ತಮ್ಮ ವಹಿವಾಟು, ಗುಪ್ತ ಸಂಪತ್ತು ಮೊದಲಾದುವುಗಳ ವಿಚಾರದಲ್ಲಿ ಏನಾದರೊಂದು ಸೂಚನೆಯನ್ನು ಕೊಡುತ್ತಿದ್ದರು. ಆದರೆ ಆ ಶಕ್ತಿ ಬರಲೇ ಇಲ್ಲ. ಮಡಗಾಂವಕರರು ನಡೆಸುತಿದ್ದ ಚಿಕಿತ್ಸೆಯು ಫಲಪ್ರದವಾಗುವಂತೆಯೂ ಕಾಣಿಸಲಿಲ್ಲ.

ಇತ್ತ ಶಿವಪ್ಪನವರ ಮನೆಯಲ್ಲಿ ಅವರ ತಾಯಿ ಬೆನ್ನು ನೋವಿನಿಂದ ಮಲಗಿಕೊಂಡಳು. ನೋವು ತೊಡಗಿ, ಒಂದು ಭಾಗ ಕುರುವಿನಂತೆ ಬಾತುಕೊಂಡಿತು. ಬಾವು ದೊಡ್ಡದಾಗಿ 'ಅರ್ಬುದ'ವೆಂಬ ಹೆಸರನ್ನು ಸಂಪಾದಿಸಿತು. ಅದು ನರಳುವ ಮನೆಯಾಯಿತು. ತಿಂಗಳು ಸಮೀಪಿಸಿದ ಬಸಿರಿಯಾದ ಇಂದುಮತಿ, ಅತ್ತೆಯ ಬದಲು ತಾನು ಅಡುಗೆಗೆ ತೊಡಗಿದಳು. ಅದು ಅವ

ಳಿಂದ ನೀಗದ ಕೆಲಸ. ಹಾಗೆಂದು ಶಿವಪ್ಪನವರು ತಮ್ಮ ಅಕ್ಕಂದಿರಿಗೆ, ತಂಗಿಯರಿಗೆ ಹೇಳಿ ಕಳುಹಿಸಿದರು. ತಾಯಿಯನ್ನು ಕಾಣುವುದಕ್ಕೆಂದು, ಅವಳ ಆರೈಕೆಗೆಂದು ಧಾವಿಸಿ ಬಂದ ಅಕ್ಕತಂಗಿಯರು ಜತೆಯಲ್ಲಿ ತಮ್ಮ ಎಳೆಯ ಮಕ್ಕಳನ್ನೂ ಕರೆದು ತಂದರು. ಅವರೆಲ್ಲರು ಎಷ್ಟು ದಿನ ಉಳಿಯುತ್ತಾರೆಂಬ ನಿಶ್ಚಯವಿಲ್ಲ. ಮನೆ ಜನರಿಂದ ಕಿಕ್ಕಿರಿಯಿತು. ತಾಯಿಗೆ ಸುಖವಾಗಲಿ, ಆಗದಿರಲಿ-ತನ್ನ ಮಕ್ಕಳು ಬಳಿಯಲ್ಲಿರುವರೆಂಬ ಸಂತೋಷ ಆಕೆಗುಂಟಾಯಿತು. ಈ ಸಂತೋಷಕ್ಕೆ ಪ್ರತಿಯಾದ ಚಿತ್ರವೆಂದರೆ-ಮಕ್ಕಳ ಕೂಗು, ಮನೆಯಲ್ಲಿನ ಇಕ್ಕಟ್ಟು. ಇಂದುಮತಿಯ ಚಿಕ್ಕ ಕೋಣೆಯೂ ಜನನಿಬಿಡವಾಯಿತು. "ನೋಡಿದಿರಾ—ಈ ನಿಮ್ಮ ಮನೆ ಎಷ್ಟು ದೊಡ್ಡದಾಗಿದೆಯೆಂದು ಈಗ ತಿಳಿಯಿತಲ್ಲ?" ಎಂದು ಇಂದುಮತಿ ಗಂಡನೊಡನೆ ದೂರುವಂತಾಯಿತು.

"ಮಾಡಬೇಕೇನು, ಇಂದು? ಎಣಿಸಿದ ಕ್ಷಣಕ್ಕೆ ಮನೆ ಕಟ್ಟುವುದಕ್ಕೆ ಬಂದಿದ್ದರಾಗುತಿತ್ತು."

ಈ ಮನೆಯ ಇಕ್ಕಟ್ಟನ್ನು ಅನುಭವಿಸುವುದರ ಜತೆಗೆ, ತಾಯಿಯ ಬೇನೆಗೆ ಏನು ಚಿಕಿತ್ಸೆ ಮಾಡಲೆಂದೂ ಅವರಿಗೆ ಹೊಳೆಯಲಿಲ್ಲ. 'ಕುರ ಹಣ್ಣಾಗುವುದಕ್ಕೆ ಲೇಪ ಹಚ್ಚುವ' ಎನ್ನುವವರಿದ್ದಾರೆ, 'ಅದು ಬೇಡವೇ ಬೇಡ' ಎನ್ನುವವರಿದ್ದಾರೆ. ಅರ್ಬುದವೆಂಬುದು ಬೆದರಿಕೆಯನ್ನು ತರುವ ಬೇನೆ; ಅದು ಬೆನ್ನೆಲುಬಿಗೆ ಸಮೀಪವಾಗಿ ಆದಾಗ. ಕುರ ಒಡೆಯುವ ತನಕ ನೋವಿನ ನರಕ. ಅದು ಒಡೆದಾದ ಮೇಲೆ, ಕೀವು ತುಂಬಿ ಕೊಳೆಯತೊಡಗಿದರಂತು ಅಸಹ್ಯವಾದ ಇನ್ನೊಂದು ನರಕವಾಗುತ್ತದೆ. ಶಿವಪ್ಪನವರ ತಂದೆಯವರಿಗೆ ಅದರ ವಿಚಾರದಲ್ಲಿ ಮಗನ ಇಂಗ್ಲಿಷ್ ವೈದ್ಯ ಬೇಡವೇ ಬೇಡ ಎಂದು ತೋರುತ್ತಿದೆ. "ಹಳದೀಪುರದಲ್ಲಿ ಅರ್ಬುದಕ್ಕೆ ಮದ್ದು ಕೊಡುವಂಥ ಒಬ್ಬ ದೀವರನಿದ್ದಾನೆ, ಪರಮಾಶಿ ಎಣ್ಣೆ ಕೊಡುತ್ತಾನೆ." ಎಂದು ಕೇಳಿ ಹೋಗಿ ಬಂದರು. ಅವನನ್ನೊಮ್ಮೆ ಮನೆಗೆ ಕರೆದುಕೊಂಡೂ ಬಂದರು. ಈ ವಿಚಾರದಲ್ಲಿ ತಂದೆ ಮಕ್ಕಳ ಚಿಕಿತ್ಸೆಯ ದಾರಿ ಬೇರೆಯಾಯಿತು.

ಶಿವಪ್ಪನವರು ಈ ವಿಚಾರದಲ್ಲಿ ಮುಡಗಾಂವಕರರನ್ನು ಕೇಳಿದ್ದುಂಟು. ಅಂತೂ ಎಲ್ಲ ಬಗೆಯ ಮದ್ದು ಮಾಟಗಳೂ ನಡೆದುವು. ಬೆನ್ನಿನ ಕುರವು ಬೆಳೆದು, ಹಣ್ಣಾಗಿ, ಒಂದು ದಿನ ಒಡೆದೂ ಒಡೆಯಿತು. ದುರ್ಗಂಧಯುಕ್ತವಾದ ಕೀವಿನ ನಾತ ಮನೆಯನ್ನು ತುಂಬಿಕೊಂಡಿತು. ಕಿಟ್ಟಪ್ಪ ಮಾಸ್ತರರು

ಇನ್ನೊಮ್ಮೆ ಹಳದೀಪುರಕ್ಕೆ ಓಡಿದರು. ಏನೇನೋ ಮದ್ದುಗಳನ್ನು ಹೊತ್ತು ತಂದರು. ಹಳ್ಳಿಯ ವೈದ್ಯ ನಡೆಯಿಸಿದರು. ಈ ದಿನಗಳಲ್ಲೇ ಒಂದು ದಿನ ತಾಯಿ, ತನ್ನ ಮಗನನ್ನು ಕರೆದು "ಶಿವೂ, ನೀನ್ಯಾಕೆ ಬೇಸರಮಾಡುತ್ತೀ? ನಿನ್ನ ಮದ್ದು ನಾಟಲಿಲ್ಲವೆಂದೇ? ಅವರು ಬೇರೆ ವೈದ್ಯ ಮಾಡಿಸುತ್ತಿದ್ದಾರೆಂದೇ? ನೋಡು, ಇದು ಯಾವ ವೈದ್ಯ ಬಂದರೂ ಗುಣವಾಗದ್ದು — ನನಗೆ ಗೊತ್ತು. ಬ್ರಹ್ಮನಿಂದ ಮೇಲೆ ಇನ್ನೊಬ್ಬ ವೈದ್ಯನಿಲ್ಲ. ಅವನು ಬರೆದ ಹಾಗಾಗುತ್ತದೆ. ನೀನೇಕೆ ಯೋಚನೆ ಮಾಡಬೇಕು? ನೋವು ಸಹಿಸುವುದು, ಈ ಅಸಹ್ಯ ಸಹಿಸುವುದು ಕಷ್ಟವಾದರೂ, ಸಾಯುವುದಕ್ಕೆ ಹೆದರುತ್ತೇನೆಂದು ತಿಳಿಯ ಬೇಡ. ಸಾವೆಲ್ಲರಿಗೂ ಒಂದು ದಿನ ಬರಬೇಕಾದದ್ದೇ."

"ಅಹುದಮ್ಮ."

"ನಾನು ಕರೆದದ್ದು ಯಾಕೆಂದು ಗೊತ್ತಾಯಿತೇ? ನೋಡು, ಯಾರೂ, ಏನೂ ಹೇಳಲಿ, ನಿನ್ನ ಇಂದುಮತಿಗೆ ಈ ಗದ್ದಲದಲ್ಲಿ, ಮಕ್ಕಳ ಗೌಜಿನಲ್ಲಿ ಒಂದಿಷ್ಟೂ ವಿಶ್ರಾಂತಿ ಸಿಗಲಾರದು; ನಿದ್ದೆಯೇ ಬರಲಾರದು. ಅವಳು ಬಸಿರಿ ಯಲ್ಲವೆ? ಅಲ್ಲದೆ ಚೊಚ್ಚಲ ಬಸಿರಿ. ಬೇರೆಯೇನೂ ಯೋಚನೆ ಮಾಡ ಬೇಡ. ಅವಳನ್ನು ಮೊದಲು ಧಾರವಾಡಕ್ಕೆ ಕರೆದುಕೊಂಡು ಹೋಗಿ ಬಿಟ್ಟು ಬಾ, ನಾಳೆ ಒಳ್ಳೆಯ ದಿನ. . . . ಹೊರಟು ಬಿಡು" ಎಂದಳು.

"ಅಮ್ಮ, ಮನೆಯಲ್ಲಿ ಇಷ್ಟೆಲ್ಲ ಮಂದಿ ಸೇರಿ ಕಷ್ಟಪಡುತ್ತಿರುವಾಗ ಅವಳು ತಪ್ಪಿಸಿಕೊಳ್ಳುವುದೇ?"

"ಏನು ಮಾತು ನಿನ್ನದು! ಅವಳು ಕಷ್ಟಪಟ್ಟುದು ಸಾಕು. ಈ ಸಮಯ ದಲ್ಲಿ ಅವಳನ್ನು ಹೆಚ್ಚಿಗೆ ದಣಿಸಬಾರದು. ನ್ಯಾಯವಾಗಿ ಅವಳು ಈ ಮೊದ ಲೇನೆ ತವರಿಗೆ ಹೋಗಬೇಕಿತ್ತು. ಆಗೇನು ಕಂಡಿತೋ—ಅವಳಾಗಿ ಬೇಡ ವೆಂದಳು. ನನಗೆ ಹೀಗಾಗುತ್ತದೆಂದು ಯಾರು ಎಣಿಸಿದ್ದರು? ಇಲ್ಲಿದ್ದವರು ನನ್ನನ್ನು ನೋಡಿಕೊಳ್ಳುವುದೇ, ಅವಳನ್ನು ನೋಡುವುದೇ? ಹಡೆದ ಮೇಲೆ ಅವಳಿಗೂ ಅನುಪಾನವಾಗಬೇಡವೆ? ಈ ಮನೆಯಲ್ಲಿ ಅವಳ ಬಾಣಂತಿ ತನಕ್ಕೆ ಬೇಕಾದ ಜಾಗವಾದರೂ ಇರಬೇಡವೆ?" ಎಂದು ಬುದ್ಧಿ ಹೇಳಿದಳು.

ಶಿವಪ್ಪನವರಿಗೆ ತಾಯಿಯ ಮಾತು ಒಪ್ಪಿಗೆಯಾಗಬೇಕಾಯಿತು. ಇಂದುಮತಿಗೂ ಮೊದಲು ಹೊರಡಲು ಇಷ್ಟವಾಗದೆ ಹೋದರೂ, ಆ ತೊಡಕುಗಳನೆಲ್ಲ ಅನುಭವಿಸಿದ ಮೇಲೆ ಹೊರಡುವುದಾಗಿ ನಿರ್ಧರಿಸಿದಳು.

ಅವಳನ್ನು ಧಾರವಾಡಕ್ಕೆ ಬಿಟ್ಟುಬರಲು ಶಿವಪ್ಪನವರೇ ಹೋಗಿ ಬರಬೇಕು. ಆದರೆ 'ಒಂದೆರಡು ದಿನ ತಾನಿಲ್ಲ' ಎಂಬ ಸುದ್ದಿಯನ್ನು ಪುಗುಡುಮ್ ಸಾಹೇಬರ ಮನೆಯವರಿಗೆ ತಿಳಿಸದೆ ಹೋಗುವ ಹಾಗಿಲ್ಲ—ಎಂದು ಅಲ್ಲಿಗೆ ನಿತ್ಯದ ವಾಡಿಕೆಯಂತೆ ಹೋದರು. ಡಾಕ್ಟರ್ ಮಡಗಾಂವಕರರೂ ಬಂದಿದ್ದರು.

"ಏನು ಡಾಕ್ಟರರೇ, ನಮ್ಮ ತಂದೆಯವರ ಸ್ಥಿತಿಯಲ್ಲಿ ಏನೂ ಸುಧಾರಣೆ ಇಲ್ಲವಲ್ಲ" ಎಂದ ಆದಮ್.

"ನಮ್ಮಿಂದಾಗುವ ಪ್ರಯತ್ನವನ್ನೆಲ್ಲ ಮಾಡುತ್ತಿದ್ದೇವೆ" ಎನ್ನಬೇಕಾಯಿತು ಡಾಕ್ಟರ್ ಮಡಗಾಂವಕರರು.ಅತ್ತ ಆದಮ್ ಸಾಹೇಬರ ತಲೆಯೊಳಗೆ ಅವರ ಸೋದರಮಾವ 'ಇದು ಇವರಿಂದಾಗುವ ಕೆಲಸವಲ್ಲ; ಹುಬ್ಬಳ್ಳಿಯಿಂದಲೋ, ಧಾರವಾಡದಿಂದಲೋ ಬೇರೆ ಡಾಕ್ಟರರನ್ನು ಕರೆಯಿಸಬೇಕು. ಇಲ್ಲವಾದರೆ ಕಾರಿನಲ್ಲಿ ಅವರನ್ನು ಹುಬ್ಬಳ್ಳಿಗೆ ಸಾಗಿಸಬೇಕು' ಎಂಬ ವಿಚಾರವನ್ನು ತುರುಕಿಸಿದ್ದರು.

ಮಡಗಾಂವಕರರು ಶಿವಪ್ಪನವರನ್ನು ಬಳಿಗೆ ಕರೆದು "ನಾನು ಈ ಮಧ್ಯಾಹ್ನವೇ ಧಾರವಾಡಕ್ಕೆ ಹೋಗಬೇಕಾಗಿದೆ. ಅರ್ಜೆಂಟ್ ಕೆಲಸವಿದೆ" ಎಂದರು. ಚಕಿತರಾದ ಶಿವಪ್ಪನವರು "ಹಿಂದೆ?" ಎಂದು ಪ್ರಶ್ನಿಸಿದರು.

"ಒಂದು ವಾರ ಹಿಡಿದೀತು.ಇಲ್ಲಿ ನೀವಿದ್ದೀರಲ್ಲ.ನೀವು ಮೊನ್ನೆ ಏನೋ ಸೂಚಿಸಿದ್ದಿರಲ್ಲ. ಆ ಔಷಧವನ್ನು ಬೇಕಾದರೆ ಪ್ರಯೋಗಿಸಿ ನೋಡಿ; ಆದರೂ ಇದು ಬಹು ದಿನ ಕಳೆಯುವ ಬಾಬತ್ತಲ್ಲ" ಎಂದರು.

ಈ ಸಂದಿಗ್ಧದ ಸಮಯದಲ್ಲಿ ಡಾಕ್ಟರ್ ಮಡಗಾಂವಕರರು ನುಣುಚಿಕೊಂಡು ಮರುದಿನ ಧಾರವಾಡಕ್ಕೆ ಹೋಗಿಯೇ ಬಿಟ್ಟರು. ಅವರ ಕೆಲಸದ ಹೊಣೆಯೆಲ್ಲವು ಶಿವಪ್ಪನವರ ತಲೆಯ ಮೇಲೆ ಕುಳಿತುಕೊಂಡಿತು. ಆದರೆ ಅವರು ಒಂದು ಉಪಕಾರವನ್ನೇನೋ ಮಾಡಿದರು. ತಾವು ಹೋಗುವಾಗ ಇಂದುಮತಿಯನ್ನು ಜತೆಗೆ ಕರೆದೊಯ್ದು ಧಾರವಾಡಕ್ಕೆ ಮುಟ್ಟಿಸುವ ಹೊಣೆಯನ್ನು ಹೊತ್ತರು. ಸ್ವಂತ ಮೋಟರ್‌ಕಾರಿದ್ದುದರಿಂದ ಈ ಏರ್ಪಾಟು ಶಿವಪ್ಪನವರಿಗೂ ಅನುಕೂಲವಾಯಿತು.

ಆದಮ್ ಸಾಹೇಬರಿಗೆ ಊರಿನ ವೈದ್ಯರಲ್ಲಿ ವಿಶ್ವಾಸ ಸಾಲದಾಯಿತು. ಹುಬ್ಬಳ್ಳಿಯ ಡಾಕ್ಟರರನ್ನು ಕರೆಯಿಸುವುದಕ್ಕೆ ಜನ ಕಳುಹಿಸಿದರು. ಮರು

ದಿನ ಮೋಟರಿನಲ್ಲಿ ಡಾಕ್ಟರ್ ಥಾಮ್ಸ್ ಎಂಬವರು ಬಂದರು. ಥಾಮಸ್ ಬರುವಾಗ ಶಿವಪ್ಪನವರು ತಮಗೆ ತೋರಿದಂತೆ, ಚಿಕಿತ್ಸೆ ಬದಲಿಸಿದ್ದರು. "ಏನೇನು ಮಾಡಿದ್ದೀರಿ?" ಎಂದು ಕೇಳುತ್ತಲೇ, ಶಿವಪ್ಪನವರು ಹಿಂದೆ ಕೊಟ್ಟ ಮದ್ದುಗಳನ್ನೂ, ಈಗ ಮಾಡುತ್ತಿರುವ ಚಿಕಿತ್ಸೆಯ ವಿಚಾರಗಳನ್ನೂ ಹೇಳಿದರು. "ಅದನ್ನು ಮೊದಲಿನಿಂದಲೇ ಮಾಡಿದರೆ ಚೆನ್ನಾಗಿರುತಿತ್ತು" ಎಂದು ಥಾಮಸ್‌ರವರು ಹೇಳಬೇಕಾಯಿತು. ಅಂತು ದೊಡ್ಡ ವೈದ್ಯರಿಗೆ ಸಂಭಾವನೆ ಕೊಟ್ಟು ಕಳುಹಿಸಿದ್ದಾಯಿತು. ಅವರ ಜತೆಗೆ ಮದ್ದು ತರುವುದಕ್ಕೆ ಆಳನ್ನು ಕಳುಹಿಸಿದ್ದೂ ಆಯಿತು. ಥಾಮಸರು 'ಹೀಗೆಯೇ ಚಿಕಿತ್ಸೆ ಮುಂದುವರಿಸಿ, ಅದರಿಂದ ನಾಲ್ಕು ದಿನ ಎಳೆಯಬಹುದೇ ಹೊರತು, ಉಳಿಯುವ ಸಂದರ್ಭ ಕಾಣೆ. ಉಳಿದರೂ ಯಾವಜ್ಜೀವ ಶಯ್ಯೆಯೇ ಗತಿ" ಎಂದು ಇಂಗ್ಲಿಷ್‌ನಲ್ಲಿ ಶಿವಪ್ಪನವರಿಗೆ ತಿಳಿಸಿದರು. ರೂಢಿಯಿಂದಲೇ ಇಂಗ್ಲಿಷನ್ನು ಕಲಿತ ಆದಮ್ ಸಾಹೇಬರ ಕಿವಿಗೂ ಆ ಮಾತು ಕೇಳಿಸಿತು.

ಅಂತೂ ಸಾಹೇಬರ ಮನೆಯಲ್ಲಿ ದುಃಖ, ಕಳವಳಗಳು ಹೆಚ್ಚಿದುವು. ಮೂರನೆಯ ಮಗ ಆದಮನು, ಸೋದರ ಮಾವ ವೀರ ಸಾಹೇಬರು ವೇಳೆಯನ್ನು ಗುಟ್ಟು ಮಾತನಾಡುವುದರಲ್ಲಿಯೇ ಕಳೆಯುತ್ತಿದ್ದಾರೆ. ಮನೆಯಲ್ಲಿ ಮಾತನಾಡಲಾರದ ಅಂಶಗಳಿದ್ದರೆ, ಊರ ಹೊರಕ್ಕೆ ತಿರುಗಾಡಲು ಹೋಗಿ ಚರ್ಚೆಮಾಡಿ ಬರುತ್ತಾರೆ. ಅಂದರೆ ಅವರಿಬ್ಬರ ಪಂಗಡ ಬೇರೆಯಾಗಿದೆ. ಆ ಮೂವರು ಮಕ್ಕಳಲ್ಲಿ ಕಾಸೀಮ್ ಮತ್ತು ಕರೀಮರು ಒಂದು ತಾಯಿಯಲ್ಲಿ ಹುಟ್ಟಿದವರು. ಆದಮ್ ಬೇರೆಯವಳ ಮಗ. ಅವನೊಬ್ಬನೇ ವೀರ ಸಾಹೇಬರ ಖಾಸಾ ಅಳಿಯ. ಅವರಿಬ್ಬರ ಗಮನವೂ ಸಾಹೇಬರ ಸಂಪತ್ತಿನ ವಿಚಾರದಲ್ಲಿ ಹರಿಯುತ್ತಿದೆ. ಮನೆತನದ ನಗದು, ಚಿನ್ನ ಮೊದಲಾದುವುಗಳು ಎಲ್ಲಿ ಹುದುಗಿವೆ ಎಂದು ಹುಡುಕುವುದರಲ್ಲಿ ಅವರ ಮನಸ್ಸು ನಿರತವಾಗಿತ್ತು. ಮೂವರು ಅಣ್ಣ ತಮ್ಮಂದಿರಲ್ಲಿ ಸ್ಪಷ್ಟವಾಗಿ ಎರಡು ಬಣಗಳಾಗಿದ್ದಾವೆ. ಹಿರಿಯರಿಬ್ಬರದು ಒಂದು ಬಣ; ಕಿರಿಯನದು ಬೇರೆಯೇ ಬಣ. "ತಂದೆಗೆ ಸ್ವಲ್ಪವಾದರೂ ಮಾತನಾಡುವುದಕ್ಕೆ ಶಕ್ತಿ ಬಂದು, ಮನೆಯ ಹಣಕಾಸಿನ ವಿಚಾರ ತಮಗೆ ಹೇಳಿದರಾದೀತು ಎಂಬ ನಿರೀಕ್ಷೆ ಮಕ್ಕಳಿಗೆ. ಹಾಸಿಗೆ ಹಿಡಿದ ಮುಗುದುಮ್ ಸಾಹೇಬರ ಮಗ್ಗುಲಲ್ಲೇ ಅವರ ಕಣ್ಣಿಗೆ ಕಾಣಿಸುವಂತೆಯೇ ದೊಡ್ಡ ಬೀಗದ ಜಲ್ಲಿಯೊಂದು ಬಿದ್ದುಕೊಂಡಿರುತ್ತದೆ. ಅದರಿಂದ

ದಿನ ದಿನ ಒಂದೊಂದು ಕೀಲಿಯ ಕೈ ಕಾಣೆಯಾಗುತ್ತಿತ್ತು; ಬದಲಿಗೆ ಬೇರೊಂದು ಬಂದು ಸೇರುತಿತ್ತು. ಯಾರಿಗೆ ಏನೇನು ಹೊಳೆಯುತ್ತಿತ್ತೋ, ಬೀಗದ ಕೈಗಳು ಯಾರ ಲಾಭಕ್ಕೆ ಹೋಗುತಿದ್ದುವೋ ಒಂದೂ ತಿಳಿಯದ ಮಾತು. ಪ್ರತಿ ಕ್ಷಣವೂ ಸಾಹೇಬರ ಹಾಸಿಗೆಯ ಕಾವಲು ಅವಿರತವಾಗಿ ನಡೆದಿದ್ದರೂ, ಅವರಿಗೆ ಕಣ್ಣಿವೆ ಬಾಡಿದ ಕಾವಲಿನ ಗಳಿಗೆಯಲ್ಲಿ, ಬೀಗದ ಕೈಗಳು ಮಾತ್ರ ಚೇತನಗೊಳ್ಳುತಿದ್ದುವು.

ಇಂತಹ ಒಬ್ಬ ರೋಗಿಯ ಚಿಂತೆಯನ್ನು ಶಿವಪ್ಪನವರು ತಮ್ಮ ಚಿಂತೆಯಾಗಿ ಹೊತ್ತುಕೊಂಡು ಉಸಿರುಗರೆಯುತ್ತಿದ್ದ ವೇಳೆಯಲ್ಲೇ, ಮತ್ತೊಂದು ಚಿಂತೆಯು ಮನೆಯಲ್ಲಿ ಇದಿರುಕಾದಿತ್ತು. ಮೂರನೆಯದೊಂದು ದವಾಖಾನೆಗೆ ಬಂದಿತ್ತು. ಅವರ ತಾಯಿಯ ಸ್ಥಿತಿ ತೀರ ವಿಷಮಕ್ಕೆ ತಿರುಗಿತು. ಅರ್ಬುದದ ಆಟದ ಮುಂದೆ ಅವರ ಮಾಟ ನಡೆಯದೆ ಹೋಯಿತು. ಹಾಸಿಗೆಗೆ ಅಂಟಿಕೊಂಡು ಮಲಗಿದ ತಾಯಿಯ ಪಕ್ಕಗಳು ಹಾಸಿಗೆ ಹುಣ್ಣಿನಿಂದ ತುಂಬಿದುವು. ತಾವೇ ಅವಳ ಮಗ್ಗಲನ್ನು ಮಗುಚಿ,ಹುಣ್ಣಿಗೆ ಲೇಪ ಹಚ್ಚುತಿದ್ದರು; ಕುರದ ಕೀವನ್ನೆಲ್ಲ ಮೃದುವಾಗಿ ಹತ್ತಿ ಮುಳುಗಿಸಿ ತೆಗೆದು, ತಿರುಗಿ ಮದ್ದು ಹಚ್ಚಿ, ಹತ್ತಿ ತುಂಬಿಸಿ, ಸೇವೆ ನಡೆಸುತಿದ್ದರು. ನಾತದಿಂದ ಮೂಗು ಮುರಿಯುತ್ತಿದ್ದರೂ ತಾಯಿಯ ಕೊನೆಗಾಲದ ಸೇವೆಯ ಭಾಗ್ಯವನ್ನು ಇಷ್ಟಿಷ್ಟೂ ತಪ್ಪದೆ ಮಾಡಿದರು. ತಾವು ಅವಳ ಮೈಯನ್ನು ಸವರಿ ಮಾಡುತ್ತಿದ್ದ ಸೇವೆಯ ಪ್ರತಿ ಕ್ಷಣದಲ್ಲೂ, ತಮ್ಮನ್ನು ಎಳೆತನದಲ್ಲಿ ಮುದ್ದಿಸಿ, ಮೈದಡವಿ, ಎತ್ತಿಕೊಂಡ ಅವಳ ಉದಾರ ಪ್ರೇಮದ ನೆನವರಿಕೆಯಾಗುತಿತ್ತು. ಒಂದು ದಿನ ಅಂತಹ ಸೇವೆಗೂ ಕೊನೆ ಬಂದಿತು. ಆಕೆ ತೀರಿಕೊಂಡಳು. "ಅಂತಹ ನೋವು, ನರಳುವಿಕೆಗಳನ್ನು ಸಹಿಸುವುದಕ್ಕಿಂತ ಅವಳ ಪಾಲಿಗೆ ಸಾವು ಎಷ್ಟೋ ಸುಖ" ಎಂದು ಮನೆಯವರು ತಿಳಿಯುವಂತಾಯಿತು.

ಪತ್ನಿಯ ಮರಣದಿಂದ ದೀರ್ಘದಾಂಪತ್ಯದ ಶಾಂತಿಯನ್ನು ಕಳೆದುಕೊಂಡ ಕಿಟ್ಟಪ್ಪನವರು, ಗಳಿಗೆ ಗಳಿಗೆಯ ತನಕ ಕುಳಿತಿದ್ದರೆ, ತಲೆ ಎತ್ತುತ್ತಿರಲಿಲ್ಲ. ಮನೆಯಲ್ಲಿ ಹುಟ್ಟಿ ಬೆಳೆದ ನಾಲ್ವರು ಹೆಣ್ಣುಮಕ್ಕಳು ತಾಯಿಯ ಋಣವನ್ನೆಲ್ಲ ಕಣ್ಣೀರಿನ ತರ್ಪಣದಿಂದಲೇ ತೀರಿಸತೊಡಗಿದರು. ಶಿವಪ್ಪನವರು ಗಂಡು ಮಗ, ಉತ್ತರಾಧಿಕಾರಿ. ತಾಯ ಶವಸಂಸ್ಕಾರವನ್ನು ಮಾಡಿ ಮುಗಿಸಿದ ಬಳಿಕ, ಇನ್ನಷ್ಟು ಘೋರತರವಾಗಿ ಕಾಣಿಸುವ ಉತ್ತರಕ್ರಿಯಾ

ವಿಧಿಗಳನ್ನು ಒಂದೊಂದಾಗಿ ನಡೆಸಬೇಕು. ಎಡೆಯಲ್ಲಿ ನಿತ್ಯೋದ್ಯೋಗವನ್ನು ಬಿಡುವಂತಿಲ್ಲ. ಒಬ್ಬರಲ್ಲ ಒಬ್ಬರು ಕರೆಯುತ್ತಾರೆ. ಸಾವಿರಲಿ, ಸೂತಕವಿರಲಿ ಹೋಗುವಲ್ಲಿಗೆ ಹೋಗಬೇಕು; ಸಾಹೇಬರ ಮನೆಗೆ ದಿನಕ್ಕೆರಡು ಬಾರಿಯಾದರೂ ಪಯಣವೆಸಗಬೇಕು.

ಉತ್ತರಕ್ರಿಯೆಯಿಂದ ಮೇಲೆ ಸಮಾಜದ ಕಟ್ಟುಕಟ್ಟಲೆಯಂತೆ ನಡೆಸಬೇಕಾದ ಕೆಲಸವಷ್ಟೆ. ಒಮ್ಮೆಗೇ ಐನೂರು ರೂಪಾಯಿಗಳನ್ನು ವ್ಯಯಿಸುವ ಕೆಲಸ. ಅಂಥ ಐನೂರು ಶಿವಪ್ಪನವರ ಖಜಾನೆಯಲ್ಲಿದ್ದ ಕಾಲವೇ ಇಲ್ಲ. ಹಣಕ್ಕಾಗಿ ಸಾಹೇಬರ ಮನೆಯವರನ್ನು ಕೇಳುವುದೆ? ಅವರಾಗಿ ಇನ್ನೂ ಏನನ್ನೂ ಕೊಟ್ಟಿಲ್ಲ. 'ಊರವರು, ಕೊಟ್ಟರಾಯಿತು, ಅವರಿಗೇನು ಅವಸರ?' ಎಂದು ತರ್ಕಿಸಿ ಕುಳಿತಿರಬಹುದು.'ಸಾಯುತ್ತಾರೊ ಬದುಕುತ್ತಾರೊ ಎಂದುನೋಡಿ ಕೊಡುವ' ಎಂದೂ ಕಾದು ಕುಳಿತಿರಬಹುದು. ತಾವು ಕಷ್ಟದಿಂದ ಕೂಡಿಟ್ಟ ನಾನ್ನೂರು, ಐನೂರು ರೂಪಾಯಿಗಳನ್ನು, ಮಾಧವನ ಒತ್ತಾಯಕ್ಕೆ ಸಾಲವಾಗಿ ಕೊಟ್ಟಿದ್ದರು. ಔಷಧದ ಅಂಗಡಿಯನ್ನು ತೆರೆಯುವ ಅವಸರದಲ್ಲಿ, ಮಾಧವ ಮುಂಬಯಿಗೆ ಹೋಗುವಾಗ ಈ ಹಣವನ್ನು ಒದಗಿಸಿಕೊಡಬೇಕಾಯಿತು. "ಬೇಡ, ಈಗಲೇ ಮುಂಬಯಿಗೆ ಹೋಗುವುದು. ಹುಬ್ಬಳ್ಳಿಯಿಂದ ಅಲ್ಲಿ ಸಿಗುವುದನ್ನು ತಂದರೆ ಸಾಕು. ಸಿಗದಿದ್ದುವನ್ನು ಟಪ್ಪಾಲಿನಲ್ಲಿ ತರಿಸಿಕೊಂಡರಾಯಿತು" ಎಂದು ಅವರ ಬೋಧಿಸಿದರೂ, ಮಾಧವ ಮುಂಬಯಿಗೆ ಹೋಗಿಬರುವುದೇ ಉಚಿತವೆಂದು ತನ್ನ, ಮತ್ತು ಅವರ ಹಣವನ್ನು ಹಿಡಿದುಕೊಂಡು ಹೊರಟುಹೋಗಿದ್ದ.

ಆತನೋ, ವ್ಯಾಪಾರದ ಹವಾ ಗುಣ ಬಲ್ಲವ. ಪತ್ರಿಕೆಯಲ್ಲಿ ಓದಿ, ಯುದ್ಧ ವಿಸ್ತರಿಸುವುದು ಅನಿವಾರ್ಯವೆಂದು ತಿಳಿದುಕೊಂಡಿದ್ದ. "ಡಾಕ್ಟರರೇ, ಯುದ್ಧ ಹರಡುವುದು ನಿಜವಾದರೆ ಈ ವೇಳೆಯಲ್ಲಿ ಔಷಧಗಳೆಲ್ಲ ಅಡಗಿ ಹೋಗುತ್ತವೆ. ಮುಂಬಯಿಗೆ ಹೋಗಿ, ಎಷ್ಟಾದರೂ ಬೆಲೆಕೊಟ್ಟು, ಸಿಗುವುದನ್ನೆಲ್ಲ ಸಂಗ್ರಹಿಸಿಕೊಂಡರೆ ಲಾಭ" ಎಂದು ಸೂಚನೆಮಾಡಿದ್ದ. ಆ ಹುಚ್ಚಿನಿಂದ ತನ್ನ ಪಾಲಿನ ಹಕ್ಕನ್ನು ಅಡವುಮಾಡಿ, ಐದುಸಾವಿರ ರೂಪಾಯಿಗಳನ್ನು ಜತೆಗೂಡಿಸಿ, ಡಾಕ್ಟರರನ್ನು ಕಾಡಿ, ಬೇಡಿ, ಅವರ ಐನೂರನ್ನು ಕಿತ್ತುಕೊಂಡು ಹೊರಟ. ಹೋಗಿ ಹದಿನೈದು ದಿನಗಳಾದರೂ ಊರಿಗೆ ಕಾಗದ ಬರೆಯಲಿಲ್ಲ. ಅವನ ಹೆಂಡತಿ ಸುಂದರಿ, ದವಾಖಾನೆಗೆ ಬಂದು "ನಿಮಗೇನಾದರೂ ಕಾಗದ

ವಿದೆಯೆ? ಮನೆಗೆ ಏನೂ ಸಮಾಚಾರವಿಲ್ಲ" ಎಂದು ಕೇಳುತ್ತಿದ್ದಾಳೆ. ಅವಳಿಗೆ-"ಬೇಗ ಬಂದಾನು, ಅದಕ್ಕೇ ಕಾಗದ ಬರೆದಿಲ್ಲ" ಎಂದು ಇವರೇ ಸಮಾಧಾನ ಹೇಳಬೇಕಾಯಿತು.

ಕಿಟ್ಟಪ್ಪ ಮಾಸ್ತರರು ಮಗನೊಡನೆ "ಮಗೂ, ಕಡಿಮೆ ಕಡಿಮೆ ಐನೂರು ರೂಪಾಯಿಗಳಾದರೂ ಬೇಕಲ್ಲ, ಸತ್ತವಳ ಋಣ ಸಲ್ಲಿಸುವುದಕ್ಕೆ" ಎಂದಾಗ ಅವರು ತಮ್ಮ ಮುಖವನ್ನು ತಗ್ಗಿಸಬೇಕಾಯಿತು. "ಅಷ್ಟಿತ್ತು. ನಾನು ಹಿಂದುಮುಂದಿನ ಯೋಚನೆಯನ್ನು ಮಾಡದೆ, ಮದ್ದುವಿನೊಡನೆ ಔಷಧಕ್ಕೆ ಕೊಟ್ಟು ಕಳುಹಿಸಿದೆ" ಎಂದರು.

"ಅವನೊಡನೆಯೇ?" ಎಂದು ತಂದೆ ಉದ್ಗರಿಸಿದರು. ಅಂತು ತತ್ಕಾಲಕ್ಕೆ ಬೇಕಾಗುವ ಐನೂರು ರೂಪಾಯಿಗಳ ಸಾಲವನ್ನು ತಂದೆಯೇ ವಾಸಪ್ಪ ಸಾಹುಕಾರರಿಂದ ತರಬೇಕಾಯಿತು. ಅಂಥ ಪ್ರಸಂಗವು ಶಿವಪ್ಪನವರ ಮನಸ್ಸಿಗೆ ತುಂಬ ನೋವನ್ನುಂಟುಮಾಡಿತು. 'ಮುಂದೆ ಇಂತಹ ಹೆಡ್ಡುತನವನ್ನು ತಾನೆಂದಿಗೂ ಮಾಡಬಾರದು. ಸಂಪೂರ್ಣವಾಗಿ ತನ್ನ ಕೈ ಬರಿದು ಮಾಡಿಕೊಂಡು ಕುಳಿತುಕೊಳ್ಳಬಾರದು. ನಾನು ಅದನ್ನು ಉಳಿಸಿ, ಇಂದು ಮತಿಯ ಕೈಗಾದರೂ ಕೊಟ್ಟಿದ್ದರೆ ಜೋಪಾನವಾಗಿರುತಿತ್ತು' ಎಂದು ಚಿಂತಿಸುವಂತಾಯಿತು.

ಸಾಲವೋ, ಸೋಲವೋ—ಉತ್ತರಕ್ರಿಯೆಗಳು ಹಿಂದುಳಿಯುವುದಿಲ್ಲ. ಆದರೆ ಮನೆಗೆ ಬಂದ ಅಕ್ಕತಂಗಿಯರು-ತಾಯಿಯ ಬೊಜ್ಜ, ವೈಕುಂಠ ಸಮಾರಾಧನೆಗಳಿಗಾಗಿ ಮಾಡಿದ ವೆಚ್ಚವು ಏನೇನೂ ಸಾಲದೆಂದು ತಿಳಿದರು. ಇಂತಹ ವೇಳೆಯಲ್ಲಿ, ವೆಚ್ಚಕ್ಕೆ ಸೋದರನ ಕೈಯಲ್ಲಿ ಕಾಸಿಲ್ಲವೆಂದು ಕೇಳಿ ಅವರು ವಿಸ್ಮಯಪಡುವಂತೆಯೂ ಆಯಿತು. "ಏನಣ್ಣ ಅವಸ್ಥೆ? ನೀನು ಊರಿಗೆ ಬಂದು, ಡಾಕ್ಟರನಾಗಿ ವರ್ಷ ನಾಲ್ಕೇ ಸಲುತ್ತ ಬಂದಿದೆ. ಪ್ರತಿಯೊಬ್ಬರೂ ಹೇಳುತ್ತಾರೆ 'ಅವನಿಗೇನು ಧಾಡಿ? ಒಳ್ಳೆಯ ಸಂಪಾದನೆಯುಂಟು' ಎಂದು. ಏನು ಮಾಡುತ್ತೀಯ ದುಡ್ಡನ್ನು? ಹೆಂಡತಿಗೆ ನೀನಾಗಿ ಒಂದು ತೊಲೆ ಬಂಗಾರ ಮಾಡಿಸಿಲ್ಲ. ಇರುವ ಮನೆಗೆ ನಾಲ್ಕು ಕೋಣೆಗಳನ್ನೂ ಸೇರಿಸಿಲ್ಲ. ಪ್ರಾಯಶಃ ನಿನ್ನ ಮನಸ್ಸಿನಲ್ಲಿ--ಈ ಅಕ್ಕತಂಗಿಯರ ಕಾಟ ಬೇಡ; ಮನೆ ಚಿಕ್ಕದಾಗಿದ್ದರೆ ನಾವೆಲ್ಲ ಮಕ್ಕಳು ಮರಿಗಳನ್ನು ಕರೆದು ತರುವುದಕ್ಕೆ ಅಂಜುತ್ತೇವೆ. ಒಮ್ಮೆ ಬಂದರೂ, ನಾಲ್ಕು ದಿನಗಳಲ್ಲಿ ಓಡಿಹೋಗುತ್ತೇವೆ-ಎಂದಿ

ದೆಯೋ ಏನೋ" ಎಂದು ನಕ್ಕು ಹೇಳಿದರು.

ನಕ್ಕು ನುಡಿದಂತಹ ಮಾತುಗಳು ಶಿವಪ್ಪನವರನ್ನು ಚುಚ್ಚದಿರಲಿಲ್ಲ. ಅವರಲ್ಲಿ ಸತ್ಯವಿಲ್ಲ ಎಂದಲ್ಲ. ಕಾಣುವವರ ಕಣ್ಣಿಗೆ ಹಾಗೆ ಕಂಡರೂ ತಪ್ಪಿಲ್ಲ. ಆದರಿಂದಲೇ 'ಏನೋ ಅಕ್ಕ, ಡಾಕ್ಟರನಾಗಿಬಿಟ್ಟೆನೆಂದರೆ ಕೈಮೇಲೆ ಕೊಪ್ಪರಿಗೆಯ ಚಿನ್ನವೇ ಬರುತ್ತದೆ-ಎಂದು ನೀನು ತಿಳಿದಿರಬೇಕು. ಎಲ್ಲದರಲ್ಲೂ ಆರಂಭದಲ್ಲಿ ಕಷ್ಟವಿದೆ. ಆಗಬೇಕಾದದ್ದೆಲ್ಲ ನಿಜ; ಒಂದೊಂದಾಗಿ ಮೆಲ್ಲಗೆ ಆಗಬೇಕು. ಕಲಿಯುವ ಕಾಲದಲ್ಲಿ, ಅಂಗಡಿ ಮಾಡುವ ಕಾಲದಲ್ಲಿ, ನಾನು ಕೊಂಡ ಸಾಲವನ್ನು ತೀರಿಸಿದ ಮೇಲಲ್ಲವೆ ಮನೆ, ಮತ್ತೊಂದರ ವಿಚಾರ ಮಾಡಬೇಕು?" ಎಂದು ಉತ್ತರಿಸಿದರು.

ಹೆಂಗಸರು ಇಂತಹ ವಿಚಾರಗಳಲ್ಲಿ ಬಾಯಿಬಾರದ ಮೂಕರೇ? "ಏನು ಮಹಾ ಸಾಲ ನಿನಗಿದೆ? ಮಾವ ಸ್ವಲ್ಪ ಹಣ ಕೊಟ್ಟಿರಬಹುದು. ಅವರೂ ದೊಡ್ಡ ಜವುಳಿ ಸಾಹುಕಾರರಂತೆ. ಅವರು ನಿನಗೇನು ವರದಕ್ಷಿಣೆ ಕೊಟ್ಟಿದ್ದಾರೆಯೇ? ಬದಲು ಕಲಿಯುವುದಕ್ಕಿಷ್ಟು ಹಣ ಕೊಟ್ಟರು."

"ನಾನು ಹಾಗೆ ತಿಳಿದಿಲ್ಲ. ನಾನು ಅವರಿಂದ ನಗದಾಗಿ ಕೊಂಡದ್ದನ್ನೆಲ್ಲ ಋಣವೆಂದೇ ತಿಳಿದಿದ್ದೇನೆ."

"ತಿಳಿ, ಯಾರು ಬೇಡವೆನ್ನುತ್ತಾರೆ? ಆದರೆ ಅದನ್ನು ಅಷ್ಟು ಅವಸರದಲ್ಲಿ ತೀರಿಸಬೇಕಾಗಿದ್ದಿಲ್ಲ. ನಾವೆಲ್ಲರೂ ಮನೆಗೆ ಬಂದಾಗ ನಿನ್ನ ಹೆಂಡತಿಗೆ ಎಷ್ಟು ಸಂಕೋಚವಾಯಿತು–ಗೊತ್ತೇ? 'ಜಾಗ ಸಾಲದಕ್ಕ, ಹೇಗಿರುತ್ತೀರಿ? ನನ್ನ ಕೋಣೆಗಾದರೂ ಸಾಮಾನು ತಂದು ಹಾಕಿ' ಎಂದಂದಳು. ಒಳ್ಳೆಯ ಹೆಂಡತಿ ನಿನ್ನ ಪಾಲಿಗೆ ಸಿಕ್ಕಿದ್ದಾಳೆ ಎಂದೇ ಬದುಕಿದೆ. ಇಲ್ಲದೆ ಹೋಗಿದ್ದರೆ ನಾವು ಎರಡು ದಿನಗಳೂ ಇಲ್ಲಿ ಇರುವ ಹಾಗಿರಲಿಲ್ಲ."

ಶಿವಪ್ಪನವರಿಗೆ ಆ ದಿವಸ ಈ ಮಾತುಗಳಿಂದ ಮನಸ್ಸು ತುಂಬ ನೋವಿಗೊಳಗಾಯಿತು. ಅವರು ಅಕ್ಕತಂಗಿಯರ ಮನೆಗೆ ಹೋಗದವರಲ್ಲ. ಅವರ ನೆಂಟರು ಶ್ರೀಮಂತರಲ್ಲವಾದರೂ,ಮನೆಗಳೂ ಮಣ್ಣಿನವೇ ಆಗಿದ್ದರೂ ದೊಡ್ಡದಾಗಿವೆ. ಜಾಗ ಸಾಕಷ್ಟು ಇದೆ. ಚಾವಡಿ, ಪಡಸಾಲೆ, ಕೋಣೆ, ಅಡುಗೆಯ ಮನೆ, ಕೊಟ್ಟಿಗೆ, ಬಚ್ಚಲು ಎಂದು ವೈಶಾಲ್ಯಕ್ಕೆ ಕೊರತೆಯಿಲ್ಲ. ಅವುಗಳ ಮುಂದೆ, ತಮ್ಮ ಮನೆ ಕೋಳಿಯ ಗೂಡೆಂದು ಅಲ್ಲಿ ಸೇರಿ ಬೆಳೆದ ವರಿಗೆ ಕಾಣಿಸಿದರೆ ಸೋಜಿಗವಿಲ್ಲ. ಹೆಚ್ಚೇನು? ಕಿಟ್ಟಪ್ಪ ಮಾಸ್ತರಿಗೇನೆ,

ಮಗನು ಬಂದಮೇಲೆ ದೊಡ್ಡದಾದ, ಚಂದವಾದ ಮನೆಯೊಂದನ್ನು ಕಟ್ಟಿಸ ಬೇಕೆಂಬ ಹಂಬಲವೂ ಆಗಿದೆ. ಆ ತ್ರಾಣ ತಮಗಿಲ್ಲ, ಮಗನೇ ಆ ಕೆಲಸ ವನ್ನು ಮಾಡಬೇಕೆಂಬ ಆಸೆಯಿಂದ ಕುಳಿತಿದ್ದರು.

ಸೂತಕ ಕಳೆಯುವುದರೊಳಗೇ ಇಂಥ ಮಾತು ಬಂದದ್ದು. ಅಂತಹ ಒಂದು ದಿನ ಶಿವಪ್ಪನವರು ವಾಡಿಕೆಯಂತೆ ಅಂಗಿ ಧರಿಸಿ, ಕಿಸೆಗೆ ಸ್ಟೆತಸ್ಕೋಪು ಸಿಕ್ಕಿಸಿಕೊಂಡು, ಔಷಧದ ಚೀಲವನ್ನು ಕಾದು ನಿಂತಿದ್ದ ಕಂಪೌಂಡರನಿಗೆ ಕೊಟ್ಟು, ಸಾಹೇಬರ ಮನೆಗೆ ಹೊರಟಾಗ, ಅವರ ತಂದೆ "ಮಗೂ, ಹತ್ತು ಗಂಟೆಯೊಳಗೆ ಮನೆಗೆ ಬಂದುಬಿಡು. ಪುರೋಹಿತರು ಹತ್ತಕ್ಕೆನೇ ಬರು ತ್ತೇನೆಂದಿದ್ದಾರೆ" ಎಂದು ತಿಳಿಸಿದರು.

"ಹೂಂ" ಎಂದು ಅವರು ಹಿತ್ತಿಲಿಂದ ಓಣಿಗೆ ಕಾಲಿರಿಸುವಾಗ ದೂತ ನೊಬ್ಬ ಸಂಧಿಸಿದ. ಗುಲಾಬಿಯ ಮಗುವಿಗೆ ಉಸಿರು ಕಟ್ಟಿದೆಯೆಂದು ಧಾವಿಸಿ ಬಂದು ತಿಳಿಸಿದ. ಚಿಕ್ಕ ಮಗು-ಎಂಬುದರಿಂದ ತಮ್ಮ ಗುರಿಯನ್ನು ಬದಲಿಸಿದರು. ಅವಳ ಮನೆಗೆ ಹೋದರು. ಬಹು ದಿನಗಳಿಂದ ಅವರು ಅಲ್ಲಿಗೆ ಹೋಗಿರಲಿಲ್ಲ. ಅವಳ ಮನಸ್ಸಿಗೆ ನೆಮ್ಮದಿ ಬಂದು, ಆರೋಗ್ಯ ಉತ್ತಮ ಗೊಂಡಿರಬೇಕೆಂದು ತಿಳಿದು ಈ ತನಕ ಸುಮ್ಮನೆ ಕುಳಿತಿದ್ದರು.

ಈಗ ಮನೆಗೆ ಹೋದರೆ, ಚಾವಡಿಯಲ್ಲಿ ಆಕೆ ನಿಂತು, ವಂದಿಸಿದಳು. "ಮಗುವೆಲ್ಲಿ?" ಎಂದು ಅವಳನ್ನು ಕೇಳಿದರು ಇವರು.

"ಕೋಣೆಯಲ್ಲಿದೆ" ಎಂದು ಅವರನ್ನು ಮನೆಯ ಒಳಕ್ಕೆ ಕರೆದೊಯ್ದಳು. ಕರೆದೊಯ್ದ ಕೋಣೆ ಬೇರೆ; ಮಗು ಮಲಗುವ ಕೋಣೆ ಬೇರೆಯಾಗಿತ್ತು– ಇದು ಒಳಕ್ಕೆ ಹೋಗಿ, ಅಡ್ಡ ತಿರುಗಿ ಹೋಗಬೇಕಾದ ಮತ್ತೊಂದು ಕೋಣೆ. ಅಲ್ಲಿಗೆ ಕರೆದೊಯ್ದು, ಆ ಕತ್ತಲು ಮನೆಯಲ್ಲಿ ಬಾಗಿಲು ಕಳಚಿದ ಒಂದು ಕವಾಟವನ್ನು ತೋರಿಸಿದಳು. ಅವಳ ಮುಖವು ಗಾಬರಿ, ಕಾತರಗಳಿಂದ ತುಂಬಿತ್ತು. ಡಾಕ್ಟರರಿಗೆ— ಮಗುವನ್ನು ತೋರಿಸುವ ಬದಲು ಇದನ್ನೇಕೆ ತೋರಿಸುತ್ತಾಳೆ-ಎಂಬುದು ಹೊಳೆಯಲಿಲ್ಲ. ಕೇಳಿದರು-

"ಏನು ಸಂಗತಿ? ಮಗುವೆಲ್ಲಿ? ಅದಕ್ಕೆ ಹುಷಾರಿಲ್ಲವೆಂದೆ."

"ಹೌದು. ನೀವು ಬರಲೇ ಬೇಕೆಂದು ಅನಿಸಿ ಹಾಗೆ ಹೇಳಿದೆ. ನಾನಿ ನ್ನ್ಯಾರಿಗೆ ನನ್ನಗೋಳನ್ನು ಹೇಳಲಿ"

ಎದುರಿಗೆ ಮುರಿದುಬಿದ್ದ ಕವಾಟದ ಬಾಗಿಲನ್ನೂ ಅಸ್ತವ್ಯಸ್ತವಾದ

ಸಾಮಾನುಗಳನ್ನೂ ಕಂಡು "ಇವೆಲ್ಲ ಏನು?" ಅಂದರು.

"ಕಾಣುವುದಿಲ್ಲವೆ? ಕವಾಟ, ಸಂದುಕ ಪ್ರತಿಯೊಂದೂ ಮುರಿದು ಬಿದ್ದಿರುವುದು."

"ಕಳ್ಳರು ಬಂದಿದ್ದರೇ ರಾತ್ರಿ?"

"ಕಳ್ಳರಲ್ಲ . . . ಅವರ ಭಾವ, ಮಗಂದಿರು. . . . . . ಕೊಲಂಬೊದಲ್ಲಿರುವವರಂತೆ. ಬಂದಿದ್ದರು. ತಾವು ಇಂಥವರು ಎಂದರು. "ಯಜಮಾನರಿಗೆ ಹೇಗಿದೆ?" ಎಂದು ಕೇಳಿದೆ. 'ಚೆನ್ನಾಗಿದ್ದಾರೆ' ಅಂದರು. ಆ ಮೇಲೆ 'ಅವರು ಏನೇನೆಲ್ಲ ಕೊಟ್ಟಿದ್ದಾರೆ ನೋಡುವ' ಎಂದು ಕೇಳಿದರು. ಇದೆಲ್ಲ ನಿನ್ನೆ ಮಧ್ಯ ರಾತ್ರಿ ನಡೆದ ಸಂಗತಿ. ಅವರ ಮಗನ ಕೈಯಲ್ಲಿ ಪಿಸ್ತೂಲಿತ್ತು. ನಾನು ಏನೂ ಇಲ್ಲ ಎಂದು ಹೆದರಿ, ಅತ್ತು, ಬೇಡಿದೆ. ಆ ಮೇಲೆ ನೆನಪಾಗಿ, ಸುಳ್ಳು ಹೇಳಬಾರದೆಂದು ಅವರು ಕೊಟ್ಟ ಚಿನ್ನ, ಆಭರಣ ತೋರಿಸಿದೆ. 'ಹೂಂ-ಅದಾಯಿತಲ್ಲ. ಮತ್ತೇನಿದೆ?' ಎಂದು ಗದರಿಸಿ ಕೇಳಿದರು. 'ಒಂದು ಪೆಟ್ಟಿಗೆಯಿದೆ' ಎಂದೆ. ಅದನ್ನು ಕರೆದು ತೋರಿಸುವಾಗ ಈ ಕವಾಟ ಮುರಿದು, ಒಳಗಿದ್ದ ಅದನ್ನು ತೆಗೆದು, ಒಡೆದು, ಅದರೊಳಗಿನ ಕಾಗದ, ಮಣ್ಣು, ಮಸಣಗಳನ್ನೆಲ್ಲ ಕಟ್ಟಿಕೊಂಡು ಹೋದರು."

"ನಿನ್ನ ಚಿನ್ನಾಭರಣ?".

"ಎಲ್ಲವನ್ನೂ ಹೆದರಿ ಅವರ ಮುಂದಕ್ಕಿರಿಸಿದ್ದೆ. ಸಾವಿರ ಎರಡು ಸಾವಿರಗಳಷ್ಟು ಬದುಕಿರಬಹುದು. ಮತ್ತೆ ಅವರು ಕೊಟ್ಟ ಬಿಡಿಕಾಸೆಂಬುದೂ ಇರಲಿಲ್ಲ. ಆ ಪೆಟ್ಟಿಗೆಯಲ್ಲಿ ಏನೋ ಇತ್ತು; ಏನೆಂಬುದು ನನಗೂ ಗೊತ್ತಿಲ್ಲ. ಅವರ ಮನೆಗೇ ಸಂಬಂಧಿಸಿದ್ದಿರಬೇಕು" ಎಂದೆಲ್ಲ ವಿಸ್ತರಿಸುವಾಗ ಆಕೆಯ ಮೈ ಬೆವರುತಿತ್ತು, ತುಟಿ ನಡುಗುತಿತ್ತು, ಕಂಬನಿ ಧಾರೆಯಾಗಿ ಸುರಿಯುತ್ತಿತ್ತು. ಶಿವಪ್ಪನವರಿಗೆ ಈ ಕತೆಯನ್ನು ಕೇಳಿ ಎಲ್ಲಿಲ್ಲದ ಆಶ್ಚರ್ಯವಾಯಿತು. 'ಹೀಗೂ ಮಾಡುವವರುಂಟೇ!' ಎಂದೆನಿಸಿತು. 'ಪೊಲೀಸರಿಗೆ ಹೇಳಿ ಕಳುಹಿಸೋಣವೆ?" ಎಂದರು.

ಆ ಮಾತನ್ನು ಕೇಳಿ ಗುಲಾಬಿಗೆ ಇನ್ನಷ್ಟು ಭೀತಿಯಾಯಿತು. "ಅವರ ಋಣ ಸಲ್ಲುವುದಿದ್ದರೆ ಸಲ್ಲಲಿ. ಅವರ ಸಣ್ಣ ಮಗನ ವಿಚಾರದಲ್ಲಿ, ರಾತ್ರಿ ಬಂದರಲ್ಲ, ಅವರ ವಿಷಯದಲ್ಲಿ, ಏನೇನೊ ಕತೆಗಳಿವೆ. ಅವರು ತುಂಬ ಕಾರುಭಾರಿಗಳಂತೆ. ಹೋದದ್ದು ಹೋಗಲಿ. ಸಾಹೇಬರು ಹುಷಾರಾದರೆ ತೆಗೆದು

ಕೊಟ್ಟಾರು" ಎಂದು ಹೊರಕ್ಕೆ ಬಂದಳು. ಶಿವಪ್ಪನವರು ವಿಚಾರಮಗ್ನರಾಗಿ ಅವಳನ್ನು ಹಿಂಬಾಲಿಸಿದರು. "ನಿಮ್ಮನ್ನು ಕರೆದದ್ದೇಕೆಂದರೆ, ಈ ರಿಕಾರ್ಡಿನ ಪೆಟ್ಟಿಗೆ ಅವರಾಗಿ ಇರಿಸಿದ್ದು, ಹೀಗಾಯಿತೆಂದು ಸಾಹೇಬರ ಕಿವಿಗೆ ಹಾಕುವುದು ಒಳ್ಳೆಯದೆಂದು ಯೋಚಿಸಿ ಕರೆದೆ. ವೆಂಕಟು ನಿತ್ಯವೂ ಮನೆಗೆ ಬರುತ್ತಾನೆ. ಅವನ ಕಿವಿಗೆ ಸುದ್ದಿ ಮುಟ್ಟಿಸಲು ಅಂಜಿಕೆಯಾಯಿತು. ಸುದ್ದಿ ಊರೆಲ್ಲ ಹರಡಿ, ಅದರ ಸಿಟ್ಟನ್ನು ನನ್ನಮೇಲೆ ತೀರಿಸಿದರೆ ನನ್ನ ಗತಿಯೇನು —ಎಂಬ ಅಂಜಿಕೆಯಾಗಿ, ನಿಮಗೆ ಈ ತೊಂದರೆ ಕೊಟ್ಟೆ" ಎಂದು ದೂರು ಕೊಟ್ಟಳು.

"ಏನೋ. ಅಪ್ಪ. ಅವರ ಸ್ವಭಾವ, ಗುಟ್ಟು ತಿಳಿಯದೆ ನಾವು ಒಂದು ಮಾಡಲು ಹೋದರೆ ಇನ್ನೊಂದಾದೀತು. ತಂದೆಯು ಇರಿಸಿದ್ದ ರಿಕಾರ್ಡನ್ನು ಮಗ ಕಿತ್ತುಕೊಂಡು ಹೋದರೆ, ನಾವು ಆಕ್ಷೇಪಿಸುವುದಕ್ಕಾಗುತ್ತದೆಯೆ? ಆದರೆ ನಿನ್ನ ಚಿನ್ನಾಭರಣಗಳನ್ನುಹೆದರಿಸಿ,ಕೊಂಡುಹೋದದ್ದು ಗೌರವವಲ್ಲ. ಯಾವುದಕ್ಕೂ ಯೋಚಿಸಿ ಹೇಳುತ್ತೇನೆ. ಈಗ ನಾನು ಅಲ್ಲಿಗೇ ಹೊರಟಿದ್ದೆ. ಅವರ ಕತೆಯೂ ಸ್ವಾರಸ್ಯವಿಲ್ಲ"

"ನಿಜವೇ? ವೆಂಕಟು ಹಾಗೆನ್ನುತ್ತಿದ್ದಾನೆ. ನನಗೆ ನಡು ನೀರೇ ಗತಿಯೆಂದು ಕಾಣುತ್ತದೆ."

"ದೇವರಿದ್ದಾನೆ. ಸುಮ್ಮನಿರು, ಈಗ ಹೋಗುತ್ತೇನೆ. ಇಷ್ಟೇ ಅಲ್ಲವೆ? ಮಗು ಚೆನ್ನಾಗಿದೆಯಲ್ಲ."

"ಇದೆ" ಎಂದಳು. ಅಲ್ಲಿಂದ ಮಗುವಿನ ಕೋಣೆಗೆ ಧಾವಿಸಿ, ತೊಟ್ಟಿಲಲ್ಲಿ ಮಲಗಿದ್ದ ಅದನ್ನು ಎತ್ತಿಕೊಂಡು ತಂದು ಡಾಕ್ಟರಿಗೆ ತೋರಿಸಿ, ಹುಚ್ಚಿಯಂತೆ ಮುದ್ದಿಸುತ್ತ, ಅವರೆದುರಿಗೆ ಕುಸಿದು ಕುಳಿತಳು. ಅವಳ ಕಣ್ಣುಗಳಿಂದ ನಿರಾಶೆಯ ಕಂಬನಿಗಳು ಬಳಬಳನೆ ಹರಿಯತೊಡಗಿದುವು. ಆ ಕೂಸಿನ ಮೇಲೆ ಅದು ಸುರಿಯುವುದೂ ಕಾಣಿಸಿತು. ಶಿವಪ್ಪನವರಿಗೆ ಅದನ್ನು ನೋಡುವುದಕ್ಕೆ ಆಗಲಿಲ್ಲ. ಅವರು ಅಲ್ಲಿಂದ ಅವಳ ಮುಖವನ್ನು ನೋಡುತ್ತ ಹೊರಗೆ ಕಾಲಿಟ್ಟರು. ಮುಕಾದುಮ್ ಸಾಹೇಬರ ಮನೆಗೆ ಹೊರಟರು. ಹಿತ್ತಿಲಿನಿಂದ ರಸ್ತೆಗೆ ಬಂದು, ಮುಖ್ಯ ಬೀದಿಯನ್ನು ಸೇರುವುದರೊಳಗಾಗಿ, ಜನರು ಸಾಹೇಬರ ಮನೆಯ ಕಡೆಗೆ ಹೋಗುತ್ತಿದ್ದುದು ಕಾಣಿಸಿತು. ಊರಿನ ಹಿರಿಯರಾದ ವಾಸಪ್ಪಯ್ಯನವರೂ, ಶ್ರೀಪತಿ ರಾಯರೂ

ಇನ್ನು ಹಲವರೂ ಮುಗುದುಮ್ ಸಾಹೇಬರ ಅಂತ್ಯ ದರ್ಶನಕ್ಕಾಗಿ ಓಡುತ್ತಿದ್ದರು. ಅಂತಹವರಲ್ಲಿ ಶಿವಪ್ಪನವರೂ ಒಬ್ಬರಾದರು. ಘೋಷಾ ಮನೆ ಯಾದುದರಿಂದ ಹೆಚ್ಚಿನ ಜನ ಹೊರಗೆ ನಿಂತಿದ್ದರು. ಪ್ರತಿಷ್ಠಿತರಷ್ಟೇ ಚಾವಡಿ ಯಲ್ಲಿದ್ದರು. ಹೊರಗಿನ ಜನ ಒಳಕ್ಕೆ ಹೋಗುವಂತಿರಲಿಲ್ಲ. ಶಿವಪ್ಪನವರನ್ನು ಕಂಡು ಕರೀಮ್ ಸಾಹೇಬರು ಇದಿರುಗೊಂಡು, ಒಳಕ್ಕೆ ಕರೆದುಕೊಂಡು ಹೋದರು. ಅವರನ್ನು ಕರೆಯುವುದಕ್ಕೆ ಜನ ಹೋಗಿತ್ತು. ನಿಜಕ್ಕೂ ಆ ಗಳಿಗೆ ಯಲ್ಲಿ ಮುಗುದುಮ್ ಸಾಹೇಬರು ಸತ್ತಿರಲಿಲ್ಲ; ಕಡೆಯುಸಿರು ಎಳೆದುಬರು ವಂತೆ ಕಾಣುತ್ತಿತ್ತು. ಮನೆಯಲ್ಲಿ ರೋದನ ತುಂಬಿಕೊಂಡಿತ್ತು. ಸಾಹೇಬರ ಹೆಂಡತಿ, ಪತಿಯ ಮಗ್ಗುಲಲ್ಲಿ ಕುಳಿತು "ಡಾಕ್ಟರರೇ, ಏನು ಮಾಡುತ್ತೀರಿ? ನನ್ನ ಬದುಕನ್ನು ಉಳಿಸಿಕೊಡಿ" ಎನ್ನುವ ಕೂಗು ಮಾತ್ರ ಎಂತಹವರ ಎದೆ ಯನ್ನೂ ನಡುಗಿಸುವಷ್ಟು ಚಿಂತಾಜನಕವಾಗಿತ್ತು. ಆ ಗದ್ದಲದಲ್ಲೂ ಮನೆಯ ಇನ್ನೊಂದು ಕೊಠಡಿಯಲ್ಲಿ ತುಂಬ ಬಿಸಿಮಾತುಗಳು ಹೊರಡು ತ್ತಿದ್ದುವು.

ಕರೀಮ್ ಸಾಹೇಬರು ತಂದೆಯ ವಿಚಾರದಲ್ಲಿ ತುಂಬಾ ಆತುರರಾಗಿ "ಏನಾದರೂ ಮಾಡುವಂತಿದೆಯೆ? ಹುಬ್ಬಳ್ಳಿಯಿಂದ ಡಾಕ್ಟರ್ ಥಾಮಸರು ಇಂಜಕ್ಷನಿಗೆ ಬೇಕಾದ ಮದ್ದನ್ನು ಕಳುಹಿಸಿದ್ದಾರೆ" ಎಂದು ಕೇಳಿದರು.

"ಯಾಕೆ ಈ ಗಳಿಗೆಯಲ್ಲಿ ಅವರಿಗೆ ಹಿಂಸೆ ಕೊಡಬೇಕು? ನಾಡಿ ನಿಲ್ಲುತ್ತ ಬಂದಿದೆ. ಇನ್ನು ನಾವು ಮಾಡುವುದೇನಿಲ್ಲ." ಎಂದು ಹೇಳುತ್ತಿರು ವಾಗಲೇ, ಅಂಥ ಚಿಂತಾಜನಕ ಆವರಣದಲ್ಲಿಯೂ ಕೊಠಡಿಯಿಂದ ಕೇಳಿ ಸುತ್ತಿದ್ದ ಬಿಸಿ ಮಾತುಗಳು ಅವರನ್ನು ರೇಗಿಸಿದುವು. 'ರೋಗಿಗೆ ಸಾಯುವ ಕಾಲದಲ್ಲೂ ಶಾಂತಿಕೊಡಬಾರದೇ' ಎಂದು ತೋರಿ "ಯಾರದು, ಗದ್ದಲ ಮಾಡುವುದು? ಏನು ಜಗಳವಪ್ಪ ಈ ಸಮಯದಲ್ಲಿ? ಹೊರಗೆ ತುಂಬ ಜನ ನಿಂತಿದ್ದಾರೆ" ಎಂದು ಉದ್ಗರಿಸಬೇಕಾಯಿತು.

"ನಿಮಗೆ ತಿಳಿಯದು. ನಮ್ಮ ತಮ್ಮ, ಬಹು ಕಾರುಭಾರಿ. ಮುದ್ದಾಮ್ ಬಂದಿದ್ದಾನಲ್ಲ. ಇವರ ಹೆಣವು ಹೊರಗೆ ಹೋಗುವುದರೊಳಗೇನೆ ಏನು ಆದೀತು, ಏನಾಗಲಾರದು ಎನ್ನುವ ಧೈರ್ಯ ನನಗಿಲ್ಲ. ಅದಕ್ಕೇನೆ ನಮ್ಮ ಶ್ರೀಪತಿರಾಯರಿಗೂ ವಾಸಪ್ಪಯ್ಯನವರಿಗೂ ಹೇಳಿಕಳುಹಿಸಿದ್ದೇನೆ–ನಾಲ್ಕು ಮಂದಿ ಹಿರಿಯರಿರಲಿ ಎಂದು."

ಅದು ಅಣ್ಣ,ತಮ್ಮಂದಿರಲ್ಲಿನ ಜಗಳವೆಂದೂ, ಹಣಕಾಸಿಗೆ ಸಂಬಂಧಿಸಿದುದೆಂದೂ ಶಿವಪ್ಪನವರಿಗೆ ತಿಳಿಯಿತು. ಅಂಥ ವೇಳೆಯಲ್ಲಿ ಮಡಿದ ಹಿರಿಯರಿಗೆ–ಸಲುವ ಗೌರವ, ಶಾಂತಿಗಳು ದೊರಕುವುದು ದುರ್ಲಭವೆನಿಸಿತು. ತುಸು ಮೊದಲು ಗುಲಾಬಿಯ ಮನೆಗೆ ಹೋದಾಗ ದೊರೆತ ಸಮಾಚಾರವನ್ನೆಲ್ಲ ಇಲ್ಲಿನ ಪರಿಸ್ಥಿತಿಗೆ ಹೊಂದಿಸಿ ನೋಡಿದರು. ಇಂತಹ ಸಮಯದಲ್ಲಿ ತಾವು ದೂರಕ್ಕಿರುವುದು ಒಳಿತೆಂದು ತೋರಿ ಹೊರಕ್ಕೆಬಂದರು. ಹೊರಗೆ ನಿಂತಿದ್ದ ವಾಸಪ್ಪಯ್ಯ ಮೊದಲಾದವರು "ಹೇಗಿದ್ದಾರೆ?, ಹೇಗಿದ್ದಾರೆ?" ಎಂದು ಕಣ್ಣುಸನ್ನೆಮಾಡಿದರು. "ಇದ್ದಾರೆ" ಎಂದು ಮಿದುವಾದ ಮಾತಿನಲ್ಲಿಯೆ ಉತ್ತರ ಸಲ್ಲಿಸಿ ಅಲ್ಲಿಂದ ಹೊರಬಿದ್ದರು.

ಇನ್ನರಿಗಳಿಗೆಯಾದರೂ ದವಾಖಾನೆಯಲ್ಲಿ ಕಾದಿರುವ ರೋಗಿಗಳನ್ನು ನೋಡಿಕೊಂಡು ಬರಬೇಕು. ಗಂಟೆ ಹತ್ತು ಸರಿದುಹೋಗಿದೆ. ತಂದೆ ಅಷ್ಟರೊಳಗೇ ಬರುವಂತೆ ಹೇಳಿದ್ದಾರೆ. ಆದರೆ ನಿತ್ಯ ಕರ್ತವ್ಯವನ್ನು ಬಿಡಲಾರದೆ ದವಾಖಾನೆಗೆ ಹೊರಟುಹೋದರು. ಬಂದು, ಕಾದಿದ್ದ ಹತ್ತೆಂಟು ಹಳ್ಳಿಯ ಜನರನ್ನು ಒಬ್ಬೊಬ್ಬರನ್ನಾಗಿ ಕರೆದುಕೇಳಿದರು; ಪರಿಶೀಲಿಸಿದರು,ಚೀಟಿ ಬರಿಯಲು ಕುಳಿತರು. ಚೀಟಿಯ ಮೇಲಿನ ಹೆಸರು ಒಂದಕ್ಕೊಂದಾಯಿತು; ಮದ್ದಿನ ಪ್ರಮಾಣ ಒಂದಕ್ಕೊಂದಾಯಿತು; ಔಷಧದ ಹೆಸರೂ ಒಂದಕ್ಕೊಂದಾಗುವಂತೆ ಕಂಡಿತು. ಬೆಳಗಿನಿಂದಲೂ ತಲೆ ಬಿಸಿಗೊಳಿಸುವ, ಮನಸ್ಸು ಕಳವಳಿಸುವ ವಿಚಾರಗಳಿಗೆ ಸಾಕ್ಷಿಯಾಗಿದ್ದ ಅವರು, ಈ ಗಳಿಗೆಯಲ್ಲಿ ಮನಶ್ಶಾಂತಿಯಿಂದ ಮದ್ದು ಕೊಡುವುದಾದರೂ ಹೇಗೆ? ಕೊನೆಗೆ ಚೀಟಿ ಬರೆಯುವ ಕೆಲಸ ಸಾಗದೆ, ತಮ್ಮ ಕಂಪೌಂಡರ್ ಶೀನಪ್ಪನನ್ನು ಕರೆದು "ನೋಡಪ್ಪ, ಇವಳಿಗೆ ಇದನ್ನು ಕೊಡು, ಪಥ್ಯ ಹೇಳು" ಎಂದರು. ಎರಡನೆಯ ಮೂರನೆಯ ರೋಗಿಗಳ ಸಲುವಾಗಿಯೂ "ಏನು, ಏನು?" ಎಂದು ತಿರು ತಿರುಗಿ ಕೇಳಿ, ಮದ್ದು ಕೊಡುವಂತೆ ಹೇಳಿದರು. ಅನುಪಾನ ಹೇಳಿಸಿದರು. ಬರಿಯುವ ಕೈಯೇ ಅವರಿಗಿದ್ದಂತೆ ಕಾಣಿಸಲಿಲ್ಲ. ಕೊನೆಯಲ್ಲಿ ನಿಂತು ಕೊಡಿದ್ದ ನಾಲ್ವರಿಗೆ "ತುಸು ನಿಲ್ಲಿ, ನನಗೆ ಮೈ ಚೆನ್ನಾಗಿಲ್ಲ" ಎಂದು ಹೇಳಿ, ಕಣ್ಣಿನ ಮೇಲೆ ಕೈಯೊತ್ತಿಹಿಡಿದು, ತಲೆಯನ್ನು ಮೇಜಿನಮೇಲೆ ಒರಗಿಸಿಕೊಂಡು ವಿರಮಿಸಿದರು. ಹಣೆ ಮೆಲ್ಲಗೆ ಕ್ಷಣಕಾಲ ಬೆವರಿತು. ಶೀನಪ್ಪನನ್ನು ಕರೆದು 'ಒಂದು ಚಾ ತೆಗೆದುಕೊಂಡು ಬಾ' ಎಂದು ಹೇಳಿದರು. ಅದು ಬರುವ ತನಕ

ತಲೆಯೆತ್ತದೆ, ಬಂದ ಚಹವನ್ನು ಕುಡಿದು ತಲೆಯೆತ್ತಿದರು; ಸುಧಾರಿಸಿಕೊಂಡರು. 'ಏನಪ್ಪ, ಈಗ ಹೇಳು' ಎಂದು ಒಬ್ಬೊಬ್ಬರನ್ನೇ ಕರೆದು ವಿಚಾರಿಸತೊಡಗಿದರು. ಒಬ್ಬೊಬ್ಬರ ಹಾಲಾಹವಾಲೆಯಾಯಿತು. ಬಾಗಿಲ ಬಳಿಯಲ್ಲಿ ನಿಂತೊಬ್ಬ ಮುದುಕನನ್ನು ಕಂಡು "ನಿನ್ನದೇನಪ್ಪಾ, ಬೇಗ ಬೇಗ ಹೇಳು. ನನಗೆ ಅವಸರವಿದೆ" ಎಂದರು.

"ನಾನು ಬಡವ, ಸ್ವಾಮೀ."

"ಅಯ್ಯೋ ಮಹಾರಾಯಾ—ನಿನಗೆ ಏನು ಬೇಕು ಎಂದರೆ-ಬಡವ ಎನ್ನುತ್ತೀಯಲ್ಲ."

"ಹೌದು ದೇವರು. ಮೊಮ್ಮಗಳು ಮನೆಗೆ ಬಂದಿದ್ದಾಳೆ. ಬಂದ ಜ್ವರ ಬಿಡುವುದಿಲ್ಲ; ಜೀವ ಸಂಕಟ ಹೇಳುವುದಲ್ಲ.ನೀವು ಒಂದು ಸಾರಿ ಬಂದು..."

"ನಾನು ಬರಬೇಕೆ?"

"ಬಂದರೆ ಒಂದು ಜೀವ ಉಳಿಯುತ್ತಿತ್ತು."

"ಜ್ವರವೆ? ಜ್ವರ ಬಿಟ್ಟಾಗ ಮೈ ಬೆವರುತ್ತದೆಯೆ? ಈಗ ಮೈ ಹೇಗಿದೆ?"

"ನನಗೆ ಗೊತ್ತಿಲ್ಲ—ಸ್ವಾಮಿ. ಏನಾಯಿತು ಏನಾಗುತ್ತದೆಂದು, ನನಗೆ ಏನು ಹೇಳಲಿಕ್ಕೆ ಗೊತ್ತಾಗುತ್ತದೆ. ನೀವು ಬಂದು ಪರೀಕ್ಷೆ ಮಾಡಿದರೆ ನಿಮಗಾದರೂ ಗೊತ್ತಾದೀತೆಂದು ಓಡಿ ಬಂದೆ. ಹಡೆದ ಬಾಣಂತಿ. ನಂಜು ಮೀರಿದೆ ಎನ್ನುತ್ತಾರೆ."

"ನಾನೇ ಬರಬೇಕೇ? ಎಲ್ಲಿ ಮನೆ?"

"ಮನೆ ದೂರವಿಲ್ಲ. ಕುರ್ವಿ ಕೇರಿಯ ಹತ್ತಿರ."

"ಬಾಣಂತಿಯೆ?"

"ಹೆರುವುದಕ್ಕೆ ಹೆತ್ತಿದ್ದಾಳೆ. ಮಗು ಹೋಯಿತು."

"ಎಷ್ಟು ತಿಂಗಳಾಯಿತು, ಅಲ್ಲ, ದಿನವಾಯಿತು?"

"ದಿನ ಆಯಿತು....ಸುಮಾರು, ಅಂದರೆ...." ಎಂದು ಬೆರಳೆಣಿಸತೊಡಗಿದ.

"ಆಯಿತು. ಹೋಗಿಯೆ ತಿಳಿಯಬೇಕಾದದ್ದು" ಎಂದರು ಉದಾಸೀನರಾಗಿ. ಆದರೆ ಆ ಮುದುಕನ ಕಂಗಾಲ ಮುಖವನ್ನು ನೋಡಿ, 'ಇಲ್ಲ' ಎನ್ನಲಾರರು. ಆ ಗಳಿಗೆಯಲ್ಲಿ ಮನೆಯ-ನೆನಪು ಮರೆತಂತೆ ಕಾಣುತ್ತದೆ. ಆಚೀಚೆ ನೋಡಿ,ಇನ್ನಾರೂ ಉಳಿದಿಲ್ಲವೆಂದು ಕಂಡು "ಶೀನ,ಬ್ಯಾಗ್ ಹಿಡಿದುಕೊಂಡು

ಹೊರಡು." ಎಂದರು. ತುಸುವೊದಲು ದಣಿದು, ತಲೆತಿರುಕನನ್ನು ತೋರಿಸಿದ ಅವರ ಸಹಾಯಕ್ಕೆ ತಾನಿದ್ದರೆ ವಾಸಿ ಎಂದನಿಸಿದರೂ, ಶೀನನಿಗೆ ಉತ್ಸಾಹ ವಿಲ್ಲ. ಅದಕ್ಕೆ ಮುದುಕನ ಪೀಠಿಕೆಯ ಮಾತು ಕಾರಣವಾಗಿತ್ತು. ಆತ ಮಾತಿಗೆ ಮೊದಲೇ ತಾನು ಬಡವ ಎಂದು ರಾಗ ಮಾಡತೊಡಗಿದ್ದ. ಅವನ ಕರೆಯನ್ನು ನಂಬಿ ಹೋದರೆ, ನಮಸ್ಕಾರಕ್ಕಿಂತ ಹೆಚ್ಚಿನ ಕಾಣಿಕೆ ದೊರೆಯ ಲಾರದೆಂದು ಶೀನನ ಅನುಭವ. ಆದರೂ 'ಬಾ' ಎಂದ ಮೇಲೆ ಹೊರಡ ದಿರಲಾರ.

ಆ ಮುದುಕನ 'ಸಮೀಪದ ಮನೆ'ಯನ್ನು ಸೇರುವುದಕ್ಕೆ ಎರಡು ಮೈಲು ದೂರವನ್ನು ನಡೆಯಬೇಕಾಯಿತು. ಕಾರ್ಮಿಯರ ಕೇರಿಯನ್ನು ದಾಟಿ ಮತ್ತೂ ಒಂದು ಮೈಲು ದೂರ ಉಸುಬನ್ನು ತುಳಿದು ಸಾಗಿದ ಬಳಿಕ ಬಂದಿತು ಮನೆ. ಮನೆಯಲ್ಲಿ ನಾಲ್ಕಾರು ಹೆಂಗಳೆಯರು ಮಕ್ಕಳು, ಎಲ್ಲ ಆಸೆಯನ್ನು ಬಿಟ್ಟು ಅವರನ್ನು ಕಾದಿದ್ದರು. ಕತ್ತಲು ಕೋಣೆಯೊಂದರಲ್ಲಿ ಬರಿಯ ಗೋಣಿ ತಟ್ಟಿನ ಮೇಲೆ ಹದಿನೆಂಟು ವರ್ಷದ ಒಂದು ಕಂಗಾಲಜೀವ ಮಲಗಿತ್ತು. ಆಕೆ ಬಾಣಂತಿಯಾಗಿ ಕೂಸನ್ನು ಕಳೆದುಕೊಂಡಿದ್ದಳು. ಹೆರಿಗೆಯ ಕಾಲ ದಲ್ಲಿರಕ್ತಸ್ರಾವವಾಗಿ ನಿಶ್ಶಕ್ತಿಯಿಂದ ಬೆಂಡಾಗಿದ್ದಳು. ಆದರೆ ಅದಕ್ಕೆಲ್ಲ ಆಚೀಚಿನ ಜನಗಳು ಹೇಳಿದ ರೂಢಿಯ ಚಿಕಿತ್ಸೆಮಾಡಿದ್ದಾಗಿದೆ. ನಂಜು ಮೀರಿ ಹೆರಿಗೆಯ ದಿನದಿಂದ ತೊಡಗಿದ ಜ್ವರವೇ ಬಲವಾಗಿತ್ತು.

ಬಾಣಂತಿಯ ಅಜ್ಜಿಯಾಗ–ತಾವು ಏನೇನು ಮಾಡಿದೆವೆಂದು, ತಂದು, ಕಾಯಿಸಿ, ಬೇಯಿಸಿ, ಕುಡಿಸಿದಂಥ ಸೊಪ್ಪುಸದೆಗಳ ಕಷಾಯಗಳ ವಿವರ ಹೇಳುವಾಗ ಶಿವಪ್ಪನವರು ಕಿವುಡಾಗಿದ್ದರು. ರೋಗಿಯನ್ನು ಸಮೀಪಿಸಿ ನಾಡಿ ಹಿಡಿದರು. ಕಣ್ಣುರೆಪ್ಪೆಯನ್ನು ಹಿಂದಕ್ಕೆಳೆದರು. ಅವರ ಮನಸ್ಸಿಗನಿ ಸಿತು— ತಾನಾಗ ತಾತ್ಸಾರವನ್ನಾಗಲೀ, ಔದಾಸೀನ್ಯವನ್ನಾಗಲೀ ತೋರಿ ಸಿದ್ದರೆ ಒಂದು ಜೀವ ವ್ಯರ್ಥವಾಗುತಿತ್ತೆಂದು. ದೀಪ ತೆಗೆದರು, ನೀರು ಕಾಯಿಸಿದರು. ಮದ್ದು ಚುಚ್ಚಿದರು. ಒಂದು ಗಳಿಗೆಯಕಾಲ ಅಲ್ಲೇ ಕಾದು ಕುಳಿತರು. ರೋಗಿಯು ಆಪತ್ತಿನ ಗಡುವಿನಿಂದ ಪಾರಾಗುವಳೆಂದು ಧೈರ್ಯ ವಾದ ಮೇಲೆ ನಕ್ಕು ಉಸಿರುಗರೆದರು. "ಸಂಜೆ ಬಂದು ಹೇಗಿದ್ದಾಳೆಂದು ಹೇಳು. ಗಾಬರಿಯಾಗುವುದುಬೇಡ. ಅವಳಿಗೇನು ಹೊಟ್ಟೆಗೆ ಕೊಟ್ಟಿದ್ದೀರಿ? —ಹೊಟ್ಟೆಗೆ ಹಾಲುಗೀಲೇನಾದರೂ ಇದೆಯೆ?" ಎಂದು ಕೇಳುವಾಗಲೇ

ಅವರ ಮನಸ್ಸು 'ಆ ಮನೆಯಲ್ಲಿ ಹಾಲೆಲ್ಲಿಂದ ಬರಬೇಕು?' ಅನ್ನುತ್ತಿತ್ತು. "ಹುರಿಯಕ್ಕಿ ಗಂಜಿ ಕೊಡಲೇ" ಎಂದು ಕೇಳಿದ ಮುದುಕ. "ಹಾಲಿದ್ದರಾಗುತಿತ್ತು, ಹಸುವಿನದು. ಇಲ್ಲವಾದರೆ ತೆಳ್ಳಗಿನ ಗಂಜಿ ಮಾಡಿಕೊಡು" ಎಂದು ತಿಳಿಸಿ ಹೊರಟರು. ಮುದುಕ ಅವರನ್ನು ಹಿಂಬಾಲಿಸಿದ. "ನೀನೇಕೆ ಬರುತ್ತೀ? ಹೋಗು ಮನೆಗೆ" ಎಂದರೆ "ನಾನು ತೀರ ಬಡವ ಒಡೆಯ" ಎಂಬ ಸಂಗೀತ ಅವನದ್ದು. "ಅದು ಗೊತ್ತಾಯಿತಲ್ಲ" ಎಂದರು.

"ನನ್ನ ಮೊಮ್ಮಗಳು ಬದುಕಿದರೆ ಏನಾದರೂ ನಿಮ್ಮ ಸೇವೆಮಾಡಿ ಋಣ ತೀರಿಸುತ್ತೇನೆ. ದೇವರು, ಊಟಕ್ಕಿಲ್ಲದವರು ನಾವು."

"ಆಯಿತಾಯಿತು, ಹೋಗು. ಮೈ ತಣ್ಣಗಾಗುವಂತೆ ಕಂಡರೆ, ಶಾಖ ಕೊಡುತ್ತಿರಲು ಮರೆಯ ಬೇಡ. ತೌಡನ್ನು ಕಾಯಿಸಿ ಶಾಖ—ತಿಳಿಯಿತೇ? ಹೋಗು, ಅವಳನ್ನು ನೋಡಿಕೋ" ಎಂದು ಅಟ್ಟಿದರು. ಆತ ಇನ್ನೂ ತುಸು ದೂರ ನಡೆದು ಬಂದು, ಅವರನ್ನು ರಸ್ತೆಗೆ ಮುಟ್ಟಿಸಿ ಮನೆಗೆ ಮರಳಿದ.

ಮನೆಗೆ ಮರಳುವಾಗ ಒಂದು ಗಂಟೆ ಮಧ್ಯಾಹ್ನವಾಗಿತ್ತು. ದಾರಿಯಲ್ಲಿ ಮುಗುದುಮ್ ಸಾಹೇಬರು ತೀರಿಕೊಂಡಂಥ ಖಚಿತ ವಾರ್ತೆಯೂ ಸಿಕ್ಕಿತು. ಮನೆಯಲ್ಲಿ ಪುರೋಹಿತರು ಅವನನ್ನು ಶಪಿಸುತ್ತ ಕಾದು ಕುಳಿತಿದ್ದರು.

"ಎಲ್ಲಿಗೆ ಹೋಗಿದ್ದೆ? ಇನ್ನೆಷ್ಟೆಲ್ಲಾ ಕೆಲಸವಿದೆ" ಎಂದು ತಂದೆ ಕೇಳಿದಾಗ, ಮಗನು ನಡೆದ ಸಂಗತಿಯನ್ನು ಬಣ್ಣಿಸಿದ.

"ಅಯ್ಯೋ, ನಿನಗೆ ಬುದ್ಧಿ ಎಂಬುದೇ ಇಲ್ಲ. ತಾಯಿಯ ದಿವಸ ಎಂದು ಗೊತ್ತಿಲ್ಲವೆ? ಆ ಹೊಲೆಯರು, ಮುಸಲ್ಮಾನರುಗಳ ಮನೆಗೆ ಹೋಗಬೇಕೆ?" ಎಂದರು. ಶಿವಪ್ಪನವರು ನಗುತ್ತ, ಸ್ನಾನದ ಮನೆಗೆ ಹೋದರು. ಅಲ್ಲಿಂದ ಪುರೋಹಿತರೊಡನೆ ಸೇರಿ ಪಿತೃ ನಿಷ್ಠೆಗೆ ಸಂಬಂಧಿಸಿದಂಥ ಕೆಲಸಗಳನ್ನು ತೊಡಗಿದರು. ಆ ದಿನವಂತು ಅವರ ಮನಸ್ಸು ತೀರ ಚಿಂತಾಕ್ರಾಂತವಾಗಿತ್ತು. —ಒಂದು ಕಡೆ ತಾಯಿಯ ನೆನವರಿಕೆ; ಮತ್ತೊಂದು ಕಡೆ ಸಾಯುವಾಗಲೇ ತಂದೆಯ ಬದುಕಿಗಾಗಿ ಕಚ್ಚಾಡುತ್ತಿದ್ದ ಮಕ್ಕಳ ವಿಚಾರ, ಮಗದೊಂದು ಕಡೆಯಲ್ಲಿ—ಎಲ್ಲ ಬಗೆಯ ಸಹಾಯಗಳನ್ನು ಕಳಚಿಕೊಂಡು ನಿರ್ಗತಿಕಳಾದ ಗುಲಾಬಿ ಮತ್ತು ಅವಳ ಮಗುವಿನ ಚಿಂತೆ. 'ಎಷ್ಟು ವಿಚಿತ್ರವಪ್ಪಾ ಈ ಸಂಸಾರ' ಎಂದು ಗಳಿಗೆ, ಗಳಿಗೆಗೂ ಮನಸ್ಸು ವಿಸ್ಮಯಗೊಳ್ಳುತ್ತಿತ್ತು.

ಅವರು ಆ ದಿವಸ ಮನೆಯ ಕೆಲಸಗಳನ್ನೆಲ್ಲ ಮುಗಿಸಿ, ದವಾಖಾನೆ

ಯನ್ನು ಸೇರುವಾಗ ಮುಸ್ಸಂಜೆಯಾಗಿತ್ತು. ಎಲ್ಲೆಲ್ಲಿ ಏನೇನಾಯಿತು–ಎಂದು ತಿಳಿಯುವುದಕ್ಕೆ ಅವಕಾಶವಿರಲಿಲ್ಲ, ತಿಳಿದು ತಾವೇನು ಮಾಡುವಂತೆಯೂ ಇರಲಿಲ್ಲ. ದವಾಖಾನೆಯನ್ನು ಸೇರುವಹೊತ್ತಿಗೆ, ಮಧ್ಯಾಹ್ನ ಅವರನ್ನು ಕರದೊಯ್ದಿದ್ದ ಮುದುಕ ತಿರುಗಿ ಅಂಗಡಿಗೆ ಬಂದು ಕಾದಿದ್ದ. "ಏನು ಬಂದೆ? ಹೇಗಿದ್ದಾಳೆ ನಿನ್ನ ಮೊಮ್ಮಗಳು" ಎಂದು ವಿಚಾರಿಸಿದರು. ಆಕೆಯ ಜ್ವರ ಕಡಿಮೆಯಾಗಿದೆಯೆಂದು ಕೇಳಿ ಸಂತೋಷಗೊಂಡರು. ಬಂದವನಿಗೆ ಔಷಧ ಕೊಡಿಸಿದರು. ಬಂದವರನ್ನೂ, ಒಬ್ಬೊಬ್ಬರಾಗಿ ಬರುತ್ತಿರುವವರನ್ನೂ, ವಿಚಾರಿಸಿ, ಚೀಟಿ ಬರೆದುಕೊಟ್ಟರು. ಕಂಪೌಂಡರ್ ಶೀನು ಅಷ್ಟರೊಳಗೆ "ಇವತ್ತೂ ಬಂದಿದ್ದರು ಸುಂದರಿಯಮ್ಮ. ಗಂಡನಿಂದೇನಾದರೂ ಕಾಗದ ವಿದೆಯೆ?" ಎಂದು ಹೇಳಿ, ಔಷಧ ವಿತ್ರಣದ ಕೆಲಸಕ್ಕೆ, ಹೋದನು.

ಆಗಲೇ ಅಂಚೆಯವನು ಬಂದು, ಅವರ ಮೇಜಿನ ಮೇಲೆ ಒಂದೆರಡು ಕಾಗದಗಳನ್ನು ಎಸೆದು ಹೊರಟುಹೋದ. ಬಂದ ಟಪ್ಪಾಲನ್ನು ಬಂದ ಕ್ಷಣ ವೇ ಬಿಡಿಸಿ ನೋಡುವ ಅವಸರ ಅವರದ್ದಲ್ಲ. ಆ ವೇಳೆಯಲ್ಲಿ ಎದುರಿಗೆ ನಾಲ್ಕುಮಂದಿ ಕುಳಿತಿರುತ್ತಾರೆ, ಕಾದಿರುತ್ತಾರೆ. ಈ ದಿನವೂ ಆ ಗೊಡವೆಗೆ ಹೋಗಲಿಲ್ಲ. ಆದರೆ–ದಿನದ ಕೆಲಸ ಮುಗಿಯುವಾಗ ದೀಪ ಹಚ್ಚಿ ಒಂದು ಗಂಟೆಯ ವೇಳೆ ಕಳೆದಿತ್ತು. ವೆಂಕಟುವಿನ ಸವಾರಿ ಸಪ್ಪೆಮೋರೆ ಮಾಡಿ ಕೊಂಡು ಅಂಗಡಿಗೆ ಬಂದು ಕುಳಿತಿತು. ಸಾಹೇಬರನ್ನು ಇಷ್ಟು ದಿನ ಚಿಕಿತ್ಸೆ ಮಾಡಿ ದಣಿದ ಶಿವಪ್ಪನವರ ಕಿವಿಗೆ ನಾಲ್ಕು ಸುದ್ದಿಯ ಮಾತುಗಳನ್ನು ಹೇಳಿ ಹೋಗುವ–ಎಂದು ಆತ ಬಂದಿದ್ದ. ಸಾಹೇಬರ ಕಳೇಬರವನ್ನು ಗೂಡಿನಲ್ಲಿ ರಿಸಿ, ಮಸಣದ ತನಕ ಸಾಗಿಸುವವರೆಗೂ ಅವನು ನಿಂತು ನೋಡಿದ್ದ. ಅವರಿ ಗಾಗಿ ಕಂಬನಿ ಸುರಿಸಿದ್ದ. ತನ್ನ ಅವರ ದೀರ್ಘಕಾಲದ ಗೆಳೆತನವನ್ನು ನೆನೆದು ಅವನ ಜೀವ ಕಂದಿಹೋಗಿತ್ತು. 'ಇವತ್ತು ಅವರು, ನಾಳೆ ನಾನು' ಎಂಬ ಸ್ಮಶಾನ ವೈರಾಗ್ಯ ಪ್ರಾಪಿಸಿತ್ತು. ಕಾಲ ಬಂದಾಗ ಎಲ್ಲರೂ ಸಾಯಬೇಕು. ಅದರಲ್ಲಿ ಹೆಚ್ಚಿಲ್ಲ. ಆಗ ಉಳಿದವರು ಸತ್ತವರ ಗೌರವವನ್ನು ಉಳಿಸಿ ಬಾಳಿ ದರೆ ಅಗೊಂದು ಸಮಾಧಾನ. ಸಾಹೇಬರ ವಿಚಾರದಲ್ಲಿ ಅವರ ಮಕ್ಕಳು ಹಾಗೆ ನಡೆಸುವರೆಂಬ ಭರವಸೆ ಅವನಿಗೆ ತೋರಿ ಬರಲಿಲ್ಲ. ಎದುರೂ, ಹಿಂದೆ ಯೂ ಆತ ಕೇಳಿದ ಮಾತುಗಳಿಂದಾಗಿ, ಅವರು ತೀರಿಕೊಂಡ ಚಿಂತೆಯನ್ನು ಮೀರಿಸುವ ಚಿಂತೆಯುಂಟಾಗಿತ್ತು. ಸಾಹೇಬರು ಹಾಸಿಗೆ ಹಿಡಿದ ಗಳಿಗೆ

ಯಿಂದ ದಿನಕ್ಕೆ ನಾಲ್ಕು ಬಾರಿ ಅವರ ಮನೆಗೆ ಆತ ಹೋಗಿಬರುತ್ತಿದ್ದ. ಅವರ ಬಳಿಯಲ್ಲಿ ಕುಳಿತು ದೀನವದನನಾಗಿ ಮುಖವನ್ನೇ ನೋಡುತಿದ್ದ. ಎಂದು ಅವರ ಕಿರಿಯ ಮಗನು ಊರಿಗೆ ಬಂದನೋ, ಅಂದಿನಿಂದ ಅವ ನಿಗೂ ಗಾಬರಿಯಾಗತೊಡಗಿತು. ಭಟ್ಕಳದ ಮೀರ ಸಾಹೇಬರೂ ಕಿರಿಯ ಮಗ ಆದಮನೂ ಸೇರಿ ಏನೋ ಸಂಚು ನಡೆಸುತ್ತಿದ್ದಾರೆ–ಎಂಬುದು ಸ್ಪಷ್ಟ ವಾಗಿತ್ತು. ಸಾವಿನ ಒಂದೆರಡು ದಿನಗಳ ಮೊದಲಿಂದ–ಮನೆ, ಹಿತ್ತಿಲುಗಳ ಮೂಲೆ ಮೂಲೆಗಳನ್ನು ಅಗೆದು ನೋಡುವ ಪ್ರಯತ್ನವಾಗುತ್ತಿತ್ತೆಂದು ಬಲ್ಲ. 'ಏನಾದರೂ ಹೂತಿಟ್ಟ ಹಣವಿರಬೇಕು. ಅದಕ್ಕಾಗಿ ಈ ಗದ್ದಲ' ಎಂಬುದನ್ನು ಅರಿತುಕೊಂಡಿದ್ದ. ಅಲ್ಲದೆ ಅವನ ವಿಶ್ವಾಸಿಗಳಾದ ಕರೀಮ್ ಸಾಹೇಬರು ನಾಲ್ಕಾರು ಬಾರಿ ಅವನ ಕಿವಿಯಲ್ಲಿ "ವೆಂಕಟು, ಸಂಗತಿ ಹೇಗೆ ನಿಲ್ಲುತ್ತದೆ ಎನ್ನುವ ಹಾಗಿಲ್ಲ; ನಮ್ಮ ತಮ್ಮ ಬಂದಿದ್ದಾನೆ. ಮಾವನೂ ಸೇರಿದ್ದಾರೆ. ತಂದೆ ಯವರಿಗೆ ಬಾಯಿಬರುವ ಸ್ಥಿತಿಯಿಲ್ಲ. ಅವರು ಏನು ಗದ್ದಲ ಎಬ್ಬಿಸಿಯಾರು ಎಂದೇ ನಂಬಿಗೆ ಇಲ್ಲ. ಅಂಥ ಅಗತ್ಯಬಿದ್ದರೆ–ಒಂದು ಇಪ್ಪತ್ತು ಧಾಂಡಿಗರು ಕರೆದಾಗ ಬರುವಂತೆ ಹೇಳು" ಎಂದೂ ತಿಳಿಸಿದ್ದರು. ಇಷ್ಟನ್ನೆಲ್ಲ ತಿಳಿದು ಬಂದವನಾದ್ದರಿಂದ ಡಾಕ್ಟರರ ಮುಂದೆ ಕೈಕಟ್ಟಿ ಕುಳಿತವ "ಏನು ವೆಂಕಟು, ಏನು ಬಂದೆ? ಯಾರು ಹುಷಾರಿಲ್ಲವೆ ಮನೆಯಲ್ಲಿ?" ಎಂದು ಕೇಳಿದರೆ "ಬರಿದೆ ಬಂದೆ ಒಡೆಯ. ನಮ್ಮ ಧನಿಗಳೊಬ್ಬರು ಹೋದರು–ಧರ್ಮರಾ ಯರ ಹಾಗಿನವರು" ಎಂದು ಮಾತು ಮುಗಿಸಿ ಕುಳಿತ.

ಕತ್ತಲಾಗಿ ಶಿವಪ್ಪನವರು ಮನೆಗೆ ಹೊರಡುವಾಗ ವೆಂಕಟು ಅವರ ಬೆನ್ನ ಹಿಂದೆಯೇ ಹೊರಟ. ತನ್ನ ಮನಸ್ಸಿಗೆ ತೋಚಿದ್ದನ್ನೆಲ್ಲ ಅವರೊಡನೆ ಹಂಚಿ ಉಣ್ಣುವುದಕ್ಕೆ ಆತ ಹಂಬಲಿಸಿ ಬಂದಿದ್ದ. ಸಾಹೇಬರ ಮರಣವನ್ನು ಮೀರಿಸುವ ಕಷ್ಟ ಮುಂದೆ ಅವರ ಮನೆಯಲ್ಲಾಗಬಹುದಾದ ಗದ್ದಲದಿಂದಾ ದೀತೆಂದು ಚಿಂತಿಸುತ್ತಿದ್ದ. ದಾರಿಯುದ್ದಕ್ಕೂ ಅದನ್ನು ಕುರಿತೇ ಮಾತ ನಾಡುತ್ತಿದ್ದ. "ಬಂಗಾರದಂತಹ ಮನುಷ್ಯರು ಅವರು; ಇನ್ನು ಈ ಮಕ್ಕಳೆಲ್ಲ ಏನು ಮಾಡುತ್ತಾರೋ? ಆದರಲ್ಲೂ ಮೂರನೆಯವರು. ಅವರು ಕೊಲಂಬೊ ದಿಂದ ಯಾಕೆ ಬಂದರೊ, ಯಾರು ಕರೆಯಿಸಿದರೊ–ದೇವರಿಗೇ ಗೊತ್ತು. ಈಗ ಬಂದು ಮನೆಯನ್ನು ತಲೆಕೆಳಗೆ ಮಾಡುವುದಿರಲಿ, ಊರನ್ನು ತಲೆ ಕೆಳಗು ಮಾಡದಿದ್ದರೇ ದೊಡ್ಡದು. ನನಗೆ ಸಣ್ಣದರಲ್ಲೇ ಅವರ ಗುರುತು.

ಎಷ್ಟೆಂದರೂ ಇವರೆಲ್ಲ ನಮ್ಮ ಕಣ್ಣಮುಂದೆ ಬೆಳೆದ ಮಕ್ಕಳಲ್ಲವೆ? ಇಪ್ಪತ್ತು ವರ್ಷದೊಳಗಾಗಿ ಅವರು ಮಾಡದಂಥ ಕಾರುಭಾರವಿದ್ದಿಲ್ಲ. ಒಂದು ಹೆಣ್ಣಿಗಾಗಿ ಯಾರನ್ನೋ ಹೊಡೆದು, ಅನರ್ಥಮಾಡಿ, ಸಿಕ್ಕಿಬೀಳುವುದರಲ್ಲಿದ್ದರು. ಕೊನೆಗೆ ಈ ಫಜೀತಿ ಬೇಡವೆಂದು ಹೆದರಿ,ತಂದೆಗೂ ಹೆದರಿ, ಓಡಿಹೋದರು. ಎಷ್ಟೋ ವರ್ಷ ಅಪ್ಪ, ಮಕ್ಕಳಲ್ಲಿ ಸುದ್ದಿ, ಸಮಾಚಾರವಿರಲಿಲ್ಲ. ಆ ಮೇಲೆ ದೊಡ್ಡ ಸಾಹೇಬರೆನ್ನುತ್ತಿದ್ದರು-ಮಗ ಬಹಳ ದೊಡ್ಡ ವ್ಯಾಪಾರಮಾಡುತ್ತಿದ್ದಾನೆಂದು. ನನಗೆ ಅದೊಂದೂ ನಿಜವೆಂದು ಕಾಣುವುದಿಲ್ಲ. ಈ ಮಾವ ಅಳಿಯಂದಿರು ಸೇರಿ, ಇನ್ನೊಂದು ಕೊಲೆಯನ್ನೋ, ಮತ್ತೇನನ್ನೋ ಮಾಡಿಯಾರೆಂಬ ಹೆದರಿಕೆ ನನಗೆ" ಎಂದು ಹೇಳುತ್ತ, ಹಾದಿ ಸಾಗಿ, ಅವರ ಮನೆಯನ್ನು ಮುಟ್ಟಿದ ಮೇಲೆ ಅಲ್ಲಿಯೂ ಕುಳಿತ.

ಡಾಕ್ಟರರು ಅವನ ಮಾತುಗಳಿಗೆ ಹೂಂಗುಡುತ್ತ ಬಹು ಹೊತ್ತಿನ ತನಕ ಕೇಳಿದರು. ಕಟ್ಟ ಕೊನೆಗೆ ಪ್ರಶ್ನಿಸಿದರು "ಅದಿರಲಿ ವೆಂಕಟು, ನಿನಗೆ ಗೊತ್ತಿರಬಹುದು- ನಮ್ಮ ಸಾಹೇಬರು ಆ ಗುಲಾಬಿಗೆ ಒಟ್ಟಿಗೆ ಎಷ್ಟು ಸಾವಿರ ರೂಪಾಯಿ ಕೊಟ್ಟಿರಬಹುದು?"

"ಯಾಕೆ ಕೇಳಿದಿರಿ? ಹಾಗೆ ಮಿತಿಮೀರಿ ಏನನ್ನೂ ಕೊಟ್ಟಿಲ್ಲ. ಆ ಹಿಂದಿನವಳಿಗೆ, ಸತ್ತಳಲ್ಲ ಕಲಾವತಿ, ಅವಳಿಗೆ ಹೆಚ್ಚಾಗಿಯೇ ಕೊಟ್ಟಿದ್ದರು. ಕೊಟ್ಟ ಚಿನ್ನವೇ ನಾಲ್ಕೈದು ಸಾವಿರ ರೂಪಾಯಿಗಳಾಗಬಹುದು. ಇವಳಿಗೆ ಅಷ್ಟನ್ನೂ ಕೊಟ್ಟಿರಲಾರರು. ಈ ಹುಡುಗಿ ಒಂದು ದಿನವೂ ಅಂತಹ ಚಿನ್ನಾಭರಣವನ್ನು ಮೈತುಂಬ ಹಾಕಿಕೊಂಡು ತಿರುಗಿದ್ದನ್ನೇ ನಾನು ಕಂಡಿಲ್ಲ."

"ಅವಳ ಮನೆಯಲ್ಲೂ ಒಂದಿಷ್ಟು ಚಿನ್ನಗಿನ್ನ ಹೂತಿಟ್ಟಿರಬಹುದೆ?"

"ನಿಮಗೆ ಭ್ರಮೆ. ಹಾಗೆ ಹೂತಿಡುವಷ್ಟು ಚಿನ್ನಾಭರಣ ಅವರಲ್ಲಿತ್ತೆಂದೇ ನಾನು ಹೇಳಲಾರೆ. ಅದೆಲ್ಲ ಊರವರ ಕಟ್ಟುಕತೆ. ಒಂದಕ್ಕೆ ನಾಲ್ಕು ಮಾಡಿ ಹೇಳುತ್ತಾರೆ. ಹಾಗೆ ಅವರ ಮುತ್ತಜ್ಜನಿಗೋ, ಅಜ್ಜನಿಗೋ ಎಂದೋ ಹೂತಿಟ್ಟ ನಿಧಿ ಸಿಕ್ಕಿದೆ-ಎಂಬ ಕತೆಯೂ ಇದೆ. ಅದು ಸಿಕ್ಕಿದ್ದರೂ ಇಲ್ಲಿಯ ತನಕ ಉಳಿದೀತೆ? ಅವರ ದರ್ಬಾರನ್ನು ನೀವು ನೋಡಿಲ್ಲವೆ? ಅವರ ಮನೆಯ ಊಟಪಾಠಕ್ಕೆ ಎಷ್ಟು ಬೇಕು? ಎಷ್ಟು ಜನರಿದ್ದಾರೆ? ನಮ್ಮ ಕೇರಿಯ ಕೋಳಿ ಪಿಳ್ಳೆಗಳೆಲ್ಲ ಅವರೊಬ್ಬರ ಮನೆಯಲ್ಲೇ ಚಟ್ಟು. ಅಂದಾ ದರ್ಬಾರು! ಉಣ್ಣುವ, ತಿನ್ನುವ ವಿಷಯದಲ್ಲಿ ಹಳೆಯ ಕ್ರಮಗಳಂತೆ ಡೌಲಾಗಿ ನಡೆಸಿ

ದವರು ಅಷ್ಟೇ ಹೊರತು—ಹೂತು, ಹರಡಿ, ಕಿತ್ತು ನೋಡುವುದಕ್ಕೆ ಏನು ಮಣ್ಣಿದೆ? ಇದ್ದಿದ್ದರೆ ಮಕ್ಕಳಿಗೆ ತಿಳಿಸದೆ ಇರುತಿದ್ದರು ಅನ್ನುತ್ತೀರಾ."

"ಹೇಗೆ ಹೇಳಲಿ? ತಾನು ಸಾಯುತ್ತೇನೆಂದು ಗೊತ್ತಿತ್ತೆ? ಗೊತ್ತಿದ್ದರೂ ಬಾಯಿ ತೆರೆಯಲಾರದೆ ಸತ್ತರು."

"ಅದು ನಿಜ—ಆದರೆ ಅವರಿಗೆ ತಮ್ಮ ಎರಡನೆಯ ಮಗನ ಮೇಲೆ ಬಹಳ ಪ್ರೀತಿ. ಅವರಿಗೂ ಅದನ್ನು ಹೇಳದಿರುತ್ತಾರೆಯೆ?"

ಸ್ವಲ್ಪ ಹೊತ್ತು ಶಿವಪ್ಪನವರು ಸುಮ್ಮನೆ ಕುಳಿತಿದ್ದು ಅನಂತರ "ಏನೋ ಅಪ್ಪ, ಅವರ ಸಂಗತಿ ನಮಗೇನು ಗೊತ್ತು? ಆದರೆ ಅವರ ಕಿರಿಯ ಮಗ ಈ ಒಂದು ಕೆಲಸಮಾಡಿದ್ದು ಏನೂ ಚೆನ್ನಲ್ಲ" ಎಂದು, ಹಿಂದಣ ರಾತ್ರಿ ಗುಲಾಬಿ ಮನೆಯಲ್ಲಿ ನಡೆದ ಪ್ರಕರಣವನ್ನೆಲ್ಲ ತಿಳಿಸಿದರು. ಅದನ್ನು ಕೇಳಿ ಆತನಿಗೂ ಗಾಬರಿಯಾಯಿತು; ಕನಿಕರವಾಯಿತು. "ನಿಜವೇ? ಅಂತಹ ಅನ್ಯಾಯ ಮಾಡಿದರೇ? ಅವಳು ಸೂಳೆಯಾದರೇನು?ಅವರ ಚಾಕರಿ ಮಾಡಿದ್ದಕ್ಕಲ್ಲವೆ-ಸಾಹೇಬರು ಏನಾದರೂ ಕೊಟ್ಟದ್ದು. ಹಾಗಾದರೆ ಈ ತಮ್ಮನ ಸಂಗತಿಯಲ್ಲಿ ಅಣ್ಣಂದಿರಿಗಿರುವ ಅನುಮಾನ ಸಮನಾದದ್ದೇ" ಎಂದನು. ಈ ಸುದ್ದಿಯನ್ನು ಕೇಳಿ ಅವನಿಗೂ ತುಂಬ ಕಳವಳವಾದುದರಿಂದ ಆತ ಮನೆಗೆ ಹೊರಟವನು, ಗುಲಾಬಿಯಕ್ಕನನ್ನು ಕಂಡು,ನಾಲ್ಕು ಸಮಾಧಾನದ ಮಾತುಗಳನ್ನು ಹೇಳುತ್ತೇನೆಂದು ಹೊರಟುಹೋದ.

ಈ ಎಲ್ಲ ಮಾತುಗಳನ್ನು ಕೇಳಿದ ಮೇಲೆ, ಶಿವಪ್ಪನವರಿಗೆ ಮನಸ್ಸು ತುಂಬ ಕರೆಕರೆಗೊಂಡಿತು. ಊರಲ್ಲೊಂದು ಬಿರುಗಾಳಿ ಏಳುವಂತೆ ಕಂಡಿತು; ಪ್ರಪಂಚದಲ್ಲೇ ಅಂಥ ಬಿರುಗಾಳಿ ಬೀಸುವ ಸೂಚನೆ ಕಂಡಿತು. ಅವರು ಆ ದಿನ ತಮಗೆ ಬಂದ ಟಪ್ಪಾಲನ್ನು ಓದಿ ಮನೆಗೆ ಬಂದಿದ್ದರು. ರಾತ್ರಿ ಊಟವಿಲ್ಲದ್ದರಿಂದ ಒಂದಿಷ್ಟು ಹಾಲನ್ನು ಕುಡಿದು, ಮಲಗಿ ನಿದ್ದೆ ಹೋದರು. ಮರುದಿವಸ ದವಾಖಾನೆಗೆ ಹೋಗಿ ಕೋಟನ್ನು ತೆಗೆದಿರಿಸುವಾಗ, ಒಂದು ಲಕೋಟೆ ಸಿಕ್ಕಿತು. ನಿನ್ನೆ ಓದಬೇಕಾಗಿದ್ದ ಟಪ್ಪಾಲದು. ಇಂದುಮತಿಯ ಕಾಗದ. ಅತ್ತೆಯ ನಿಧನವಾರ್ತೆಯನ್ನು ಕೇಳಿ ಸಂತಾಪ ವ್ಯಕ್ತಮಾಡಿದ್ದಳು. ಪತ್ರದ ಕೊನೆಯಲ್ಲಿ "ನಾನು ಈ ವೇಳೆಯಲ್ಲಿ ಇಲ್ಲಿಗೆ ಬರಬಾರದಿತ್ತು-ಎಂದೆನಿಸುತ್ತದೆ. ಇಲ್ಲಿ ನನ್ನ ತಂದೆಯ ಮನಸ್ಸೂ ನೆಮ್ಮದಿಯಾಗಿಲ್ಲ; ತುಂಬ ಚಿಂತೆಗೊಳಗಾಗಿದ್ದಾರೆ. ಅವರು ನಮ್ಮ ದೊಡ್ಡ ಭಾವನವರಿಗೆ ಬೇಂಕಿಗೆ

ಜಾಮೀನು ಹಾಕಿ, ನಾಲ್ವತ್ತು ಐವತ್ತುಸಾವಿರ ರೂಪಾಯಿಗಳಿಗೆ ತಲೆಯೊಡ್ಡಿ, ಈಗ ತಾವೇ ತುಂಬ ತೊಂದರೆಗೊಳಗಾಗಿದ್ದಾರೆ. ಇದ್ದುದನ್ನೆಲ್ಲ ಕಳೆದುಕೊಳ್ಳುವ ಸ್ಥಿತಿ ಬಂದಿದೆ. ಇಷ್ಟೆಲ್ಲ ನಡೆದು ತಿಂಗಳೆರಡು ತಿಂಗಳಾಯಿತಾದರೂ ನನಗೆ ತಿಳಿದದ್ದು ಈಚೆಗೆ. ನಿಮಗೆ ತಿಳಿಸಬಾರದೆಂದೇ ಹೇಳಿದ್ದಾರೆ. ಇಂತಹ ವೇಳೆಯಲ್ಲಿ ನಾನು ಹೆರಿಗೆಗೆ ಬರುವಂತಾಯಿತಲ್ಲ" ಎಂಬ ವಿಷಾದವನ್ನು ವ್ಯಕ್ತಮಾಡಿದ್ದಳು. ಇಂದುಮತಿಯ ಪಾಲಿಗೆ ಅದೊಂದು ಆಘಾತ. ತವರು ಮನೆಯ ಶ್ರೀಮಂತಿಕೆಯನ್ನು ಕುರಿತಾದ ಹೆಮ್ಮೆ ಅವಳಲ್ಲಿ ತುಂಬಿಕೊಂಡಿತ್ತು. ಅದರಿಂದಾಗಿ ಮಾವನ ಮನೆಯ ಬಡತನವನ್ನು ಒಪ್ಪುವುದಕ್ಕೆ ಮನಸ್ಸು ಸಿದ್ಧವಾಗಿರಲಿಲ್ಲ. ಮನೆಯ ಜನಗಳನ್ನು ಕಂಡು ಮನಸ್ಸು ಒಗ್ಗಿದರೂ, ಬಡತನದ ಆವರಣ ಮಾತ್ರ ಅಸಹನೀಯವಾಗಿತ್ತು. ಅವಳು ಬೆಳೆದು ಬಂದ ಬಗೆ ಹಾಗೆ; ಎಳೆಯಳು. ಕಷ್ಟವೇನೆಂದು ಜೀವನದಲ್ಲಿ ಅನುಭವಿಸಿರಲಿಲ್ಲ. ಆದುದರಿಂದ ಮಾವನ ಮನೆ ಇಕ್ಕಟ್ಟಿನ ಗುಡಿಸಲಾಗಿ ಕಂಡದುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ತಂದೆಗೆ ಉಂಟಾದ ಆರ್ಥಿಕ ವಿಪತ್ತು ಅವಳ ದೃಷ್ಟಿಯನ್ನೇ ತತ್ತರಿಸಿತು. ಅತ್ತೆ ಸಾಯುವಕಾಲದಲ್ಲಿ ತಾನುತಪ್ಪಿಸಿಕೊಂಡೆನಲ್ಲ ಎಂಬ ನೋವು ಆತ್ಮಸಾಕ್ಷಿಯನ್ನು ಇನ್ನಷ್ಟು ಚುಚ್ಚಿತು.

ಶಿವಪ್ಪನವರು ಆ ಕಾಗದವನ್ನೋದಿದರು, ಆ ಗಳಿಗೆಯಲ್ಲಿ ಅದಕ್ಕೆ ಪ್ರತ್ಯುತ್ತರವನ್ನೂ ಬರೆದು ಹಾಕಿದರು. "ಈಗ ನಮ್ಮ ಮನೆ ತಿರುಗಿ ತೆರವಾಗಿದೆ. ತಾಯಿಯಿಲ್ಲದ ಮನೆ, ಹೆಂಗುಸರಿಲ್ಲದ ಮನೆ-ಎಂದು ಹೊಕ್ಕಾಗಲೇ ಹೊಳೆಯುತ್ತದೆ. ನಿನ್ನನ್ನು ಕಳುಹಿಸದಿದ್ದರೆ ಚೆನ್ನಾಗಿರುತ್ತಿತ್ತು ಎಂದು ಕಂಡರೂ ತಿರುಗಿ ಕರೆಯಿಸಿಕೊಳ್ಳುವುದು ಸಮನಾಗಲಾರದು. ನಿಮ್ಮ ಮನೆಯವರೂ ಒಪ್ಪಲಾರರು. ಅವರ ಈ ಕಷ್ಟದ ವೇಳೆಯಲ್ಲಿ ಅವರಿಗೆ ನನ್ನ ಉಳಿದ ಸಾಲವನ್ನು ಒಮ್ಮೆಗೇ ಸಲ್ಲಿಸುವುದು ಸಾಧ್ಯವಾಗಿದ್ದರೆ ಎಷ್ಟೋ ಉಪಕಾರವಾಗುತಿತ್ತು. ನನ್ನ ಕಷ್ಟಕ್ಕೆ ಅವರು ಒದಗಿರುವಾಗ, ಅವರ ಕಷ್ಟಕ್ಕೆ ನಾನು ಒದಗದಾದೆನೇ?" ಎಂದು ವ್ಯಥೆಯನ್ನು ಸೂಚಿಸಿದರು.

ಅದೇ ಒಂದೆರಡು ದಿನಗಳಲ್ಲಿ ಮಹಾನುಭಾವ ಮದ್ದುರಾಯನಿಂದಲೂ ಪತ್ರ ಬಂದಿತು. ಅಂಚೆಯ ಮುದ್ರೆ 'ಕಾಲ್ಬಾದೇವಿ, ಮುಂಬಯಿ' ಎಂದಿತ್ತು. ಬರಹ ನೋಡಿಯೇ ಮಾಧವನದ್ದೆಂದು ಗೊತ್ತಾಗಿ "ಅಂತೂ ಬದುಕಿದ್ದಾನೆ" ಎಂದು ನಗುತ್ತ ಪತ್ರವನ್ನು ತೆರೆದು ಓದಿದರು. ಅದರ ಹಿಂದಣ ದಿನವಷ್ಟೆ

ಪತ್ರಿಕೆಯಲ್ಲಿ–ಹಿಟ್ಲರ್ ಜಕೊಸ್ಲೊವೇಕಿಯಾದ ಮೇಲೆ ದಂಡೇರಿಹೋದ ವಾರ್ತೆ ಬಂದಿತ್ತು. ಅಖಿಲ ಯುರೋಪು ಕದನರಂಗವಾಗ ಬಹುದೆಂಬ ಸೂಚನೆಯಿತ್ತು. ಇಂಥವೇಳೆಯಲ್ಲಿ ಮಾಧವ ಒಂದಿಷ್ಟು ಔಷಧ ಸಾಮಗ್ರಿಗಳನ್ನು ಸಂಗ್ರಹಿಸಿ, ತಂದದ್ದಾದರೆ ಹೆಚ್ಚಿನ ಪ್ರಯೋಜನವಾಗುತ್ತಿತ್ತು. ಎಂಬ ಸವಿಗನಸಿನಿಂದ ಪತ್ರವನ್ನು ತೆರೆದರು. ಕಾಗದ ಚುಟುಕಾಗಿತ್ತು. "ಶಿವಪ್ಪನವರಿಗೆ–ಮಾಧವ ಮಾಡುವ ನಮಸ್ಕಾರಗಳು. ನಾನು ಹೋದಲ್ಲಿಗೆ ನನ್ನ ಗ್ರಹಗತಿ ಬೆನ್ನುಬಿಡದೆ ಬಂದಿದೆ. ನಾನಿಲ್ಲಿ ಬಂದವನು ತಂದ ಹಣವನ್ನೆಲ್ಲ ಕಳೆದುಕೊಂಡಿದ್ದೇನೆ. ಊರಿಗೆ ಹಿಂದಿರುಗುವ ಮುಖವಿಲ್ಲ. ನಾನು ಬದುಕಿದ್ದರೆ ನಿಮ್ಮ ಹಣವನ್ನು ಖಂಡಿತವಾಗಿ ಹಿಂದೆ ಕೊಡುತ್ತೇನೆ." ಎಂಬ ಒಕ್ಕಣೆಯನ್ನು ಓದಿದರು. 'ಛೀ–ಎಂತಹ ದಿವಸಗಳಪ್ಪಾ ಇವು! ಒಂದಾದರೂ ಸುಖದ ಸುದ್ದಿ, ಸಂತೋಷದ ಸುದ್ದಿ ಬರಬೇಡವೆ? ಈತ ಮತ್ತೇನಿಲ್ಲ–ರೇಸಿಗೆ ಹೋಗಿ ಕೈ ತೊಳೆದುಕೊಂಡು ಚೊಕ್ಕವಾಗಿರಬೇಕು. ಇವನ ಪಾಡು ಹಾಗಾದರೆ, ಇವನ ಹೆಂಡತಿ ಮಕ್ಕಳ ಗತಿಯೇನು?' ಎಂದುಕೊಂಡರು. ಅದಕ್ಕೂ ಮಿಗಿಲಾಗಿ–ಗುಲಾಬಿಯ ಹಂಬಲ ಹೇಗೆ ವ್ಯರ್ಥವಾಯಿತೆಂದೂ ಅನಿಸಿತು. ಅದೊಂದು ಜೀವ, ಇವನನ್ನು ವ್ಯರ್ಥವಾಗಿ ಹಂಬಲಿಸಿ ತನ್ನ ಶೇಷಾಯುಷ್ಯವನ್ನು ನಷ್ಟಮಾಡಿಕೊಳ್ಳುವುದಂತು ನಿಜವೆಂದು ತೋರಿತು. ಅತ್ತ ಜೀವನವೂ ಕೆಟ್ಟಿತು; ಇತ್ತ ಆಸೆಯೂ ಮಣ್ಣುಗೂಡಿತು.

ಹೀಗೆಲ್ಲ ಯೋಚಿಸುವುದರೊಳಗೆ ರೋಗಿಗಳು ಬರತೊಡಗಿದರು. ನಿತ್ಯದ ಸೇವೆಗೆ ಅನುವಾದರು.

ಅದೇ ದಿನ ಅವರಲ್ಲಿಗೆ ಗೆಳೆಯನಾದ ವೈಕುಂಠ ಬಂದಿದ್ದ. ಆತ ತೆಗೆದ ಬಾಯಿಗೆ "ಡಾಕ್ಟರರೇ, ನಿಮ್ಮ ದೊರೆ ಮಾಡಿದ ಕೆಲಸ ಕೇಳಿದಿರೊ? ನಮ್ಮ ದಲಾಲರು ಕಾಗದ ಬರೆದಿದ್ದಾರೆ — ರೇಸಿನಲ್ಲಿ ಆರೆಂಟು ಸಾವಿರ ರೂಪಾಯಿ ಕಳೆದುಕೊಂಡನಂತೆ. ಈ ಸಮಯದಲ್ಲೇನಿಲ್ಲ–ಮುಂಬಯಿಯಿಂದ ಖಾಲಿ ಗೋಣಿಚೀಲಗಳನ್ನು ಮಚ್ವೆಗೆ ತುಂಬಿಸಿದ್ದರೆ ರೂಪಾಯಿ ಎರಡು ರೂಪಾಯಿಯಾಗುತ್ತಿತ್ತು" ಎಂದು ಸುದ್ದಿಯಮೇಲೆ ಸುದ್ದಿಯನ್ನು ಸಾರಿದ. ಹುಣ್ಣಿನ ಮೇಲೆ ಬರೆಯನ್ನು ಎಳೆದ. "ನನ್ನದೂ ಐನೂರು ರೂಪಾಯಿಗಳಿದ್ದುವು; ಅದೂ ಕೃಷ್ಣಾರ್ಪಣವಾಯಿತು." ಎನ್ನುವ ನಾಲಿಗೆ ಅವರಿಗೆ ಬರಲಿಲ್ಲ. ಆದರೆ ಅದೇ ವೈಕುಂಠ, ಇನ್ನೊಮ್ಮೆ ಅಲ್ಲಿಗೆ ಬಂದಾಗ "ಡಾಕ್ಟರರೇ ನನಗನಿಸುತ್ತದೆ;

ಎಲ್ಲ ಮ್ಹಾಲುಗಳಿಗೂ ಒಳ್ಳೆಯ ತೇಜಿಯ ಸಮಯ ಬರುತ್ತದೆ-ಎಂದು. ಕೆಲವಕ್ಕೆ ಈಗಾಗಲೇ ಬೆಲೆಯೇರಿಬಿಟ್ಟಿದೆ. ಇಷ್ಟೇಅಲ್ಲ; ಇನ್ನೂ ಏರುವುದುಂಟು. ನಮ್ಮ ಮಾಧವ ಹೋದದ್ದು ಔಷಧ ತರಲಿಕ್ಕಲ್ಲವೆ? ನಿಮ್ಮ ಬೋಧನೆಯಂತೆ ಮದ್ದಿನ ಶಾಪು ಇರಿಸುವುದಕ್ಕಲ್ಲವೆ? ನಾವೇ ಅಂತಹ ಒಂದು ಅಂಗಡಿಯನ್ನು ತೆರೆಯುವ ಯೋಚನೆ ಮಾಡಿದ್ದೇವೆ. ಏನೆನ್ನುತ್ತೀರಿ?" ಎಂದು ಕೇಳಿದ.

"ನಾನು ಅನ್ನುವುದೇನು? ಊರಿಗೆ ಎಷ್ಟೋ ಔಷಧ, ಸಾಮಗ್ರಿಗಳೂ ಬೇಕಾಗುತ್ತದೆ.ಜನಗಳಿಗೆ ನಾನವುಗಳ ಹೆಸರುಗಳನ್ನು ಹೇಳಬೇಕೇ ಹೊರತು ತಂದಿರಿಸಿ ಕೊಳ್ಳುವಂಥ ಸ್ಥಿತಿ, ದಾಸ್ತಾನು ಮಾಡಿಕೊಳ್ಳುವ ಸ್ಥಿತಿ ನನಗಿಲ್ಲ. 'ಅದೆಲ್ಲಿ ಸಿಗುತ್ತದೆ' ಎಂದು ಕೇಳಿದರೆ 'ಹುಬ್ಬಳ್ಳಿಯಲ್ಲಿ' ಎಂದನ್ನುತ್ತಿದ್ದೇನೆ."

"ನಾವು ಸ್ಟಾಕ್ ತಂದಿರಿಸಿದರೆ ಆಗಬಹುದಲ್ಲ. ನನಗೆ ಡಾಕ್ಟರ್ ಮಡಗಾಂವಕರರೂ ತುಂಬ ಹೇಳುತ್ತಿದ್ದಾರೆ."

"ನೀವು ತಂದಿರಿಸಿದರೆ ನಿಮ್ಮ ಅಂಗಡಿಯ ಹೆಸರನ್ನು ಹೇಳುತ್ತೇನೆ-ಹುಬ್ಬಳ್ಳಿಯವರಿಗಿಂತ ಊರವರೇ ವಾಸಿಯಲ್ಲವೆ?"

"ನನಗೂ ಅಷ್ಟೇ ಬೇಕಾದದ್ದು."

ವೈಕುಂಠನ, ಆ ಗಳಿಗೆಯ ಅತಿ ಹಿಗ್ಗಿನ ಮುಖವನ್ನು ಕಂಡು ಶಿವಪ್ಪನವರು ನಗುತ್ತ "ಅಂಗಡಿ ಇರಿಸುವುದೆಲ್ಲಾ ಸಮನೇ. ಆದರೆ ಬಡವರು ಬಂದರೆ ರೂಪಾಯಿ ಮ್ಹಾಲಿಗೆ ನಾಲ್ಕು ರೂಪಾಯಿ ಹೇಳಿ ತಲೆಯೊಡೆಯ ಬೇಡ" ಎಂದು ನಕ್ಕು ಹಾಸ್ಯಮಾಡಿದರು. "ಛೇ, ಛೇ, ಉಂಟೇ!" ಎಂದು ವೈಕುಂಠ ನಗುತ್ತಲೇ ಹೊರಟ. ಅದೇ ನಾಲ್ಕಾರು ದಿನಗಳಲ್ಲಿ ಮುಂಬಯಿಗೆ ಹೋದನು. ಅವನಿಗೆ ಈ ಹೊಸ ಯೋಚನೆಯ ಜತೆಗೆ, ತಮ್ಮನ ನಿಜವಾದ ಸಮಾಚಾರವೇನೆಂದು ತಿಳಿಯುವ ಕುತೂಹಲವಾಗಿತ್ತು. ಆತನು ಊರಿಗೆ ಬಾರದೆ ಕುಳಿತಲ್ಲಿ ತನ್ನ ನಾದಿನಿ, ನಾದಿನಿಯ— ಮಕ್ಕಳನ್ನು ತಮ್ಮ ಮನೆಗೆ ಕರೆದೊಯ್ದು ಸಾಕಬೇಕಾಗುತ್ತದಲ್ಲ--ಎಂಬ ಚಿಂತೆ ಅವನದು.

ಆ ಒಂದು ತಿಂಗಳ ಕಾಲವೆಂಬುದು ಕಾಳೂರಿನ ಭವಿಷ್ಯವನ್ನಷ್ಟೇ ಅಲ್ಲ ಯಾವತ್ತು ಜಗತ್ತಿನ ಭವಿಷ್ಯವನ್ನೇ ಬದಲಿಸುವ ದಿನಗಳಾಗುತ್ತವೆಯೆಂದು ಯಾರು ಅರಿತಿದ್ದರು? ಮಹಾಯುದ್ಧದ ದಳ್ಳುರಿಯು ಎಲ್ಲೆಲ್ಲೂ ವಿಸ್ತರಿಸಿತು. 'ಮ್ಯೂನಿಕ್' ಒಪ್ಪಂದವು ಮುರಿಯಿತು. ಪಾಶ್ಚಾತ್ಯ ರಾಷ್ಟ್ರಗಳ ಅಧಃಪತನ ನಿಶ್ಚಯವೆಂದು ತೋರಿತು. ದೂರದ ಭರತಖಂಡದ ಬಾಜಾರಗಳಲ್ಲಿ ವಸ್ತು,

ಒಡವೆಗಳು ಒಂದೊಂದಾಗಿ ಕಣ್ಮರೆಯಾಗತೊಡಗಿದುವು. ಅದರಲ್ಲಿಯೂ–ಔಷಧ ಸಾಮಗ್ರಿಗಳು, ನಿತ್ಯ ಜೀವನಕ್ಕೆ ಬೇಕಾದ ಅನೇಕ ವಸ್ತು ಒಡವೆಗಳು ಮಂಗಮಾಯವಾದುವು. ✶

ಶಿವಪ್ಪನವರಿಗೂ ಅನ್ನಿಸ ತೊಡಗಿತು—ಇಂಥ ವೇಳೆಯಲ್ಲಿ ತನಗೆ ಯಾರಾದರೂ ಒಂದಿಷ್ಟು ಸಾಲಕೊಡುತ್ತಿದ್ದರೆ, ಜನಗಳ ಆಪತ್ತಿಗೆ ನೆರವಾಗ ತಕ್ಕ ಕೆಲವಾದರೂ ಔಷಧ ವಸ್ತುಗಳನ್ನು ತರಿಸಿ, ಇಟ್ಟುಕೊಂಡಲ್ಲಿ ಎಷ್ಟು ಚೆನ್ನಾಗುತಿತ್ತು–ಎಂದು. ಆದರೆ ಬರಿಗೈಯ ತನ್ನ ಹಂಬಲ ವ್ಯರ್ಥವೆಂದು ಬಲ್ಲರು. ಹಣದ ಕೊರತೆ ಅವರನ್ನು ಕಾಡುತ್ತಿದ್ದ ಈ ಗಳಿಗೆಯಲ್ಲಿ ಸಾಹೇಬರ ವಿಚಾರದಲ್ಲಿ ಮನಸ್ಸೋಡುವುದುಂಟು. "ಒಂದು ತಿಂಗಳ ಮೇಲೆ ಅವರ ಮನೆಗೆ ಓಡಾಡಿದ್ದೇನೆ. ತನ್ನಲ್ಲಿರುವ ಔಷಧಗಳನ್ನೂ ದಂಡ ಮಾಡಿದ್ದೇನೆ. ಆ ಬಗ್ಗೆ ಅವರ ಮಕ್ಕಳಲ್ಲಿ ಯಾರೊಬ್ಬರೂ 'ನಿಮ್ಮ ಬಿಲ್ ಎಷ್ಟಾಯಿತು' ಎಂದು ಕೇಳಿದವರಿಲ್ಲ. ಅದನ್ನು ಕೊಟ್ಟಿದ್ದರೆ ಎಷ್ಟು ಲೇಸಿತ್ತು" ಎಂದು ತೋರಿತು. ಆದರೆ ಅಲ್ಲೋ! ಮನೆಯನ್ನು ಹಂಚಿಕೊಳ್ಳುವ ಗದ್ದಲ! ಇಂಥ ವೇಳೆ ವಾಸಪ್ಪಯ್ಯನವರನ್ನು ಕೇಳೋಣವೇ–ಎಂದು ಯೋಚನೆ ಹೊಳೆದರೆ, ತಾಯಿಯ ಉತ್ತರಕ್ರಿಯೆಗಾಗಿ ಈಗಾಗಲೇ ಕೊಂಡ ಐನೂರು ರೂಪಾಯಿ ಸಾಲದ ನೆನಪಾಯಿತು. ಹೀಗೆ ಅವರು ಚಿಂತೆಯಲ್ಲಿದ್ದಾಗ ಒಂದು ದಿನ ಸಾಹೇಬರ ಕಿರಿಯ ಮಗಂದಿರಾದ ಆದಮ್ ಸಾಹೇಬರೂ, ಮೀರ ಸಾಹೇಬರೂ ಅವರ ದವಾಖಾನೆಗೆ ಬಂದು ಕುಳಿತರು. ಮೀರ ಸಾಹೇಬರು ಸಲುಗೆಯಿಂದ "ಡಾಕ್ಟರರೇ, ನೀವು ನಮ್ಮ ಭಾವನವರನ್ನು ಉಳಿಸಲು ತುಂಬ ಮೆಹನತ್ತು ಮಾಡಿದಿರಿ. ಆದರೆ ಅಲ್ಲಾನು ನಮ್ಮ ನಸೀಬಿನಲ್ಲೇ ಬರೆಯಲಿಲ್ಲ" ಎಂದು ಮಾತಿಂದ ತೊಡಗಿ "ಇವರು ನಮ್ಮ ಅಳಿಯಂದಿರು, ನೋಡಿದ್ದೀರಲ್ಲ. . . . ಇಷ್ಟರಲ್ಲೇ ನಮ್ಮ ಸುದ್ದಿಯೆಲ್ಲ ನಿಮಗೆ ಸಿಕ್ಕಿರಬೇಕು. ನಮ್ಮ ನಮ್ಮಲ್ಲೇ ರಾಜಿಯಿಂದ ಹಿಸೆಮಾಡಿ ಮುಗಿಸುವ ಪಂಚಾಯತಿಯಾಗಿದೆ" ಎಂದರು.

"ಯಾವ ಬಾಬಿನಲ್ಲಿ?" ಎಂದು ಕೇಳಿದರು ಶಿವಪ್ಪನವರು. ಅನ್ಯ ಮನಸ್ಕರಾಗಿದ್ದ ಅವರಿಗೆ ಆ ಪ್ರಸ್ತಾಪದ ತಲೆಬುಡವೇ ಆಗಿರಲಿಲ್ಲ.

"ನಮ್ಮ ಭಾವನವರ ಆಸ್ತಿಯ ವಿಚಾರದಲ್ಲಿ ನಾವೆಲ್ಲರು ಕೂಡಿ ಪಂಚಾತಿಕೆ ಮಾಡಿದ್ದೇವೆ. ನಿಮಗೆ ಅದು ತಿಳಿದಿರಲಾರದು. ಅಂದರೆ ನೀವು ಆ ಕಡೆಗೆ ಆ ಮೇಲೆ ಬಂದೇ ಇಲ್ಲ. ಅಂಗಡಿ, ಬಂಡಸಾಲೆ, ಮನೆ, ಭೂಮಿ, ನಗದು-

ಇದ್ದುದನ್ನೆಲ್ಲ ಹಂಚಿಕೊಂಡು, ಪಾಲುಪಟ್ಟಿಮಾಡಿ ರಾಜಿಯಿಂದ ತೀರಿಸಿದೆವು. ಈ ನಮ್ಮ ಅಳಿಯ ಇನ್ನುಮುಂದೆ ಊರಲ್ಲೇ ಇರುವುದೆಂದು ನಿಶ್ಚಯಮಾಡಿದ್ದಾನೆ. ನಾನು ಅವನಿಗೆ ಹೇಳಿದೆ! 'ಕೊಲಂಬೊ ಗಿಲಂಬೊ ಬೇಡ, ಊರಲ್ಲಿಯೇ ಇರು'–ಎಂದು. ಅವನೂ ಆಗಲಿ–ಎಂದಿದ್ದಾನೆ. ಈ ಅಂಗಡಿಯ ಸಾಲು ಅವನ ಹಿಸೆಗೆ ಬರುತ್ತದೆ" ಎಂದು ಪೀಠಿಕೆ ಹಾಕಿದರು.

"ಹೋ! ಇನ್ನುಮುಂದೆ ಆದಮ್ ಸಾಹೇಬರು ನಮ್ಮ ಧನಿಗಳೋ? ಬಾಡಿಗೆಯ ಹಣ ನಿಮಗೆ ಮುಟ್ಟಿಸಿದರಾಯಿತಲ್ಲ." ಎಂದು ನಕ್ಕು ನುಡಿದರು ಶಿವಪ್ಪನವರು.

"ಅದೇನು ದೊಡ್ಡ ಮಾತು!" ಎಂದು ಮಾತುಮುಗಿಸಿ, ದವಾಖಾನೆ ಮುಚ್ಚುವ ತನಕವೂ ಅಲ್ಲಿಯೇ ಕುಳಿತರು. ಅನಂತರ ಬಂದ ಜನಗಳೆಲ್ಲ ಹೋದಮೇಲೆ, ಕುಳಿತ ಕುರ್ಚಿಯನ್ನು ಮಗ್ಗುಲಿಗೆ ಸರಿಸಿ, ಶಿವಪ್ಪನವರನ್ನು ಗುಪ್ತಾಲೋಚನೆಗೆ ಕರೆಯುವಂತೆ ಕರೆದು "ಇಗೊಳ್ಳಿ" ಎಂದು ಆದಮ್ ಸಾಹೇಬರಿಂದ ನೂರು ರೂಪಾಯಿಗಳ ನೋಟನ್ನು ಅವರ ಕೈಮೇಲೆ ಹಾಕಿಸಿದರು. "ನಿಮ್ಮ ಮೆಹನತ್ತಿಗೆ ಇದು ಕಡಿಮೆಯೇ! ಆದರೂ ಇರಲಿ. ನಿಮ್ಮದು ಬಿಟ್ಟಿ ಸೇವೆ ಆಗಬಾರದಲ್ಲ" ಎಂದರು.

ಆ ಬೆನ್ನಿಗೆ "ನಿಮ್ಮಿಂದೊಂದು ಉಪಕಾರವಾಗಬೇಕಿತ್ತಲ್ಲ" ಎಂಬ ವಿನಂತಿಯೂ ಬಂದಿತು. "ಏನಪ್ಪ" ಎಂದು ಶಿವಪ್ಪನವರು ವಿಸ್ಮಯ ತಾಳಬೇಕಾಯಿತು. "ನಿಮಗೆಲ್ಲಾ ಸಂಗತಿಗಳು ತಿಳಿದಿವೆಯೆಂದು ನಮಗೆ ಗೊತ್ತು. ನಾವು ಒಂದು ತಪ್ಪು ಕೆಲಸಮಾಡಿದೆವೆಂದು ಈಗ ಗೊತ್ತಾಗಿದೆ. ಯಾರಿಂದಲೋ ಏನೋ, ಆ ಹಾಳು ಸುದ್ದಿ ಊರ ಜನಗಳ ಕಿವಿಗೂ ಮುಟ್ಟಿದೆ." ಎಂದು, ಒಂದು ಪುಟ್ಟ ಅರಿವೆಯ ಗಂಟನ್ನು ಅವರ ಮೇಜಿನ ಮೇಲಿರಿಸಿ "ನಿಮ್ಮಿಂದಿಷ್ಟು ಉಪಕಾರವಾಗಬೇಕು–ಅದನ್ನು ಅವಳಿಗೆ ಮುಟ್ಟಿಸಬೇಕು. ಜನ ಹೇಳುವಮಾತು ಸುಳ್ಳು ಅನ್ನಿಸಬೇಕು" ಅಂದರು.

"ತಿಳಿಯಿತಲ್ಲ" ಎಂದು ಮತ್ತೂ ಮತ್ತೂ ಅದನ್ನೇ ಹೇಳತೊಡಗಿದರು. ಶಿವಪ್ಪನವರಿಗೆ ಗುಲಾಬಿಯ ಮನೆಯಲ್ಲಾದ ಪ್ರಕರಣ ಹೊಳೆದು, ವೆಂಕಟುವಿನಿಂದ ಇಷ್ಟು ಕೆಲಸವಾಗಿರಬೇಕೆಂದು ತೋರಿ "ಗುಲಾಬಿಯ ಮನೆಯಿಂದ ಕೊಂಡು ಹೋದದ್ದೇ?" ಎಂದು ಕೇಳಿದರು.

"ಹೌದು, ಆ ರಿಕಾರ್ಡು, ಗಿಕಾರ್ಡುಗಳು ನಮ್ಮಲ್ಲಿಗೇ ಸೇರಿವೆವು.

ಅವಳದ್ದಲ್ಲ. ಈ ಚಿನ್ನವನ್ನು ಮಾತ್ರ ತರಬಾರದಿತ್ತು. ನಮ್ಮಿಂದ ಸ್ವಲ್ಪ ಮಗರೂರಿಯಾಯಿತು. ತಪ್ಪಾಯಿತು. ನೀವು ಅದನ್ನು ಸುಧಾರಿಸಿ ಕೊಡಬೇಕು."

"ಅದನ್ನು ನೀವೇ ಕೊಂಡುಹೋಗಿ ಕೊಟ್ಟರೆ ಚಂದವಲ್ಲವೆ? ನಾನೇಕೆ ಆ ನಡುವೆ?"

"ನಿಮಗೆ ಗೊತ್ತಲ್ಲ ಅವಳು."

"ಗೊತ್ತು. ಆದರೂ ನೀವಿದ್ದು ಕೊಡುವುದೇ ಚಂದ. ಜತೆಗೆ ಬೇಕಾದರೆ ನಾನೂ ಬರುತ್ತೇನೆ" ಎಂದು ಅನುಮಾನಿಸುತ್ತಿದ್ದ ಅವರನ್ನು ಕರೆದುಕೊಂಡು ಅಲ್ಲಿಗೆ ಹೊರಟರು. "ಕೊಟ್ಟಿಲ್ಲ ಎಂದ ಕಾಲಕ್ಕೆ ನಾನು ಸಾಕ್ಷಿಗೆ ಇದ್ದೇನಲ್ಲ" ಎಂದು ಹೇಳುತ್ತ ಮುಂದುವರಿದರು.

ಮಾವ ವೀರ ಸಾಹೇಬರು ಮಾತ್ರ ಅವರ ಜತೆಗೆ ಹೊರಟರು. ಅಳಿಯ ಆದಮ್ ಹೋಗುವುದಕ್ಕೆ ಇಷ್ಟಪಡಲಿಲ್ಲ. ಅದರಿಂದಾಗಿ ದೊರಕಿದ್ದೂ ನಷ್ಟವಾಗಬಾರದೆಂದು ಶಿವಪ್ಪನವರು ಅವರೊಬ್ಬರನ್ನೇ ಕರೆದುಕೊಂಡು ಗುಲಾಬಿಯ ಮನೆಗೆ ಹೋದರು. ಅವಳನ್ನು ಕರೆದು ಹೇಳುವುದನ್ನೆಲ್ಲ ಹೇಳಿ 'ಎಲ್ಲ ಸಮನಾಗಿದೆಯೇ ನೋಡಿಕೊ?" ಎಂದರು. ಆಕೆ ಗಂಟನ್ನು ಬಿಡಿಸಿ ಸಂತೋಷಗೊಂಡು "ನಿಮ್ಮ ಉಪಕಾರ ಡಾಕ್ಟರರೇ" ಎಂದು ವಿನಯದಿಂದ ನುಡಿದಳು.

"ನನ್ನ ಉಪಕಾರವೇನಿಲ್ಲ. ಅವರಾಗಿ ತಂದದ್ದು. ಏನೋ ತಪ್ಪುಗ್ರಹಿಕೆಯಿಂದ ಕೊಂಡುಹೋಗಿದ್ದರು" ಎಂದು ವೀರ ಸಾಹೇಬರನ್ನು ಒಂದಿಷ್ಟು ಹೊಗಳಿ, ಅಲ್ಲಿಂದ ಹೊರಟುಹೋದರು. ಅದಕ್ಕೆ ಕಾರಣ ಯಾರೇ ಇರಲಿ, ಗುಲಾಬಿಗೆ ಬಂದೊದಗಿದ ಒಂದು ನಷ್ಟವು ಹೀಗೆ ಪರಿಹಾರವಾದ ಬಗ್ಗೆ ಶಿವಪ್ಪನವರಿಗೆ ತುಂಬ ಸಂತೋಷವಾಯಿತು.

ಮರುದಿನ ಬೆಳಗ್ಗೆ ಗುಲಾಬಿಯು ಡಾಕ್ಟರರನ್ನು ಅರಸಿಕೊಂಡು ಬಂದಿದ್ದಾಳೆ. ಅವರು ಹಾಸುಗೆಯಿಂದೇಳುವ ಮೊದಲೇ ಬಂದು, ಕಿಟ್ಟಪ್ಪ ಮಾಸ್ತರರನ್ನು "ಡಾಕ್ಟರರು ಇಲ್ಲವೆ?" ಎಂದು ಕೇಳಿಯೂ ಆಯಿತು.

ಅವಳ ಮುಖದ ಮೇಲಿನ ಆತುರ ಕಂಡ ಕಿಟ್ಟಪ್ಪನವರು "ಅವರು ಮಲಗಿದ್ದಾರಲ್ಲ. ಸ್ವಲ್ಪ ಕುಳಿತುಕೋ. ಏನಷ್ಟು ಗಾಬರಿಯಿಂದ ಬಂದೆ? ಮಗು ಹುಷಾರಿಲ್ಲವೆ, ನೀನು ಹುಷಾರಿಲ್ಲವೆ?" ಎಂದು ಕೇಳಿದರು. ಮರುಗಳಿಗೆಗೆ, ಹಾಗೆಂದೂ ಆಕೆ ತನ್ನ ಮನೆಬಿಟ್ಟು ತಮ್ಮ ಮನೆಗೆ ಬಂದವಳಲ್ಲವಲ್ಲ, ಎಂಬುದು ಹೊಳೆಯಿತು. ಆಕೆ ಬಂದುದನ್ನು ಕಂಡು ಸೋಜಿಗವೂ ಆಯಿತು.

ಆದುದರಿಂದ ಆಗಷ್ಟೆ ಕಣ್ಣು ತೆರೆಯುತ್ತಿರುವ ಮಗನ ಬಳಿಗೆ ಹೋಗಿ "ಶಿವೂ, ಯಾರೋ ಬಂದಿದ್ದಾರೆ" ಎಂದು ಹೇಳಿದರು.

"ಯಾರು? ಬರುತ್ತೇನೆ" ಎಂದು ಶಿವಪ್ಪನವರು ಅವಸರವಾಗಿ ಬಚ್ಚಲ ಮನೆಗೆ ಹೋಗಿ ಬಂದಾಗ, ಆಕೆಯನ್ನು ಕಂಡು "ನೀನೇಕೆ ಬಂದೆ? ಮಗುವಿಗೇನಾದರೂ . . . . . ?" ಎಂದು ಪ್ರಶ್ನಿಸಿದರು.

"ಮಗುವಿಗೇನಾಗಿಲ್ಲ, ಚೆನ್ನಾಗಿದೆ. ನಿನ್ನೆ ನೀವು ತರಿಸಿಕೊಟ್ಟಿರಲ್ಲ– ನನ್ನ ಚಿನ್ನ. ರಾತ್ರೆ ಅದನ್ನಿರಿಸಿಕೊಂಡು ಒಂದು ಕ್ಷಣವೂ ನನಗೆ ನಿದ್ದೆ ಹತ್ತಲಿಲ್ಲ. ಹಾಳು ಹೆದರಿಕೆಯಿಂದ ಕಂಗಾಲು. ಅದನ್ನು ತಂದಿದ್ದೇನೆ. ನಿಮ್ಮಲ್ಲಿರಲಿ. ನಾನು ಮನೆಯಲ್ಲೊಬ್ಬಳೇ ಆಗಿರುವಾಗ, ಯಾವ ಧೈರ್ಯದಿಂದ ಅದನ್ನಿರಿಸಿ ಕೊಳ್ಳುವುದು? ಒಂದು ಸಾರಿ ಆದ ಹಾಗೆ ಇನ್ನೊಂದು ಸಾರಿಯೂ ಆದರೆ!" ಎಂದು ತಾನು ತಂದ ಆಭರಣಗಳ ಕಟ್ಟನ್ನು ಅವರಿಗೆ ಕೊಡುವುದಕ್ಕೆ ಹೋದಳು.

"ನಾನದನ್ನು ಎಲ್ಲಿರಿಸಿಕೊಳ್ಳಬೇಕೆನ್ನುತ್ತೀಯಾ? ನಮ್ಮ ಮನೆ ನಿನ್ನದಕ್ಕಿಂತ ಚಿಕ್ಕದು. ಇಷ್ಟರೊಳಗೆ ಯಾಕೆ ಅವಸರ ಮಾಡಬೇಕಿತ್ತು? ಬೆಳಗು ಮೂಡುವುದರೊಳಗಾಗಿ ಓಡಿಬಂದೂ ಆಯಿತು" ಎಂದು ಅದನ್ನು ಕೈಯಲ್ಲಿ ಹಿಡಿದುಕೊಂಡು, ಅವರೂ ಯೋಚಿಸುತ್ತ ನಿಂತರು. ಅವಳ ಬೆದರಿಕೆ ಅವರಿಗರ್ಥವಾಗುತಿತ್ತು. ತನ್ನಲ್ಲಿಷ್ಟು ನಂಬಿಕೆ ಇರಿಸಿದ ಬಗ್ಗೆ ಸಂತೋಷವೂ ಆಯಿತು. ತಂದೆಯನ್ನು ಕರೆದರು; ನಡೆದ ಚಿನ್ನದ ಪ್ರಕರಣವನ್ನು ಚುಟುಕಿನಲ್ಲಿ ಹೇಳಿ ಮುಗಿಸಿದರು. ಅನಂತರ "ಇದನ್ನು ನಾನಾದರೂ ಎಲ್ಲಿ ಇರಿಸಲಿ?" ಎಂದು ಕೇಳಿದರು.

"ಈಗ ಅಷ್ಟೆಲ್ಲ ಸಂಗತಿಯಾಯಿತೋ? ಚಮತ್ಕಾರ ಈ ಲೋಕ! ಆ ಚಿನ್ನ ಇರಿಸಿಕೊಳ್ಳಬೇಕಾದರೆ ಇರಿಸಿಕೊಳ್ಳುವುದಂತೆ. ಮನೆಯಲ್ಲಿ ನಿನ್ನ ಹೆಂಡತಿಯ ಚಿನ್ನವನ್ನು ಇರಿಸಿಕೊಂಡಿಲ್ಲವೆ? ಇದೂ ಬಿದ್ದಿರುತ್ತದೆ ಅದರ ಜತೆಯಲ್ಲಿ" ಎಂದರು ಮಾಸ್ತರರು. ಮನಸ್ಸಿನಲ್ಲಿ 'ಕದ್ದು ಹೋದರೇನುಗತಿ' ಎಂಬ ಯೋಚನೆಯೂ ಹೊಳೆಯಿತು. "ಕಳೆದುಗಿಳಿದು ಹೋದರೆ ನಾವು ಜವಾಬ್ದಾರರಲ್ಲ" ಎಂಬ ಲೌಕಿಕದ ಎಚ್ಚರವನ್ನೂ ಹೇಳಿದರು.

ಆಕೆ ಅದಕ್ಕೆ "ಕಳೆದು ಹೋದರೆ ನಾನು ಹೆದರುವುದಿಲ್ಲ. ನಿಮ್ಮದೂ ಹೋದೀತು, ನನ್ನದೂ ಹೋದೀತು. ಅಷ್ಟೇ ಅಲ್ಲವೆ? ನನ್ನ ಮನೆಯಲ್ಲಿದ್ದರೆ

ಚಿನ್ನದ ಜತೆಗೆ ನನ್ನ ಜೀವವನ್ನೂ ತೆಗೆದಾರು ಎಂದು ಹೆದರಿ ತಂದೆ" ಎಂದಳು.

"ಅಂಥ ಹೆದರಿಕೆಯೆ?-ನಿನಗೆ ಮರುಳು" ಎಂದು ಶಿವಪ್ಪನವರು ಅವಳಿಗೆ ಸಮಾಧಾನ ಹೇಳಿ, ಚಿನ್ನವನ್ನು ಒಳಕ್ಕೆ ಕೊಂಡುಹೋಗುತ್ತ "ಮಗು ಚೆನ್ನಾಗಿದೆಯಲ್ಲ" ಎಂದು ಉಪಚರಿಸಿ, ಅವಳನ್ನು ಕಳುಹಿಸಿಕೊಟ್ಟು, ತಮ್ಮ ಸ್ನಾನಕ್ಕೆ ಹೋದರು.

---

## ಅಧ್ಯಾಯ ೬.

ಎರಡನೆಯ ಮಹಾಯುದ್ಧವು ಪ್ರಾರಂಭವಾಗುತ್ತಲೆ, ಸುದ್ದಿ ಕೇಳಲು ಕುತೂಹಲಗೊಳ್ಳುತ್ತಿದ್ದ ಕಿವಿಗಳಿಗೆ ಸಾಕಷ್ಟು ಆಹಾರ ದೊರೆಯತೊಡಗಿತು. ಅನೇಕ ಜೀವಿಗಳ ಪಾಲಿಗೆ ಸುದ್ದಿಯಿಂದ ದೊರೆಯುವ ಸಂತೋಷ, ಇನ್ನೇತರಿಂದಲೂ ಸಿಗಲಾರದು. ಜೀವನದಲ್ಲಿಯ ತಮ್ಮ ಬರಡುತನ, ಅಪೌರುಷ, ಅಸೂಯೆ, ವ್ಯಥೆಗಳಿಗೆ ಅದು ತಕ್ಕ ಪರಿಹಾರವನ್ನೊದಗಿಸುತ್ತದೆ. ಯಾವ ಊರಲ್ಲಿ ಯಾರು ಬಡಿದಾಡಿದರೂ ಸಾಕಾಗುತ್ತದೆ-ಕಿವಿ ನಿಮಿರಿಸಿ, ನಾಲಿಗೆ ಚಪ್ಪರಿಸುವುದಕ್ಕೆ. ದೂರದ ಸುದ್ದಿಗಳಿಗೆ ಸಮೀಪದ ವಾರ್ತೆಗಳ ಮೋಹಕತೆ ಇಲ್ಲ. ಸುದ್ದಿಗೆ ಗುರಿಯಾದ ವ್ಯಕ್ತಿಗಳು, ಸಂದರ್ಭಗಳು, ಪರಿಚಿತವಾದಷ್ಟು ಸುದ್ದಿಯ ಸವಿ ಹೆಚ್ಚು. ಕಾಳೂರವರಿಗೆ 'ಸಾಹೇಬರ ಮರಣ'ಒಂದು ವಾರಕ್ಕೆ ಸಾಕಷ್ಟು ಆಹಾರವನ್ನೊದಗಿಸಿತ್ತು. ಅವರ ಮಕ್ಕಳ ಖಾಡಾಖಾಡಿ ತಿಂಗಳು, ವರ್ಷ ನಡೆದಲ್ಲಿ ಇನ್ನಷ್ಟು ಸಂತೋಷವಾಗುತ್ತಿತ್ತು. ಅವರ ಮಗ ಆದಮ್ ಬಹು ಪ್ರತಾಪಶಾಲಿ;ಊರಿಗೆ ಹೊಸಬ. ಲಕ್ಷಾಂತರ ರೂಪಾಯಿ ಗಳಿಸಿದ್ದಾನೆ –ಎಂದಮೇಲೆ ಪರಿಚಯವಿಲ್ಲದೆಯೂ ಅವನ ಪಕ್ಷವಹಿಸುವವರು ಎಷ್ಟೋ ಮಂದಿ. ತಂದೆ ಸಾಯುವ ಮೊದಲೇ ಅಣ್ಣತಮ್ಮಂದಿರು ಕಾದಾಡತೊಡಗಿದರು ಎಂದಾಗ— ಎಷ್ಟು ಹರ್ಷವಾಗಿತ್ತೋ, ಅಷ್ಟು ಹರ್ಷ ಅವರೆಲ್ಲರು ರಾಜಿಯಾಗಿ, ತಮ್ಮ ವಿವಾದ ತೀರಿಸಿಕೊಂಡರು-ಎಂದಾಗ ಆಗಲಿಲ್ಲ. ಅವರಲ್ಲಿ ಹೂತಿಟ್ಟ ಹಣವಿರಲಿಲ್ಲ ಎಂಬ ಸುದ್ದಿಯನ್ನು ಕೇಳಿದಾಗ, (ಅದು ಇದ್ದರೆ ತಮಗೆನೇ ಸಿಗಲಿ, ಇನ್ನೊಬ್ಬರಿಗೆ ಸಿಗಲಿ) ತೀರ ಸಪ್ಪೆಯಾದ ಅಡುಗೆಯ ಮಟ್ಟಕ್ಕಿಳಿಯಿತು.

ಅನಂತರ ನಾಲ್ಕು ದಿನ ಕಾಲ— ಆಧಮ್ ಸಾಹೇಬರು ಇವತ್ತೋ ನಾಳೆಯೋ ಕೊಲಂಬೋವಿಗೆ ಹೋಗುತ್ತಾರೆ— ಎಂದು ನಿರೀಕ್ಷಿಸಿದವರು, ಹೋಗದುದನ್ನು ಕಂಡಮೇಲೆ "ಕೊಲಂಬೋವಿನ ಅಂಗಡಿ, ಅರಮನೆಗಳೆಲ್ಲ ಬರಿಯ ಸುಳ್ಳೇ. ಅಲ್ಲ, ಮದುವೆಯಾಗಿದೆಯಂತೆ, ಮಕ್ಕಳು ಮರಿಗಳಿದ್ದಾರಂತೆ. ತಿರುಗಿಹೋಗುವುದಿಲ್ಲವೆಂದರೇನರ್ಥ!" ಎಂದು ಅವರ ಮಡದಿ ಮಕ್ಕಳ ಸಲುವಾಗಿ ಮರುಕ ತಾಳುವುದೂ ಒಂದು ತಮಾಷೆಯೇ. ಕಟ್ಟಕಡೆಗೆ 'ಅಂಥವರಿಗೇನಯ್ಯ? ನಾಲ್ಕು ಊರುಗಳಲ್ಲಿ ನಾಲ್ಕು ಹೆಂಡಂದಿರಿರಬಹುದು.

ಇಲ್ಲಿಯೂ ಇನ್ನೊಂದು ಮದುವೆಯಾದಾರು. ಅಥವಾ ಕುಲದ ಮರ್ಯಾದೆಗೆ ಲೋಪಬಾರದ ಹಾಗೆ, ಯಾರನ್ನಾದರೂ ಕುಮಟೆಯಿಂದಲೋ, ಅಂಕೋಲೆ ಯಿಂದಲೋ, ಕಾರವಾರದಿಂದಲೋ ಕರೆಸಿಕೊಂಡು,ಬಂಗಲೆಯನ್ನು ಕಟ್ಟಿಸಿ ಕೊಟ್ಟಾರು' ಎಂದು ಮರುಕವನ್ನು ಮರೆತು ಅಪಹಾಸ್ಯಮಾಡಿದರು. ಇನ್ನೂ ನಾಲ್ಕುದಿನಗಳು ಕಳೆದ ಮೇಲೆ "ನಿಮಗೆ ಕೆಲಸವಿಲ್ಲ. ಕೊಲಂಬೋದಲ್ಲಿ ಹೆಂಡತಿ, ಮನೆ, ಅಂಗಡಿ, ಭೂಮಿ ಇರುತ್ತಿದ್ದರೆ ಹೋಗುತ್ತಿರಲಿಲ್ಲವೆ? ಅವೆಲ್ಲ ಸೋದರ ಮಾವ ಮೀರ ಸಾಹೇಬರು ಹಾಕಿದ ಥಮಾಮಿ. ಅವರು ಈಗಾಗಲೆ ಯಲ್ಲಾಪುರದಲ್ಲಿ ಕಾಡಿನ ಕಂಟ್ರಾಕ್ಟು ಹಿಡಿದಿದ್ದಾರಂತೆ. ಹ್ಯಾಗೂ ಯುದ್ಧ ತೊಡಗಿದೆ. ದುಡ್ಡಿದ್ದವರಿಗೆ ಕುಳಿತಲ್ಲಿ ಕಿಫಾಯತಿಯ ದಾರಿ ಸಿಕ್ಕಿಯೇ ಸಿಗುತ್ತದೆ. ಸರಕಾರದವರಿಗೆ ಒಂದು ಡಮ್ಮು ಮರ ಬೇಕಂತೆ. ಅವರು ಈಗಾ ಗಲೇ ನಾಲ್ಕು ಲಾರಿಗಳಿಗೆ ಆರ್ಡರು ಕೊಟ್ಟಿದ್ದಾರಂತೆ. ಕೂಲಿಗೆ ಕೆಲಸ ದವರನ್ನು ಹುಡುಕುವುದಕ್ಕೆ ವೆಂಕಟು ತೊಡಗಿಯೂ ಆಯಿತು" ಎಂದೆನ್ನ ತೊಡಗಿದರು.

"ವೆಂಕಟುವೆ?" ಎಂದು ಅವರಲ್ಲೊಬ್ಬನಿಗೆ ವಿಸ್ಮಯ.

"ಹೌದು. ವೆಂಕಟು ಯಾಕೆ ಆಗಬಾರದು? ಇವತ್ತಿಗೆ ನಮ್ಮೂರಿನ ಆಳು ಮಕ್ಕಳಿಗೆ ಅವನೊಬ್ಬ ಗುರಿಕಾರನಲ್ಲವೆ? ಅವನು ಕೈಯಲ್ಲಿ ಚಿಟಿಕೆ ಹೊಡೆದರೆ ಸಾಕು–ನೂರು ಮಂದಿ ಕಾರ್ಮಿಯರು ಮೈ ಮೇಲೇ ಬಿದ್ದಾರು."

"ಹಾಗಲ್ಲ. ವೆಂಕಟು ಅಣ್ಣಂದಿರ ಪಕ್ಷ ಎಂದು ಕೇಳಿದ್ದೆ. ಕರಿಮ್ ಸಾಹೇಬರಿಗೂ ಅವನಿಗೂ ಅಷ್ಟು ಸ್ನೇಹ. ಅವನು ಎಂದೂ ಆದಮ್ ಸಾಹೇ ಬರ ಬಾಲವನ್ನು ಹಿಡಿಯುವವನಲ್ಲ." ಎಂದು ಆಕ್ಷೇಪಿಸಿದ್ದಕ್ಕೆ "ಹಾಗಿದ್ದರೆ ವೆಂಕಟುವಿರಲಾರದು. ಹುಲಿವೇಷ ಹಾಕುವ ಕೊಗ್ಗನಿರಬೇಕು" ಎಂಬ ತೀರ್ಮಾನಕ್ಕೆ ಬಂದರು.

ಇತ್ತ ಗುಲಾಬಿಯ ಮನೆಯಲ್ಲಿ ನಡೆದ ಪ್ರಸಂಗದ ಕತೆ ಯಾರ ಕಿವಿಗೂ ಬಿದ್ದಿರದು ಎಂದು ಅವಳೂ ತಿಳಿದಿದ್ದಳು, ಮೀರ ಸಾಹೇಬರೂ ತಿಳಿದಿದ್ದರು. ಆದರೆ ಸಂಗತಿ ನಡೆದು, ಪ್ರಕರಣ ಮುಗಿದು, ಎಲ್ಲವೂ ಥಂಡಿಯಾದ ಎರಡು ತಿಂಗಳ ಬಳಿಕ, ಒಬ್ಬರು ಶಿವಪ್ಪ ಡಾಕ್ಟರರ ಹತ್ತಿರವೇ ಬಂದು "ಅಹುದೇ ಡಾಕ್ಟರರೇ, ನಿಮ್ಮ ಗುಲಾಬಿ ಮನೆಯ ಚಿನ್ನ ಗಿನ್ನ ಮೊನ್ನೆ ಹೊತ್ತರಂತಲ್ಲ" ಎಂದು ಅಂದರು.ಅವರಾಡಿದ ಮೊದಲ ಮಾತಿನ ಅರ್ಥವು ವಿಪರೀತಕ್ಕಿಟ್ಟೀ

ತೆಂದು ತೋರಿ,ಆಡಿದ್ದನ್ನು ಅಳಿಸಲಾರದೆ,ಅದನ್ನು ವಿಷಯಾಂತರಕ್ಕೆ ಒಯ್ಯು ವುದು ಲೇಸೆಂದು ತೋರಿ "ಕಡೆಗೆ ನಮ್ಮ ಮದ್ದು ರಾಯರ ಸವಾರಿ ಮುಂಬ ಯಿಯಲ್ಲಿ ಕುದುರೆ ಜೂಜಿನಲ್ಲಿ ಹತ್ತು ಸಾವಿರ ರೂಪಾಯಿಗಳನ್ನು ಕಳೆದು ಕೊಂಡುದು ನಿಜವೇ?" ಎಂದು ಇನ್ನೆಲ್ಲಿಗೋ ಹೊರಳಿದರು.

ಅನೇಕ ವೇಳೆ ಔಷಧಕ್ಕೆ ಬಂದವರು, ಮಾತಿಗೆ ಬಂದವರು, ಡಾಕ್ಟರರ ಮುಂದೆ ಬೆಂಚಿನಲ್ಲಿ ಕುಳಿತು ಈ ತೆರನಾಗಿ ಹರಟೆ ಕೊಚ್ಚುವುದುಂಟು.ಅವರು ತಮ್ಮ ಕೆಲಸವನ್ನು ನಡೆಸುವಾಗ ಇವರಿಗೆ ಈ ಕೆಲಸ. ಎಷ್ಟೋ ಬಾರಿ ಕಂಪೌಂಡರ್ ಶೀನಪ್ಪನಿಗೆ ಬುದ್ಧಿಯೇ ಸ್ವಾಧೀನವಿರುವುದಿಲ್ಲ; ತರಬೇತಿ ಯೂ ಸಾಲದು. ಮದ್ದುಗಳನ್ನು ಸೇರಿಸುವಾಗ ಒಂದಕ್ಕೊಂದು ಮಾಡು ವುದುಂಟು. ತುಸು ಜಾಗ್ರತೆಯಿಂದ ಸೇರಿಸಬೇಕಾದ ಔಷಧಗಳಿದ್ದರೆ ಡಾಕ್ಟ ರರು ಶೀನಪ್ಪನ ಕೈಗೆ ಕೊಡುವುದೇ ಇಲ್ಲ. ಅವನ ವಿಷಯದಲ್ಲಿ ಅವರಿಗೆ ಹೆಚ್ಚಿನ ನಂಬಿಕೆಯೂ ಇಲ್ಲ. ಇಷ್ಟೇ ಕಾರಣ–ಅವನ ಧ್ಯಾನವೆಲ್ಲ ಔಷಧ, ರೋಗಿಗಳ ವಿಚಾರದಲ್ಲಿಇರುವುದಕ್ಕಿಂತ ಹೆಚ್ಚಾಗಿ, ಅರಳೆ ಧಾರಣೆಯ ಅಂಕೆ, ಸಂಖ್ಯೆಗಳ ಕಡೆಗೆ ಓಡಾಡುತ್ತಿರುತ್ತದೆ. ಕಾಳೂರಿನ ಜನಗಳ ವಿನೋದ, ಉತ್ಸಾಹಗಳಲ್ಲಿ ಅಂಕೆಯ ಮೇಲೆ ಸಟ್ಟಾ ಆಡುವ ಆಟವೂ ದಿನ ದಿನ ಬೆಳೆದು ಬರುತ್ತಿದೆ. ಅಂತಹವನ ಕೆಲಸದ ಮೇಲೆ ಶಿವಪ್ಪನವರು ವಿಶ್ವಾಸ ಇಡದವರಾಗಿದ್ದಾರೆ. ಬೇರೊಬ್ಬ ಸಿಗುತ್ತಲಿಲ್ಲ. ಅವರ ನಿತ್ಯ ಚಿಂತನೆಗಳಲ್ಲಿ 'ಒಬ್ಬ ಬುದ್ಧಿ ಸ್ವಾಧೀನವಿರುವ ಕಂಪೌಂಡರು, ಇನ್ನೊಬ್ಬ ಚುರುಕಿನ ಮಿಡ್ ವೈಫ್—ಇಬ್ಬರು ಸಿಕ್ಕಿದ್ದರೆ ನನ್ನ ತಾಪತ್ರಯ ಎಷ್ಟೋ ಕಡಿಮೆಯಾಗು ತ್ತಿತ್ತು." ಎಂದಿದೆ. ದೂರದ ನಗರಗಳಿಂದ ತರಬೇತಿಗೊಂಡ ಅಂಥವರನ್ನು ಕರೆಯಿಸುವುದಕ್ಕೆ ಅವರ ಬೇಡಿಕೆಗೆ ಸಮನಾದ ವೇತನವನ್ನು ತಮ್ಮಿಂದ ಕೊಡುವುದಾಗದೆಂದು ಗೊತ್ತಿತ್ತು.

ಇಂಥೆಲ್ಲ ಊರಿನ ಸುದ್ದಿಸೂರುಗಳ ಎಡೆಯಲ್ಲಿ ಮಹಾ ಯುದ್ಧದ ವಾರ್ತೆಯೂ ಸೇರಿಕೊಂಡು, ಊರ ಜನಕ್ಕೆ ಹೊಟ್ಟೆಗೆ ಆಹಾರ ಕಡಿಮೆ ಯಾದರೂ, ಕಿವಿಗೆ ಆಹಾರ ಕಡಿಮೆಯಾಗಲಿಲ್ಲ. ದಿನ ದಿನ ಪತ್ರಿಕೆ ತರಿಸಿ ಓದುತ್ತಾರೆ. ಯುದ್ಧದ ಜ್ವರವು ತಮಗೇ ಅಂಟಿದವರಂತೆ, ಕಾವು ಏರಿ ಮಾತ ನಾಡುತ್ತಾರೆ. ಮೊದಲಿನ ಎರಡು ವರ್ಷಗಳ ಕಾಲದಲ್ಲಿ ಎಲ್ಲರ ಮನಸ್ಸಿಗೂ ಅದೊಂದು 'ಕೋಳಿಯ ಅಂಕ'ವೆನಿಸಿತ್ತು. ತಾವು ದೂರದಲ್ಲಿ ಕುಳಿತು, ಲಾಭ

ನಷ್ಟಗಳ ಹೊಣೆಯಿಲ್ಲದೆ, ಕೇಳಿ, ಸಂತೋಷಗೊಳ್ಳಬಹುದಾದ ಪ್ರೇಕ್ಷಕ ವರ್ಗದವರು-ಎಂಬ ಮನೋಭಾವವು ಮೂಡಿತ್ತು. ಬರಿಯ ಕೆಲವರು ಮಾತ್ರ "ಕಬ್ಬಿಣ ಕಾದಿದೆ. ಕಾದಾಗಲೇ ಬೇಕಾದಂತೆ ಅದನ್ನು ಹಣಿಯಬಹುದು" ಎಂದು ಸಂದರ್ಭಸಾಧನೆಗೆ ತೊಡಗಿದ್ದರು. ಈ ವೇಳೆಯಲ್ಲಿಯೇ ಹಣ ಕೂಡಿಡುವ ಹೊಂಚಿನಲ್ಲಿ ಮಗ್ನರಾಗಿದ್ದರು. ಬಹು ಮಟ್ಟಿನ ಜನಸಮುದಾಯಕ್ಕೆ ಯುದ್ಧವೆಂಬುದು ಒಂದು ಪಂದ್ಯಾಟವೆನಿಸಿತ್ತು. ಹಿಟ್ಲರ್ ಆದರ್ಶ ಕಥಾನಾಯಕನಾಗಿದ್ದ. ಅವನ 'ಬ್ಲಿಟ್ಸ್' ನಾಡಿನ ಭಾಷೆಗೆ ಇದ್ದಕ್ಕಿದ್ದಂತೆಯೇ ಇಳಿಯಿತು. ಅನಂತರ ಒಂದೊಂದಾಗಿ–ಮೆಗ್ನೆಟಿಕ್‌ಮೈನ್, ಮೆಗಿನೊ ಲೈನ್, ಗೋರಿಂಗ್, ಗೋಬೆಲ್ಸ್ ಎಂಬ ಹಲವಾರು ಹೆಸರುಗಳು ಕಂಠಪಾಠವಾದುವು. ಇಂಗ್ಲೆಂಡಿನ ಚೆಂಬರ್‌ಲೇನನು ಬಯಲಾಟದ ಹನುಮನಾಯಕನಾದ. ಸೋತವರೆಲ್ಲರು ಕನಿಕರಕ್ಕೆ ಪಾತ್ರರಾಗುವ ಬದಲು ಹಾಸ್ಯಕ್ಕೆ ಗುರಿಯಾದರು; ಗೆದ್ದವರ ಪ್ರಶಂಸೆ ಗಗನಕ್ಕೇರಿತು. ಬ್ರಿಟನಿನ ಹಿಂದೆ ಭಾರತವೂ ಸೇರಬೇಕಾಯಿತು. ಅದರ ಕಾವು ಜನಕ್ಕೆ ಸ್ವಲ್ಪ ದಿನ ಹತ್ತಲಿಲ್ಲ. ಆಗಲೂ ಯುದ್ಧ ಲಾಭದಾಯಕ ಅವಕಾಶವೆಂದು ತಿಳಿಯತೊಡಗಿದವರು ಕೆಲವೇ ಮಂದಿ-ಮೊದಲನೆಯ ಮಹಾಯುದ್ಧದ ನೆನಪನ್ನಿರಿಸಿಕೊಂಡು ಈಗ ತ್ರಾಣ, ಉತ್ಸಾಹವುಳ್ಳವರು ಮಾತ್ರ. ಉಳಿದ ರೀತಿಗಳಿಂದ ಜನರು ಸಂತೋಷ ಪಡಬೇಕಾದುದೇನಿರಲಿಲ್ಲ. ಮನೆ, ಭೂಮಿ, ತೋಟಗಳ ಬೆಲೆಗಳು ಏರುವ ಬದಲು ಹಣದ ಬಿಗುವಿನಿಂದ ಇಳಿಯುವುದೇ ಕಾಣುತ್ತಿತ್ತು.

ಈ ಮುಗ್ಗಟ್ಟಿಗೆ ಬಲಿಯಾದ ಕಾಳೂರಿನ ಪ್ರಥಮ ಮನೆತನವೆಂದರೆ ಶ್ರೀಪತಿರಾಯರದ್ದು. ಸಾಹೇಬರಲ್ಲಿ ಹಿಸೆಯಾಗುವಾಗ, ಆ ಅಣ್ಣ ತಮ್ಮಂದಿರು ಕೂಡಿ ಶ್ರೀಪತಿರಾಯರ ಸಾಲವನ್ನು ಉಪಾಯವಾಗಿ ತಮ್ಮನ ಕೊರಳಿಗೆ ಕಟ್ಟಿದರು. ಊರಲ್ಲಿ ಹುಟ್ಟಿ ಬೆಳೆದ ತಾವು, ಊರವರೊಡನೆ ನಿಷ್ಠುರ ಕಟ್ಟಿಕೊಳ್ಳಬಾರದೆಂದು ಹಾಗೆಮಾಡಿದರು. ತಮ್ಮ ಆದಮ್, ಕಾಳೂರಿನ ವಿಚಾರದಲ್ಲಿ ದಾಕ್ಷಿಣ್ಯಪರನಾಗಬೇಕಿರಲಿಲ್ಲ. ಮನೆಯ ವಿವಾದ ಮುಗಿದು ತಮಗೆ ಹಕ್ಕು ಬಂದೊಡನೆಯೆ ಮಾವಂದಿರಾದ ಮೀರ ಸಾಹೇಬರನ್ನು ಕಟ್ಟಿಕೊಂಡು ಶ್ರೀಪತಿರಾಯರಲ್ಲಿಗೆ ಹೋದರು. ಅವರಿಗೆ ಆದರದ ಸ್ವಾಗತದೊರೆಯಿತು. "ಬನ್ನಿ, ಬನ್ನಿ ನಮ್ಮ ಸಣ್ಣ ಸಾಹೇಬರು ಈ ವರೆಗೂ ನಮ್ಮ ಮನೆಗೆ ಬಂದಿಲ್ಲ, ಅಲ್ಲವೆ?" ಎಂದು ಕರೆದು ಕುಳ್ಳಿರಿಸಿದರು. ಎಳನೀರು ಬಂದಿತು; ತಾಂಬೂಲ

ಬಂದಿತು. ಅನಂತರ ಸ್ವಪ್ರತಿಷ್ಠೆಗೆ ಸಮಸಾಗಿ ಮಾತು ತೊಡಗಿತ್ತು; "ಪಾಲಿನ ವ್ಯವಹಾರ ಎಲ್ಲವೂ ಚಂದವಾಗಿಯೇ ಮುಗಿಯಿತಂತಲ್ಲ? ನಾನು ಕಾಸೀಮ್ ಸಾಹೇಬರಿಗೂ ನಮ್ಮ ಕರೀಮ್ ಸಾಹೇಬರಿಗೂ ಕರೆದು ಹೇಳಿದ್ದೆ — ಅಣ್ಣ ತಮ್ಮಂದಿರು ನೀವು. ಹೊರಗಿನವರಿಗೆ ಅಸಹ್ಯವಾಗಿ ಕಾಣುವಂತೆ ಜಗಳಾಡು ವುದು ಸಮನಲ್ಲ. ಏಷ್ಟಿದ್ದರೂ ನಿಮ್ಮ ನಿಮ್ಮ ಗುಟ್ಟು ನಿಮ್ಮಲ್ಲೇ ಇರಬೇಕು; ನಿಮ್ಮ ವಿವಾದ ರಾಜಿಯಿಂದಲೇ ತೀರಬೇಕು ಎಂದಿದ್ದೆ"–ಹೀಗೆ ತಾವು ವಹಿ ಸಿರಬಹುದಾದ ಶ್ರಮವನ್ನು ಕುರಿತು ತುಸು ಕೊಚ್ಚಿಕೊಂಡರು. ಅನಂತರ ಉಪಚಾರಕ್ಕೆಂದು "ನಿಮ್ಮ ಮಾವ, ನಮ್ಮ ವೀರ ಸಾಹೇಬರು ನಮ್ಮೂರಿಗೆ ಬಂದು ಮೂರು ತಿಂಗಳ ಮೇಲಾಯಿತಲ್ಲವೆ? ಪಾಪ! ಅವರ ಊರಲ್ಲಿ ಎಷ್ಟು ಕೆಲಸವಿತ್ತೋ, ಏನು ಕತೆಯೋ? ಎಲ್ಲವನ್ನು ಬಿಟ್ಟು ಕಾಳೂರಿಗೆ ಓಡಿಬಂ ದರು. ಅಳಿಯನ ಹಿಸೆಗೆ ಮೋಸವಾಗಬಾರದೆಂದು ಪೇಚಾಡಿದರು....ಆದರೆ ಅಷ್ಟು ಹೆದರಿಕೆ ಇರಬೇಕಿರಲಿಲ್ಲ. ಕಾಸೀಮ್ ಸಾಹೇಬರಾಗಲಿ, ಕರೀಮ್ ಸಾಹೇಬರೇ ಆಗಲಿ, ನಮ್ಮಂಥವರು ಹೇಳಿದರೆ ತಪ್ಪಿ ನಡೆಯುವವರಲ್ಲ. ಮುಖ್ಯ ನೋಡಿ, ಮನೆತನದ ಗೌರವ ಉಳಿಸಿಕೊಂಡು ಹೋಗಬೇಕಾದದ್ದು ದೊಡ್ಡ ಕೆಲಸ. ಮುಕಾದಮ್ ಸಾಹೇಬರೆಂದರೆ ನಮ್ಮ ಊರಿಗೆ ಅಕ್ಬರ್ ಬಾದಶಹಾ ಇದ್ದಹಾಗಿದ್ದರು." ಎಂದು ಬಾಯಿತುಂಬ ಹೊಗಳಿದರು.

ಇಂತಹ ಮಾತುಗಳನ್ನು ಕೇಳಿ ಮಾವ ಅಳಿಯಂದಿರಿಬ್ಬರಿಗೂ ಹಿಗ್ಗು ಉಂಟಾಯಿತು. ಇಬ್ಬರಿಗೂ ಹೊಗಳಿಕೆ ಬೇಕು. ಆದನ್ನು ಕೇಳಿ ಆನಂದ ವಾಗುವುದೂ ಸರಿಯೆ. ಅಷ್ಟರಿಂದ ಬಂದ ಕೆಲಸವನ್ನು ಮರೆಯುವಷ್ಟು ಹೆಡ್ಡರಲ್ಲ. ತಮ್ಮ ಮಾತಿನಲ್ಲಿ ವೀರ ಸಾಹೇಬರು ಅಳಿಯನೊಡನೆ 'ಹೇಳು, ಹೊತ್ತಾಯಿತು, ಹೇಳು" ಅನ್ನುತ್ತಲೇ ಇದ್ದರು. ಶ್ರೀಪತಿ ರಾಯರ ಕಿವಿಗೆ ಅದು "ಏಳು, ಹೊತ್ತಾಯಿತು, ಏಳು" ಅಂದಹಾಗೆ ಕೇಳಿಸುತಿತ್ತು. ಆದಮ್ ಸಾಹೇಬರು ಅಷ್ಟೊಂದು ನಯ ನಾಜೂಕನ್ನು ಬೆಳೆಯಿಸಿದವರಲ್ಲ. ಈ ಎರಡು ಮನೆಗಳೊಳಗೆ ಹಿಂದಿನಿಂದಲೂ ನಡೆದು ಬಂದ ಸ್ನೇಹ, ಶಿಷ್ಟಾಚಾರವನ್ನೂ ಬಲ್ಲವರಲ್ಲ. ಅವರು ತಾವು ಮರೆತ ಹಳೆಗನ್ನಡವನ್ನು ಹೊಸತಾಗಿ ಮಾಡಿ, "ಅದು ನಿಮ್ಮದು ನಮಗೆ ಕೊಡುವುದುಂಟಲ್ಲವೊ. . . . . ಹಣ, ಇಪ್ಪತ್ತು ಸಾವಿರ ಬಾಕಿ, ಅದು ನಮ್ಮ ಪಾಲಿಗೆ ಬಂದಿದೆ. ಆ ಮೇಲೆ ಬಡ್ಡಿ ಹಣ ಹೆಚ್ಚು ವರ್ಷ ಬಾಕಿಯಿದೆ. ಅದೆಲ್ಲಾ ಐವೆಜು ನಮಗೆ ಉಸೂಲಿ ಬರಬೇಕು. ನಮಗೆ

ಗರ್ಜಿ ಉಂಟು." ಎಂದರು.

ಶ್ರೀಪತಿರಾಯರು ಆ ಮಾತು ಕೇಳುತ್ತಲೇ ಸ್ತಂಭಿತರಾದರು. ಅವರು 'ನಮ್ಮ ಸಾಲದ ಹೊರೆಯನ್ನು ನಿಮ್ಮ ಪಾಲಿಗೇನೆ ಹಾಕಿಕೊಳ್ಳಿ' ಎಂದು, ಕಾಸೀಮ್, ಕರೀಮರಿಬ್ಬರನ್ನೂ ಕೇಳಿಕೊಂಡಿದ್ದರು. ಅವರು 'ಅದಾಗದು' ಎಂದಿಲ್ಲ. 'ತಮ್ಮನು ಇತರ ಸಾಲವಹಿಸಿಕೊಳ್ಳುವುದಾದರೆ ಹಾಗೆಮಾಡುವ' ಎಂದಿದ್ದರು. ಅದಕ್ಕೆ ವ್ಯತಿರಿಕ್ತವಾಗಿ,ಏನೊಂದೂ ಮರ್ಜಿತಿಳಿಯದ ಆದಮ್ ಸಾಹೇಬರ ಬಾಯಿಗೇ ತಾವು ತುತ್ತಾಗುತ್ತೇವೆಂದು-ರಾಯರು ತಿಳಿದಿರಲಿಲ್ಲ.

ಹುಬ್ಬು ಒಂದುಗೂಡಿಸಿ, ಗಲ್ಲಕ್ಕೆ ಕೈಕೊಟ್ಟು, ಯೋಚಿಸಿ, "ಅದು ನಿಮ್ಮ ಪಾಲಿಗೆ ಬಂದಿದೆಯೆ?" ಎಂದು ತಿರುತಿರುಗಿ ವಿಚಾರಿಸುವುದರೊಳಗೆ, ಮೀರ ಸಾಹೇಬರು ತಾವು ಅಳಿಯನಿಗಿಂತ ನಾಜೂಕಾಗಿ ಮಾತನಾಡಲು ಬಯಸಿ, ಬಾಯ ತಂಬುಲ ಉಗಿಯಲು ಆಚೀಚೆ ಕಣ್ಣು ಹೊರಳಿಸಿ, ಪೀಕದಾನಿಯನ್ನು ಕಾಣಲಾರದೆ, ಅವಸರದಿಂದ ಅಂಗಳಕ್ಕಿಳಿದು ಹೋಗಿ, ಎದುರಿನ ಕಟ್ಟೆಯ ತೆಂಗಿನಮರದ ಮೇಲೆ ಚಿರ್ರನೆ ತುಪ್ಪಿ, ಮರಕ್ಕೊಂದು ಕೆಂಪು ನಾಮ ಹಾಕಿಬಂದರು. ತುಟಿಯ ಆಚೀಚೆ ಇಳಿದ ಕೆಂಪು ಜೊಲ್ಲನ್ನು ಕೈಯಿಂದ ಸವರಿಕೊಂಡು "ಅಂದರೆ-ಸಿರಿಪತಿರಾಯರೆ, ಸಂಗತಿ ಮತ್ತೇನಿಲ್ಲ. ನಮ್ಮ ಅಳಿಯಂದಿರು ಕೊಲಂಬೊ ಬಿಟ್ಟು ಇಲ್ಲಿ ವ್ಯಾಪಾರ, ಕಂಟ್ರಾಕ್ಟು ಮಾಡುವುದೆಂದು ಮಾಡಿದ್ದಾರೆ. ಯಲ್ಲಾಪುರದಲ್ಲಿ ಕಾಡಿನ ಕಂಟ್ರಾಕ್ಟು ಹಿಡಿದಾಯಿತು. ದೇವಿಮನೆಯ ಹತ್ತಿರ ಇನ್ನೊಂದು ಹಿಡಿದಾಯಿತು. ಮೊನ್ನೆಯಷ್ಟೇ ಹುಬ್ಬಳ್ಳಿಗೆ ಹೋಗಿ, ನಾಲ್ಕುಲಾರಿಗಳಿಗೆ ಆರ್ಡರ್ ಕೊಟ್ಟು ಬಂದಿದೆ. ಈಗ ನೋಡಿ ಯುದ್ಧ ಶುರುವಾದ್ದರಿಂದ ಲಾರಿ ಅಂದರೆ ಹಣ. ದಿನಕ್ಕೆನಾಲ್ಕು ಟ್ರಿಪ್ ಹೊಡೆದರೆ ನಾನ್ನೂರು ರೂಪಾಯಿಯುಂಟು. ಎಂಟು ಹೊಡೆದರೆ ಎಂಟ್ನೂರೇ. ಅಲ್ಲದೆ ನೋಡಿ–ಸರಕಾರಿ ಕಂಟ್ರಾಕ್ಟ್ ಆದ್ದರಿಂದ ಪೆಟ್ರೋಲು, ಗಿಟ್ರೋಲು ಏನೂ ತಕಲೀಫ್ ಇಲ್ಲದೆಯೆ ಸಿಗುತ್ತದೆ. ಅದಕ್ಕೆ ಹಣದ ಗರ್ಜಿ ಜೋರಾಗಿ ನಿಂತುಬಿಟ್ಟಿದೆ. ಆದ್ದರಿಂದ ನಿಮ್ಮದು ಅಸಲು, ಬಡ್ಡಿ ಎಷ್ಟಾಗುತ್ತದೆ ನೋಡಿ ಇನ್ನೊಂದು ವಾರದಲ್ಲಿ, ತಪ್ಪಿದರೆ ಹದಿನೈದು ದಿನಗಳಲ್ಲಿ ಕೊಟ್ಟರೆ ಮುಗಿಯಿತು. ಹಾಗೆ ನಿಂತ ಮೆಟ್ಟಿಗೆ ಕೊಡಿ ಅನ್ನಲಿಕ್ಕೆ ನಮಗೇನು ಅಖಲಿಲ್ಲವೇ? ಹದಿನೈದು ದಿನ ಪುರುಸೊತ್ತಿದೆ" ಎಂದರು. ಆ ಮಾತು ಶ್ರೀಪತಿರಾಯರ

[illegible] ಆಯಿತು.

ಅವರು ಏನನ್ನುವುದಕ್ಕೂ ತೋಚದೆ "ಆ ಮೇಲೆ ನಾನು ಬಂದು ಕರೀಮ್ ಸಾಹೇಬರನ್ನು ಕಂಡು ಹೇಳುತ್ತೇನೆ" ಎಂದರೆ, ಮೀರ ಸಾಹೇಬರು "ಅದು ನಮ್ಮ ಅಳಿಯನಿಗೂ ನಿಮಗೂ ಲಗತ್ತು. ಇನ್ನು ಕಾಸೀಮುಂದು, ಕರೀಮುಂದೂ ಯಾವುದೂ ಸಂಬಂಧ ಇಲ್ಲ, . . . . . ನಮ್ಮದು ಅವರದ್ದು ನಿಕಾಲಿ" ಎಂದು ಅಪ್ಪಣೆ ಕೊಡಿಸಿದರು. ಶ್ರೀಪತಿ ರಾಯರು ಆಡಬೇಕೆಂದಿದ್ದ ಮುಂದಿನ ಮಾತುಗಳೆಲ್ಲವು ಅವರ ಗಂಟಲಲ್ಲೇ ಕುಳಿತಿರಬೇಕಾಯಿತು. ಬಂದವರು ಹೋದರು; ಕುಳಿತವರು ಯೋಚಿಸತೊಡಗಿದರು.

ಶ್ರೀಪತಿ ರಾಯರು ಒಮ್ಮೆಗೆ ಬಂದಂಥ ಈ ತಗಾದೆಯನ್ನು ಕುರಿತು ಯೋಚಿಸಿ-ಗುಟ್ಟಿನಲ್ಲಿ, ಮರ್ಯಾದೆ,ಹೋಗದರೀತಿಯಲ್ಲಿ, ಅದನ್ನು ಬಗೆ ಹರಿಸುವ ಪ್ರಯತ್ನ ಮಾಡಿದರು. ಮೊದಲು ವಕೀಲ ಮಗನಿಗೆ ಜನವನ್ನಟ್ಟಿ ದರು. ಸಾಹೇಬರಾಡಿದ ಮಾತುಗಳಿಂದ ಅಣ್ಣ ತಮ್ಮಂದಿರು ಗುಸುಗುಟ್ಟ ತೊಡಗಿದರು. "ಬಡ್ಡಿಯೂ ಬಂದಿಲ್ಲ" ಎಂದ. ಅವರ ಮಾತುಗಳನ್ನು ಕೇಳಿ ಅವರಿಗೂ ಅನುಮಾನ ಉಂಟಾಯಿತು. ವಾಸ್ತವವಾಗಿ ಶ್ರೀಪತಿರಾಯರು ಬಡ್ಡಿಯನ್ನೇನೋ ಕೊಟ್ಟಿದ್ದರು. ಮುಗುದುಮ್ ಸಾಹೇಬರು ಅದಕ್ಕೆ ರಶೀದಿ ಕೊಡುವುದಕ್ಕೆ ಎರಡು ಬಾರಿ ಮರೆತಿದ್ದರು. ಲೆಕ್ಕದಲ್ಲಿ ಬರೆದಿದ್ದಾರೆ-ಎಂಬು ದರಿಂದ ಇವರೂ ಆ ಬಗ್ಗೆ ಎಚ್ಚರವನ್ನು ವಹಿಸಲಿಲ್ಲ. ಶ್ರೀಪತಿರಾಯರು ತಾವಾಗಿಯೇ ಕರೀಮ್ ಸಾಹೇಬರ ಭೇಟಿಗೆ ಹೋದರು. ಮಧ್ಯಸ್ಥಿಕೆಗೆ ಬರ ಬೇಕೆಂದು ಕೇಳಿಕೊಂಡರು. ಅದು ಪ್ರಯೋಜನವಾಗಲಿಲ್ಲ. ತಂತಮ್ಮೊಳಗೆ ಬಂದಿದ್ದ ಕುತ್ತು ಪಾರಾದ ಗಳಿಗೆಯಲ್ಲಷ್ಟೆ, ತಮ್ಮನ ವ್ಯವಹಾರದಲ್ಲಿ ತಾವು ಕೈ ಹಾಕಬಾರದು-ಎಂದು ಅವರು ನಿರ್ಧರಿಸಿ ಸುಮ್ಮನಾದರು.

ಶ್ರೀಪತಿರಾಯರ ಮನೆಯವರಿಗೆ ಈ ಮುಖ್ಯಸಾಲವಲ್ಲದೆ ಹದಿನೈದು ಸಾವಿರಗಳಷ್ಟು ಬೇರೆ ಸಾಲವೂ ಇತ್ತು. ಮನೆಗೆ ಬಂದ ಮಗ ಚಲಪತಿ ಸಾಲ ಮೂಲಗಳೆರಡನ್ನೂ ಸಮನಾದ ಐದು ಹಿಸೆಮಾಡುವುದೊಳ್ಳೆಯದೆಂದೂ, ಮೊದಲಿನಂತೆಯೆ, ಮನೆಯನ್ನು ಛತ್ರವಾಗಿ ನಡೆಯಿಸಿಕೊಂಡು ಹೋದರೆ ಶತಮಾನ ಸರಿದರೂ ಸಾಲ ತೀರಲಾರದೆಂದೂ ಬೋಧನೆ ಕೊಟ್ಟ. ಮನೆಯ ಲ್ಲಿದ್ದ ಅವನ ಇಬ್ಬರು ಚಿಕ್ಕತಂದೆಯರು ಸ್ವತಂತ್ರ ವ್ಯವಹಾರಮಾಡುವುದ ನ್ನು ಅವನು ಕಾಣುತ್ತಿದ್ದಾನೆ. ಹೀಗಿರುತ್ತ ತನ್ನ ತಂದೆ ಮನೆಯ ಯಜಮಾ ನಿಕೆ ಹೊತ್ತ ತಪ್ಪಿಗೆ, ಎಲ್ಲ ಕಷ್ಟಗಳನ್ನು ಅನುಭವಿಸುವುದು ಸಮನಲ್ಲ ಎಂದು

ದರೆ, ದುಡ್ಡಿನ ಮಳೆಯನ್ನು ಕಂಡೇವು ಎಂಬ ಧೈರ್ಯವಿದೆ. ಹೀಗಾಗಿ ಅವರಿಗೂ ಹಣದ ತಗಾದೆ ಮೇಲಿಂದ ಮೇಲೆ ಬಂದಿರುವಾಗ, ತಮ್ಮ ಸಾಲದ ಹಣಕ್ಕೆ ಅವರು ಬಲವಂತ ಮಾಡುವುದು ಸ್ವಾಭಾವಿಕವಾಗಿತ್ತು. ಈ ಅಣ್ಣ ತಮ್ಮಂದಿರಲ್ಲೂ ಒಬ್ಬೊಬ್ಬನಾಗಿ ಸಾಲವಹಿಸಿಕೊಳ್ಳುವ ಸಾಹಸವಿರಲಿಲ್ಲ. ಸಾಲಮೂಲಗಳನ್ನು ಸಮನಾಗಿ ಹಂಚಿಕೊಳ್ಳುವ ಎಂದರೆ—ಸಾಹೇಬರು ಆ ವಿಷಯವನ್ನೇ ಗಮನಿಸದೆ "ನೀವು ಏನೂ ಮಾಡಿಕೊಳ್ಳಿ; ನಮ್ಮ ಹಣ ಒಂದು ಗಂಟಿನಿಂದ ಬರಬೇಕು. ನಮಗೆ ಗರ್ಜು ಬಂದಾಗ ನಿಮ್ಮ ಹಣ ಬಾರದೆ ಹೋದರೆ ನಾವು ಮುಲಾಜ್ ಇರಿಸಿಕೊಳ್ಳುತ್ತೇವೆಯೇ?" ಎಂದು ಹೇಳತೊಡಗಿದರು. ಮಾವ, ಅಳಿಯ ಇಬ್ಬರೂ ಆಗಾಗ ಶ್ರೀಪತಿರಾಯರ ಮನೆಗೆ ಬರತೊಡಗಿದರು.

ಊರಿನ ವಾತಾವರಣ ಹೀಗೆ ಚಂಚಲಿಸಿದ್ದ ಕಾಲದಲ್ಲಿಯೇ ಡಾಕ್ಟರ್ ಶಿವಪ್ಪನವರ ನಿತ್ಯ ಜೀವನದ ಹೋರಾಟವೂ ಸಾಗುತ್ತಿತ್ತು. ಊರಗೊಂದಲಗಳನ್ನು ಕೇಳಿಯೂ ಕೇಳದವರ ಹಾಗೆ ಅವರು ಬದುಕಲೆತ್ನಿಸಿದ್ದಾರೆ. ಅವರಿಗೂ ಅವರ ಪಾಲಿನ ಋಣ ಭಾರ ಕಾಡುತ್ತಿದೆ. ರಂಗರಾಯರು ತಾವಾಗಿ ಕೊಟ್ಟ ಸಾಲ ಕೇಳದಿದ್ದರೂ, ಇಂದುಮತಿಯಿಂದ ಸ್ಥಿತಿಗತಿಗಳನ್ನು ತಿಳಿದುಕೊಂಡ ಬಳಿಕ, ಉಳಿದ ಋಣವನ್ನು ಆದಷ್ಟು ಬೇಗ ಸಲಿಸುವುದು ತನ್ನ ಕರ್ತವ್ಯ. ಅವರ ಕಷ್ಟಕ್ಕೆ ಒದಗದಂಥ ಹಣ ಆ ಮೇಲೆ ಒದಗಿದರೂ ಒಂದೇ ಒದಗದಿದ್ದರೂ ಒಂದೇ-ಎಂದು ತೋರುತ್ತಿದೆ. ಅವರು ಈ ವರೆಗೆ ಸಲಿಸಿದ್ದು ಸಾವಿರ ರೂಪಾಯಿಗಳಷ್ಟು. ಸಲಿಸಬೇಕಾದದ್ದು ಇನ್ನೂ ಮೂರು ನಾಲ್ಕರಷ್ಟಿದೆ. ಅದರ ಜತೆಗೆ—ತಾಯಿಯ ಅಂತ್ಯಕ್ರಿಯೆಗಳಿಗಾಗಿ ತೆಗೆದ ಕಿರಿಯ ಸಾಲವಿದೆ. ಈ ಎಲ್ಲ ಚಿಂತೆಗಳು ಕಾಡುತ್ತಿರುವ ವೇಳೆಯಲ್ಲಿ ಅವರಿಗೆ ದೊರೆತ ಒಂದೇ ಒಂದು ಸಂತೋಷದ ವಾರ್ತೆಯೆಂದರೆ ಇಂದುಮತಿ ಧಾರವಾಡದಲ್ಲಿ ಗಂಡು ಮಗುವನ್ನು ಹಡೆದುದು. ಆ ವೇಳೆಗೆ ಧಾರವಾಡಕ್ಕೊಮ್ಮೆ ಹೋಗಿ ಬಂದಿದ್ದರು. ಅಲ್ಲಿ ಮಾವನ ಮನಸ್ಸಮಾಧಾನಕ್ಕಾಗಿಯೂ, ಹೆಂಡತಿಯ ಮನಸ್ಸಮಾಧಾನಕ್ಕಾಗಿಯೂ ಎರಡು ದಿನ ಕುಳಿತುಕೊಳ್ಳುವುದಾಗಲಿಲ್ಲ. ತಾನಲ್ಲಿ ಕುಳಿತರೆ ತನ್ನನ್ನು ನಂಬಿರುವ ರೋಗಿಗಳ ಗತಿಯೇನು?—ಗುಡಿಗಾರರ ರಮಣಿಯ ಮನೆಯಲ್ಲಿ ಅವನ ಕಿರಿಯ ಹುಡುಗನಿಗೆ ಸನ್ನಿಪಾತ. ಎರಡು ವಾರ ಸಂದಿದೆ; ಜ್ವರ ಅತೀವವಾಗಿದೆ. ಇತರ ವಿಕಾರಗಳಿಲ್ಲದಿದ್ದರೂ

ಗಾಬರಿಗೊಳ್ಳುತ್ತಿದ್ದಾರೆ. ಒಂದು ಪಥ್ಯಮಾಡಿ ಎಂದರೆ ಇನ್ನೊಂದು ಮಾಡು ತ್ತಾರೆ. ಊರಿಂದ ಹೊರಡುವಾಗಲೇ "ನಾಳೆ ಸಂಜೆಗೇ ಬರುತ್ತೀರಲ್ಲ; ನೀವು ಬಾರದೆ ಹೋದರೆ ನನ್ನ ಮಗು ಹೋದಂತೆಯೆ! ನಾನು ಜನ್ಮಕ್ಕೆ ಆಸ್ಪತ್ರೆಯ ಮದ್ದಿಗೆ ಹೋಗುವವನಲ್ಲ; ಅವರಿಗೆ ಮನುಷ್ಯರ ಗುರುತಿಲ್ಲ" ಎಂದಿದ್ದ.

ಇನ್ನು ವಾಸಪ್ಪಯ್ಯನವರು ಅವರಿಗೆ ಧನಿಗಳಿದ್ದ ಹಾಗೆ. ಅವರ ಮಗಳು ಗರ್ಭಿಣಿಯಾಗಿ ಹೆರಿಗೆಗೆ ಮನೆಗೆ ಬಂದಿದ್ದಾಳೆ. ಅವಳಾಗಿ ಬಂದು ದೂ ಅದಲ್ಲ, ತಂದೆಯು ಅವಳ ಅನಾರೋಗ್ಯವನ್ನು ಕಂಡು ಗಾಬರಿಯಾಗಿ ಕರೆಯಿಸಿಕೊಂಡದ್ದು. ನಿಶ್ಶಕ್ತಳಾದ ಅವಳ ಶರೀರಕ್ಕೆ ಕೆಲ್ಸಿಯಮ್ ವೊದ ಲಾದುದನ್ನು ತುಂಬಿಸಿ, ತುಂಬಿಸಿ ಸಾಕಾಗಿತ್ತು. ಇಂದೋ ನಾಳೆಯೋ ವಳು ಹೆರಬೇಕು. ಶಿವಪ್ಪನವರು ಮಾವನೊಡನೆ ತಾನು ಅಲ್ಲಿ ಕುಳಿತಿರಲಾರದು ದಕ್ಕೆ ಈ ಎಲ್ಲ ಕಾರಣಗಳನ್ನು ಹೇಳಿದರು. ಅದನ್ನು ಕೇಳಿದ ಇಂದುಮತಿ "ಅವರಿಗೇನು? ಅವರ ಮನೆಗೆ ಮಡಗಾಂವಕರರೇ ಡಾಕ್ಟರರಲ್ಲವೆ?" ಎಂದು ವಾದಿಸುತ್ತಾಳೆ.

"ಮಡಗಾಂವಕರರು ಹೋಗುತ್ತಾರೆ,ನಿಜ. ಇವರಿಗೆ ಅವರಲ್ಲಿ ಹೆಚ್ಚಿನ ಅಭಿಮಾನವೂ ಇದೆ. ಆದರೆ ಇದು ಮಗಳ ಹೆರಿಗೆಯ ಪ್ರಸಂಗವಾದ ದ್ದರಿಂದ ವಾಸಪ್ಪಯ್ಯನವರು ನನ್ನನ್ನು ಒತ್ತಾಯಿಸುತ್ತಿದ್ದಾರೆ. ಹೋಗದಿರು ವಂತಿಲ್ಲ.ಮೊನ್ನೆ ತಾಯಿಯ ಕ್ರಿಯೆಗಳಿಗೆ ಅವರಿಂದಲೇ ಐನೂರು ರೂಪಾಯಿ ಸಾಲ ಪಡೆದದ್ದಲ್ಲವೇ."

"ಮಾಧವಗೆ ಕೊಟ್ಟ ಹಣ ಸಿಗಲೇ ಇಲ್ಲ ಅಲ್ಲವೆ?"

"ಅದು ಬಂದೀತೆಂಬ ಯೋಚನೆಯೇ ಬೇಡ." ಎಂದು ಹೇಳಿ,ಮುಗಿಸ ಲಾರದೆ, ಮಾಧವ ಮುಂಬಯಿಗೆ ಹೋಗಿ ಹಣ ಕಳೆದುಕೊಂಡದ್ದು, ಅಲ್ಲಿಂದ ಊರಿಗೆ ಬಾರದಿದ್ದದ್ದು-ಎಲ್ಲವನ್ನೂ ಹೇಳಿ, ಮಡದಿಗೆ ತಮ್ಮ ಚಿಂತೆಯ ಭಾಗ ವನ್ನು ಅರ್ಪಿಸಿ, ಸಕಾಲದಲ್ಲಿ ಮರಳಿದರು. ಊರಿಗೆ ಬಂದ ಮೇಲೆ ತಿರುಗಿ ದುಡಿಮೆಗೆ ಆರಂಭ. ಬಿಡುವೆಂದರೆ ಬಯಸಿದರೂ ಸಿಗಲಾರದು. ಗುಡಿಗಾರ ರಮಣಿಯ ಮಗ ಸನ್ನಿಪಾತದಿಂದ ಪಾರಾದ. ರಮಣಿ ಶಿವಪ್ಪನವರಲ್ಲಿರಿಸಿದ ಶ್ರದ್ಧೆ ಸಾರ್ಥಕವಾಯಿತು. ಹತ್ತು ಸಾರಿಗಿಂತ ಹೆಚ್ಚಾಗಿ ಹೋಗಿ ಬಂದುದಕ್ಕೆ, ಕೊಟ್ಟ ಮದ್ದಿಗೆ-ಒಟ್ಟು ಸಂಪಾದನೆ ಇಪ್ಪತ್ತು ರೂಪಾಯಿಗಳು. ಆತ ಹೇಳಿ ಕೇಳಿ ಗುಡಿಗಾರ. ಅವನ ಕಸುಬಿಗೆ ಗಿರಾಕಿ ಇದ್ದರಲ್ಲವೆ ಇಂದು ಆತ ವೈದ್ಯ

ರಿಗೆ ದಂಡ ತೆರಿವುದು! ಬಾಸಿಗ ಮಾಡಿದರೂ ಬೆಲೆಯಿಲ್ಲ; ಮರದ ಕಡೆ ಗೋಲು,ಕೊಳವೆಗಳನ್ನು ಮಾಡಿದರೂ ಬೆಲೆಯಿಲ್ಲ.

ವಾಸಪ್ಪಯ್ಯನವರ ಮಗಳ ಹೆರಿಗೆಯ ಕಾಲದಲ್ಲಿಯೂ ಶಿವಪ್ಪನವರು ಇದ್ದುದು ಸಾರ್ಥಕವಾಯಿತು. ಗರ್ಭಕೋಶದಲ್ಲಿ ಮಗುವು ತಿರುವಿ ಬಿದ್ದು, ಡಾಕ್ಟರರ ಕೈಚಲಾಕಿಯನ್ನು ತೂಗುವುದಕ್ಕೆಂದೇನೆ ಅದು ಕಾಯುತ್ತಿತ್ತು. ಅಲ್ಲಿಗೆ ಶಿವಪ್ಪನವರೇ ಹೋದದ್ದು, ಅವರಿಂದಲೇ ಜೀವ ಉಳಿದದ್ದು. ಊರ ವರ 'ಕೈಗುಣ ಒಳ್ಳೆಯದೆಂಬ' ಮಾತೂ ಸಾರ್ಥಕವಾದದ್ದು. ಅದರಲ್ಲಿಯೂ ಒಂದು ವಿಚಾರವಿದೆ–ಜನರು ಹೀಗೆ "ಕೈಗುಣ ಚೆನ್ನಾಗಿದೆ" ಅನ್ನುತ್ತಾರೆಯೇ ಹೊರತು, "ಡಾಕ್ಟರರು ಬುದ್ಧಿವಂತರು" ಎನ್ನುವ ಅಭ್ಯಾಸವನ್ನೇ ಮಾಡಿಲ್ಲ. ವಿಧಿಯ ವಿಲಾಸವನ್ನು, ಗ್ರಹಗಳ ಗತಿಯನ್ನು, ಕರ್ಮಫಲವನ್ನು, ಹೊರಟ, ಬಂದ, ಮಾಡಿದ ಗಳಿಗೆಯನ್ನು ನಂಬುವವರ ಊರಲ್ಲಿ "ನಾನಲ್ಲ, ಎಂಥವ ನಿದ್ದರೂ ಆದೀತು" ಎಂದು ಶಿವಪ್ಪನವರ ಅಭಿಮಾನವು ಕೆಲವೊಮ್ಮೆ ಹೇಳುವುದುಂಟು.ಇನ್ನೊಂದು ಗಳಿಗೆಗೆ ಅವರಿಗೇನೆ ಸಮಾಧಾನವಾಗುತ್ತದೆ– "ನಿಜ, ಅನೇಕರು ಬದುಕುವುದು ತಂತಮ್ಮ ಅದೃಷ್ಟದಿಂದಲೇ; ನನ್ನ ಮದ್ದಿ ನಿಂದಲ್ಲ. ಆದರೆ ಕೆಲವು ಸಾರಿ ಸಮಯಕ್ಕೆ ಸಹಾಯ ಮಾಡದೆ, ಬೇಕಾದ ಮದ್ದಿಲ್ಲದೆಯೆ, ಸಾಯುವುದನ್ನು ಕಂಡರೆ, ಹಾಗೆ ಸಾಯುವವರೂ ಉಳಿಯು ವುದನ್ನು ಕಂಡರೆ–ಪಟ್ಟ ಶ್ರಮ ಸಾರ್ಥಕವಾಯಿತು ಎಂದೆನಿಸುತ್ತದೆ. ಆದರೆ ಜನರ ಪಾಲಿಗೆ ಎಲ್ಲವೂ ಒಂದೇ. ಗುಣವಾಗದ್ದು ದುರ್ದೈವ; ಗುಣವಾದದ್ದು ಕೈಗುಣ . . . . . ತೀರ ಬುದ್ಧಿಯಿಲ್ಲದವುಗಳು!" ಎಂದುಕೊಳ್ಳುತ್ತಾರೆ.

ನಿಜಕ್ಕೂ ಶಿವಪ್ಪನವರಲ್ಲಿಗೆ ಬರುವ ಹಲವಾರು ಬಡಪಾಯಿಗಳನ್ನು ಕಂಡರೆ ಈ ಬಗೆಯ ಯಾವ ತೆರನಾದ ಅನುಮಾನಕ್ಕೂ ಅವಕಾಶವಿದೆ. ದಾರಿದ್ರ್ಯ, ಅಜ್ಞಾನಗಳ ವಿಶೇಷ ಪಾಕದಿಂದ ಸೃಷ್ಟಿಗೊಂಡ ಜನವರ್ಗವೆನ್ನ ಬೇಕಾಗುತ್ತದೆ. ಒಬ್ಬೊಬ್ಬರ ಗೋಳು ಒಂದೊಂದು ತೆರನದು. ಒಂದು ದಿನ ಶಿವಪ್ಪನವರಲ್ಲಿಗೆ ಆರು ಹರದಾರಿ ದೂರದಿಂದ ರೈತನೊಬ್ಬ ನಡೆದು ಬಂದ. ಅವನು ತನ್ನ ಊರಿನ ಮಟ್ಟಿಗೆ ಸಾಕಷ್ಟು ಅನುಕೂಲವಂತ; ಬುದ್ಧಿವಂತನೆ ನಿಸಿಕೊಂಡವನೇ. ಹಳ್ಳಿಯ ಶಾಲೆಯೊಂದರಲ್ಲಿ ತನ್ನ ಚಿಕ್ಕಂದಿನಲ್ಲಿ ನಾಲ್ಕ ಕ್ಷರ ಓದಿ ಮುಗಿಸಿದವನು. ಅವನ ಹೆಸರು ಗೋವಿಂದ ನಾಯಕನೆಂದು. ನಾಗರಿಕ ಬಂದವನೇ. ದವಾಖಾನೆಯಲ್ಲಿ ಶಿವಪ್ಪನವರನ್ನು ಭೇಟಿಯಾದ;

"ನಮಸ್ಕಾರ, ಒಡೆಯ" ಎಂದ. ಪ್ರತಿಪಂದನೆ ದೊರೆಯುವದರೊಳಗಾಗಿ "ನನ್ನ ಮನೆ ಚಂದಾವರವಾಯಿತು. ಆರು ಹರದಾರಿ ದೂರ, ನಡೆದು ನನ್ನ ಕಾಲೆಲ್ಲ ಸಿಂಬಿಯಾಯಿತು. . . . ." ಎಂದು ಪುರಾಣ ತೊಡಗಿಯೇ ಬಿಟ್ಟ. "ಇನ್ನೊಬ್ಬರೊಡನೆ ಮಾತನಾಡುತಿದ್ದಾರೆ; ತಾನು ತುಸು ತಡೆಯಬೇಕು" ಎಂಬದು ಅವನಿಗೆ ತಿಳಿದಿಲ್ಲ; ಅವನದೇ ಅವನಿಗೆ.

"ಅಯ್ಯಾ, ನನ್ನ ಗಂಡು (ಮಗ) ನೋಡಿ; ಮಾವಿನ ಮರ ಹತ್ತಿ ಬಿದ್ದ ಒಂದು ದಿವಸ–ಯಾವಾಗ ಎಂದು ಹೇಳುತ್ತೇನೆ..." ಎಂದು ಬೆರಳು ಎಣಿಕೆ ಹಾಕಿ "ಸಮ ಮೂರು ವರ್ಷವಾಯಿತು. ಮೊನ್ನೆ ಆಸಾಡಿಗೆ ಮೂರು ಕಳೆ ಯಿತು. ಆಗ ಬಿದ್ದ ಪೆಟ್ಟಿಗೆ ನೆತ್ತಿಯಲ್ಲಿ ಗಾಯವಾಗಿ, ರಕ್ತ ಹೆಪ್ಪುಗಟ್ಟಿ ಒಳಕ್ಕೆ ಹೀರಿಹೋಯಿತು. ಆ ಹೆಪ್ಪುಗಟ್ಟಿದ ನೆತ್ತರು ಈಗ ಬರಲಿಕ್ಕೆ ಸುರುವಾಗಿದೆ ನೋಡಿ" ಎಂದ.

ಕೊನೆಯ ಮಾತು ಡಾಕ್ಟರರ ಕಿವಿಗೆ ಬಿದ್ದು "ಏನೇನು?" ಎಂದು ದಿಗಿ ಲಾಗಿಯೇ ಕೇಳಿದರು.

ತಿರುಗಿ ಕಥಾನಕವನ್ನು ಮೊದಲಿನಿಂದಲೇ ತೊಡಗಿದ. ಅಲ್ಲಿಂದ ಸದ್ಯದ ಸ್ಥಿತಿಯನ್ನು ಬಣ್ಣಿಸಿದ. "ಈಗ ನೋಡಿ, ಹೊಟ್ಟೆನೋವು ಎಂದರೆ ತಡೆಯು ವುದಕ್ಕಾಗುವುದಿಲ್ಲ. ತಿಂಗಳೊಂದಾಯಿತು-ನನ್ನ ಗಂಡು ಬಚ್ಚಿ, ಒಣಗಿ, ಕಡ್ಡಿ ಯಾಗಿ ಕಂಗಾಲು. ದಿನಕ್ಕೆ ಹತ್ತುಸಾರಿ ಹೊರಗೆ ಹೋದರೂ ಒಂದು ಸಾರಿ ಸಮನಾದ ಪಾಯಿಖಾನೆಯಿಲ್ಲ.ಬರಿಯ ನೆತ್ತರು, ಮತ್ತು ಸಿಂಬಳ. ಹಾಗೆಂದು ಏನೇನೂ ಹೊಟ್ಟೆಗೆ ತಿನ್ನುವುದಿಲ್ಲ. ಒತ್ತಾಯಕ್ಕಿಷ್ಟು ಅನ್ನ ಹಾಲು ಕೊಡು ತಿದ್ದೇವೆ. ಅದೂ ಎಷ್ಟೆನ್ನುತ್ತೀರಿ? ಎರಡು ಅಡಿಕೆ ಗಾತ್ರದಷ್ಟು" ಎಂದು ಡಾಕ್ಟರರಿಗೆ ಆಮಶಂಕೆಯ ಸಂಪೂರ್ಣ ಚಿತ್ರವನ್ನು ಬಣ್ಣಿಸಿದ. ಶಿವಪ್ಪ ನವರು ಅವನ ಮಾತನ್ನೆಲ್ಲ ಕೇಳಿದರು. ಈ ಕಥೆಯನ್ನು ಕೇಳಿದ ಕಂಪೌಂಡರ್ ಶೀನಪ್ಪ ಒಳಗಿಂದ ಕತ್ತೆಕಿರುಬನಂತೆ ನಕ್ಕ. ಡಾಕ್ಟರರು ತಮ್ಮ ನಗುವನ್ನು ತಡೆಯಲಾರದೆ, ಸೀನು ಬರುವ ನೆವದಿಂದ ಮುಖಕ್ಕೆ ಅರಿವೆ ಹಿಡಿದು, ಹೊರ ಜಗುಲಿಗೆ ಬಂದು, ಎರಡು ನಿಮಿಷಕಾಲ ಸ್ವರಹೊರಡಿಸದೆ ನಕ್ಕರು. ಅನಂತರ ಕುರ್ಚಿಯಲ್ಲಿ ಬಂದು ಸ್ಥಾಪಿತರಾಗಿ "ಈಗ ಹಾಗೊಂದು ಕತೆಯಿದೆಯೇ?" ಎಂದು ಕೇಳಿದರು.

"ನಾನು ತಮಾಷೆಗನ್ನುತ್ತೇನೆಯೆ?" ಎಂದ ಗೋವಿಂದ. ಆತನ ತಲೆ

ಯಲ್ಲಿ-ಮೂರು ವರ್ಷಗಳ ಹಿಂದೆ ನೆತ್ತಿಯೊಡೆದು, ಹೆಪ್ಪುಗಟ್ಟಿದ ರಕ್ತವು ಈ ಬೇನೆಗೆ ಕಾರಣವಾಗಿದೆ; ಆ ರಕ್ತವೇ ಇಂದು ಆಮವಾಗಿ ಬರುತ್ತಿದೆ ಎಂಬ ನಂಬಿಕೆ ಮಾಡಿತ್ತು. ಅದನ್ನು ಕಳೆಯುವವರು ಯಾರು?

"ತಮಾಷೆ ಅಂದಾರೆಯೆ ಯಾರಾದರು? ನಾನು ಹೇಳುವುದನ್ನು ಕೇಳು ಮೊದಲು-ಅವನಿಗೆ ಆಮಶಂಕೆ—ನಾನು ಹೇಳುವ ಹಾಗೆ ಮದ್ದು ಮಾಡು ವುದಾದರೆ ಮದ್ದು ಕೊಡುವ" ಎಂದು ಅವನಿಗೆ ಸಂಗತಿಯನ್ನು-ವಿವರಿಸಿದರು.

"ನಿಮ್ಮ ಕೈಗುಣ ಒಳ್ಳೆಯದೆಂದು ಕಂಡವರೆಲ್ಲ ಹೇಳುತ್ತಾರೆ. ನಿಮ್ಮಿಂ ದೊಂದು ಥಟ್ಟನೆ ಇಂಜಕ್ಶನ್ ಕೊಡಿಸಿದರೆ ಆಗಬಹುದೆಂದು ಹೇಳಿದ್ದಾರೆ. ಹಾಗೆ, ಕೇಳಿದವನೇ ಶಿರ್ಶಿಯ ಅಮ್ಮನವರಿಗೆ ಒಂದು ಹರಕೆ ಹೇಳಿಕೊಂಡು ಇಲ್ಲಿಯ ವರೆಗೆ ನೆಟ್ಟಗೆ ಓಡಿಬಂದಿದ್ದೇನೆ"

"ಮಗುವನ್ನು ಕರೆತಂದಿದ್ದೀಯಾ?"

"ಹ್ಯಾಗೆ ತರುವುದು ಒಡೆಯ? ಎಲುಬು ಚರ್ಮವಾಗಿದೆ ಅದು. ಹಾಸುಗೆಯಿಂದ ಎತ್ತಿದರೆ ಕೈಯಲ್ಲಿ ಹಿಸಿದುಹೋದೀತು ಎಂಬ ಹಾಗಿದೆ."

"ಹಾಗಿದ್ದರೆ ನಾನು ಇಂಜಕ್ಷನ್ ಕೊಡುವುದು ಯಾರಿಗೆ? ನಾನೇ ಅಲ್ಲಿಗೆ ಬರಬೇಕೆ? ಎಷ್ಟು ದೂರ? ಗಾಡಿ ಹೋಗುವ ದಾರಿಯೋ; ಸೈಕಲ್ ಹೋಗುವ ದಾರಿಯೋ?"

"ಚಂದಾವರಕ್ಕೊ? ಹಾಗೆ ಹೋಗದೆ ಏನು? ಬೇಸಿಗೆಯಲ್ಲಿ ಗಾಡಿ ಗಳು ಸರಾಸರಿ ತಿರುಗಾಡುತ್ತದೆ."

"ಈಗ?"

"ಈಗ ಬಂದೆನಲ್ಲ ನಡೆದು-ಬೆಳಗಿನ ಜಾವಕ್ಕೆ ಹೊರಟಿದ್ದೆ. ಬರುವಾಗ ಇಷ್ಟು ಹೊತ್ತಾಯಿತು."

ಆತನನ್ನು ತೀರ ಹೆಚ್ಚಿಗೆ ಮಾತನಾಡಿಸಿದರೆ ಇನ್ನಷ್ಟು ತಲೆ ಕರಡಾ ದೀತೆಂದು, ಅವನಿಗೆ ಬೇಕಾದ ಮದ್ದಿನ ಮಿಶ್ರಣವನ್ನು ತಯಾರಿಸಲು ಹೇಳಿ ದರು. ಅದು ತಯಾರಾದ ಮೇಲೆ, ಅವನನ್ನು ಕರೆದು ಚಿಕಿತ್ಸೆ, ಪಥ್ಯಗಳ ಕ್ರಮಗಳನ್ನು ಹೇಳಿ, ಅದನ್ನು ಅವನಿಂದ ಉರುಹಾಕಿಸಿ 'ಇನ್ನೆರಡು ದಿನ ಗಳಲ್ಲಿ ಬಾ' ಎಂದು ಕೊಟ್ಟರು.

"ಎರಡು ದಿನದಲ್ಲಿ ಗುಣವಾದೀತಲ್ಲ, ಒಡೆಯ?" ಎಂದು ಕೇಳಿದ.

"ನಾಲ್ಕಾರು ದಿವಸ ಹಿಡಿದೀತು, ಅದು ತೊಡಗಿಯೇ ತಿಂಗಳಾಯಿತು

ಅನ್ನುತ್ತೀಯಾ. ನಾಲ್ಕು ದಿನ ಹೋದೀತು, ವಾರವೂ ಹೋದೀತು."

"ಮದ್ದು ಕೊಟ್ಟರೆ ತನ್ನಿಂತಾನೆ ನಿಂತು ಹೋಗುತ್ತದೆ—ಎಂದರು ನಮ್ಮ ಊರವರು ಯಾರೋ. ಅಂಥ ಮದ್ದು ಉಂಟಂತೆ. ಇಂಜಶನ್ ಅಂತೆ-ಅದರ ಹೆಸರು."

ಆ ಮಹಾನುಭಾವನಿಗೆ ಖಾತ್ರಿಯಾಗಲು ಇನ್ನೊಬ್ಬನಿಗೆ ಇಂಜೆಕ್ಷನ್ ಕೊಡುವ ದೃಶ್ಯವನ್ನು ತೋರಿಸಿ, "ಅದಕ್ಕೆ ಒಂದೋ, ನಾನು ಅಲ್ಲಿಗೆ ಹೋಗ ಬೇಕು; ಇಲ್ಲವೇ ಅವನು ಇಲ್ಲಿಗೆ ಬರಬೇಕು" ಎಂದರು, ಗೋವಿಂದನ ಪೀಡೆಯು ಅಲ್ಲಿಂದ ತೊಲಗುವುದಕ್ಕೆ ಮತ್ತು ಸಮಯ ಹೋಯಿತು. ಅಂತಹ ಸಾಮ್ರಾಜ್ಯದಲ್ಲಿ ಶಿವಪ್ಪ ಡಾಕ್ಟರರು ಕೇವಲ ಕೈಗುಣದ ವ್ಯಕ್ತಿಯಾದುದ ರಲ್ಲಿ ಆಶ್ಚರ್ಯವಿಲ್ಲ.

ಈಗ ಮನೆಗೆ ಹೋದಾಗಲೆಲ್ಲ, ಇಂದುಮತಿಯು ಇಲ್ಲದ್ದರಿಂದ, ತಂದೆ ಮಕ್ಕಳು ತಾಸು ಅರ್ಧ ತಾಸು ಊರಿನ ಸಮಾಚಾರವನ್ನು ಕುರಿತು ಮಾತ ನಾಡುತ್ತಿರುತ್ತಾರೆ. ಕಿಟ್ಟಪ್ಪ ಮಾಸ್ತರರಿಗೆ ಬೇಕಾದಷ್ಟು ಸುದ್ದಿಗಳು ದೊರೆ ಯುತ್ತವೆ. ವಾಸಪ್ಪಯ್ಯನವರ ಅಂಗಡಿಯೆಂಬುದು ಜವುಳಿಮಳಿಗೆಯಾದಂತೆ ಸುದ್ದಿಗಳಿಗೂ ಮಳಿಗೆಯೇ. ಕಿಟ್ಟಪ್ಪನವರು ಅಲ್ಲಿ ಬರವಣಿಗೆಯ ಮಂಚದ ಮುಂದೆ ಕುಳಿತು, ಲೇಖನಿ ಹಿಡಿದರೆಂದರೆ ಎದುರಿಗೇನೆ ನಡೆಯುವ ಹರಟೆ ಗಳನ್ನು ಕೇಳುವುದಕ್ಕಾಗುತ್ತದೆ. ಅಂತಹ ವಾರ್ತೆಗಳಲ್ಲಿ ತೀರ ಇತ್ತೀಚೆಗಿನ ಸಮಾಚಾರವನ್ನು ವಾಸಪ್ಪಯ್ಯನವರೇ ಹೇಳಿದರು; "ಸುಮಾರು ನಾನ್ನೂರು ಮುಡಿ ಹುಟ್ಟುವಳಿಯಾಗುತ್ತದೆ. ನಾನೇ ಕೊಳ್ಳಬೇಕೆಂದು ಅವರ ಒತ್ತಾಯ ಬಂದಿದೆ" ಎಂದರು.

"ಯಾರ ಆಸ್ತಿ?"

"ಶ್ರೀಪತಿರಾಯರ ಮನೆಯದು."

"ಹಾಗೇನೋ ಸುದ್ದಿ ಇತ್ತು. ಸಾಲಕ್ಕಾಗಿ ಮಾರುತ್ತಾರಂತೆ. ಆದರೆ ಈ ಸಮಯದಲ್ಲಿ ಒಳ್ಳೆಯ ಬೆಲೆ ಸಿಗುವುದು ಕಷ್ಟವಲ್ಲವೆ?" ಎಂದು ಶಿವಪ್ಪ ನವರು ತಂದೆಯೊಡನೆ ಆ ವ್ಯವಹಾರವನ್ನು ಕುರಿತು ಮಾತನಾಡಿದರು. ಅನಂತರ ಕುತೂಹಲದಿಂದ "ಅಪ್ಪಾ, ನಮ್ಮ ಭೂಮಿಯನ್ನು ಮಾರಿದರೆ ಎಷ್ಟು ಹಣ ಬಂದೀತು?" ಎಂದು ಕೇಳಿದರು.

"ಏನು ನಿನ್ನ ಯೋಚನೆ?" ಎಂದರು ಮಾಸ್ತರರು.

"ಬರಿದೆ ಕೇಳಿದೆ. ಅದರಿಂದ ನಮಗೆ ಬರುವುದು ನಾಲ್ವತ್ತು ಮುಡಿ ಚಿಲ್ಲರೆ. ಬರಬೇಕಾದುದು ಐವತ್ತು. ನಾವು ಅದನ್ನು ಸಾಗುವಳಿ ಮಾಡುವುದೂ ಸಾಧ್ಯವಿಲ್ಲ. ಗೇಣಿಗೆ ಕೊಟ್ಟರೆ ಗೇಣಿಯೂ ಸಂಪೂರ್ಣವಾಗಿ ಬರುವುದಿಲ್ಲ. ಒಳ್ಳೆಯ ಬೆಲೆ ಬರುವ ಹಾಗಿದ್ದರೆ ಮಾರಾಟಮಾಡಿದರೇನು?"

"ಒಳ್ಳೆಯ ಬೆಲೆ ಎಂದರೇನು? ಕರಾವಳಿಯಾದ ಈ ಊರಿನಲ್ಲೇ ಸಾವಿರಕ್ಕೆ ಹತ್ತರಿಂದ ಹದಿನೆರಡು ಮಾನಿಗೆಗಳ ಹಾಗೆ-ಬೆಲೆ ಬಂದೀತು. ಮೂಡಣ ಊರಿಗೆ ಹೋದರೆ ಸಾವಿರಕ್ಕೆ ಇಪ್ಪತ್ತು ಮಾನಿಗೆಯಂತೆ ಕೊಟ್ಟರೂ ಕೊಳ್ಳುವವರಿಲ್ಲ. ತೋಟಕ್ಕಾದರೆ ಸ್ವಲ್ಪ ಹೆಚ್ಚಿಗೆ ಬೆಲೆಸಿಗಬಹುದು. ಈಗ-ಬರುವ ಅಕ್ಕಿಯನ್ನಾದರೂ ತಿಂದು ನಿಶ್ಚಿಂತೆಯಿಂದಿರ ಬಹುದಲ್ಲ. ಶ್ರೀಪತಿ ರಾಯರು ಸಾಲಕ್ಕಾಗಿ ಮಾರುತ್ತಿರುವುದು ಈ ಊರಿನ ಆಸ್ತಿಯನ್ನು. ಮೂಡಣದ ಆಸ್ತಿ ಬೇಕೆನ್ನುವವರಿಲ್ಲ. ವಾಸಪ್ಪಯ್ಯನವರು ಕೊಂಡರೂ ದುಡ್ಡಿಗೆ ಪಂಥೇರಿನ ಹಾಗೆ ಕೊಳ್ಳುವವರು."

"ನಿನಗೆ ಹ್ಯಾಗೆ ಕಾಣುತ್ತದೆಯೋ? ನನ್ನ ಯೋಚನೆ ಹೀಗೆ-ಮಾವನಿಂದ ಕೊಂಡಸಾಲದ ಚಿಂತೆ ನನ್ನ ಮನಸ್ಸಿಗೆ ತುಂಬ ಕರಕರೆಯನ್ನುಂಟು ಮಾಡುತ್ತಿದೆ.ಎರಡು ವರ್ಷಗಳಲ್ಲಿ ಕಷ್ಟಪಟ್ಟು ಸಾವಿರ ರೂಪಾಯಿ ಸಲ್ಲಿಸಿದೆ. ಮೊದಲಿನ ವರ್ಷ ಏನೂ ಕೊಡುವುದಾಗಲಿಲ್ಲ. ಅಲ್ಲಿ ಅವರು ಯಾರಿಗೋ ಬೇಂಕಿಗೆ ಜಾಮೀನು ಹಾಕಿ, ಎಲ್ಲವನ್ನೂ ಕಳೆದುಕೊಂಡಿದ್ದಾರೆ. ಇಂತಹ ಸಮಯದಲ್ಲಿ, ನನ್ನಿಂದ ಸಲುವ ನಾಲ್ಕುಸಾವಿರ ಅವರಿಗೆ ಕೊಟ್ಟಿದ್ದಾದರೆ ಒಂದು ಋಣ ಭಾರ ತೀರುತ್ತಿತ್ತು. ಅವರು ನನಗೆ ಕೊಡುವಾಗ ಕಾಗದ ಪತ್ರವಿಲ್ಲದೆ ಕೊಟ್ಟರು; ಏನೊಂದೂ ಶರ್ತ ಹಾಕದೆಯೆ ಕೊಟ್ಟರು. ಅಂಥವರೇ ಕಷ್ಟಕ್ಕೆ ಸಿಕ್ಕಿರುವಾಗ ನಾವು ಹೇಗಾದರೂ ಮಾಡಿ ಆ ಋಣ ತೀರಿಸಿದರೆ ಒಳ್ಳೆಯದಲ್ಲವೆ? ಜೀವನದ ಮಟ್ಟಿಗೆ ನನಗೆ ಸಿಗುತ್ತಿರುವುದು ಸಾಕು."

"ನಿನ್ನ ಹೆಂಡತಿ ಹಾಗೆ ಬರೆದಿದ್ದಾಳೋ, ಅವರು ಬರೆದರೊ?"

"ಅವಳೂ ಬರೆಯಲಿಲ್ಲ, ಅವರೂ ಬರೆಯಲಿಲ್ಲ. ನಮಗೆ ತೋರ ಬೇಕಾದ ಸಂಗತಿಯನ್ನು ಅವರು ಬರೆಯುವುದೇತಕ್ಕೆ?"

"ಅವರು ನಿನಗೆ ವರದಕ್ಷಿಣೆಯೆಂದು ನಗದು ಹಣ ಕೊಟ್ಟಿದ್ದಾರೋ? ಅಲ್ಲದೆ ಶ್ರೀಪತಿರಾಯರಿಂದ ಸಿಗುವ ಧರ್ಮದ ಹಣವನ್ನು ತಪ್ಪಿಸಿ, ಕೊಟ್ಟ ಹಣಕ್ಕೆ ಸಾಲದ ರೂಪಕೊಟ್ಟರೆ ನ್ಯಾಯವೇ?" ಎಂದು ಕಿಟ್ಟಪ್ಪ ಮಾಸ್ತರರ

ವಾದ ಸರಣಿಯು ಹೊರಡುತ್ತಲೇ ಶಿವಪ್ಪನವರ ಮುಖವು ಸಪ್ಪಗಾಯಿತು. ಅವರು ನೆಟ್ಟಗೆ ಹೋಗಿ ಮಲಗಿಕೊಂಡರು. ತಂದೆ ಚಾವಡಿಯ ಇನ್ನೊಂದು ಮೂಲೆಯಲ್ಲಿ ಮಲಗಿಕೊಂಡರು. ಮಗನಿಗೆ ಮನಸ್ಸು ನೊಂದವೇಳೆಯಲ್ಲಿ "ಯಾಕೆ ಯೋಚಿಸುತ್ತೀ, ಶಿವು?" ಎಂದು ಮಾತಿನ ಉಪಚಾರವನ್ನಾದರೂ ಮಾಡುವ ತಾಯಿ ಇಲ್ಲ; ಗಂಡನ ಯೋಚನೆಯ ಪಾಲನ್ನು ವಹಿಸುವ ಹೆಂಡತಿಯೂ ಸಮೀಪದಲ್ಲಿಲ್ಲ. ಬಳಿಯಲ್ಲಿರುವ ತಂದೆ, ಮಗನ ಪ್ರಾಮಾಣಿಕತನವನ್ನು ಮರುಳುತನವೆಂದು, ತಿಳಿಯುವವರು. ಮಗನು ಮಾವನ ಪರವಾಗಿ ವಾದಿಸಿದ್ದೇ ಮಹಾ ಅಪರಾಧವೆಂದು ತಿಳಿಯತಕ್ಕವರು. ಇಂಥ ಬೇಡದ ಕೆಲಸ, ಧರ್ಮರಾಯನ ನಡತೆಯು ಅವರಿಗೆ ಸಮ್ಮತವಲ್ಲ. ಒಂದು ವೇಳೆ, ಮಗ ಹೊಸಮನೆ ಕಟ್ಟುವ ಹಂಬಲದಿಂದ ಒಂದಿಷ್ಟು ಸಾಲಮಾಡುವುದಿದ್ದರೆ ಅವರು ಒಪ್ಪುತ್ತಿದ್ದರೋ ಏನೋ. ಇಂಥ ವಿಚಾರವನ್ನೇಕೆ ಒಪ್ಪಿಯಾರು? ಈ ಸಂಭಾಷಣೆಯು ನಡೆದ ಎರಡು ದಿನಗಳ ತನಕ ತಂದೆ ಮಕ್ಕಳೊಡನೆ ಯಾವ ಮಾತುಕತೆಯೂ ಸಾಗಲಿಲ್ಲ. ಮೂರನೆಯ ದಿನ ಕಿಟ್ಟಪ್ಪ ಮಾಸ್ತರರೆದ್ದು ಕೊಂಡು, ಮಗನಿಗೂ ಹೇಳದೆ ತಮ್ಮ ಮಗಳ ಮನೆಗೆ ಹೊರಟು ಹೋದರು. "ಯಾಕಪ್ಪ–ನಾನು ತಂದೆಯವರೊಡನೆ ಒಣ ನಿಷ್ಠುರವನ್ನು ಕಟ್ಟಿಕೊಂಡೆ?" ಎಂದು ಶಿವಪ್ಪನವರು ಯೋಚಿಸುವಂತಾಯಿತು.

ಅವರ ಮನಸ್ಸಿನ ಸಮಾಧಾನವು ತೀರ ಕೆಟ್ಟಿತ್ತು. ಅತ್ತ ಇಂದುಮತಿಯ ಬಾಣಂತಿತನದ ಅವಧಿಯೂ ಕಳೆದಿತ್ತು. ಮನೆ ಬರಿದಾದಂತೆ, ಮನಸ್ಸೂ ಬರಿದಾಗಿತ್ತು. ಈಗ ಅವರನ್ನು ಬಿಟ್ಟು ಮನೆಯಲ್ಲಿ ಬಂಧುವರ್ಗದ ಒಬ್ಬಳು ಮುದುಕಿ ಇಷ್ಟು ಅನ್ನ, ಸಾರು ಬೇಯಿಸಿ ಹಾಕುತ್ತಿದ್ದಾಳೆ. ಇಂತಹ ವೇಳೆ ಇಂದುಮತಿಯನ್ನು ಕರೆದು ತರುವ; ಮಾವನ ಋಣ ತೀರಿಸುವುದಕ್ಕೆ ಅಸಾಧ್ಯವಾದರೂ ಅವರ ಹೊರೆಯನ್ನು ಕಡಿಮೆಮಾಡಬಹುದಲ್ಲ–ಎಂಬುದಾಗಿ ಯೋಚಿಸಿದರು. ಯೋಚನೆಯು ಹೊಳೆದ ಮರುದಿನವೇ ಧಾರವಾಡಕ್ಕೆ ಪಯಣ ಬೆಳೆಯಿಸಿದರು. ಆದರೆ ಬಾಣಂತಿತನಕ್ಕೆ ಬಂದ ಹೆಣ್ಣುಮಗಳನ್ನು ಕಳುಹಿಸಿಕೊಡುವ ತಾಯಂದಿರು ತಿಥಿ, ನಕ್ಷತ್ರಗಳನ್ನು ನೋಡದೆ ಕಳುಹಿಸಿಕೊಡುತ್ತಾರೆಯೆ? ಯಾವೊಂದೂ ಸುದ್ದಿಯನ್ನು ತಿಳಿಸದೆ, ಒಮ್ಮಿಂದೊಮ್ಮೆಗೆ ಕರೆಯಲು ಬಂದ ಗಂಡನನ್ನು ನೋಡಿ ಇಂದುವಿಗೂ ಆಶ್ಚರ್ಯವಾಯಿತು. ಅವಳೊಡನೆ ಅವರು ತಮ್ಮ ಅಸಮಾಧಾನವನ್ನೂ, ತಂದೆಗುಂಟಾದ ಬೇಸರ

ವನ್ನೂ ಕುರಿತು ಹೇಳಬೇಕಾಯಿತು. ಅವಳೂ ವ್ಯಥೆಗೊಂಡಳು. "ಹೋಗಲಿ, ಊರಿಗೆ ಹೋದ ಮೇಲೆ ನನ್ನ ಮೈಮೇಲಿರುವುದನ್ನು ಅಡವಿರಿಸಿಯಾಗಲೀ, ಮಾರಿಯಾಗಲೀ ಸಿಕ್ಕಿದಷ್ಟು ಹಣ ಕಳುಹಿಸುವ— ನಿಮಗೆ ಆಕ್ಷೇಪವಿಲ್ಲ ದಿದ್ದರೆ" ಎಂದು ಆಕೆ ಸಮಾಧಾನ ಹೇಳಿದಳು. ಇಂದುವಿನಲ್ಲಿ ಅಷ್ಟೊಂದು ಪರಿವರ್ತನೆಯಾದ ಬಗ್ಗೆ ಶಿವಪ್ಪನವರಿಗೆ ಸಂತೋಷವೇ ಆಯಿತು.

ಆದರೆ ಆ ಬಾರಿ ಶಿವಪ್ಪನವರು ಹೋದವರು, ಹೋದಂತೆಯೇ ಮರಳಿ ದರು. ಇನ್ನೊಮ್ಮೆ ಸಮನಾದ ಮುಹೂರ್ತಕ್ಕೆ ಮುಂಚಿತವಾಗಿ ಹೋಗಿ— ಇಂದುಮತಿಯನ್ನೂ, ತಮ್ಮ ಚಿಕ್ಕ ಕೂಸನ್ನೂ ಕರೆದೊಯ್ಯಬೇಕಾಯಿತು. ಸೊಸೆ ಮನೆಗೆ ಬರುವಾಗ ಮಾಸ್ತರರ ಸವಾರಿಯೂ ಮನೆಗೆ ಮರಳಿತ್ತು. ಮೊಮ್ಮಗನ ಮುಖವನ್ನು ಕಂಡ ಮೇಲೆ ಮನಸ್ಸು ಸಮಾಧಾನವಾಯಿತೇ ಎಂದರೆ-ಅದೂ ಕಾಣೆ. ಮೊಮ್ಮಗನನ್ನು ಮಾತನಾಡಿಸುತ್ತಾರೆ-ನಿಜ. ಆದರೆ ಸೊಸೆಯ ವಿಚಾರದಲ್ಲಿ ಇದ್ದ ಆದರವೆಲ್ಲ ಕರಗಿದೆ. ತಮ್ಮ ಮಗನ ಮನಸ್ಸು ಕೆಡುವುದಕ್ಕೆ ತವರನ್ನು ನೆಚ್ಚಿರುವ ಇಂದುವೇ ಕಾರಣ ಎಂದು ಅವರು ಯೋ ಚಿಸತೊಡಗಿದ್ದಾರೆ. ಹಾಗೆ ಯೋಚಿಸಿದುದು ಮಾತ್ರವಲ್ಲ, ಬಾಯಿಯಿಂದ ಅಂದೂ ಆಯಿತು. ಅದು ಇಂದುಮತಿಯ ಕಿವಿಗೂ ಕೇಳಿಸಿತು. ಇದರಿಂದ ಅವಳ ಅಭಿಮಾನಕ್ಕೆ ತುಂಬ ನೋವಾಯಿತು.

ಮಾಸ್ತರರು ಮಾತನಾಡತೊಡಗಿದರೆ ಅವರ ನಾಲಿಗೆಗೆ ಕಡಿವಾಣವಿಲ್ಲ. "ದೊಡ್ಡವರೆಂಬ ಜಂಭ ಅವಳಿಗೆ ಬಹಳ. ಅದನ್ನು ತವರಿಂದ ತಂದೆ, ಇದನ್ನೂ ತವರಿಂದ ತಂದೆ, ಮಾವನವರು ಕೊರಳ ತಾಳಿ ಕರಿಮಣಿಗಳನ್ನೂ ಸಹ ಕೊ ಟ್ಟದ್ದಿಲ್ಲ, . . . ಎನ್ನುತ್ತಿದ್ದಳು. ಈಗ ತವರು ಮನೆಯ ದೊಡ್ಡಸ್ತಿಕೆ ತಿಳಿ ಯುತ್ತದೆಯಲ್ಲ. ಅವಳ ತಂದೆ ಮೊಮ್ಮಗನಿಗೆ ಹಾಕಿ ಕಳುಹಿಸಿಕೊಟ್ಟ ಪವನು ಸರ, ಉಡಿದಾರ, ಒಂಟೆ, ಒಡ್ಯಾಣ ಎಲ್ಲ ಕಾಣುತ್ತಿದೆಯಲ್ಲ" ಎಂದು ಹಂಗಿಸಿ ದರು. ಮಗು ಅಷ್ಟು ಬರಿದಾಗಿ ಮನೆಗೆ ಬಂದಿಲ್ಲ. ಅವರ ನಡುವಿನಲ್ಲಿ ಒಂದೆಳೆ ಯ ಚಿನ್ನದ ಉಡಿದಾರವನ್ನಾದರೂ ಹಾಕಿಯೇ ಕಳುಹಿಸಿದ್ದರಾದರೂ, ಮಾಸ್ತ ರರ ಮಾತಿನಲ್ಲಿ, ಆ ಉಡಿದಾರ ರೇಶಿಮೆ ಹಗ್ಗಕ್ಕಿಂತ ಕಡಿಮೆಯಾಗಿ ಬಿಟ್ಟಿದೆ. ಅವೆಲ್ಲ ಬೇಡದ ಮಾತುಗಳು. ಮನೆಯ ಹಿರಿಯರೂ, ತಿಳುವಳಿಕೆ ಇದ್ದವರೂ ಅಂಥ ಮಾತುಗಳನ್ನು ಆಡುವಾಗ ಪ್ರತ್ಯುತ್ತರ ಕೊಡುವವರು ಯಾರಿದ್ದಾರೆ? ನೋವನ್ನು ತಡೆಯದ ಗಳಿಗೆಯಲ್ಲಿ ಇಂದುವು ಗಂಡನೊಡನೆ "ಹಿಂದೆಂದೂ

ಹೀಗೆ ಅವರು ನಂಜನ್ನು ಕಾರಿದವರಲ್ಲ. ನನ್ನ ದುರ್ದೈವಕ್ಕೆ ಅವನ್ನೆಲ್ಲ ಕೇಳ ಬೇಕಾಗಿದೆ. ಅತ್ತೆಯವರು ಮನೆಯಲ್ಲಿದ್ದಿದ್ದರೆ ಅವರಾದರೂ ತಡೆಯುತ್ತಿದ್ದರು." ಎಂದು ತನ್ನ ಕೊರಗನ್ನು ಹೇಳಿ, ಗಂಡನ ಕೊರಗನ್ನು ಹೆಚ್ಚಿಸುತ್ತಿದ್ದಳು. "ಈಕೆ ಸುಖಕ್ಕೋ, ದುಃಖಕ್ಕೋ ನನ್ನನ್ನು ನಂಬಿ ಬಂದಳು. ಎಳೆತನದಲ್ಲಿ ಸುಖ, ಸಂಪತ್ತನ್ನನುಭವಿಸಿ ಈ ತಾರುಣ್ಯದಲ್ಲಿ ಅದನ್ನು ಕಳೆದುಕೊಂಡು, ಆ ನೋವನ್ನು ಸಹಿಸುತ್ತಿರುವ ಗಳಿಗೆಯಲ್ಲೇ ಇಂಥ ಮಾತಿನ ನಂಜನ್ನೂ ಸಹಿಸಬೇಕಾಯಿತೇ?" ಎಂಬ ಚಿಂತೆ ಶಿವಪ್ಪನವರಿಗೆ. ಆ ನೋವು ತಡೆಯದ್ದಕ್ಕೆ "ಅಪ್ಪಾ, ಅವಳಿಗೆ ಅಂತಹ ಮಾತನ್ನು ನೀವೇಕೆ ಹೇಳಬೇಕು? ಅವಳೇನು ತಪ್ಪು ಮಾಡಿದಳು? ನಿಮಗೆ ಬಯ್ಯುವ ಮನಸ್ಸಾಗಿದ್ದರೆ ನನ್ನನ್ನು ಬಯ್ಯಬಹುದಿತ್ತು" ಎಂದರು. ಮಗನು ಹೆಂಡತಿಯ ಪಕ್ಷವನ್ನು ಹಿಡಿದು, ತನ್ನನ್ನು ಅನಾದರಿಸತೊಡಗಿದ್ದಾನೆ ಎಂದು ತಿಳಿದು ಕಿಟ್ಟಪ್ಪನವರು ಇನ್ನಷ್ಟು ರೇಗಿದರು. "ನಿನಗೆ ನಾನು ಕಣ್ಣಿಗೊಂದು ಕಸವಾಗಿ ಕಾಣುತಿದ್ದೇನಲ್ಲವೆ?" ಎಂದು ಪ್ರತ್ಯುತ್ತರವನ್ನು ಸಲ್ಲಿಸಿದರು.

ಇಂದುಮತಿ ತನ್ನ ಸರದಿಯಲ್ಲಿ ಗಂಡನಿಗೆ ತಿಳಿವನ್ನು ಹೇಳುವ ಕಾಲ ಬಂದಿತು. "ನಾನು ಸತ್ಯದ ಸಂಗತಿಯನ್ನು ನಿಮಗೆ ಹೇಳಿದ್ದೇ ತಪ್ಪಾಯಿತು. ನೀವು ಅದನ್ನು ಮಾವನವರಿಗೆ ಹೇಳಿದ್ದೇಕೆ? ಏನು ಪ್ರಯೋಜನವಾಯಿತು?" ಎಂದಳು. ಇಂದುಮತಿಯ ಪಾಲಿಗೆ ಅತ್ತೆಯಿಲ್ಲದ ಮನೆ ಈಗ ತೀರ ಬರಿದಾಗಿ ಕಾಣಿಸುತ್ತಿದೆ. ಅವಳಿದ್ದಾಗ ತನ್ನನ್ನು ಕುರಿತಾಗಿ ತೋರಿದ ಆದರ, ಪ್ರೀತಿಗಳನ್ನು ಮರೆಯಳು. "ಪಾಪ, ದೊಡ್ಡವರ ಮನೆಯಲ್ಲಿ ಹುಟ್ಟಿ, ಬೆಳೆದ ಮಗು; ಅವಳಿಗಿಲ್ಲಿ ಕಷ್ಟವಾಗಬಾರದು" ಎಂದಿದ್ದಳು. ಹಾಗೆಯೇ ಸೊಸೆಯನ್ನು ನೋಡಿಕೊಂಡಿದ್ದಳು. ಅಲ್ಲದೆ ಮಗನೊಡನೆ "ಅವಳ ಮನೆಯವರಿಂದಲೇ ನೀನೊಂದು ಸ್ಥಿತಿಗೆ ಬಂದೆ. ಅದನ್ನು ಮರೆಯಬೇಡ" ಎಂದವಳು ಆಕೆ. ಶಿವಪ್ಪನವರು ಆ ಮಾತುಗಳನ್ನೆಲ್ಲ ನಡೆಸಿಕೊಟ್ಟಿದ್ದಾರೆ. ಆದರೆ ತಮ್ಮ ತಾಯಿ ಮಾಯವಾಗುತ್ತಲೇ, ತಂದೆಯಲ್ಲಿ ಈ ವರೆಗೆ ಕಂಡು ಬಂದ ತಾಳ್ಮೆ, ತೂಕ, ವಿವೇಕಗಳು–ಒಮ್ಮಿಂದೊಮ್ಮೆಗೇ ಅದೃಶ್ಯವಾಗಿ, ಹೀಗೆ ಸಿಡಿಮಿಡಿಗೊಂಡಾರು; ನಂಜಿನ ಮಾತನ್ನು ಆಡಿಯಾರು-ಎಂದು ಅವರು ತಿಳಿದಿರಲಿಲ್ಲ. ಕಾರಣವನ್ನು ಊಹಿಸುತ್ತಾರೆ; ಪ್ರಾಯಶಃ ಅಮ್ಮ ಸತ್ತುದರಿಂದ ಅವರ ಮನಸ್ಸಿನ ತೋಲವೇ ಕೆಟ್ಟಿರಬೇಕು–ಎಂದಂದುಕೊಳ್ಳುತ್ತಾರೆ. ಆದರೆ ಮುಂದೆ

ಯೂ ಇಂತಹ ಮಾತುಗಳು ತಂದೆಯ ಬಾಯಿಯಿಂದ ಬಂದರೆ, ತಮ್ಮಿಬ್ಬರ ಬಾಳ್ವೆಯೂ ಕಳೆಗೆಟ್ಟೀತಲ್ಲ, ಶಾಂತಿಯಿಲ್ಲದ ನರಕವಾದೀತಲ್ಲ–ಎಂದು ತೋರಿತು.

ಇಂದುಮತಿಗೆ ಈಗ ಹೊತ್ತು ಭಾರವಾಗಿ ಕಾಣುವುದಿಲ್ಲ; ಗಳಿಗೆಗಳನ್ನೆಣಿಸಬೇಕಿಲ್ಲ. ಎಷ್ಟು ವಿರಾಮವಿದ್ದರೂ ಅಷ್ಟನ್ನೆಲ್ಲ ಕದ್ದು ಬಿಡುವಂಥ ಕೂಸಿದೆ. ಕೈಯಲ್ಲಿ ಹಿಡಿದರೆ ಇನ್ನೂ ತೆವಳುತ್ತಿರುವ ಆ ಮಗುವನ್ನು ಹೊತ್ತು, ತೂಗಿ, ಆಡಿಸಿ, ತಿರುಗಾಡಿಸಿದಷ್ಟು ತೃಪ್ತಿಯಿಲ್ಲ ಅವಳಿಗೆ. ದೇವರ ಗುಡಿಗೆ ಹೋಗಿ, ಊರಿನ ನಾಲ್ವರು ಹೆಂಗಳೆಯರಿಗೆ ತನ್ನ ಆ ಹೊಸ ಸಂಪತ್ತನ್ನು ತೋರಿಸಿದ ದಿವಸ ಅವಳ ಜೀವನದಲ್ಲೇ ಹೆಮ್ಮೆಯ ದಿನವಾಗಿತ್ತು. ಆ ಮಗುವಿನ ಮುಖದ ನಾಲ್ಕುಮೂಲೆಗಳಿಗೂ ದೃಷ್ಟಿ ಬೊಟ್ಟುಗಳನ್ನಿರಿಸಿದಳು; ಗೋರಬಿನ ಆಕಾರದ ಧಾರವಾಡದ ಗೊಂಡೆಯ ಟೋಪಿಯನ್ನು ಹಾಕಿದಳು; ಮಿದುವಾದ ಹಚ್ಚಡದಲ್ಲಿ ಅದನ್ನು ವಿರಮಿಸಿಕೊಂಡು, ಮನೆಯ ಅಡುಗೆಯ ಅಜ್ಜಿಯೊಡನೆ ಹಣ್ಣುಕಾಯಿ ಹಿಡಿಸಿಕೊಂಡು, ಅಮ್ಮನವರ ಗುಡಿಗೆ ಹೊರಬಿದ್ದಳು. ಗುಡಿಯ ಪ್ರಾಂಗಣದಲ್ಲಿ ನೆರೆದ ಮುತ್ತೈದೆಯರು, ಟೊಪ್ಪಿಯಲ್ಲಿ ಮುಖವೇ ಮಾಯವಾಗಿದ್ದ ಆ ಮಗುವನ್ನು ಕಂಡು "ಇಂದುವಿನ ಮಗು ನೋಡೇ?" ಎಂದೊಬ್ಬೊಬ್ಬರ ಕೈಗೆ ಅದನ್ನು ತೇಲಾಡಿಸಿದರು. ಆ ದಿನ ಅವಳನ್ನು ಉಪಚರಿಸದ ಜನರಿಲ್ಲ. ಮಗುವನ್ನು ಹರಸದವರಿಲ್ಲ. ಅಲ್ಲದೆ "ಇಂದುವಿನ ಮಗು, ನೋಡೆ" ಎಂದಾಗ ಅವಳ ಕಿವಿಗೇನೆ ಆ ಮಾತು ಹೊಸತೆನಿಸಿತು. ಹಿಂದೆ ಜನರು ಹಾಗೆ ಹೇಳಲಿಲ್ಲವೋ,ಹೇಳಿದ್ದರೂ ಇವಳು ಕೇಳಲಿಲ್ಲವೋ– ಈಗ "ಇಂದೂ" ಎನ್ನುತ್ತಿದ್ದಾರೆ. ಕಿಟ್ಟಪ್ಪ ಮಾಸ್ತರರ ಸೊಸೆಯಾಗಿದ್ದವಳು, ಡಾಕ್ಟರರ ಹೆಂಡತಿಯಾಗಿದ್ದವಳು ಮಗುವನ್ನು ಹಡೆದ ಮೇಲೆ ಅವಳ ಹೆಸರಿನಿಂದಲೇ ಕರೆಯಬಹುದಾದ ಪ್ರತಿಷ್ಠಿತ ವ್ಯಕ್ತಿಯಾಗಿದ್ದಾಳೆ. ಆ ಮಾತು ಅವಳ ಕಿವಿಗೂ ಇಂಪಾಗಿ ಕಂಡಿತು; ಆನಂದವನ್ನುಣಿಸಿತು. ದೇವರ ಗುಡಿಯಲ್ಲಿ ಆ ಮಗುವನ್ನು ಕಂಡು ಉಪಚರಿಸಿದ ವ್ಯಕ್ತಿಗಳಲ್ಲಿ, ಅಲ್ಲಿಗೆ ಬಂದ ಗುಲಾಬಿಯೂ ಒಬ್ಬಳಾಗಿದ್ದಳು. ಅವಳ ಕೈಗೂ ಆ ಮಗು ಹೋಯಿತು. ಹೋಯಿತೆಂದರೇನು? ಆರು ತಿಂಗಳ ಕೂಸದು. ಅವಳು ಹಿಡಿದಾಗ ಚೀರಿ ಆಕ್ಷೇಪಿಸಲಿಲ್ಲ. ಮಗುವಿನ ಕಪೋಲವನ್ನು ಸವರಿ, ಅದನ್ನು ಗುಲಾಬಿಯು ನಗಿಸುತ್ತಿರುವಾಗ ಒಂದೆರಡು ಪಿಸುಮಾತುಗಳೂ ಹೊರಡುತ್ತಿದ್ದುವು.

ಆ ದಿನದ ಮಟ್ಟಿಗೆ ಇಂದುಮತಿಯೇ ಕಥಾನಾಯಕಿ. ದೇಗುಲದ ಜಗುಲಿಯಲ್ಲಿ ಕುಳಿತು, ಪರಿಚಿತರಿಗೆ ಧಾರವಾಡದ ಬಾಣಂತಿತನ ಬಣ್ಣಿಸಿದಳು. ಅವಳು ಮಾತಿನ ಗೊಂದಲದಲ್ಲಿದ್ದಳು. ದೂರದ ಪಿಸುಮಾತುಗಳಲ್ಲಿ ಗುಲಾಬಿಯ ಕಿವಿಗೆ ಮಾತ್ರ ಒಂದೆರಡು ಮಾತುಗಳು ಕೇಳಿಸಿದುವು. "ಇಷ್ಟು ಸಾರಿ ಬಂದಾಗ ತವರಿಂದ ಆ ಚಿನ್ನ ತಂದೆ, ಇದನ್ನು ಮಾಡಿಸಿದೆ ಎನ್ನುತ್ತಿದ್ದಳು. ಈಸಾರಿ ಆ ಜಂಭ ಒಂದೂ ಇಲ್ಲ; ಮಗುವಿನ ಮೈ ಮೇಲೆ ಒಂದು ನಾಲ್ಕು ಪವಸಿನಷ್ಟು ಚಿನ್ನವೂ ಕಾಣಿಸುವುದಿಲ್ಲ. ತಲೆಕೂದಲಿನಷ್ಟು ಸಪುರದ ಉಡಿದಾರವೊಂದಿದೆ" ಎಂದು ಒಬ್ಬಳೆಂದ ಮಾತು ಗುಲಾಬಿಯ ಕಿವಿಗೇಕೋ ಸೀಸ ಕರಗಿಸಿ ಹೊಯ್ದಂತೆನಿಸಿತು.

ಅವಳು ಆ ಮಗುವನ್ನೆತ್ತಿದ್ದಾಳೆ, ಮುದ್ದಿಸಿದ್ದಾಳೆ. ಸಪುರದ ಉಡಿದಾರವನ್ನು ಬಿಟ್ಟರೆ ಅದಕ್ಕೆ ಬೇರೆ ಚಿನ್ನಾಭರಣವಿಲ್ಲದ್ದನ್ನೂ ಕಂಡಿದ್ದಾಳೆ. ಡಾಕ್ಟರರ ಮಾವಂದಿರು ಶ್ರೀಮಂತರೆಂಬುದನ್ನು ಕೇಳಿದ್ದಾಳೆ. ಮಾವನ ಮನೆಯವರು ಒಂದಿಷ್ಟು ಹೆಚ್ಚಾಗಿಯೇ ಚಿನ್ನ ಹಾಕಿ ಕಳುಹಿಸಬಹುದಿತ್ತು. ಯಾಕೆ ಕಳುಹಿಸಲಿಲ್ಲವೋ-ಎಂಬ ವಿಚಾರ ಅವಳಿಗೆ ಹೊಳೆದರೂ "ಏನೋ-ಗಂಡು ಮಗು. ಹಾಕಲಿಲ್ಲ. ಆದರೆ ಅಂಥ ಮಾತುಗಳನ್ನು ಹೇಳುವುದಕ್ಕೆ ಇವರ್ಯಾರು?" ಎಂದು ತೋರಿತು. ಮನಸ್ಸು ತಡೆಯದೆ ಇನ್ನೊಮ್ಮೆ ಆ ಮಗುವನ್ನು ಮುದ್ದಿಸಿ, ತನ್ನ ಮಗುವಿಗೆ ಹಾಲು ಕುಡಿಸುವ ವೇಳೆಯಾಯಿತೆಂದು ಹೊಳೆದು, ಅದನ್ನೊಪ್ಪಿಸಿ ಅವಸರದಿಂದ ಮನೆಗೋಡಿದಳು. ಮನೆಗೆ ಹೋದ ಮೇಲೆಯೂ ಇಂದಮ್ಮನ ಮಗುವಿಗೆ ಆಭರಣವಿಲ್ಲದುದರ ಚಿತ್ರವೇ ಅವಳಿಗೆ ಕಾಣಿಸುತ್ತಿತ್ತು. 'ಬಡವೆಯಾದ ನಾನೇ ಎರಡು ಪವಸಿನಷ್ಟು ಚಿನ್ನ ಮಾಡಿಸಿದ್ದೇನೆ. ಹೆಚ್ಚು ಮಾಡಿಸಲು ಹೆದರಿಕೆಯಾಗಿ ಬಿಟ್ಟೆ ಹೊರತು ಮಾಡಿಸಬಾರದೆಂದಲ್ಲ" ಎಂದು ಯೋಚಿಸುತ್ತ ಮಲಗಿಕೊಂಡಳು. ನಿದ್ರೆಯುದ್ದಕ್ಕೂ ಅದೇ ಕನಸು ಕಾಣತೊಡಗಿತು. ತನ್ನ ಸಲುವಾಗಿ ಶಿವಪ್ಪ ಡಾಕ್ಟರರು ಎಷ್ಟೆಲ್ಲ ಶ್ರಮ ವಹಿಸಿ ತನ್ನನ್ನುಳಿಸಿದರು; ಮಗುವನ್ನುಳಿಸಿದರು. ಕೊಂಡುಹೋದ ಚಿನ್ನಾಭರಣಗಳನ್ನು ಮರಳಿ ಕೊಡಿಸಿದರು. ಅವರಿಗೆ ಆ ದಿನ ಸಾಹೇಬರು ಕೊಡಿಸಿದ್ದು ಬರಿಯ ನೂರು ರೂಪಾಯಿ. ಅವರು ಮಾಡಿದ ಉಪಕಾರಕ್ಕೆ ಅದರ ನಾಲ್ಕರಷ್ಟು ಕೊಟ್ಟರೂ ಸಾಲದು ಎಂಬ ಕೃತಜ್ಞತೆ ಮೂಡಿತು. 'ಏನೂ ಇರಲಿ, ಅವರ ಋಣ ಸ್ವಲ್ಪವನ್ನಾದರೂ ಸಲ್ಲಿಸುತ್ತೇನೆ. ಒಂದೆರಡು ಪವನು

ಅವಳಿಗೀಗ ಮಾಧವನು ತನ್ನ ಜೀವನದಲ್ಲಿ ಒಂದು ಸಮಸ್ಯೆಯು ನ್ನುಂಟು ಮಾಡುವುದಕ್ಕಷ್ಟೆ ಬಂದು ಹೋದವನೆಂದು ಗೊತ್ತಾಗಿದೆ. ತನ್ನ ಬಾಳನ್ನು ಸಾಗಿಸಲು ನೆರವಾಗುವವರು ಇಲ್ಲ; ಪ್ರೇಮದ ಹಸಿವನ್ನು ಹಿಂಗಿ ಸುವವರೂ ಇಲ್ಲ. ಅದೆಲ್ಲ ಬರಿಯ ಕನಸು. ತಾನು ಹೆಜ್ಜೆತಪ್ಪುವ ಮೊದಲೇ, ಕುಲದ ಕಸುಬಿಗೆ ಇಳಿಯುವ ಮೊದಲೇ, ಒಬ್ಬ ಬಡಪಾಯಿಯನ್ನಾದರೂ ವರಿಸಿದ್ದರೆ ಇಂತಹ ಯೋಚನೆಗೆ ಅವಕಾಶವಿರಲಿಲ್ಲ. ಈಗ ತನ್ನ ಮೈಯ್ಯನ್ನು ಬಯಸುವವರೂ, ಮನವನ್ನು ಬಯಸುವವರೂ ಎಷ್ಟೋ ಮಂದಿ ಇದ್ದಾರೆ. ಅನುಕೂಲ ಸಂಬಂಧಕ್ಕೆ ಕುಲದವರ ಸಹಾಯ ಬೇಕಿಲ್ಲ; ಊರ ರಸಿಕರ ಪತ್ರಗಳು ಬರುತ್ತಲೇ ಇವೆ. ಸಾಹೇಬರು ಮಡಿದ ಗಳಿಗೆಯಿಂದ ಬರುತ್ತ ಲಿವೆ. ಅಂಚೆಯಿರುವ ತನಕ ಅವಕ್ಕೆಂದೂ ಕೊರತೆಯಿಲ್ಲ. ಕೆಲವನ್ನು ಓದಿ, ಕೆಲವನ್ನು ಓದದೆ ಒಲೆಗೂ ಎಸೆದಿದ್ದಾಳೆ. ಪ್ರತ್ಯುತ್ತರ ಬಾರದಿದ್ದುದನ್ನು ಕಂಡು ಗದರಿಸಿ,ಬೆದರಿಸಿ ಪತ್ರಗಳನ್ನು ಬರೆದವರಿದ್ದಾರೆ."ನನ್ನನ್ನೇನು ಮಾಡಿ ಯಾರು? ಕೊಲ್ಲುತ್ತಾರೇನು?" ಎಂದು ಅಂಥವರ ವಿಷಯದಲ್ಲಿ ಅವಳ ಮನಸ್ಸು ರೇಗಿದೆ. ಆದರೆ ದುಷ್ಕರ ಭೀತಿ ಒಮ್ಮೊಮ್ಮೆ ಉಂಟಾಗುತ್ತದೆ. ಅಜ್ಜಿ ತೀರಿಕೊಂಡ ಬಳಿಕ ಯಾರೋ ದೂರದ ಸಂಬಂಧಿಯನ್ನು ಮನೆಗೆ ತಂದಿರಿಸಿ ಕೊಂಡಿದ್ದಾಳೆ. ತನ್ನಿಂದ ಅಡುಗೆ, ಮಗುವಿನ ಚಾಕರಿಗಳೆರಡೂ ಆಗದೆಂದು; ತಾನು ಒಬ್ಬಂಟಿಗಳು ಎಂದು. ಹರೆಯ ಸಂದ ಆಕೆಯೂ ಸಹ, ಆಚೀಚಿನ ಕೇರಿಗಳಲ್ಲಿ ತಿರುಗಾಡಿಕೊಂಡು ಬಂದು ಗುಲಾಬಿಗೆ ಹಿತೋಪದೇಶ ಮಾಡು ವುದುಂಟು. ಅವಳ ಮನಸ್ಸಿನ ದಾರಿಯೇ ಬೇರೆ. 'ಈ ಪಾಪದ ಹುಡುಗಿಯು ಸತ್ತವರ ಮೇಲಿನ ವ್ಯಾಮೋಹದಿಂದಲೇ, ನರಳಿ ಬೆಂಡಾಗಿದ್ದಾಳೆ' ಎಂದು ಅವಳು ಉಪದೇಶಮಾಡುವುದಕ್ಕೆ ಬಂದರೆ, ಗುಲಾಬಿಗೆ ಇದ್ದ ತಾಳ್ಮೆಯೂ ತಪ್ಪುತ್ತದೆ. "ನಿನ್ನನ್ನು ನಾನು ಬುದ್ಧಿ ಹೇಳುವುದಕ್ಕೆ ಕರೆಯಿಸಿಕೊಂಡುದಲ್ಲ. ಒಬ್ಬಳೇ ಇರುವುದಕ್ಕೆ ಬೇಸರವಾಗುತ್ತದೆ, ಒಂದು ಮುಷ್ಟಿ ಬೇಯಿಸಿ ಹಾಕು ವವರಿಲ್ಲ. ನಿನಗೂ ಬೇರೆ ಆಧಾರವಿಲ್ಲ ಎಂದು ಕರೆಯಿಸಿಕೊಂಡರೆ ನೀನೂ ನನ್ನ ಮೇಲಿನ ಪಾರುಪತ್ಯಕ್ಕೆ ಹೊರಟ್ಟಿದ್ದೀಯಾ," ಎಂದು ಅಬ್ಬರಿಸಿ ಅವಳ ಬಾಯಿಯನ್ನು ಕಟ್ಟುತ್ತಾಳೆ.

ಹಾಗೆಯೇ ಕುಳಿತರೆ ದಿನ ಸರಿದಂತೆ ಜೀವನವೂ ಕಷ್ಟವಾದೀತೆಂದು ಅವಳಿಗೂ ಗೊತ್ತಿದೆ. ಇರುವ ವರಮಾನ ಸ್ವಲ್ಪ—ಹಿತ್ತಿಲು ತೋಟದಿಂದ

ಮನೆಗೆ ಬೇಕಾಗುವ ತೆಂಗಿನಕಾಯಿ ಸಿಗುತ್ತದೆ; ಹಲಸಿನಕಾಯಿ ಸಿಗುತ್ತದೆ. ಹಿರಿಯರ ಉಂಬಳಿಯಿಂದ ಒಂದಿಷ್ಟು ಅಕ್ಕಿಯೂ ಬರುತ್ತದೆ. ಮತ್ತಿರುವು ದೆಂದರೆ ಒಂದಿಷ್ಟು ಆಭರಣಗಳು ಮಾತ್ರ. ಬರಿಯ ಅಷ್ಟರಿಂದಲೇ ತನ್ನ, ಕೂಸಿನ, ಕೆಲಸದವಳ, ಮೂವರ ಜೀವನವು ಹೋಗಲಾರದು. ಹಾಗೆಂದು ತನ್ನನ್ನು ಬಯಸುವವರಿಗಾಗಿ ಮಾರಿಕೊಳ್ಳಲೇ? ಅದನ್ನೆಣಿಸಿದರೋ–ಮೈ ಜುಮ್ಮೆನ್ನುತ್ತದೆ. ಆ ಸುಖವೇನೆಂದು ನಾಲ್ಕು ವರ್ಷಗಳ ದೀರ್ಘಕಾಲದಲ್ಲಿ ಅನುಭವಿಸಿದ್ದಾಳೆ. ಅದರಿಂದ ಮನಸ್ಸು ಕಂಗೆಟ್ಟರೂ ಹೊಟ್ಟೆತುಂಬಿಸಿ ಕೊಳ್ಳುವುದಕ್ಕೆ ಇನ್ನೊಮ್ಮೆ ತನ್ನನ್ನು ಮಾರಿಕೊಳ್ಳುವ ಸಾಹಸ ಮಾಡಲಿಲ್ಲ.

ಇಂತಹ ದಿನಗಳಲ್ಲಿ ಯೋಚನೆ ಕವಿದು ಮನಸ್ಸು ಮಸುಕಾದಾಗ ಸ್ವಲ್ಪ ಮಟ್ಟಿನ ಅಭಯವನ್ನುಂಟುಮಾಡುವ, ಒಂದು ಘಟನೆ ನಡೆಯಿತು. ನಡೆದ ಬಹು ದಿನಗಳ ತನಕ ಅವಳು ಯಾರೊಡನೆಯೂ ಬಾಯಿಬಿಡಲಿಲ್ಲ. ಆದಮ್ ಸಾಹೇಬರು ಮನೆಯನ್ನು ಹೊಕ್ಕು, ಅವಳನ್ನು ಬೆದರಿಸಿ, ಒಳಕೋಣೆಯ ಕವಾಟನ್ನು ಒಡೆದು, ಸಂದುಕ ಮುರಿದು ಹೊರಟುಹೋದ ಮೇಲೆ ಅವಳಲ್ಲೊಂದು ಯೋಚನೆ ಮೂಡಿತು. 'ತನ್ನ ಅಜ್ಜಿ, ತಾಯಿಯರು ಕೆಲವು ತಲೆಮಾರುಗಳಿಂದ ಜಾತಿಯ ಕಸುಬನ್ನು ನಡೆಯಿಸಿ ಬಂದವರು. ಒಳ್ಳೆಯ ಅನುಕೂಲವಂತರ ಕೈಹಿಡಿದವರು ಎನ್ನುತ್ತಾರೆ. ತಾಯಿ ಸಾಯುವಾಗ ತನಗೆ ಬರಿಯ ಮೂರು ವರ್ಷ ಪ್ರಾಯ. ತನ್ನ ನೆನಪಿನಲ್ಲಿ, ಅನಂತರದ ದಿನಗಳೆಲ್ಲ ಬಡತನದ ದಿನಗಳಾಗಿ ಕಾಣಿಸಿದ್ದಾವೆ. ಅವರು ದುಡಿದದ್ದೆಲ್ಲ ಉಂಡು ಮುಗಿಸಿದ ಹಾಗೆ ಕಾಣುತ್ತದೆ ಈ ಮನೆಯನ್ನು ಕಂಡರೆ. ತನಗಾದರೂ ಸಾಹೇಬರು ಒಂದಿಷ್ಟು ಚಿನ್ನಾಭರಣ ಕೊಟ್ಟುದು ಕಾಣುತ್ತದೆ; ಹಾಳಾಗದೆ ಉಳಿದಿದೆ. ಅಜ್ಜಿಯ ಮೈಮೇಲೆ ಏನೊಂದೂ ಅಲಂಕಾರವಿರಲಿಲ್ಲ. ತಾಯಿ ತುಂಬಾ ರೂಪವತಿಯಾಗಿದ್ದಳಂತೆ–ಆ ರೂಪಕ್ಕೂ ಏನೂ ಬೆಲೆ ಬಾರದೆ ಹೋಯಿತೇ' ಎಂಬ ವಿಚಾರ ತರಂಗವು ಮೊಳೆಯಿತು.

ಆ ಆಸೆಯಿಂದ ಕಸಬರಿಗೆ ಹಿಡಿದು ಮನೆಯ ಸಂದುಗೊಂದುಗಳನ್ನು ಹೊಸ್ತಿಲು,ನಾಗಂದಿಗೆಗಳನ್ನು, ಮುಚ್ಚಿಗೆ, ಅಟ್ಟಗಳನ್ನು ಹುಡುಕಿದಳು.ಅಡಗಿಸಿದ್ದೇನಾದರೂ ಇರಬಹುದೆಂಬ ಆಸೆ. ಅದರಿಂದ ದೊರೆತ ಪ್ರಯೋಜನ–ಮೂರು ಸಾರಿ ಮಿಂದರೂ ಹೋಗಲಾರದಷ್ಟು ಮಸಿಯ ಲೇಪ. ಹಾಗೆಂದು ಆ ಕೆಲಸವನ್ನುಮನೆಗೆಲಸಮಾಡುವ ಕಾಳಿಗೆ ಒಪ್ಪಿಸಲಾರಳು. ಮೈಯ ಮಸಿ

ಯನ್ನು ಕಂಡು ಅವಳೇ ಕೇಳುತ್ತಾಳೆ "ಯಾಕೆ, ಗುಲಾಬಿ? ನನಗೆ ಹೇಳುತ್ತಿದ್ದರೆ ಗುಡಿಸುತ್ತಿರಲಿಲ್ಲವೆ?" ಎಂದು. ಅವಳಿಗೆ ತಿಳಿಯಬಾರದೆಂದೇ ಇವಳ ಉದ್ದೇಶ. ಒಂದು ದಿನ ಒಳಗಿನ ಕೋಣೆಯ ಕಿರಿಯ ಕವಾಟದ ಸಾಮಾನುಗಳನ್ನೆಲ್ಲ ಸರಿಯಾಗಿರಿಸುವೆನೆಂದು ಯೋಚಿಸಿದಳು. ಅದರಲ್ಲಿ ತಾನು ಎಳೆಯಳಾಗಿದ್ದಾಗ ಆಡಿದ ಚಂದನದ ಗೊಂಬೆಗಳಿದ್ದ ನೆನಪು ಬಂದಿತು. ಅವನ್ನು ತೆಗೆದು ತೊಳೆದಿರಿಸಿದರೆ ತನ್ನ ಮಗುವಿಗಾದೀತು—ಎಂದು ತೋರಿ ಒಳಕ್ಕೆ ಹೋದಳು. ಮಧ್ಯಾಹ್ನದ ಊಟ ಮುಗಿದಿತ್ತು. ಕಾಳಿಯು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಅದಕ್ಕೆ ನಿದ್ದೆ ಬಂದುದನ್ನು ಕಂಡು, ನಿತ್ಯದ ವಾಡಿಕೆಯಂತೆ ಉಂಡ ಅನ್ನವನ್ನು ಕರಗಿಸುವುದಕ್ಕೆ ನಾಲ್ಕು ಮನೆಗಳಿಗೆ ಹೊರಟಳು. ಅದೇ ಸಮಯವೆಂದು, ಗುಲಾಬಿ ಕೋಣೆಯನ್ನು ಹೊಕ್ಕಳು. ಅಲ್ಲಿಗೆ ಬೆಳಕು ಬೀಳುವುದೆಂಬುದಿಲ್ಲ. ಒಣಗಿದ ತೆಂಗಿನ ಕಾಯಿಗಳನ್ನು ತುಂಬಿಸಿಕೊಡುವುದಕ್ಕಷ್ಟೆ ಆ ಕೋಣೆಯ ಉಪಯೋಗವಿತ್ತು. ಅದರ ಒಂದು ಗೋಡೆಯ ಮಧ್ಯದಲ್ಲಿ ನಟ್ಟಂಥ ಕವಾಟಿದೆ. ಅದಕ್ಕೆ ಬಾಗಿಲು ಹಾಕಿ, ತೆರೆಯುವುದು ಕಡಿಮೆ. ಬೇಡದ ಸಾಮುಗ್ರಿಗಳಿಗೆ ಅದೊಂದು ತಾವು. ಅದರಲ್ಲಿ ಖಾಲಿ ಕರಡಿಗೆಗಳು, ಸೀಸೆಗಳು, ದೀಪಲಕ್ಷ್ಮಿಯ ಬೊಂಬೆ, ಒಂದೆರಡು ಚಂದನದ ಬೊಂಬೆ ಮೊದಲಾದುವುಗಳಿದ್ದುವು. ಇನ್ನೂ ಹೆಚ್ಚಿನ ಸಾಮಗ್ರಿಗಳೆಂದರೆ ಹಲ್ಲೆ ಕಾಯಿ, ಗಜ್ಜುಗ ಚನ್ನೆಮಣೆಗಳಂಥ ಆಟದೊಡವೆಗಳವು. ಅಷ್ಟೆಲ್ಲ ತೆಗೆದಿರಿಸುವಾಗ ಜಿರಳೆಗಳ ಸ್ಪರ್ಶದಿಂದ ಕೈ ನಾತಗಟ್ಟಿತ್ತು. "ಅಸಹ್ಯ, ಇವನ್ನು ಓಡಿಸುವುದು ಹೇಗೋ ಎಷ್ಟಿದ್ದಾವೋ" ಎಂದುಕೊಂಡು ಆಕೆ ಅಡುಗೆಮನೆಗೆ ಹೋಗಿ ಚಿಮಣಿದೀಪ ಹೊತ್ತಿಸಿ ತಂದು, ಅದರೊಳಕ್ಕೆ ಬೆಳಕು ಹಿಡಿದು ಅವುಗಳನ್ನೋಡಿಸುವ ಪ್ರಯತ್ನಮಾಡಿದಳು. ಆ ಬೆಳಕಿನಲ್ಲಿ ಕವಾಟಿನ ಹಿಂದುಗಡೆಯ ಹಲಗೆಯಲ್ಲಿ ಕೀಲಿಯ ಕೈಯ ಒಂದು ರಂಧ್ರ ಕಾಣಿಸಿತು. ಏನೋ ಗೂಢವೆನಿಸಿತು; ಆಸೆ ಉದಿಸಿತು. ಹೊರಕ್ಕೆ ಹೋಗಿ ಕದವಿಕ್ಕಿ ಬಂದಳು. ಕಾಳಿ ಬರುವ ವೇಳೆಯಾಗಲಿಲ್ಲವೆಂದು ಗೊತ್ತಿದ್ದುದರಿಂದ, ಕವಾಟಿನ ಅರೆಯ ಹಲಗೆಗಳನ್ನೆಲ್ಲ ಕಿತ್ತು, ತನ್ನ ಬೀಗದ ಕೈಯಗೊಂಚಲಿಂದ ಒಂದೊಂದೇ ಕೀಲಿಯನ್ನಾರಿಸಿ ಬಾಗಿಲನ್ನು ತೆರೆಯಲು ಪ್ರಯತ್ನಿಸಿದಳು. ಒಂದು ಕೀಲಿಯೂ ಪ್ರಯೋಜನಕ್ಕೆ ಬಂದಿತು. ಅದನ್ನು ತಿರುಗಿಸುವಾಗ, ಬಾಗಿಲನ್ನೆಳೆಯುವಾಗ 'ದೇವರೇ, ದೇವರೇ'-ಎಂದು ಆಸೆಯ ಕನಸುಗಳನ್ನು ಹೂಡುತ್ತಾಳೆ.

ಬಾಗಿಲು ತೆರೆದು ಬಂದಿತು. ಅವಳ ಪ್ರಾರ್ಥನೆಗೆ ಪ್ರತಿಫಲವೂ ದೊರೆಯಿತು. ಅದರೊಳಗೆ ಮಸಿ ಹಿಡಿದ ತಾಮ್ರದ ಕರಡಿಗೆಯೊಂದು ಅವಳ ಕೈಗೆ ಸಿಕ್ಕಿತು. ಅದನ್ನೆತ್ತಿದಳು. ಅದು ಸಾಕಷ್ಟು ತೂಕವಾಗಿಯೂ ಕಂಡಿತು. ಈಚೆಗೆ ತಂದಳು. ಅದರ ಮುಚ್ಚಳವನ್ನು ತೆಗೆದಳು. ಚಿಮಣಿ ದೀಪದೆದುರಿಗೆ ಒಳಗಿರಿಸಿದ್ದ ಅರಿವೆಯ ಗಂಟನ್ನು ಬಿಚ್ಚಿದಳು. ಹಳೆಗಾಲದ ಹಲವು ಆಭರಣಗಳೂ, ಕೆಲವು ಗಟ್ಟಿ ನಾಣ್ಯಗಳೂ ಕಾಣಿಸಿದಾಗ ವಿಸ್ಮಯ, ಆನಂದಗಳಿಂದ ಸ್ತಂಭಿತಳಾದಳು. ಅವಸರ ಅವಸರವಾಗಿ ಅವನ್ನೆಲ್ಲ ತಿರುಗಿ ಕಟ್ಟಿ, ಹಾಗೆಯೇ ಇರಿಸಿ, ಕವಾಟನ್ನು ಬಿಗಿದು, ಎದುರಿನ ಅರೆಗಳನ್ನಿರಿಸಿ, ಜಿರಳೆಗಳ ತಳ್ಳಿಗೆ ಹೋಗದೆ, ಮೊದಲಿನಂತೆ ಮಾಡಿ ಹೊರಕ್ಕೆ ಬಂದಳು. ಕಾಳಿಯು ಬರುವುದರೊಳಗಾಗಿ, ಕೆಲಸ ಮುಗಿದು, ಕೈ, ಮೈಯ ಮಸಿ ತೊಳೆದು, ಮಗುವಿನ ಬಳಿಗೆ ಹೋಗಿ ಅವಳು ಕುಳಿತೂ ಆಗಿತ್ತು. ಆ ದಿನದ ಅವಳ ಸಂತೋಷವೇ ಸಂತೋಷ. 'ಅಮ್ಮನವರೇ ತನ್ನ ಕೂಸಿಗಾಗಿ ಕಳುಹಿಸಿದ ನಿಧಿಯದು, ಯಾರು ಕೈಬಿಟ್ಟರೂ ದೇವರು ನನ್ನ ಕೈಬಿಡಲಿಲ್ಲ'--ಎಂಬ ಬೃಹದಾನಂದ ಉಂಟಾಗಿತ್ತು.

ಅಂದಿನಿಂದ ಅವಳ ಧೈರ್ಯ ಹೆಚ್ಚಿತು. ತಾನಿನ್ನು ಜೀವಿಸಿಕೊಂಡಿರುವುದಕ್ಕೆ ಮೈ ಮನಸ್ಸುಗಳನ್ನು ಮಾರಿಕೊಂಡೇ ಬದುಕಬೇಕಾಗಿಲ್ಲ; ತನಗೆ ಹಿತವೆನಿಸಿದವರನ್ನು, ಅದೃಷ್ಟದಲ್ಲಿದ್ದರೆ ಕೂಡಿ ಸುಖವಾಗಿರಬಲ್ಲೆ; ಕೇರಿಯವರು ಮೂದಲಿಸುವಂತೆ ಬಿಡು ಸೂಳೆಯಾಗಬೇಕಿಲ್ಲ--ಎಂದು ತೋರಿತು. ಆ ರಾತ್ರಿ ಅವಳ ಮನಸ್ಸು ತೀರ ಸಂತೋಷಗೊಂಡಿದ್ದರೂ, ಸುಂದ ಬದುಕಿಗಾಗಿ ವ್ಯಥೆಯೂ ಆಗುತ್ತಿತ್ತು. "ಇದು ಮೊದಲೇ ತಿಳಿದಿದ್ದರೆ ದುಡ್ಡಿನ ಆಸೆಗಾಗಿ ತಾನು ಮಾರಿಹೋಗುತ್ತಿರಲಿಲ್ಲ" ಎಂದೆನಿಸಿತು. ಮರುಗಳಿಗೆಗೆ "ಈಗ ತಿಳಿದದ್ದೇ ಒಳ್ಳೆಯದಾಯಿತು. ಹಿಂದೆ ತಿಳಿದಿದ್ದರೆ, ಹೆದರಿ ಆದಮ್ ಸಾಹೇಬರಿಗೇ ಒಪ್ಪಿಸುತ್ತಿದ್ದೆ. ಅವರು ಕೊಂಡು ಹೋದ ಚಿನ್ನ ಸ್ವಲ್ಪವಾದ್ದರಿಂದ ಡಾಕ್ಟರರು ಹೇಳಿದ್ದಕ್ಕೆ ತಿರುಗಿ ಕೊಟ್ಟರು. ಇಷ್ಟೆಲ್ಲವನ್ನು ಕೊಟ್ಟಿದ್ದರೆ ಎಂದೂ ಹಿಂದಕ್ಕೆ ಕೊಡುತ್ತಿರಲಿಲ್ಲ" ಎಂದೂ ಅನಿಸಿತು. ಅನಂತರ "ಅದನ್ನೇನು ಮಾಡಲಿ? ಶಿವಪ್ಪನವರಲ್ಲಿಗೆ ಒಯ್ದು ಇರಿಸಲೆ?" ಎಂದು ತೋರಿತು. ಮರುಕ್ಷಣ "ಬೇಡ, ಅದಿರುವ ತಾವು, ನರಹುಳುವಿಗೂ ತಿಳಿಯದ್ದು. ತಾನೇ ಆಡಂಬರ ಮಾಡಿ, ಅನುಮಾನ ಹೆಚ್ಚಿಸಿ, ಮನೆಗೆ ಕನ್ನಗಳ್ಳರು ಬರುವಂತೆ ಮಾಡಿ

ದರೆ ಮಾತ್ರ ಹೋದೀತು. ಇಲ್ಲಿನಷ್ಟು ಭದ್ರವಾದ ಸ್ಥಳ ಶಿವಪ್ಪನವರ ಮನೆಯಲ್ಲ. ಒಂದು ಸಂಗತಿ—ಕಾಳಿಯ ಕಣ್ಣಿಗೆ ಮಾತ್ರ ಅದು ಬೀಳಬಾರದು. ಬೀಳದಂತೆ ನೆಲದೊಳಕ್ಕೆ ಹೂತಿಡುವುದಾದರೂ ಸರಿಯೆ" ಎಂಬುದಾಗಿ ಯೋಚಿಸಿದಳು.

ಹೀಗೆ ಹೊಸತಾಗಿ ಸಂಪ್ರಾಪ್ತವಾದ ನಿಧಿಯು ಕೆಲವು ದಿನಗಳ ತನಕ ಅವಳಲ್ಲಿ ಆನಂದವನ್ನು ಮೂಡಿಸಿತ್ತು. ಅವಳ ಮುಂದಿನ ಬಾಳ್ವೆಗೊಂದು ಭದ್ರತೆ ತೋರಿಸುತಿತ್ತು. ಅಷ್ಟೆಲ್ಲ ವೈಭವ ತಮ್ಮ ಮನೆಯನ್ನು ಸೇರುವ ಮೊದಲು ಅನ್ಯರ ಮನೆಯಲ್ಲಿದ್ದಿರಬೇಕು. ಅದು ಅನ್ಯರಿಗಾದ ನಷ್ಟ—ಎಂಬ ಊಹೆ ಉಳಿದವರಿಗಾಗಬಹುದು; ಅವಳಿಗಾಗಲಿಲ್ಲ. ಅವಳಿಗೆ ತನ್ನ ತಾಯಿ ಎಂಥವಳೆಂದೂ ಗೊತ್ತಿಲ್ಲ; ಅವಳ ಮುಖದ ನೆನಪು ಮಸುಕಾಗಿಯೂ ಹೊಳೆಯುವುದಿಲ್ಲ. ಆದರೆ ನಿಜಕ್ಕೂ ಅವಳು, ಅಂಬಾ, ಸುಲಿಗೆ ಮಾಡಿದ ಸೂಳೆಯಲ್ಲ. ತನ್ನ ಇನಿಯನನ್ನು, ಕೈ ಹಿಡಿದ ಗಂಡನೆಂಬಷ್ಟು ಪ್ರೀತಿಯಿಂದ ನಡೆದು ಬಾಳಿದವಳು. ಆ ಮಾತನ್ನು ಅಕ್ಕನ ವಿಚಾರದಲ್ಲಿ ಶ್ಯಾಮ ಹೇಳುತ್ತಿದ್ದ; ಮಗಳ ವಿಚಾರದಲ್ಲಿ ಚಂದು ಹೇಳುತಿದ್ದಳು; ಅಷ್ಟೇ ಪ್ರಾಮಾಣಿಕ ಜೀವನವನ್ನು ಚಂದುವೂ ನಡೆಸಿದ್ದಳು. ಸುಬ್ರಾಯ ಹೆಗ್ಗಡೆಯರು ಇವಳು ಕೇಳಿ ಕೊಟ್ಟುದಕ್ಕಿಂತ ಹೆಚ್ಚಾಗಿ ಕೈ ನೀಡಿ ಕೊಟ್ಟವರು. ಹಾಗಿರುತ್ತ ಕುಲದ ಮರ್ಯಾದೆಯಂತೆ ನಡೆದು ಬಂದ ಗುಲಾಬಿಗೆ, ಅದೆಲ್ಲ ಪಾಪಕಲುಷಿತ ಹಣ ಎಂಬ ವಿಚಾರಸರಣಿ ಹೊಳೆಯುವಂತಿಲ್ಲ. ಅವಳಿಗೆ ಅನಿಸುತಿದ್ದ ಸೋಜಿಗವೆಂದರೆ–ಅದನ್ನಡಗಿಸಿ ಇರಿಸಿದವಳು ತನ್ನತಾಯಿಯೋ ಇಲ್ಲವೆ ಅಜ್ಜಿಯೋ? ಅಜ್ಜಿಯಾಗಿದ್ದಲ್ಲಿ ಸಾಯುವ ತನಕ ಪ್ರಜ್ಞೆಯಲ್ಲಿ ಇದ್ದವಳು, ಮೊಮ್ಮಗಳ ಸುಖ ಹಾರೈಸಿದವಳು, ಅದನ್ನೇಕೆ ಹೇಳದೆ ಉಳಿದಳು? "ಇಲ್ಲ ಹಾಗಿರಲಾರದು. ಅದನ್ನು ಇರಿಸಿದವಳು ನನ್ನ ತಾಯಿಯೇ. ಆ ತಾಯಿ, ಮಕ್ಕಳಲ್ಲೇ ಮನಸ್ತಾಪವಿದ್ದಿರಬೇಕು. ಅದರಿಂದಲೇ ತಾಯಿ ಅದನ್ನು ಮರೆಯಾಗಿರಿಸಿರಬೇಕು. ಸಾಯುವಾಗ ತನ್ನೊಡನೆ ಹೇಳಲಾರದೆ ಮೂಕಳಾಗಿ ಸತ್ತಳು" ಎಂದು ಆಕೆ ತರ್ಕಮಾಡುತ್ತಾಳೆ.

ತಾಯಿ ಇರುವಾಗಲೂ, ಇದ್ದ ಅಲ್ಪಕಾಲದಲ್ಲಿ ಅಜ್ಜಿಯ ತೊಡೆಯಲ್ಲಾಡಿದವಳು ಗುಲಾಬಿ. ಅವಳಿಲ್ಲದೆ ಹೋಗಿದ್ದರೆ ಗುಲಾಬಿ ದೊಡ್ಡವಳಾಗುತ್ತಿರಲಿಲ್ಲ. ಮಾವ ಶ್ಯಾಮ ಜವಾಬ್ದಾರಿಯನ್ನರಿಯದ ವ್ಯಕ್ತಿ. ಅವಳ ತಂದೆ

ನಾರಣಪ್ಪ ಭಾಗವತರು ಗುಲಾಬಿಗೆ ಆರೇಳು ವರ್ಷಗಳು ತುಂಬುವ ತನಕ ಅವರ ಮನೆಗೆ ಬಂದು ಹೋಗುತಿದ್ದರು. ಅಂಬಾ ಸತ್ತ ಮೇಲೆಯೂ ಅವರು ತಮ್ಮ ಮಗುವನ್ನು ಕಾಣಲು ಬರುತಿದ್ದರು; ಬಂದು ಅಲ್ಲಿಯೇ ಇರುತಿದ್ದರು. ಸತ್ತವಳ ನೆನಪಿನಿಂದ ಮನೆಯ ಖರ್ಚುವೆಚ್ಚವನ್ನು ಸಹಿಸಿದ್ದರು. ಸ್ವಂತಕ್ಕೆ ಹಿಡಿದವಳಿಗೆ ಸಲ್ಲಿಸುವ ಗೌರವ, ಪ್ರೇಮಗಳನ್ನು ತನ್ನ ಅರಸಿಯ ಮನೆಗೆ ಸಲ್ಲಿಸಿದ್ದರು. ಅವರು ತೀರಿಕೊಂಡ ಮೇಲೆ ಮಾತ್ರ, ಚಂದುವಿನ ಸಂಸಾರ ಬಟ್ಟ ಬಯಲಾಯಿತು.

ದಿನ ಸರಿದುವು. ಗುಲಾಬಿಗೆ ಶಿವಪ್ಪ ಡಾಕ್ಟರರ ಹೆಂಡತಿಯು ಪರಿಚಯವಾಯಿತು. ಮಗುವನ್ನು ಅವಳು ಮುದ್ದಿಸಿ ಬಂದಿದ್ದಳು. ತನಗೆ ದೇವರು ಒಳ್ಳೆಯದು ಮಾಡಿದ ಕಾಲದಲ್ಲಿ ಡಾಕ್ಟರರ ಋಣವನ್ನು ಸಲಿಸುತ್ತೇನೆಂದುಕೊಂಡಳು. ಈಗಂತು ಆ ಭಾವನೆಗೆ ಪುಷ್ಟಿ ಬಂದಿದೆ. ನೆಟ್ಟಗೆ ಅವರ ಮನೆಗೆ ಹೋಗಿ ತಾನು ಕೊಟ್ಟ ಚಿನ್ನಗಳನ್ನು ಮರಳಿ ಬೇಡಿದಳು. ಅದರಲ್ಲಿನ ಒಂದು ಆಭರಣ ತೆಗೆದುಕೊಂಡು 'ಮಗುವಿಗೆ ಚಿನ್ನ ಮಾಡಿಸುವ ಆಸೆಯಾಗಿದೆ' ಎಂದು ಹೇಳಿ, ತನ್ನ ಮನೆಗೆ ತೆಗೆದುಕೊಂಡು ಬಂದಳು. ಅವಳು ಹೊರಟು ಹೋದ ಮರು ಗಳಿಗೆಯಲ್ಲಿ ಶಿವಪ್ಪನವರು ಮಡದಿಯೊಡನೆ "ನಿನ್ನ ಮಗುವಿಗೂ ಏನಾದರೂ ಮಾಡಿಸಬಹುದಿತ್ತು; ಬೇರೆ ಕಾಲವಾಗಿದ್ದರೆ" ಎಂದರು. ಇಂದುಮತಿ ಅದಕ್ಕೆ "ಸಾಕು, ಈಗ ಬೇಡ ಅದೆಲ್ಲ. ಅದರ ಜನನ ಫಲ ಚೆನ್ನಾಗಿದ್ದರೆ ಆಗಿಯೇ ಆಗುತ್ತದೆ. ನೀವು ನಾನು ಹೇಳಿದ ಕೆಲಸ ಯಾವಾಗ ಮಾಡುತ್ತೀರಿ? ಈಗ ಪವನಿಗೆಷ್ಟಿದೆ ಬೆಲೆ? ನಾಲ್ವತ್ತೆ? ಐವತ್ತೇ? ಬಂದಷ್ಟು ಬರಲಿ. ನನ್ನ ಆಭರಣಗಳನ್ನು ಮಾರಿ ಬರುವಷ್ಟು ಹಣವನ್ನು ಧಾರವಾಡಕ್ಕೆ ಕಳುಹಿಸಿ ಬಿಡಿ" ಎಂದು ಉಪದೇಶಿಸಿದಳು.

ಅವರ ಮುಖ ತೀರ ತಗ್ಗಿತು. 'ಹೆಂಡತಿಯು ತವರಿನಿಂದ ಮೈಮೇಲೆ ಹಾಕಿಕೊಂಡು ಬಂದುದನ್ನು, ತಾನು ಮಾರಾಟಮಾಡಿ, ಅವರ ಋಣ ತೀರಿಸುವುದೇ? ನಾಳೆ ಅವಳು ತವರಿಗೆ ಹೋದಾಗ ಏನೆನ್ನಬೇಕು?' ಎಂದು ತೋರಿತು. ಹಾಗೆಯೇ ಅಂದರು. ಅದಕ್ಕೆ ಇಂದುಮತಿಯು "ನಿಮಗ್ಯಾಕೆ ಅದೆಲ್ಲ? ನನಗಿಲ್ಲವಾದರೆ ಇಲ್ಲ. ಒಳ್ಳೆಯ ದಿನಗಳು ಬಂದರೆ ತಿರುಗಿ ಮಾಡಿಸಬಹುದಲ್ಲ. 'ಚಿನ್ನ ಎಲ್ಲಿ' ಎಂದು ಕೇಳಿದರೆ–ಅಲ್ಲಿಯ ತನಕ 'ಮನೆಯಲ್ಲಿ ಬಿಟ್ಟುಬಂದಿದ್ದೇನೆ'. ಅಂದುಬಿಟ್ಟರಾಯಿತು. ಅಂಥಾದ್ದಾದರೆ ಊರಿಗೇನೆ

ಹೋಗದಿದ್ದರಾಯಿತು". ಆ ಕೆಲಸ ಬೇಡವೆಂದು ಶಿವಪ್ಪನವರೆಷ್ಟು ಹೇಳಿದರೂ ಇಂದುವಿನ ಹಟವೇ ಹಟ "ನೀವು ಹಾಗೆನ್ನಲೇಬಾರದು. ಅವರ ಕಷ್ಟ ನಿಮಗೆ ತಿಳಿಯಲಾರದು" ಎಂದು ಆಕೆ ಹೇಳಿದ ಮೇಲೆ "ಆಗಲಿ" ಎಂದು ಅವರು ಒಪ್ಪಬೇಕಾಯಿತು.

ಅದೇ ದಿನ ಕಿಟ್ಟಪ್ಪ ಮಾಸ್ತರರು ಊಟದ ವೇಳೆಗೆ "ವಾಸಪ್ಪ ಸಾಹುಕಾರರು ಶ್ರೀಪತಿರಾಯರ ಒಂದು ಸಾಲವನ್ನು ವಹಿಸಿಕೊಂಡು ತೀರಿಸುವುದೆಂದಾಗಿದೆ. ಆದವರ್ ಸಾಹೇಬರ ಸಾಲಕ್ಕೆ ಕೊಡಲು ಊರಿನ ಜಮೀನು, ಸುಮಾರು ಇನ್ನೂರು ಮಾನಿಗೆ ಹುಟ್ಟುವಳಿಯಷ್ಟು, ಪೇಟೆಗೆ ತೀರ ಸಮೀಪದ ಭೂಮಿ, ಇಪ್ಪತ್ತು ಸಾವಿರಕ್ಕೆ ಕೊಳ್ಳುತ್ತಾರೆ" ಎಂದರು. ಶಿವಪ್ಪನವರು ಆ ದಿನ ಮಾತುಕತೆಗಳಿಗೆ ಉತ್ಸಾಹಿತರಾಗಿರಲಿಲ್ಲ. ತಂದೆಯು ಸುದ್ದಿಯನ್ನೆತ್ತಿದ ಕಾರಣವೂ ಬೇರೆಯೇ ಆಗಿತ್ತು. "ನಾವು ನಾಲ್ಕು ದಿವಸಕ್ಕೆ ಕೈಗಡವಾಗಿ ತಂದ ಐನೂರು ರೂಪಾಯಿಗಳನ್ನು ಅವರಿಗೆ ಈಗ ಕೊಡದೆಹೋದರೆ ಹೇಗೆ? ನಿನ್ನಲ್ಲಿ ಮಾವನಿಗೆ ಕಳುಹಿಸಲು ಹಣವಿದೆ; ಮಾಧವನಿಗೆ ಕೊಡುವುದಕ್ಕಿದೆ, ಇದಕ್ಕಿಲ್ಲ ಎಂದರೆ ಹೇಗೆ?" ಎಂದು ಮಗನಿಂದ ಏನೊಂದೂ ಮಾತು ಬರುವ ಮೊದಲೇ ಅವರು ನುಡಿದಾಯಿತು. ಶಿವಪ್ಪನವರಿಗೆ ಉಂಡ ಊಟ ರುಚಿಸಲಿಲ್ಲ; ಊಟ ಮುಗಿಸಿ ಎದ್ದರು. "ಕೊಡುತ್ತೇನಪ್ಪ" ಎಂದು ಉದಾಸೀನವಾಗಿ ಉತ್ತರಿಸಿ ಹೊರಟರು.

"ಎಂದು ಸಿಗುತ್ತದೆ?"

"ನಾಳೆ ಏನಾದರೂಮಾಡಿ ಕೊಡುತ್ತೇನೆ. ಮಾಡುವುದೇನು? ಅವಳ ಚಿನ್ನವನ್ನು ಮಾರಿಕೊಡುತ್ತೇನೆ".

"ನೀನೇನನ್ನೂ ಮಾಡು. ವಾಸಪ್ಪಯ್ಯನವರು ಕೇಳಿದರೆ, ನಾನು ಇಲ್ಲ ಎನ್ನಲು ಬರುವುದಿಲ್ಲ"

ಆ ರಾತ್ರೆಯನ್ನು ಗಂಡಹೆಂಡಿರಿಬ್ಬರು ಚಿಂತೆಯಲ್ಲಿ ಕಳೆದರು. ಮರು ದಿನ ಶಿವಪ್ಪನವರು ನಿತ್ಯೋದ್ಯೋಗಕ್ಕೆ ಹೊರಟರು. ಹೊರಡುವಾಗ ತಾನು ಮಾಡುವ ಕೆಲಸ, ಕಟುಕನ ಕೆಲಸ ಎಂದು ತೋರಿತು. ಚಿನ್ನ ಕೊಂಡುಹೋದ ಮೇಲೆ–'ಅದನ್ನು ಯಾರಿಗೆ ಕೊಡಲಿ? ಎಲ್ಲಿ ಮಾರಲಿ? ಊರಲ್ಲೆಲ್ಲ ಸುದ್ದಿ ಹಬ್ಬುತ್ತದಲ್ಲ'–ಎಂದು ದಿಕ್ಕುತೋರದೆ ಕುಳಿತರು. ಈ ಕೆಲಸಕ್ಕಾಗಿ ಶೀನಪ್ಪನನ್ನು ಕಳುಹಿಸುವಷ್ಟು ನಂಬಿಗೆ ಸಾಲದು. ಕಟ್ಟಕೊನೆಗೆ ಅಂಗಡಿಗೆ ಬಂ

ನೊಬ್ಬ ಮಿತ್ರರನ್ನು ಮಾತನಾಡಿಸಿ, ಚಿನ್ನವನ್ನೊಪ್ಪಿಸಿದರು. ಅದು ಕಾಳಿ ೨ನ ಸರಾಫ ಕಟ್ಟೆಯಲ್ಲಿ ಗಿರಾಕಿಯಾಗದೆ, ಕುಮಟೆಗೆ ಕೊಂಡೊಯ್ದು ಮಾರ ಬೇಕಾಯಿತು. ಅವರ ಅದೃಷ್ಟಕ್ಕೆ ಚಿನ್ನದ ಬೆಲೆ ಹೆಚ್ಚಿದ್ದರಿಂದ ಮೂರು ಸಾವಿರ ರೂಪಾಯಿಗಳಷ್ಟು ಬಂದುವು.

ರಾತ್ರಿ ಮನೆಗೆ ಹೋಗುವಾಗ ಹೊತ್ತಾಗಿತ್ತು. ಇಂದುಮತಿ ಆತುರ ದಿಂದ ಗಂಡನ ಬರವನ್ನು ಇದಿರು ಕಾದಿದ್ದಳು. "ತಂದಿರಾ?" ಎಂದು ಕೇಳಿ ದಳು. "ಹೂಂ" ಎಂದಷ್ಟೆ ಬೇಸರದ ಉತ್ತರ. ತಂದ ಹಣದಲ್ಲಿ ಐನೂರನ್ನು ತಂದೆಯ ಕೈಗೊಪ್ಪಿಸಿದರು. ಆ ಕ್ಷಣವೇ ಕಿಟ್ಟಪ್ಪ ಮಾಸ್ತರರು 'ನಗದನ್ನು ಕೈಯಲ್ಲಿಟ್ಟುಕೊಂಡು ಕಾಯುವುದು ಬೇಡ' ಎಂಬ ಆತುರದಿಂದ ಸಾಹು ಕಾರರ ಮನೆಗೆಹೊರಟರು."ಊಟ ಮಾಡಿಕೊಂಡು ಹೋಗಿ" ಎಂದು ಇಂದು ಮತಿ ಬೇಡಿದರೆ,"ಊಟ ಬೇಡ, ಸಾಹುಕಾರರು ಕಾದಿದ್ದಾರೆ. ಬರವಣಿಗೆಯ ಕೆಲಸವೂ ಬಾಕಿಯಿದೆ"ಎಂದು ನುಡಿದು ಧಾವಿಸಿದರು. "ಅಪ್ಪನಿಗೆ ನಮ್ಮಮ್ಮ ತೀರಿಹೋದ ಮೇಲೆ ಬುದ್ಧಿಯೇ ಸಮನಾಗಿಲ್ಲ. ಅವರೆಂದೂ ಹೀಗಿರಲಿಲ್ಲ" ಎಂದೆನ್ನುತ್ತ ಶಿವಪ್ಪನವರು ತಮ್ಮ ಊಟವನ್ನು ಮುಗಿಸಿ, ಮಡದಿಯೊಡನೆ ಕೋಣೆಗೆ ಬಂದರು. ಇಂದುಮತಿಯು ಕೂಸನ್ನು ಅವರ ಕೈಯಲ್ಲಿ ಕೊಟ್ಟು, ತಾನು ಅವರ ಮನಸ್ಸನ್ನು ಗೆಲುವಾಗಿರಿಸುವೆನೆಂದು ಎಲ್ಲೆಲ್ಲಿನ ಕಂತೆ ಪುರಾಣ ಗಳನ್ನು ಹೇಳತೊಡಗಿದಳು.

ಶಿವಪ್ಪನವರು ಆ ಮಗುವನ್ನು ಕೈಯಲ್ಲಿ ಹಿಡಿದು ಕುಳಿತಾಗ, ಒಮ್ಮೆಗೆ ಅವರಿಗೆ ಗುಲಾಬಿಯ ಕೂಸಿನ ನೆನಪಾಯಿತು. ಅವಳು ತನ್ನ ಮಗುವಿನ ವಿಚಾರದಲ್ಲಿ ಒಡ್ಡಿದ ಸಮಸ್ಯೆಯು ನೆನಪಾಗಿ ನಗು ಬಂದಿತು. "ಇಂದು, ಮೊನ್ನೆ ನಮ್ಮ ಮನೆಯಲ್ಲಿರಿಸಿದ ಚಿನ್ನವನ್ನು ಕೇಳುವುದಕ್ಕೆ ಬಂದಳಲ್ಲ, ಗುಲಾಬಿ, ಅವಳ ಕತೆ ಗೊತ್ತೇ?" ಎಂದರು.

"ತುಂಬ ಒಳ್ಳೆಯ ಹುಡುಗಿ. ಒಂದೊಂದು ಸಾರಿ ಅವಳ ಕತೆಯನ್ನು ನೆನೆದರೆ ಬೇಸರವಾಗುತ್ತಿದೆ. ಸಾಹೇಬರು ತೀರಿದ್ದೆಂಬುದು ಅವಳಿಗೆ ಒಂದು ಹುಲಿಯ ಬಾಯಿಂದ ಪಾರಾದ ಹಾಗಾಯಿತು" ಎಂದು ಅವಳ ಮುಂದೆ ತನಗೆ ತಿಳಿದ ಎಲ್ಲ ಸಂಗತಿಗಳನ್ನು ಹೇಳಿದರು. ಈ ತನಕ ಇರಿಸಿಕೊಂಡಿದ್ದ ರಹಸ್ಯವನ್ನು ಈಗ ಅವಳೊಡನೆ ಹೇಳುವ ಆತುರವಾಯಿತು. ಚಿನ್ನದ ಪ್ರಕರಣ ಬಂದಿತು; ಅದನ್ನು ಮರಳಿ ಪಡೆದ ಕತೆಯನ್ನು ಹೇಳಿದರು. ಎಲ್ಲ

ವನ್ನೂ ಹೇಳಿ ಮುಗಿಸಿದ ಮೇಲೆ "ಹೇಳಬಾರದಿತ್ತು. ಯಾಕೋ ಹೇಳಿಬಿಟ್ಟೆ ನಿನ್ನ ಮುಂದೆ. ನೀನು ಯಾರ ಮುಂದೆಯೂ ಹೇಳಬೇಡ ಮಹಾರಾಯಿತಿ" ಎಂದು ಹರಟೆ ನಿಲ್ಲಿಸಿ, ಮಗುವನ್ನೊಪ್ಪಿಸಿ, ಮಲಗಿಕೊಂಡರು.

ಮರು ದಿನ ಶಿವಪ್ಪನವರು ದವಾಖಾನೆಗೆ ಹೋಗಿ, ಅಲ್ಲಿಂದ ಮಾವನಿಗೆ ಎರಡೂವರೆ ಸಾವಿರ ರೂಪಾಯಿಗಳನ್ನು ಕಳುಹಿಸಿಕೊಟ್ಟರು. 'ಆದರೂ ಇನ್ನೂ ಸಾವಿರದಷ್ಟಕ್ಕೆ ನಾನು ಋಣಿಯೇ. ಇದನ್ನೆಲ್ಲ ತೀರಿಸಿ, ಮುಗಿಸುವ ತನಕ ನನ್ನ ಡಿಸ್ಪೆನ್ಸರಿ, ವಾರ್ಡು, ಮತ್ತೊಂದು ಮಾಡುವುದು ಸಾಧ್ಯವೇ?" ಎಂದು ತೋರಿತು.

ಅದೊಂದು ಶುಕ್ರವಾರದ ದಿನ. ಸಂಜೆ ಊರಿಂದೂರೇ ಮಹಾಕಾಳಿಯ ಗುಡಿಗೆ ಹೋಗುವ ದಿನ. ಮಧ್ಯಾಹ್ನ ಮನೆಗೆ ಊಟಕ್ಕೆ ಬಂದ ಶಿವಪ್ಪನವರು ತಿರುಗಿ ದವಾಖಾನೆಗೆ ಹೋದಮೇಲೆ, ಇಂದುಮತಿಗೆ ತಾನೂ ಗುಡಿಗೆ ಹೋಗಬೇಕೆಂದೆನಿಸಿತು. ಗುಡಿಗೆ ಹೋಗಿ ಅಮ್ಮನವರನ್ನು "ತಂದೆಯ ಮನೆಯ ವಿಪತ್ತನ್ನು ಕಳೆದು ಕೊಡು" ಎಂದು ಬೇಡಿ ಬರಬೇಕೆಂಬ ಮನಸ್ಸಾಯಿತು. ಹಾಗೆಂದು ಸೀರೆಯನ್ನುತೊಟ್ಟಳು. ಥಟ್ಟನೆ ನೆನಪಾಯಿತು:ತನ್ನ ಒಡವೆಗಳೆಲ್ಲ ಮೊದಲದಿನವೇ ಹೊರಟು ಹೋಗಿದ್ದುವೆಂದು "ಬೇಡ, ದೇವಿಯನ್ನು ನಾನು ಇಲ್ಲಿಂದಲೇ ಬೇಡಿಕೊಂಡರೂ ಅವಳಿಗೆ ತಿಳಿದೀತು" ಎಂದು ಮಗುವಿನ ಹತ್ತಿರ ಮೂಕಳಂತೆ ಹೋಗಿ ಕುಳಿತಳು. ಆ ವೇಳೆಯಲ್ಲೇ ಗುಲಾಬಿ ಅಲ್ಲಿಗೆ ಬಂದಳು.

"ಏನು ಗುಲಾಬಿ, ಸಿಂಗಾರಮಾಡಿಕೊಂಡು ಹೊರಟೆ? ಅಮ್ಮನವರ ಗುಡಿಗೇನು?"

"ಅಲ್ಲ; ಇಲ್ಲಿಗೇ ಬಂದದ್ದು."

"ಸರಮಾಡಿಸಿದೆ; ಇಲ್ಲಿಂದ ಮೊನ್ನೆ ಚಿನ್ನ ತೆಗೆದುಕೊಂಡು ಹೋಗಿದ್ದೆನಲ್ಲ. ನಿಮಗೆ ತೋರಿಸುವ ಎಂದು ಬಂದೆ" ಎಂದು ತಾನು ತಂದ ಸರವನ್ನು ಅವಳ ಕೈಯ ಮೇಲಿಟ್ಟಳು.ಅದನ್ನು ನೋಡಿ "ಬಹು ಚಂದವಾಗಿದೆ"ಎಂದಳು ಇಂದು. "ಮಗುವಿಗೆ ಹಾಕಿಕೊಂಡು ತರಬಹುದಿತ್ತಲ್ಲ. ನಿನ್ನ ಮಗುವನ್ನು ನಾನು ನೋಡಬೇಡವೆ?" ಎಂದು ಕೇಳಿದಳು. ಆ ಬಗೆಯ ಸ್ನೇಹಭಾವಕ್ಕೆ ಗಂಡ ಹೇಳಿದ ಕತೆಯೂ ಕಾರಣವಾಗಿತ್ತು. "ಅದಕ್ಕಿದೆ" ಎಂದವಳು, ತೊಟ್ಟಿಲಲ್ಲಿ ಮಲಗಿದ ಇಂದುಮತಿಯ ಕೂಸಿಗೆ ಅದನ್ನು ತೊಡಿಸಹೋದಳು.

ಇಂದುಮತಿಗೆ ಅದರ ಅರ್ಥ ತಿಳಿಯಲಿಲ್ಲ. ತನ್ನ ಮಗುವಿನ ಕೊರಳಲ್ಲಿ ಆ ಸರವನ್ನು ಕಂಡು, ಅದು ತುಂಬ ಒಪ್ಪುತ್ತದೆ ಎಂಬ ಆಸೆಯಷ್ಟೆ ಪ್ರಜ್ವಲಿಸಿತು. ಆಕೆ, ತೊಡಿಸಿದ ಸರವನ್ನು ತೆಗೆಯದೆ ಈಚೆ ಬಂದು ಕುಳಿತಳು. "ಗುಡಿಗೆ ಹೋಗುವುದಿಲ್ಲವೆ?" ಎಂದು ಕೇಳಿದಳು. ಇಂದುಮತಿ "ಇವತ್ತು ಹೋಗುವುದು ಹೇಗೋ" ಎಂದಳು. ಬಳಿಯಲ್ಲಿ ಅವರ ಮನೆಯ ಅಡುಗೆಯ ಹೆಂಗಸು ಇದ್ದಾಳೆಯೋ, ಇಲ್ಲವೋ ಎಂದು ಆಚೀಚೆ ನೋಡಿ ಅನಂತರ "ಅಮ್ಮ, ಅದು ನಿಮ್ಮ ಮಗುವಿಗೆಂದೇ ನಾನು ಮಾಡಿಸಿ ತಂದದ್ದು. ನಿಮ್ಮ ಯಜಮಾನರು ಅದನ್ನು ಮಗುವಿನ ಕೊರಳಿಂದ 'ತೆಗೆದು ಹಿಂದೆ ಕೊಡು' ಎಂದರೆ ತೆಗೆಯಬಾರದು, ನನ್ನಾಣೆಯಿದೆ" ಎಂದಳು. ಆ ಮಾತು ಮುಗಿಯುವಾಗ ಗುಲಾಬಿಯ ಕಣ್ಣಿನಿಂದ ಮುತ್ತಿನ ಮಣಿಗಳು ಉದುರುತ್ತಿದ್ದುವು.

ಇಂದುವಿಗೆ ತೀರ ಆಶ್ಚರ್ಯವಾಯಿತು."ಏನು? ಮೂರು ಪವನಿನ ಸರ, ನನ್ನ ಮಗುವಿಗೇನು! ಆಗದೇ ಆಗದು." ಎಂದು ಆಕೆ ಹಟಮಾಡಿದಳು. ಅವಳು ಕಣ್ಣಲ್ಲೂ ನೀರು ಹನಿಯಿತು. "ಅಮ್ಮ, ಅವರು, ನಿಮ್ಮ ಯಜಮಾನರು, ನನ್ನ ಜೀವ, ಬದುಕುಗಳನ್ನು ಉಳಿಸಿದವರು. ಈ ಒಂದು ಸರವನ್ನು ತಂದು ಹಾಕಿದರೆ ಹೆಚ್ಚೇ?" ಎಂದಂದು, ತನ್ನ ಬಾಳಿನ ದುಃಖದ ದಿನಗಳನ್ನು ನೆನೆದು ಇನ್ನಷ್ಟು ಅತ್ತಳು. ಹೆಚ್ಚಿನ ಪರಿಚಯವಿಲ್ಲದಿದ್ದರೂ, ತನ್ನ ಬದುಕಿನ ಗೋಳುಗಳನ್ನೆಲ್ಲ, ಹುದುಗಿದ ನೋವನ್ನೆಲ್ಲ, ಅವಳ ಮುಂದೆ ಮಗುವಿನಂತೆ ತೊದಲಿದಳು. ಆ ಎರಡು ಕೃತಜ್ಞ ಜೀವಿಗಳು ಜತೆಯಲ್ಲಿ ಕುಳಿತು ಎಷ್ಟು ಹೊತ್ತಿನ ತನಕ ತಂತಮ್ಮ ಬಾಳಿನ ನೋವುಗಳನ್ನು ಹೇಳಿಕೊಂಡುವೋ ತಿಳಿಯದು. ಆ ಮಾತಿನಲ್ಲಿ-ಗುಲಾಬಿ, ತಾನು ಗುಡಿಯಲ್ಲಿ ಇಂದುಮತಿಯ ವಿಚಾರದಲ್ಲಿ ಕೇಳಿದ ಪಿಸುಮಾತುಗಳನ್ನೂ ಹೇಳಿದಳು! "ಅಮ್ಮ ನಮ್ಮೂರವರಿಗೆ ಪರರ ಸುಖ ದುಃಖವೆಂಬುದು ಗೊತ್ತಿಲ್ಲ. ಏನಾದರೂ ಆಡಿದರಾಯಿತು. ಆ ಯಾವಳೋ ಹಾಗೆಂದದ್ದನ್ನು ಕೇಳಿ ನನ್ನ ಕರುಳೇ ತಿವಿದ ಹಾಗಾಯಿತು" ಎಂದಳು.

ಗುಲಾಬಿ ಮುಸ್ಸಂಜೆಯ ವೇಳೆಗೆ ಇಂದುಮತಿಯ ಮಗುವನ್ನು ಮುದ್ದಿಸಿ "ಈಗ ನನ್ನೆದೆ ಹಗುರವಾಯಿತು." ಎಂದು ಹೊರಟುಹೋಗುವಾಗ, ಇಂದುಮತಿಯ ಎದೆ ದುಃಖದಿಂದ ಅಷ್ಟೇ ಭಾರವಾಗಿತ್ತು.

---

# ಅಧ್ಯಾಯ ೭.

'ಕುಂಬಾರ ಗುಂಡಿ'ಯ ಹೆಸರು ಮೊನ್ನೆ ಮೊನ್ನೆಯ ತನಕ ನಾಲ್ಕೆಂಟು ಮೈಲು ದೂರದ ಗ್ರಾಮಸ್ಥರಿಗೇನೆ ತಿಳಿಯದಂತಹ ಹೆಸರಾಗಿತ್ತು. ಅದರಂತೆಯೆ ಆ ಸರಹದ್ದಿನ ಪ್ರದೇಶಗಳಲ್ಲಿ ಮೀರ ಸಾಹೇಬರನ್ನೂ, ಆದಮ್ ಸಾಹೇಬರನ್ನೂ ತಿಳಿದವರು ಅಪೂರ್ವ. ಈಗಲೋ? ಪರಿಸ್ಥಿತಿ ವಿಚಿತ್ರವಾಗಿ ಬದಲಿಸಿದೆ. ಹೆಸರಿಲ್ಲದ ಊರು, ನೂರಾರು ಜನಗಳ ಕಿವಿಗೆ ಕೇಳಿಬರುತ್ತಿದೆ. ಅಪರಿಚಿತ ವ್ಯಕ್ತಿಗಳು ಪ್ರಸಿದ್ಧ ಪುರುಷರಾಗಿದ್ದಾರೆ. ಅಲ್ಲಿನ ಹಳ್ಳಿಯ ಬರಡು ಜೀವನವು ಒಮ್ಮೆಗೇ ಜೀವ ತಾಳಿ ನಲಿದಾಡುತ್ತಿದೆ. ಎಲ್ಲೆಲ್ಲಿಯೋ ನಡೆಯುತ್ತಿರುವ ಯುದ್ಧದಿಂದಾಗಿ, ಸಾವಿರಾರು ಮೈಲುಗಳು ದೂರದಲ್ಲಿರುವ ಒಂದು ಕೊಂಪೆ, ನೂರಾರು ಜನರು ಬಂದು ಹೋಗುವಂಥ ಒಂದು ಸ್ಥಳವಾಗಿದೆ. ಕುಂಬಾರಗುಂಡಿಯ ಸುತ್ತುಮುತ್ತಲಿನ ಜಾಗಕ್ಕೆ ಸಾಹೇಬರಿಬ್ಬರೂ ಎಲ್ಲಿಲ್ಲದ ಅವಕಾಶ ಒದಗಿಸಿದ್ದಾರೆ. ಅಲ್ಲಿಗೆ ತಾವೇ ನವಾಬರಾಗಿದ್ದಾರೆ. ಅವರ ಹಣವಲ್ಲದಿದ್ದರೆ ಕುಂಬಾರ ಗುಂಡಿಯ ಮುಖ ನೋಡುವ ವ್ಯಕ್ತಿಯಿದ್ದಿಲ್ಲ. ಅಲ್ಲಿ ಬಂದು 'ಎರಡು ದಿನ ಇದ್ದು ಬಿಡು' ಎಂದರೆ ಕಾರವಾರ, ಕುಮಟೆ, ಕಾಳೂರುಗಳ ಸಮೀಪದ ಹಳ್ಳಿಯ ಜನರು "ಕುಂಬಾರ ಗುಂಡಿಗೇ? ಸಾಯಬೇಕಾದರೆ ಆ ಊರಿಗೆ ಹೋಗಬೇಕೆ? ನಮ್ಮೂರಿನಲ್ಲಿ ಜಾಗವಿಲ್ಲವೆ?" ಎನ್ನುತ್ತಿದ್ದ ಕಾಲವಿತ್ತು. ಸಾಯುವುದೆಂದರೆ–ಮಲೇರಿಯ ಜ್ವರ ಹಿಡಿಸಿಕೊಂಡು, ಹೊಟ್ಟೆ ಬೀಗಿಸಿಕೊಂಡು, ಹಾಸಿಗೆಗೂ ಕಂಬಳಿಗೂ ಅಂಟಿ ಮಲಗಿದ್ದು, ಇದ್ದಕ್ಕಿದ್ದ ಹಾಗೆ ಇಲ್ಲದಾಗುವುದು–ಎಂದರ್ಥ. ಮೊದಲು ತೊಡಗುವ ಮೈಯ ನಡುಕಕ್ಕೂ, ಕೊನೆಗೆ ಪ್ರಾಪಿಸುವ ಶೀತಳ ಸಮಾಧಿಗೂ, ತಿಂಗಳೂ ಕಳೆಯಬಹುದು; ವರ್ಷ ಎರಡು ವರ್ಷಗಳೂ ಸರಿಯಬಹುದು. ಅದು ಅವರವರ ಅದೃಷ್ಟ. ಆದರೂ ನೂರಾರು ಮಂದಿ ಕಗ್ಗರು, ಕೂಲಿಗಳು, ದೊರೆಗಳು ಅಲ್ಲಿ ಈಗ ಒಂದೇ ಸಮನೆ ದುಡಿಯ ತೊಡಗಿದ್ದಾರೆ. 'ದೊರೆಗಳು' ಎಂದರೆ ಬಿಳಿದೊಗಲಿನ ದೊರೆಗಳಲ್ಲ; ಅರ್ಧಮರ್ಧ ಇಂಗ್ಲಿಷ್ ಭಾಷೆ ಬಂದು, ಖಾಕಿ ಚಲ್ಲಣ ಹಾಕಿ, ದಿನಕ್ಕೆ ಅರ್ಧ ಸೀಸೆ ವಿಸ್ಕಿಯನ್ನೊ, ಬ್ರಾಂದಿಯನ್ನೊ ಬರಿದು ಮಾಡ ಬಲ್ಲವರು—ಎಂದಷ್ಟೇ ಅರ್ಥ. ಸುತ್ತಲಿನ ಹಸುರು ಹಚ್ಚೆಯನ್ನು ಕಾಣುವವರು ಸಹ ನೀಲಗಾಜಿನ ಕನ್ನಡಕ ಹಾಕಿ, ಕೈಯಲ್ಲೊಂದು ಮೋಟು

ಬೆತ್ತ ಹಿಡಿದು, ಕೂಲಿಗಳ ಮೇಲೆ ಅಧಿಕಾರ ನಡೆಸುವವರು. ಬೆಳಗ್ಗೆ, ರಾತ್ರಿಯೆಂದರಿಯದೆ ಲಟಕು ಮೋಟರು, ಲಾರಿಗಳಲ್ಲಿ ಸಂಚರಿಸುವವರು. ಅಂಗುಲ ದಪ್ಪ ತೊಗಲಿನ ಬೂಟ್ಸುಗಳನ್ನು ಹಾಕಿಕೊಂಡು, ಕೆಸರನ್ನು ತುಳಿದು, ವಾರಕ್ಕೊಮ್ಮೆ ಸ್ನಾನಮಾಡಿದರೂ ಆಯಿತು, ಬಿಟ್ಟರೂ ಆಯಿತು-ಎನ್ನುವವರವರು. ಅಂಥವರು ಕುಂಬಾರ ಗುಂಡಿಯಲ್ಲಿ ವಾರದ ನಾಲ್ಕುದಿನ ಕಳೆಯುವುದುಂಟು; ಆರು ದಿನ ಕಳೆಯುವುದುಂಟು. ಆದಿತ್ಯವಾರ ಅಲ್ಲಿಂದ ಸಂಪೂರ್ಣ ಅದೃಶ್ಯರಾಗುವುದುಂಟು. ಅಂಥವರ ಪಾಲಿಗೂ ದೊರೆಗಳೆನ್ನಿಸಿಕೊಂಡಿದ್ದಾರೆ —ವಿೂರ ಸಾಹೇಬರು; ಅವರ ಅಳಿಯ ಆದಮ್ ಸಾಹೇಬರು. ಆ ಪ್ರಾಂತ್ಯಕ್ಕೆ ಅವರಿಬ್ಬರೂ ಮಲೆನಾಡಿನ ಹುಲಿಗಳಿದ್ದಂತೆ. ಅವರಿಬ್ಬರೂ ಮೋಟರು ಗಾಡಿಯಲ್ಲಿ ಆಗಾಗ ಬಂದುಹೋಗುವವರು. ಮೋಟರೇ ಅವರ ಮನೆಯೆಂದರೂ ಸಲ್ಲುತ್ತದೆ. ಒಬ್ಬರು ಘಟ್ಟದ ಮೇಲಕ್ಕೆ ಏರಿ ಅಲೆದಾಡುವವರು; ಇನ್ನೊಬ್ಬರು ಕರಾವಳಿಯ ತನಕ ಬಲೆಬೀಸಿ ಆಳುಗಳನ್ನು ಸಂಗ್ರಹಿಸುವವರು.

ಕುಂಬಾರ ಗುಂಡಿಯಂಥದೇ ಇನ್ನೊಂದು ವನ, ಜನ ಕ್ಷೇತ್ರವು ಮತ್ತಿಗುಂಡಿ. ಅದು ಕುಂಬಾರಗುಂಡಿಯು ಹುಟ್ಟಿದ ಬಳಿಕ ನಿರ್ಮಾಣವಾದದ್ದು. ಅಲ್ಲಿನ ಕಾರುಭಾರ ಮತ್ತೂ ಹೆಚ್ಚಿನದು; ದೊಡ್ಡ ಪ್ರಮಾಣದ್ದು; ಬೇರೆಯೇ ತೆರನಾದದ್ದು. ಅಲ್ಲಿನ ರೀತಿ, ವ್ಯವಹಾರಗಳೇ ಬೇರೆ; ಆಳರಸರೇ ಬೇರೆ. ಮತ್ತಿ ಗುಂಡಿಯಿಂದ ಕುಂಬಾರ ಗುಂಡಿಗೆ ರಾಜಮಾರ್ಗದಿಂದ ಹೋಗುವಾಗ ನಾಲ್ವತ್ತು ಮೈಲು ದೂರವಾಗುತ್ತದೆ. ಒಳದಾರಿಯಿಂದ, ಘಟ್ಟದ ಸೆರಗಿನ ಕಾನನ್ನು ಹೊಕ್ಕು ಹೊರಡುವವರಿಗೆ ಐದು ಹರದಾರಿ ಮಾತ್ರ. ಇಲ್ಲಿಗೂ ಅಲ್ಲಿಗೂ ಇರುವ ಸಂಬಂಧ, ಆಳುಗಳ ವ್ಯಾಪಾರದಲ್ಲಿ ಮಾತ್ರ. ಮೊದಲು ಕುಂಬಾರಗುಂಡಿಯ ಮಹಾತ್ಮ್ಯ ತಿಳಿದು ಅನಂತರ ಮತ್ತಿಗುಂಡಿಯ ವಿಚಾರ.

ಅಂಕೋಲೆಯಿಂದ ಯಲ್ಲಾಪುರಕ್ಕೆ ಹೋಗುವ ಹಾದಿಯು ನಿಡಿದಾದ ಕಾಡಿನ ಮಾರ್ಗ. ಅದು ಬೆಟ್ಟದ ಮಗ್ಗುಲುಗಳ ಎಡೆಯಲ್ಲಿಯೆ ಸಾಗಿ ಹೋಗುವಂಥದು. ಮೊದಲೊಂದು ಕಾಲದಲ್ಲಿ ಇದು ತುದಿಯಿಂದ ತುದಿಯ ತನಕ ನಿರ್ಜನಪ್ರದೇಶವಾಗಿತ್ತು. ಕರಾವಳಿಗೆ ಸಮೀಪವಾಗಿ—ಅಲ್ಲಲ್ಲಿ ಹಾಡಿ, ಹಕ್ಕಲು, ಮನೆ, ಜನ, ಜಾನವಾರುಗಳು 'ಇಲ್ಲಿ ಮನುಷ್ಯರಿದ್ದಾರೆ' ಎನ್ನುವುದ ಕಷ್ಟೇ ಇದ್ದುವು. ಆ ಮಟ್ಟಿಗೆ ಈಗಲೂ ಹಾಗೆಯೇ ಇದೆ. ದಾರಿಯಲ್ಲಿ ಓಡಾಡುವ ಮೂರು, ನಾಲ್ಕು ಬಸ್ಸುಗಳನ್ನು ಬಿಟ್ಟರೆ ವಾಹನ ಸಂಚಾರವೆಲ್ಲ ಗಾಡಿ

ಗಳ ಮುಖಾಂತರ. ಬಡಜನಗಳ ಓಡಾಟ ನಡೆದೇನೆ. ಕರಾವಳಿಯ ಆಳು ಗಳು ನಡೆದು, ದಣಿದು, ಘಟ್ಟವನ್ನೇರಿ ಯಲ್ಲಾಪುರದ ಕಡೆಯ ಹೊಲ ಸಾಗು ಮಾಡುವುದಕ್ಕೆ ಹೋಗುತ್ತಾರೆ; ಅಡಕೆ ತೋಟಗಳಲ್ಲಿ ದುಡಿಯುವುದಕ್ಕೆ ಹೋಗುತ್ತಾರೆ; ಆ ಪ್ರಾಂತ್ಯದ ಜನಕ್ಕೆ ಅಕ್ಕಿ ದೊರೆಯದ ಕಾಲದಲ್ಲಿ ತಾಳೆ ಮರದ ಕಾಂಡವೇ ಜೀವ ಉಳಿಸಬೇಕು. ಆದರೆ ಕರಾವಳಿಯ ಜನರು, ತಮ್ಮ ಹಸಿದ ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕೆ, ಘಟ್ಟಕ್ಕೆ ಹೋಗುವುದು ವಾಡಿಕೆ. ತಲೆಯ ಮೇಲೊಂದು ಅಡಿಕೆ ಹಾಳೆ; ಅದರ ಮೇಲೊಂದು ಕಂಬಳಿ; ಅರಿವೆ ಅಂಚಡಿ, ಒಂದು ಬೀಳಲಿನ ಪೆಟ್ಟಿಗೆ. ಅದರ ಮೇಲೆ ತಮ್ಮ ಸಂಸಾರಕ್ಕೆ ಸೇರಿದ ಒಂದೆರಡು ಕೋಳಿಯ ಮರಿಗಳನ್ನು ಏರಿಸಿಕೊಂಡು ಹೊರಟರೆಂದರೆ ನಾಲ್ಕು, ಆರು ಹರದಾರಿಗಳ ತನಕ ನಡೆದು, ಅನಂತರ ಮಜಲು ಮಾಡುತ್ತಾರೆ. ಘಟ್ಟದ ಬುಡದಲ್ಲೊಂದು ಅಡುಗೆಯನ್ನು ಮಾಡಿ ಹೊರಟರೆ, ಮಧ್ಯದಲ್ಲೊಂದು ಮಜಲು. ಅನಂತರ ಅವರು ಮಲೆನಾಡಿನ ಕಾಡಿನೊಳಗೆ ಅದೃಶ್ಯರಾಗುತ್ತಾರೆ. ಆರೆಂಟು ತಿಂಗಳಕಾಲ ದುಡಿದು, ಊರಿಗೆ ಬರುವಾಗ ಹತ್ತಿಪ್ಪತ್ತು ರೂಪಾಯಿಗಳನ್ನು ಗಳಿಸಿ ತರುವವರುಂಟು; ಕುಡಿದು ಮರೆತು ಬರುವವರುಂಟು. ಅವರೇನನ್ನು ತಾರದಿದ್ದರೂ ಗಣಪನ ಹೊಟ್ಟೆಯೊಂದನ್ನು ತರುತ್ತಾರೆ; ಅದು ಅನಿವಾರ್ಯ.

ಊರಿಗೆ ಬಂದ ಮೇಲೆ ವಿರಾಮ. ದಿನ ಬಿಟ್ಟು ದಿನ ಜ್ವರ ಬರುವುದರಿಂದ ಕೆಲಸಮಾಡುವ ಚೈತನ್ಯ ಶೂನ್ಯವಾಗುತ್ತದೆ. ಆದರೂ ಘಟ್ಟಕ್ಕೆ ಹೋಗದೆ, ಕರಾವಳಿಯಲ್ಲಿಯೇ ಕುಳಿತು ಅವರ ಜೀವನ ಸಾಗದು. ಬಹುಜನರು ಬೇಸಾಯದ ವೇಳೆ ಊರಲ್ಲಿದ್ದು, ಉಳಿದ ವೇಳೆ ಘಟ್ಟಕ್ಕೆ ಓಡುತ್ತಾರೆ. ಘಟ್ಟವನ್ನು ದಾಟದೆ ಅದರ ಬುಡದಲ್ಲಿಯೇ ಬೀಡುಬಿಟ್ಟು ದಿನ ಕಳೆಯಬಹುದು-ಎಂಬುದು ಈ ಮಹಾಯುದ್ಧದ ಸಂಶೋಧನೆಯ ಫಲ. ಅಂತಹ ಪವಿತ್ರ ಸ್ಥಳಗಳಲ್ಲಿ, ಕುಂಬಾರ ಗುಂಡಿಯೂ ಒಂದು.

ಅದಿರುವುದು ಘಟ್ಟದ ಬುಡದ ಊರಾದ ಸೀಗೆಹಳ್ಳಿಯ ಬಲಕ್ಕೆ. ಮೊದಲು ಅಲ್ಲಿಗೆ ಹೋಗುದ ದಾರಿಯೂ ಇದ್ದಿರಲಿಲ್ಲ. ಈಗ ಹೋಗುವ ರಸ್ತೆ ರಾಜರಸ್ತೆಯಾಗಿದೆ. ಅಂದರೆ ಕಲ್ಲು, ಜಲ್ಲಿ ಹಾಕಿಸಿ ಮಾಡಿದ ದಾರಿಯೆಂದಲ್ಲ-ಅಗಲವಾದ ದಾರಿ. ಆ ದಾರಿಯು ಹತ್ತೆಂಟು ಗುಡ್ಡಗಳನ್ನು ಸುತ್ತಿ ಸುಳಿದು, ವಿಶಾಲವಾದ ಒಂದು ಕಣಿವೆಯನ್ನು ಸೇರುತ್ತದೆ. ಆರಂಗು

ದಪ್ಪ ಧೂಳು ಬೇಸಿಗೆಯಲ್ಲಿ; ಅದರ ಇಮ್ಮಡಿ ದಪ್ಪ ಕೆಸರು ಮಳೆಗಾಲದಲ್ಲಿ. ಅಂಥ ಕೆಸರನ್ನು ಬೇಸಾಯದ ಟ್ರ್ಯಾಕ್ಟರುಗಳಂತೆ ಸೀಳಿ, ಸಾಗುವ ಲಾರಿಗಳ ಸಂಖ್ಯೆ ಬಹಳ. ಮನುಷ್ಯಬಲದ ಪ್ರೋತ್ಸಾಹದಿಂದ, ಉದ್ದಕ್ಕೂ ಸೆಗಣಿ ಚೆಲ್ಲುತ್ತ ಸಾಗುವ ಜೋಡೆತ್ತಿನ ಗಾಡಿಗಳಿಗೂ ಬರಗಾಲವಿಲ್ಲ. ಈಗೀಗ ಎತ್ತುಗಳು ಇಂತಹ ಸ್ಥಳಗಳಲ್ಲಿ ಪ್ರಯೋಜನವಿಲ್ಲವೆಂದು ಅವುಗಳ ಬದಲು ಕೋಣಗಳನ್ನು ಗಾಡಿಗೆ ಹೂಡುತ್ತಿದ್ದಾರೆ. ದಾರಿಯ ಕೆಸರು ಗಾಡಿಗೂ, ಕೋಣಗಳ ಥಳಿಸುವ ಮೈ ಬಣ್ಣಕ್ಕೂ, ಅವುಗಳ ಮಂದ ಗಮನಕ್ಕೂ, ಕಿರುಚುವ ಗಾಡಿ ಆಳಿಗೂ ಎಂಥ ಮೇಳ! ಅವು ನಾಟಗಳನ್ನೆಳೆದು ಕಂಗಾಲಾದರೆ, ಕೆಚ್ಚೆದೆಯ ಕೆಲಸಗಾರರು ಪಶುಬಲಕ್ಕೆ ಮನುಷ್ಯ ಬಲ ಸೇರಿಸುತ್ತಾರೆ. ಈಗೀಗ ರಸ್ತೆ ದುರಸ್ತಿಯ ಸಲುವಾಗಿ ದೊಡ್ಡ ದೊಡ್ಡ ಶಿಲೆಯ ತುಂಡುಗಳನ್ನೇ ತಂದು ಸುರಿಯುತ್ತಿದ್ದಾರೆ. ಮುಂದಿನ ವರ್ಷ ಅಲ್ಲಿ ಮುಕಾದಮ್ ರಸ್ತೆಯೇ ಆಗುತ್ತದೆಯಂತೆ. ಮುಕಾದಮ್ ಸಾಹೇಬರ ಮಗನ ರಸ್ತೆ ಎಂದು ಅದರಅರ್ಥವಲ್ಲ;-ಇಂಗ್ಲಿಷಿನ 'ಮೆಕಡಮೈಸ್‌ಡ್' ರಸ್ತೆ. ಈ ನಾಳಿನ ಭರವಸೆಯನ್ನು ನಾವು ನಂಬಲೂ ಬಹುದು. ಸಾಹೇಬರುಗಳ ಕಾರು, ಲಾರಿಗಳು ಬಂದರೂ ಮನುಷ್ಯರ ಬೆನ್ನು, ಭುಜ ಕೊಡದೆ ಅವುಗಳ ಗಾಲಿ ತಿರುಗಲಾರದು. ಆದರೂ ಬಂದು ಹೋಗುವ ಕಾರು, ಲಾರಿಗಳಿಗೆ ಬಿಡುವಿಲ್ಲ. ಎಷ್ಟೋ ಜನ ಆಫೀಸರರು, ಗುತ್ತಿಗೆದಾರರು "ಈ ಕೆಲಸ ಆದಮ್ ಸಾಹೇಬರಿಂದಲೇ ಸಾಧ್ಯ" ಎಂದಾಗ, ಹಾಗೆ ಹೇಳಿದ ದೊರೆಗಳ ಕೈಗೆ ಆದಮ್ ಸಾಹೇಬರು 'ಗೋಲ್ಡ್ ಫ್ಲೇಕ್' ಹೊಗೆಬತ್ತಿಯ ಕಾಣಿಕೆ ಒಪ್ಪಿಸುತ್ತಾರೆ.

ಮುಖ್ಯ ರಸ್ತೆಯನ್ನು ಬಿಟ್ಟು, ಹರದಾರಿ ದೂರದ ಕೆಸರಿನ ಈ ನರಕವನ್ನು ದಾಟಿಬಂದರೆ ಕುಂಬಾಗುಂಡಿ ಸಿಗುತ್ತದೆ. ಅಲ್ಲಿಯ ತನಕ ಯಾವ ಜನವಸತಿಯೂ ಇಲ್ಲ; ಬೇಸಾಯದ ಕುರುಹು ಕಾಣಿಸುವುದೂ ಇಲ್ಲ. ಒಂದು ಶತಮಾನದ ಹಿಂದೆ ಮನೆ ಮಠಗಳಿದ್ದಿರಬೇಕು; ಅವುಗಳ ಅಳಿದ ಗೋಡೆ, ಪಂಚಾಂಗಗಳೂ ಕಾಣಸಿಗುತ್ತವೆ. ಮುದಿ ತೆಂಗಿನ ಸಸಿಗಳೂ, ಅಡಿಕೆ ಮರಗಳೂ ಅಲ್ಲಲ್ಲಿ ಕಾಣಸಿಗುತ್ತವೆ. ಯಾವುದೋ ರಾಯನ ಕಾಲದಲ್ಲಿ, ಆ ಕಣಿವೆಯಲ್ಲಿ ಕುಂಬಾರರ ಜನವಸತಿ ಇದ್ದಿರಬೇಕು. ಈ ಕಣಿವೆಯಲ್ಲಿ ಕಾಣುವುದು ಜಿಗುಟಾದ ಕಪ್ಪು ಬಣ್ಣದ ಆವೆಮಣ್ಣು.

ಕುಂಬಾರಗುಂಡಿ ಸಂಪೂರ್ಣ ವನಪ್ರದೇಶ. ಮಳೆಗಾಲವೇ ಇರಲಿ,

ಬೇಸಿಗೆಯೇ ಇರಲಿ, ಆರಂಗುಲ ಎತ್ತರದ ಹಸುರು ಹುಲ್ಲಿನ ಚಾಪೆ ಹರಡಿ ಕೊಂಡೇ ಇರುತ್ತದೆ. ಮೊದಲಿಗೆ ಸಿಗುವುದು ವಿಶಾಲವಾದ, ಸಮತಟ್ಟಾದ ಒಂದು ಬಯಲು. ಕಾಲಿಟ್ಟೊಡನೆಯೇ ಅದರ ಜವುಗು ನೀರಿನಿಂದಾಗಿ ಕಾಲಿನ ನರ ಹಿಂಡುತ್ತದೆ. ಈಗ ಅಂತಹ ಸ್ಥಳದಲ್ಲೂ ಸಾಲು ಸಾಲಾಗಿ ಛಾವಣಿ ಮನೆಗಳು ಕಾಣಸಿಗುತ್ತವೆ. ಗೌರವಕ್ಕಷ್ಟೇ ಅವನ್ನು ಮನೆಗಳೆನ್ನಬೇಕು. ಗಾಡಿಯ ಮಾಡಿನಷ್ಟು ಕಿರಿದಾದುವು. ಅವಕ್ಕಿಂತ ತುಸು ಅಗಲವಾದ ಅತ್ತರುತಟ್ಟಿಯ ಗೂಡುಗಳು. ಅಂತಹ ಗುಡಿಸಲುಗಳಲ್ಲಿ ನೂರಾರು ಜನ ವಾಸವಾಗಿದ್ದಾರೆ. ನೆಲವಂತೂ ತಣಸು ತುಂಬಿದ್ದು. ಯಾವ ಮೂಲೆಯನ್ನು ನೋಡಿದರೂ ಇಂತಹ ಗುಡಿಸಲುಗಳು ಕಾಣಸಿಗುತ್ತವೆ. ಅವುಗಳಲ್ಲೇ ನೆಲಸಿ, ನಿತ್ಯ ಜೀವನ ಸಾಗಿಸುವ ಮಲಿನ ವಸ್ತ್ರರೂ, ಮಲಿನ ಮುಖಿಗಳೂ ಆದ ಹೆಂಗುಸರು, ಗಂಡಸರು ಕಾಣಿಸುತ್ತಾರೆ. ಗಂಡಸರು ದಿನವೆಲ್ಲ ಕಾಡಿನಲ್ಲಿರುತ್ತಾರೆ. ಅಥವಾ ಮರ ಸಿಗಿಯುವ ಕಾರ್ಖಾನೆಯಲ್ಲಿರುತ್ತಾರೆ.

ಕಣಿವೆಯ ಯಾವ ಮೂಲೆಯಿಂದಲೂ ಮರಕಡಿಯುವ ಸದ್ದು ಕೇಳಿಸುತ್ತದೆ. ಜನವಸತಿಗೆ ತಾಗಿರುವ ಈ ಬಯಲಿನ ಸಮೀಪದ ನೂರಾರು ಎಕ್ರೆ ಭೂಮಿಯ ಗಿಡಮರಗಳು ಬರಿದಾಗಿದ್ದು, ರುಂಡಮುಂಡಗಳನ್ನು ಚೆಂಡಾಡಿದ ಮರಗಳ ಮಸಣವಾಗಿ ಕಾಣುತ್ತದೆ. ಎಂಥೆಂಥ ಮರಗಳು! ಮತ್ತಿ, ಜಂಬೆ, ಹುಣುಗಲು, ನಂದಿ–ಮತ್ತೇನೇನೋ ಹೆಸರಿನವು. ನಾಲ್ಕು ನಾಲ್ಕು ಆಳುಗಳು ತಬ್ಬುವಷ್ಟುದಪ್ಪನಾಗಿದ್ದು ಹೆಮ್ಮೆಯಿಂದ ಬಾನನ್ನು ಮುಟ್ಟಿಆದೆವ್ವಗಳನ್ನು, ಕೊಡಲಿಯ ಪೆಟ್ಟಿಂದ ಉರುಳಿಸುವವರೆಷ್ಟೋ ಜನ. ಮರ ಉರುಳಿತೆಂದರೆ-ಹೆಣವನ್ನು ಮುತ್ತುವ ಹದ್ದುಗಳಂತೆ, ಜನ ಸುತ್ತುವರಿದು ಕೊಡಲಿ ಮಚ್ಚುಗಳಿಂದ ರೆಂಬೆಕೊಂಬೆಗಳನ್ನು ಕಡಿದಾಯಿತು; ಅಡ್ಡಮುರಿ ಗರಗಸಗಳಿಂದ ಕಾಂಡವನ್ನು ತುಂಡರಿಸಿಯೂ ಆಯಿತು. ಅಲ್ಲಿಂದ ಆಳುಗಳು ಹೊರಳಿಸುತ್ತಾರೆ. ಕೋಣಗಳು ಅವುಗಳನ್ನೆಳೆದುಕೊಂಡು ಕೆಸರಿನ ದಾರಿಯ ಮೇಲೆ ನಾಟದ ಮನೆಗೆ ಸಾಗಿಸುತ್ತವೆ. ನಾಲ್ಕು ಸುತ್ತಣ ಗುಡ್ಡದ ಇಳಕಲುಗಳಿಂದ ಮರಗಳನ್ನೆಳೆದುಕೊಂಡ ಬಂದ ಜಾರುವ ಕೆಸರು ದಾರಿಗಳನ್ನು ಕಾಣಬಹುದು. ಅಲ್ಲಿ ಉರುಳಿ ಬಿದ್ದ ಮರ, ಕುತ್ತಿ, ದಾರಿಗಳು-ಇವನ್ನೆಲ್ಲ ಕಂಡರೆ ಇಷ್ಟೆಲ್ಲ ಸಸ್ಯಸಂಪತ್ತು–ಅಲ್ಲಿತ್ತೇ ಎಂದು ಬೆರಗು ಉಂಟಾಗುತ್ತದೆ. ಕಾಂಡಗಳನ್ನೆಲ್ಲ ಸಾಗಿಸಿಯಾದ ಬಳಿಕ, ಉಳಿದ ರೆಂಬೆ ಕೊಂಬೆಗಳಿಗೆ ಅಗ್ನಿಸಂಸ್ಕಾ

ರವಾಗುತ್ತದೆ. ಅಲ್ಲಲ್ಲಿ ಮರಗಳ ಚಿತೆಗಳುರಿದು, ಹೊಗೆಯೆದ್ದು, ಬಾನಿನ ಬೆಳ್ಮುಗಿಲುಗಳೊಂದಿಗೆ ಸೇರುತ್ತದೆ.

ಆ ಬಯಲಿನ ನಟ್ಟನಡುವೆ, ಊರ ನಾಟಕ ಕಂಪೆನಿಗಳ ಮಳೆಗಾಲದ ಥಿಯೇಟರಿನಂತೆ ಕಟ್ಟಿದ ಭಾರಿ ದೊಡ್ಡ ಮಳೆಮಾಡಿದೆ; ಅದರೊಳಕ್ಕೆ ನೀಳ ವಾದ ಗುಂಡಿಗಳಿವೆ. ಅವುಗಳ ಮೇಲೆ ಮರದ ಸೇತುವೆಗಳಿವೆ. ಈ ಸೇತು ವೆಗಳ ಮೇಲೆ ಭುಜಬಲದಿಂದ ನಾಟಗಳನ್ನುರುಳಿಸಿ, ಹಲವರು ಮರ ಸಿಗಿ ಯತೊಡಗುತ್ತಾರೆ. ಒಮ್ಮೊಮ್ಮೆ ಇಪ್ಪತ್ತು, ಮೂವತ್ತು ಜತೆ ಕೆಲಸಗಾರರು ಸಾಲುಸಾಲಾಗಿ ಮರಸಿಗಿಯುವಂತಹ ಈ ಚಿತ್ರ, ಗರುಡ ಪುರಾಣದ ನರ ಕದ ಕಲ್ಪನೆಯನ್ನು ಹುಟ್ಟಿಸುತ್ತದೆ. ಪಾಪವನ್ನು ಮಾಡಿ, ದೆವ್ವದಾಕಾರದ ಮರಗಳಾಗಿ ಹುಟ್ಟಿದ ಈ ಜೀವಗಳಿಗೆ ಯಮಾಲಯದಲ್ಲಿ ಸಲ್ಲಿಸುವ ಚಿತ್ರ ಹಿಂಸೆಯ ಒಂದು ಘೋರ ದೃಶ್ಯದಂತೆ ಕಾಣುತ್ತದೆ.

ಆ ಬಯಲಿನಲ್ಲಿ ಅಲ್ಲಲ್ಲಿ ಜನಗಳ ಹಿಂಡು ಕಾಣಿಸುವಂತೆ, ಕೋಣಗಳ ಹಿಂಡೂ ಕಾಣಿಸುತ್ತದೆ. ತಗ್ಗು ದಾರಿಯಲ್ಲಿ, ಜವುಗು ನೆಲದಲ್ಲಿ, ನಾಟಗಳನ್ನು ಸಾಗಿಸಿಕೊಂಡು ಹೋಗುವುದಕ್ಕೆ ಕೋಣಗಳನ್ನು ಬಹಳವಾಗಿ ಉಪಯೋ ಗಿಸುತಿದ್ದಾರೆ. ಸುತ್ತಲಿನಹುಲ್ಲು, ಹಸುರು, ನೆಲದ ಕೆಸರು ತಮ್ಮ ಜೀವನಕ್ಕೆ ಎಷ್ಟು ಹಿತ ಎಂದು ನಂಬಿ ಬಂದಂಥ ಈ ಕೋಣಗಳನ್ನು ನಾಟಗಳಿಗೆ ಕಟ್ಟಿ ಎಳೆಸುವಾಗ, ಅವುಗಳ ಮನಸ್ಸಿಗೆ ಹೇಗನಿಸುತ್ತದೆಯೋ? ಸಾಲದುದಕ್ಕೆ 'ಹೊಡೆದಷ್ಟು ನಾಟದು' ಎನ್ನುವ ಮಂದ ಬುದ್ಧಿಯ ಮಾವುತರು ಬೇರೆಜತೆ ಯಲ್ಲಿರುತ್ತಾರೆ.

ಮರ, ಮೋಪುಗಳ ಈ ನರಕದಲ್ಲಿ ಜನ ಬಲ, ಪಶು ಬಲಗಳನ್ನು ಮೀರಿಸುವ ಯಂತ್ರ ಬಲವೂ ಇದೆ. ದೊಡ್ಡ ಇನ್ನೊಂದು ಮಳೆಮಾಡಿನಲ್ಲಿ ಎರಡೆರಡು ಉಗಿ ಎಂಜಿನುಗಳನ್ನು ನಟ್ಟಿದ್ದಾರೆ. ಕಟ್ಟಿಗೆಯನ್ನು ಉರಿಸುತ್ತ, ಉಗಿಯನ್ನು ಕಕ್ಕುತ್ತ, ಗುಡುಗುಡಿಸುತ್ತ ಲಾಡಿಗಳನ್ನೂ, ಅನೇಕ ಚಕ್ರ ಗಳನ್ನೂ ಅವು ತಿರಿಗಿಸುತ್ತವೆ. ಆ ಚಕ್ರಗಳಿಂದ ಇತರ ಗಾಲಿಗಳಿಗೆ ಶಕ್ತಿ ದೊರೆತು, ನಾಲ್ಕಾರು ಬಗೆಯ ಗರಗಸಗಳು ಕೆಲಸಮಾಡುತ್ತವೆ. ಹುಟ್ಟು ಕಿವುಡರಿಗೆ ಅದು ಹೇಳಿಸಿದ ಊರು. ಚಕ್ರಾಕಾರದ ಗರಗಸಗಳು ಮರದ ದಿಂಡುಗಳನ್ನು ಸೀಳುವಾಗ ಕೇಳಲಾರದಷ್ಟು ಚೀತ್ಕಾರವೆಸಗುತ್ತವೆ.

ಮೀರ ಸಾಹೇಬರಾಗಲಿ, ಆದಮ್ ಸಾಹೇಬರಾಗಲಿ ಆ ಊರಲ್ಲಿದ್ದರೆ-

ಬೆಳಗಿನ ಏಳುಗಂಟೆಗೆ ಎಂಜಿನುಗಳು ಉಗಿ, ಹೊಗೆ ಕಕ್ಕತೊಡಗಿದರೆ ಕತ್ತಲು ಸರಿದಮೇಲೆಯೂ ಕಕ್ಕುತ್ತಿರುತ್ತವೆ. ಕಾರ್ಖಾನೆಯ ನಿಯಮಕ್ಕೆ ಸರಿಯಾಗಿ ಬೋರ್ಡ್‌ಗಳಂತೂ ಇವೆ. ಕೆಲಸಗಾರರ ಸಂಖ್ಯೆ, ಗಂಡಸರ ಸಂಖ್ಯೆ, ಹೆಂಗುಸರ ಸಂಖ್ಯೆ, ಕೆಲಸದ ವೇಳೆ, ಎಲ್ಲವೂ ಅದರಲ್ಲಿ ಬರೆದಿದೆ. ಧನಿಗಳಿದ್ದಾಗ ಈ ನಿಯಮಗಳನ್ನು ಅತಿಕ್ರಮಿಸಿ ದುಡಿಯುತ್ತಾರೆ. ಅವರಿಲ್ಲದೆ ಹೋದರೆ, ಮೆಲು ನಡೆಯಿಂದಲೇ ಕೆಲಸ ಸಾಗುತ್ತದೆ. ಎಂಜಿನು ನಡೆದರೂ ಮರ ಓಡುವುದಿಲ್ಲ. ಮರ ಓಡಿದರೆ ಬೊಡ್ಡಾದ ಗರಗಸ ಸಿಗಿಯುವುದಿಲ್ಲ. ಅದಕ್ಕೆ ಅರಹಾಕತೊಡಗಿದರೆ ಹೊತ್ತು ತನ್ನಂತೆಯೇ ಸರಿಯುತ್ತದೆ. ಕಾರ್ಖಾನೆಯ ಮೇಸ್ತ್ರಿಯೂ ಮೈಗಳ್ಳರಿಗೆ ಸಹಾಯವಾಗುತ್ತಾನೆ—ಎಂಜಿನಿನಲ್ಲಿ 'ಮಿಸ್ಟೇಕ್' ಬಂದು ಬಿಡುತ್ತದೆ. ಬೆಲ್ಟು ಸಿಲ್ಪು(Slip) ಆಗುತ್ತದೆ. ಹೀಗೆ ಏನೇನೋ ಇಂಗ್ಲಿಷ್ ಶಬ್ದಗಳು ಅಡ್ಡಬಂದು ಕೆಲಸಕ್ಕೆ ಅಡಚಣೆಯಾಗುತ್ತದೆ.

ಕೈಯಿಂದ ಮರಸಿಗಿಯುವ ಆಸಾಮಿಗಳು-ಗುತ್ತಿಗೆಯವರು. ಸಿಗಿದ ಅಳತೆಯ ಮೇಲೆ ಸಂಬಳ. ಬೆಳಗಿಷ್ಟು ತಂಗುಳುಂಡು, ನಡುನಡುವೆ ಇಷ್ಟು ವೀಳೆಯಜಗಿದು, ಸಂಜೆಯ ನಾಲ್ಕುಗಂಟೆಯ ತನಕ ದುಡಿದು, ಗರಗಸ ಎಸೆದು ಹೋದರೆ ಆ ಗುಂಡಿಯಲ್ಲೇ ಅವರು ತಿರುಗಿ ಕಾಣಸಿಗರು. ರಾತ್ರಿ ಎಷ್ಟು ಹೊತ್ತಿಗೆ ಗುಡಿಸಲಿಗೆ ಬರುತ್ತಾರೋ, ದೇವರಿಗೆ ಗೊತ್ತು. ಕೇರಿಯ ಗುಡಿಸಲಲ್ಲಿ ರಾತ್ರಿಯಾರಾದರೂ ಚೀರಿದರೆ, ಗಂಡ ಗಡಂಗಿನಿಂದ ಮರಳಿದ್ದಾನೆ. ಹೆಂಡತಿಯ ಬೆನ್ನಿನ ಮೇಲೆ ಊಟದ ಗಂಟೆ ಬಾರಿಸುತ್ತಾನೆ—ಎಂದು ಲೆಕ್ಕ. ಜೀವ ಹಿಂಡಿ, ಬೆವರು ಸುರಿಸಿ, ದಿನಕ್ಕೆ ನಾಲ್ಕು ರೂಪಾಯಿಗಳಿಗಿಂತಲೂ ಹೆಚ್ಚಿಗೆ ದುಡಿಯುವ ಗಂಡನಿಗೆ ಕುಡಿಯುವ ಅಧಿಕಾರವಿಲ್ಲ, ಹೆಂಡತಿಯನ್ನು ಹೊಡೆಯುವ ಅಧಿಕಾರವಿಲ್ಲ—ಎಂದರೆ ಯಾರಾದರೂ ನಕ್ಕಾರು. ಕುಡಿಯದೆ ಹೋದರೆ ತುಂಬ ಚಳಿಯುಳ್ಳ ಆ ಊರಿನಲ್ಲಿ ಮನುಷ್ಯ ಎರಡುದಿನ ಬದುಕಲಾರನೆಂದು ಅವರು ತಿಳಿಯುತ್ತಾರೆ. ಆದರೆ ಅವರ ದುರ್ದೈವಕ್ಕೆ ಊರು, ಕೇರಿ ಸಮೀಪವಾಗಿಲ್ಲ. ಕುಡಿಯಬೇಕಾದರೆ ಕೆಸರುದಾರಿಯಲ್ಲಿ ಒಂದೂವರೆ ಹರದಾರಿಯ ದೂರ ಹೋಗಬೇಕು. ಹಾಗೆ ಹೋಗಲೇ ಬೇಕೆಂದಿಲ್ಲ. ಆ ಮೂಲೆಯಲ್ಲಿ ಇವರಿಗಾಗಿ ಹೆಂಡ ತಂದು ಮಾರುವ ಜನರಿದ್ದಾರೆ. ಅಲ್ಲಿಗೆ ಪೋಲೀಸರು ಬಂದು ದಾಂಧಲೆ ಎಬ್ಬಿಸುವುದುಂಟು. ಆದರೆ—ಆದಮ್ ಸಾಹೇಬರ ಕಿವಿಗೆ ಆ ಸುದ್ದಿಬಿದ್ದರೆ, ಅವರ ವರ್ಚಸ್ಸಿನಿಂದ ಎಲ್ಲವೂ ಶಾಂತ

ವಾಗುತ್ತದೆ. "ಅವರು ದೊರೆಗಳಿಗೇ ಹೇಳುವುದುಂಟು–ನಿಮ್ಮ ಆರ್ಡರು ಗಳಿಗೆ ಸರಿಯಾಗಿ ಮರ ಒದಗಿಸಬೇಕು, ಇಂಥ ಊರಿನಲ್ಲಿ ಜನರು ಕೆಲಸ ಮಾಡಬೇಕು–ಎಂದಿದ್ದರೆ ಹೆಂಡವಿದ್ದರೇ ಸಾಧ್ಯ. ಜನ ಬಟ್ಟಿ ಇಳಿಸಬಾರ ದೆಂದಿದ್ದರೆ ನೀವೇ ಗಡಂಗನ್ನು ನಡೆಯಿಸಿ. ಹೊರತು ಇಂತಹ ಕಿರುಕುಳ ಕೊಟ್ಟರೆ ನನಗೆ ಈ ಕೆಲಸವೇ ಬೇಡ" ಎಂದು ಜನರ ಪರವಾಗಿ ವಾದಿಸು ತ್ತಾರೆ. ಯುದ್ಧ ಪ್ರಯತ್ನಕ್ಕೆ ಬೆಂಬಲವನ್ನು ಕೊಡಲು ಆದವ್ಙ್ ಸಾಹೇಬರು ಬೇಕು. ಆದುದರಿಂದ ಅವರ ಇಚ್ಛೆಯಂತೆ ಎಲ್ಲವೂ ನಡೆಯುತ್ತದೆ.

ಅಷ್ಟೇ ಅಲ್ಲ, ಈ ಮೂರುವರ್ಷಗಳಲ್ಲಿ ಕುಂಬಾಗುಂಡಿಯಂತಹ ಕೆಸರು ಕೊಂಪೆಯಲ್ಲಿ ಒಂದು ನಗರವನ್ನೇ ನಿರ್ಮಿಸಿ, ಅಲ್ಲಿ ನೂರಾರು ಜೀವಗಳು ದುಡಿಯುವಂತೆ ಮಾಡಿದ ಸಾಹಸ ಸಾಮಾನ್ಯರಿಂದ ಆಗದ್ದು. ಅದಕ್ಕೆ ಕಾರಣ ಅಲ್ಲಿನ ಹವೆ. ಬಂದ ಆಳುಗಳು, ಮರುದಿನದಿಂದಲೇ ಜ್ವರ ಹಿಡಿದು ಮಲಗಿ ದರೂ ಮಲಗಿದರೇ. ಅದನ್ನು ತಿಳಿದವರು ಸುಲಭದಲ್ಲಿ ಬರುವುದಿಲ್ಲ. ನೂರು ಆಳುಗಳು ಬೇಕಾದರೆ ಮುನ್ನೂರು ಮಂದಿಗೆ ಮುಂಗಡ ಕೊಟ್ಟಿಡಬೇಕು. ಮುಂಗಡ ಕೊಂಡು ಅಲ್ಲಿಗೆ ಬಂದರೆ ನಾಲ್ಕು ದಿನಗಳಲ್ಲಿ ಹೊರಡುತ್ತಾರೆ. 'ಆ ಜ್ವರ, ಈ ಜ್ವರ, ಬೇರೆ ಯಾರನ್ನಾದರೂ ಕರೆದುಕೊಂಡು ಬರುತ್ತೇನೆ' ಎಂದು ನೆಪಹೇಳಿ, ಹಣ ತಿಂದು, ಹೊರಟು ಹೋಗುವ ಜನಗಳ ಹಿಂದೆ, ಮೀರ ಸಾಹೇಬರು ಚಾಟಿಯನ್ನು ಹಿಡಿದು ಕಾವಲು ನಡೆಸುತ್ತಿರಬೇಕು. ಮೀರ ಸಾಹೇಬರ ಸಾಹಸವೆಲ್ಲವೂ ಆಳುಗಳನ್ನು ಕೂಡಿಸುವುದರಲ್ಲಿದೆ; ಮುಂಗಡ ಕೊಡುವುದರಲ್ಲಿದೆ, ಅದು ನಷ್ಟವಾಗದಂತೆ ನೋಡಿಕೊಳ್ಳುವುದರಲ್ಲಿದೆ.ಹೇಗಿ ದ್ದರೂ ಕೊಟ್ಟ ಹಣ ಅರ್ಧಕ್ಕರ್ಧ ತಿಂದುಹೋಗುತ್ತಾರೆಂಬುದು ಗೊತ್ತಿದ್ದು ದರಿಂದ ಲೆಕ್ಕ ತಪ್ಪಿಸಿ, ತೀರಿಸಿದ ನೂರನ್ನು ಐವತ್ತಾಗಿ ಬರೆದು, ಅಲ್ಲಿಂದಲ್ಲಿಗೆ ಮಾಡುವುದೂ ಅವರ ಚಮತ್ಕಾರ. ಅಲ್ಲದೆ ಮೀರ ಸಾಹೇಬರ ಪಾಶಕ್ಕೆ ಸಿಕ್ಕಿದ ಆಳು, ಯಮನ ಉರುಳಿಗೆ ಸಿಕ್ಕಿದ ಹಾಗೆಯೇ. ಅವನೆಲ್ಲಿಯೇ ಇರಲಿ, ಹಡುಕಿ, ತರಿಸುವ ಯೋಗ್ಯತೆ ಅವರಿಗಿದೆ. "ಛಡಿ ಎಳೆದೇನು" ಎಂದು ಕಣ್ಣು ಕೆಂಪು ಮಾಡಿದರೆ ಆತ ಹೆದರಿಯೇ ಮೈ ಬೆವತುಕೊಳ್ಳಬೇಕು. "ಎಳೆದೇನು" ಎಂಬುದು ಬರಿಯ ಮಾತಲ್ಲ. ಹಾಗೆ ಮಾಡಿಯೇ ಮಾಡುವವರು. ಅವರ ಮನಸ್ಸಿನ ಇಂಗಿತದಂತೆ ನಡೆಯ ಬಲ್ಲ ಇಬ್ಬರು ದೈತ್ಯರಂತಹ ಮೇಸ್ತ್ರಿಗಳಿ ದ್ದಾರೆ. ನಾಗ ಎಂಬವನೊಬ್ಬ, ನಂಜ ಎಂಬುವ ಇನ್ನೊಬ್ಬ. ಅವರಿಬ್ಬರಿಗೂ

ಸಾಹೇಬರಲ್ಲಿ ತುಂಬ ನಂಬುಗೆ; ಅಥವಾ ಸಾಹೇಬರಿಗೆ ಅವರಲ್ಲಿ ಹೆಚ್ಚಿನ ವಿಶ್ವಾಸ. ಸಾಹೇಬರ ಬಂಗಲೆಗೆ ಬೇಕಾಗುವಂಥ ಕೋಳಿ, ತತ್ತಿ, ಇನ್ನೇನು ಬೇಕೋ ಅವನ್ನು ಒದಗಿಸುವ ಕೆಲಸ, ಆಳುಗಳನ್ನು ಹಿಂಬಾಲಿಸುವ ಕೆಲಸ ಅವರದ್ದು.

ಸೀಗೆ ಹಳ್ಳಿಯಲ್ಲಿ ಅವರಿಗೊಂದು ಬಂಗಲೆಯಿದೆ. ಅದಕ್ಕೆ ಬೇಕಾದ ಪ್ರತಿಯೊಂದು ವಸ್ತುವೂ, ಅವರ ಮತ್ತು ಅಲ್ಲಿಗೆ ಬರುವ ದೊರೆಗಳ ಮನಸ್ಸನ್ನು ಒಲಿಸಬೇಕಾದ ಪ್ರತಿಯೊಂದು ಅನುಕೂಲತೆಯೂ ಇದ್ದೇ ತೀರಬೇಕು. ನಂಜನು ಈ ಕೆಲಸಗಳಲ್ಲಿ ತುಂಬ ಬುದ್ಧಿವಂತ. ಗೋವೆ, ಕಾರವಾರ, ಅಲ್ಲಿಂದ ಭಟ್ಕಳದ ತನಕವೂ ಅವನಿಗೆ ಪರಿಚಯ. ತನ್ನ ಧನಿಗಳ ಸಲುವಾಗಿ ಕಾರನ್ನು ಕೊಂಡುಹೋಗಿ ಬೇಕಾದವರನ್ನು, ಬೇಕಾದ ಕಾಲಕ್ಕೆ ಕರೆದು ತರಬಲ್ಲಂಥ ನಿಪುಣ. ಸುಖೋಪಭೋಗದ ವಿಚಾರದಲ್ಲಿ ಮೂರ ಸಾಹೇಬರು ವೈವಿಧ್ಯ ಪ್ರಿಯರು; ದುಂದುಗಾರರು. ಈ ಮರದ ಉದ್ಯಮವು ಕೈತುಂಬ ಹಣವನ್ನು ಕೊಡುತ್ತಿರುವಾಗ ಅವರಾದರೂ ಏಕೆ ಸುಮ್ಮನಿದ್ದಾರು?

ಕುಂಬಾರ ಗುಂಡಿಯ ಎಲ್ಲರ ಕೈಯಲ್ಲೂ ಹೀಗೆ ಹಣ ನಲಿದಾಡುತ್ತಲಿಲ್ಲ. 'ಮುಂಗಡ ತೆಗೆದುಕೊಂಡ ಮೇಲೆ ಹೋಗಬೇಕಲ್ಲ' ಎಂಬ ಸಂಕಟದಿಂದ ಹೋಗುವವರು ಹೆಚ್ಚು; ಸಾಹೇಬರ ಜುಲುಮೆಗೆ ಹೆದರಿ ಹೋಗುವವರೇ ಹೆಚ್ಚು. ಕಡಲತೀರದ ಊರಲ್ಲಿ ದಿನಕ್ಕೆ ಮೂರು ಪಾವಲಿ ಗಳಿಸುವುದು ಕಷ್ಟವಾಗಿರುವಾಗ, ಕುಂಬಾರ ಗುಂಡಿಯಲ್ಲಿ ದೊರೆಯುವ ಮೂರು ರೂಪಾಯಿಗಾಗಿ ಆಸೆ ಹುಟ್ಟದಿದ್ದೀತೆ? ಊರಲ್ಲಿ ಹಣದ ಮುಗ್ಗಟ್ಟು ವಿಚಿತ್ರವಾಗಿ ಜನಗಳನ್ನು ಕಾಡುತ್ತಿದೆ. ಯುದ್ಧದ ಮೊದಲ ಮೂರು ವರ್ಷ ಕಾಲ ಅನೇಕರು ಕಂಗೆಟ್ಟಿದ್ದರು. ಮನೆ ಮಾರು ಮಾರಿದರು. ಈ ವೇಳೆಯಲ್ಲಿ ಶ್ರೀಪತಿರಾಯರಂಥವರೂ ತಮ್ಮ ಸಂಪತ್ತನ್ನು ಕಳೆದುಕೊಂಡು ಎಲ್ಲರಂತಾದರು. ಬಡ ಜನರು, ಕಸುಬುದಾರರು ದುಡ್ಡಿಗಾಗಿ ಅರಣ್ಯವನ್ನು ಹೊಕ್ಕರೆ ಆಶ್ಚರ್ಯವೇನು? ಕೈಯಲ್ಲಿ ಕಾಸಿಲ್ಲದಾಗ ಊರಜನಕ್ಕೆ ವರ್ಷದ ಎಂಟು ತಿಂಗಳು ಉಪವಾಸ. ಕೆಲಸ ಮಾಡಿಸುವವರೇ ಇಲ್ಲ. ವ್ಯೆಗೆಲಸದಿಂದ ಜೀವಿಸುವ ಅನೇಕ ಜನಗಳು,ಇಂದು ಕಡಲ ಕರೆಯನ್ನು ಬಿಟ್ಟು ಮತ್ತಿಗುಂಡಿ,ಕುಂಬಾರ ಗುಂಡಿಗಳಿಗೆ ಮುಖ ತಿರುಗಿಸುತ್ತಿದ್ದಾರೆ. ಘಟ್ಟದ ಮೇಲಿನ ತೋಟಗಾರರೂ 'ಜನವಿಲ್ಲ' ಎನ್ನುತ್ತಿದ್ದಾರೆ. ಘಟ್ಟದ ಕೆಳಗಿನ ಬೇಸಾಯಗಾರರೂ 'ಜನವಿಲ್ಲ'

ಅನ್ನುತ್ತಿದ್ದಾರೆ. ಕುಂಬಾರ ಗುಂಡಿಯ ಸುತ್ತಲಿನ ಅರಣ್ಯಗಳಲ್ಲಿ ಜನಕ್ಕೆ ಬರಗಾಲವಿಲ್ಲ. ಬಂದಷ್ಟು ಜನರಿಗೆ ಕೆಲಸವಿದೆ; ಕೈತುಂಬ ಸಂಬಳವಿದೆ; ಕುಡಿತಕ್ಕೂ ಅನುಕೂಲತೆಯಿದೆ. ಜ್ವರದ ಉಪದ್ರವಿದೆ ಎಂದು ಗೊತ್ತಿದ್ದರೂ ಅಲ್ಲಿಗೆ ಜನರು ಬಂದೇ ಬರುತ್ತಿದ್ದಾರೆ; ದುಡಿಯುತ್ತಿದ್ದಾರೆ; ಆಗಾಗ ಬೇನೆಯಿಂದ ಹಾಸುಗೆಯನ್ನೂ ಹಿಡಿಯುತ್ತಿದ್ದಾರೆ. ✕

ಈ ಕಾರ್ಯಕ್ಷೇತ್ರಕ್ಕೆ ಗುಡುಗು ಮಿಂಚುಗಳಂತೆ ಬಂದು ಹೋಗುವವರು ಆದಮ್ ಸಾಹೇಬರು. ಅವರ ವಿಷಯದಲ್ಲಿ ಜನರಿಗೆ ಅದ್ಭುತವಾದ ಭಯ ಭೀತಿಗಳಿವೆ. ಅವರನ್ನು ಕಂಡರೆ ಎಂತಹ ಮೈಗಳ್ಳನೂ ಚುರುಕಾಗುತ್ತಾನೆ. ಹೆಂಗಸರು, ಮಕ್ಕಳು ಹತ್ತು ಗಜಗಳ ದೂರಕ್ಕೆ ಸರಿದು ನಿಲ್ಲುತ್ತಾರೆ. 'ಮಿಲ್ಲಿ'ಗೆ ಅವರೊಬ್ಬರೇ ಬರುವುದೆಂಬುದಿಲ್ಲ. ಎರಡು ಮೂರು ಕಾರುಗಳಲ್ಲಿ ಮಿತ್ರರಿಂದೊಡಗೂಡಿ ಬರುತ್ತಾರೆ. ಅವರ ಸಲುವಾಗಿ ಕುಂಬಾರ ಗುಂಡಿಯ ಒಂದು ದಿನ್ನೆಯ ಮೇಲೆ ಛಾವಣಿಯ ಬಂಗಲೆ ಕಟ್ಟಿದ್ದಾರೆ. ಅದು ಬಿದಿರು, ಚಾಪೆಗಳ ನಿರ್ಮಾಣ. ಆದರೂ ವಿಶಾಲವಾಗಿದೆ; ಚಂದವಾಗಿದೆ. ನವಾಬರ ವಿಲಾಸ ಅಲ್ಲೇ ನಡೆಯುತ್ತದೆ. ಗೋವೆಯ ಸರಹದ್ದಿನಿಂದ ಉತ್ಕೃಷ್ಟ ಸಾರಾಯಿ ಬಡ್ಡಿಗಳು ಪಹರೆ ತಪ್ಪಿಸಿ ಬರಬೇಕು. ಒಮ್ಮೆ ಸಿಕ್ಕಿಬಿದ್ದರೂ ಅಂಜಿಕೆಯಿಲ್ಲ— ನಂಜ ಹೇಳುತ್ತಾನೆ, " 'ಸಾಹೇಬರ ಕ್ಯಾಂಪಿಗೆ' ಎಂದು ಹೇಳಿದರೆ ಒಬ್ಬ ಮಗ ತಡೆಯುವವನಿಲ್ಲ" ಎಂದು. ಆದಮ್ ಸಾಹೇಬರು ಬಂದರೆ ಬಂದ ಮಿತ್ರರೊಡನೆ,ದೊರೆಗಳೊಡನೆ, ಆಫೀಸರರೊಡನೆ, ಕೆಲಸ ನಡೆಯುವಲ್ಲಿಗೆ ಹೋಗುತ್ತಾರೆ. ಅಲ್ಲಿ ಬೆಟ್ಟದಂತೆ ಬಿದ್ದಿರುವ ರೈಲ್ವೆ ಸ್ಲೀಪರುಗಳನ್ನೋ, ಇನ್ನಿತರ ಸಿಗಿದ ಮರಗಳನ್ನೋ ಕಂಡು ಅವರು ವಿಸ್ಮಯಗೊಳ್ಳಬೇಕು. ಬಂದ ಹಿರಿಯ ಆಫೀಸರರು ಒಲಿದು,ಆದಮ್ ಸಾಹೇಬರಿಗೆ ಒಮ್ಮೆಗೇ ಹತ್ತು ಲಾರಿಗಳಿಗೆ ಅಪ್ಪಣೆ ಕೊಟ್ಟುದೂ ಉಂಟು. ಯುದ್ಧ ಪ್ರಯತ್ನಕ್ಕಾದುದರಿಂದ ಪೆಟ್ರೋಲಿಗಂತು ಯಾವ ಕೊರತೆಯೂ ಇಲ್ಲ. ತಮ್ಮ ನಾಲ್ಕು ಸ್ನೇಹಿತರಿಗೆ ಸಾಹೇಬರೇ ಬೇಕಷ್ಟು ಪೆಟ್ರೋಲನ್ನು ಒದಗಿಸಬಲ್ಲರು. ಒಮ್ಮೆ ಗಿರಣಿಯ ಸಂದರ್ಶನವಾಯಿತೆಂದರೆ, ಮುಂದೆ ಅದರ ಗೊಡವೆಯಿಲ್ಲ. ಬಂದವರೆಲ್ಲರು ಸೇರಿ, ಬಂದೂಕನ್ನು ಹಿಡಿದು ಶಿಕಾರಿಗೆ ಹೋಗುತ್ತಾರೆ. ಆಟಕ್ಕಾಗಿಯೂ ಶಿಕಾರಿ; ಊಟಕ್ಕಾಗಿಯೂ ಶಿಕಾರಿಯೇ! ಹುಲಿಯನ್ನು ಹೊಡೆದರೂ ಹೊಡೆದರೇ! ಜಿಂಕೆ, ಕಾಟಿ, ಕಡವೆಗಳನ್ನು ಕೊಂದರೂ ಕೊಂದರೇ! ಅಲ್ಲಿಗೆ ಬರುವ

ದೊರೆಗಳಿಗೆ ನಿತ್ಯವೂ ಜಿಂಕೆಯ ಮಾಂಸವಿಲ್ಲದಿದ್ದರೆ ಹೊಟ್ಟೆಯೇ ತುಂಬುವ ಹಾಗಿಲ್ಲ. ಬೇಟೆಗೆ ಯಾವ ಕೊರತೆಯೂ ಇಲ್ಲದ ಸ್ಥಳ; ಏನು ಮಾಡಿದರೂ ಕೇಳುವವರಿಲ್ಲದ ರಾಜ್ಯ. ಹೀಗಾಗಿ ಅಧಿಕಾರಿಗಳ ಮನಸ್ಸನ್ನು ತೃಪ್ತಿಪಡಿಸುವ ಕೆಲಸ ತೀರ ಸುಲಭವಾದದ್ದು. ಆದಮ್ ಸಾಹೇಬರು "ಇನ್ನೂರು ಗರಗಸಗಳು ಬೇಕು, ನಾನ್ನೂರು ಗಾಡಿಪಟ್ಟೆಗಳು ಬೇಕು" ಎಂದರೆ 'ಮಂಜೂರಾ'ಗಿ ಅನುಮತಿ ಬರುತ್ತದೆ. ಬೆಳೆದು ಬಂದಿರುವ ಅವರ ಹಲವು ವ್ಯಾಪಾರಗಳಲ್ಲಿ, ಅನಾಯಾಸವಾಗಿ ದೊರೆಯುವ ಕಬ್ಬಿಣ, ಪೆಟ್ರೋಲು, ಗರಗಸ ಮೊದಲಾದುವುಗಳ ವ್ಯಾಪಾರವೂ ಸೇರಿಕೊಂಡಿದೆ. ಪರ್ಮಿಟನ್ನು ಪಡೆದು, ಮುಂಬಯಿಗೆ ಹೋಗಿ, ಬೇಕಾದ ವಸ್ತುಗಳನ್ನು ಕಾಣುವ ಮುಂಚೆಯೇ ಕೊಂಡು, ಮಾರುವುದೂ ಸಾಧ್ಯವಿದೆ. ಅಂಕೆ, ಸಂಖ್ಯೆ ಗೊತ್ತಿದ್ದವರು—ಉತ್ತರ ಕನ್ನಡ ಜಿಲ್ಲೆಗೆ ಸಾಕಾಗುವಷ್ಟು, ಉಕ್ಕು ಕಬ್ಬಿಣ ಆದಮ್ ಸಾಹೇಬರಿಗೊಬ್ಬರಿಗೇ ಸಿಗುತ್ತದೆ-- ಎನ್ನುತ್ತಾರೆ.

ಈ ಮಾವ ಅಳಿಯಂದಿರು ಬರಿಯ ಮೂರು ವರ್ಷಗಳ ಅವಧಿಯಲ್ಲಿ, ಸಾಧಿಸಿರುವುದನ್ನು ಕಾಣುತ್ತಿರುವ ಕಾಸೀಮ್ ಮತ್ತು ಕರೀಮ್ ಸಾಹೇಬರಿಬ್ಬರಿಗೂ ಬಹು ಬೇಸರವಾಗಿದೆ; ಅಸಮಾಧಾನಕ್ಕೆ ಕಾರಣವಾಗಿದೆ. ತಮ್ಮನು ಗಳಿಸುತ್ತಿರುವ ಕೀರ್ತಿ, ವ್ಯಯಿಸುತ್ತಿರುವ ಹಣ-ಇವುಗಳ ಕತೆಗಳನ್ನು ಕೇಳುವಾಗ "ತಂದೆಯು ನಿಧಿಯನ್ನು ಹೂತಿಟ್ಟದ್ದು ನಿಜ; ಅದು ಈ ಬಕ ಪಕ್ಷಿಗಳ ಕೈಗೆ ಬಿದ್ದಿದೆ" ಎಂಬ ಅನುಮಾನ ಉಂಟಾಗುತ್ತದೆ. ಅವರಿಬ್ಬರು ಕಾಡಿನ ಗುತ್ತಿಗೆ ವಹಿಸಿಕೊಳ್ಳುವಾಗ, ನಗದು ಮೂವತ್ತು ಸಾವಿರ ರೂಪಾಯಿಗಳಷ್ಟು ಹಣ ಸಿಕ್ಕಿತ್ತು. ಮೀರ ಸಾಹೇಬರು ತಮ್ಮ ಅಳಿಯನಿಗೆ ಇಪ್ಪತ್ತು, ಮೂವತ್ತು ಸಾವಿರ ಸಾಲತೆಗೆಸಿ ಕೊಟ್ಟಿದ್ದಾರೆ ಅನ್ನುತ್ತಾರೆ. ಆದರೆ ಸಾಲ ಕೊಂಡಂಥ ಹಣವು ವರ್ಷದ ಕೊನೆಗೇ ಮರಳಿ ಸಲಬೇಕಾದರೆ "ಇದೆಂತಹ ದುಡ್ಡಿನ ಮಳೆ!" ಎಂಬ ಆಶ್ಚರ್ಯವು ಅವರ ಹಿರಿಯ ಅಣ್ಣಂದಿರಿಗೆ ಉಂಟಾಗಿದೆ.

ಇತ್ತ ಮಾವ ಅಳಿಯಂದಿರಲ್ಲಿನ ಅಚ್ಚು ಮೆಚ್ಚು ಮೊದಲಿನಷ್ಟು ಚೆನ್ನಾಗಿಲ್ಲ. ಶ್ರಮದ ವಿಚಾರದಲ್ಲಿ ಇಬ್ಬರೂ ಸಮನಾಗಿ ದುಡಿಯುತ್ತಾರೆ. ಆರಂಭದಲ್ಲಿ ಅಳಿಯನ ಹಣವೇ ಇದ್ದರೂ ಮಾವನ ವರ್ಚಸ್ಸು ಇಲ್ಲದಿದ್ದರೆ ಕೆಲಸ ನಡೆಯುತ್ತಿರಲಿಲ್ಲ. ಮೀರ ಸಾಹೇಬರು ಬುದ್ಧಿವಂತರು. ಹಿಂದೆ ಇತರರಲ್ಲಿ ದುಡಿದವರು. ಬರಿದೆ ದುಡಿದೂ ಗೊತ್ತಿಲ್ಲ. ಲಾಭದ ದಾರಿಗಳನ್ನೆಲ್ಲ ಕಲಿತಿದ್ದ

ವರು. ಹಾಗಾಗಿ ಅವರ ಪಾಲುಗಾರರು ಅವರನ್ನು ಹೊರಗಟ್ಟಿದ್ದರು. ಈಗ ಅಳಿಯನ ಬೆಂಬಲದಿಂದ ಹೊಸ ಸಾಮ್ರಾಜ್ಯವನ್ನೇ ಕಟ್ಟುತ್ತಿರುವಾಗ–ಅವರಿಗೂ ಲಾಭ ಬೇಡವೆ? ಅಳಿಯನಿಗೆ ತಿಳಿಯದಂತೆ ಮಾವ ಗಳಿಸುತ್ತಿದ್ದಾರೆ. ಮಾವನ ಕಣ್ಣು ತಪ್ಪಿಸಿ ಅಳಿಯ ಸಂಪಾದಿಸುತ್ತಿದ್ದಾನೆ. ಬರಹ ಮೂಲಕವಾದ ಯಾವ ಕರಾರೂ ಇಲ್ಲದೆಯೆ ಅವರ ವ್ಯವಹಾರ ನಡೆದಿದೆ. ಇತ್ತ ಒಬ್ಬರು ಇನ್ನೊಬ್ಬರನ್ನು ನಂಬದೆ ಪರಸ್ಪರ ಹೊಂಚೂ ಹಾಕುತ್ತಿದ್ದಾರೆ. ನಾಗ, ನಂಜ ಇವರಿಬ್ಬರಿಗೆ ಆ ಕೆಲಸ. ನಂಜನು ಆದಮ್ ಸಾಹೇಬರ ದೂತ; ನಾಗ ವೀರ ಸಾಹೇಬರ ದೂತ. ಈ ಇಬ್ಬರು ಸೇರೆಗಾರರಿಗೆ ಕಾಡಿನ ಮರದ ವ್ಯಾಪಾರದ ಆಗು ಹೋಗುಗಳೆಲ್ಲ ತಿಳಿದಷ್ಟು ಚೆನ್ನಾಗಿ, ಸ್ವತಃ ಧನಿಗಳೇ ತಿಳಿದಿಲ್ಲವೋ ಏನೋ. ಅವರಿಬ್ಬರೂ ಸಾಮಾನ್ಯ ಮೇಸ್ತ್ರಿಗಳಾಗಿಯೇ ಉಳಿದುಕೊಂಡಿದ್ದಾರೆ. ಕುಂಬಾರ ಗುಂಡಿಯ ಸ್ಥಳದ ಮೆನೇಜರರು, ಲೆಕ್ಕ ಪತ್ರ ಇರಿಸುವವರು-ಬೆಡೇಕರ್ ಎಂಬವರು. ಅವರು ವೀರ ಸಾಹೇಬರ ಒಳಗೈಯ ಜನರೆಂದು ನಂಜ ತನ್ನ ಧನಿಗಳಿಗೆ ತೋರಿಸಿಕೊಟ್ಟಿದ್ದಾನೆ. ತಮ್ಮ ಮಾವಂದಿರು ಒಳಗಿಂದೊಳಗೆ ತಮಗೆ ಕತ್ತರಿ ಇರಿಸುತ್ತಿದ್ದಾರೆ ಎಂಬುದು ಅವರಿಗೆ ತಿಳಿದಿದ್ದರೂ ಅವರನ್ನು ಓಡಿಸುವ ಸ್ಥಿತಿಯಲ್ಲಿಲ್ಲ. ತಾವು ನಡೆಸುತ್ತಿರುವ ವ್ಯಾಪಾರದಲ್ಲಿ ದುರ್ನೀತಿಗಳಿವೆ ಎಂದು ತಿಳಿದುಕೊಂಡವರನ್ನು ಒಲಿಸಿ, ಇರಿಸಿಕೊಳ್ಳಬೇಕೇ ಹೊರತು ಹೊರಗಟ್ಟುವಂತಿಲ್ಲ. ಅವರವರ ಅದೃಷ್ಟದಲ್ಲಿರುವುದನ್ನು ತಿನ್ನುವುದಕ್ಕೆ ಬಿಟ್ಟು, ತಮ್ಮ ಅದೃಷ್ಟದಲ್ಲಿದ್ದುದು ತಮಗೆ–ಎಂದು ಕುಳಿತಿರಬೇಕಾಗುತ್ತದೆ. ಇದಕ್ಕಿಂತ ಹೆಚ್ಚಿನ ಬೇಸರವೂ ಮಾವನ ಮೇಲೆ ಅಳಿಯನಿಗಿದೆ. ತಮ್ಮಿಂದಾಗದ ವ್ಯಾಪಾರಗಳಿಗೆ ಪೌರುಷದಿಂದ ಕೈ ಹಾಕಿ, ಬೇಡದ ವಿಪತ್ತನ್ನು ತಂದುಕೊಳ್ಳುವ ಚಟ ಅವರದ್ದು. 'ಆದಮ್ ಸಾಹೇಬರು ಒಳ್ಳೆಯ ಶಿಕಾರಿ' ಎಂದು ಯಾರಾದರೂ ಅಂದರೆ, ಆಗ ತಾನೂ ಬುದ್ಧಿವಂತ ಈಡುಗಾರ ಎಂಬ ಕೆಚ್ಚು ವೀರ ಸಾಹೇಬರಿಗೆ ಬರುತ್ತದೆ. ಅವರು ಒಂದು ಹುಲಿ ಹೊಡೆದರೆ 'ತಾನು ಎರಡನ್ನು ಹೊಡೆಯುತ್ತೇನೆ' ಎನ್ನುವ ಜಂಭ ಇವರಿಗೆ. ಅಳಿಯ ಮೊಕ್ಕಾಮು ಬಿಟ್ಟುಹೋದ ಮರುದಿನವೇ ಇವರೂ ಬೇಟೆಗೆ ಹೊರಡುತ್ತಾರೆ.

ಒಂದು ದಿನ ಅದಕ್ಕಾಗಿ ತಮ್ಮ ಸಹಚರ ನಾಗನನ್ನು ಕರೆದುಕೊಂಡರು; ಇನ್ನೂ ಒಬ್ಬಿಬ್ಬರನ್ನು ಕಟ್ಟಿಕೊಂಡು ಹುಲಿಯ ಬೇಟೆಗೆ ಹೊರಟರು.

ಹಿಂದಣ ದಿನ ಕಾಡಿಗೆ ಹೋದ ಒಂದು ಕೋಣವನ್ನು ಒಂದು ಹುಲಿ ಹಗಲಿನಲ್ಲೇ ಮುರಿದು ಹಾಕಿತ್ತಂತೆ. ಅದನ್ನು ಶಿಕಾರಿ ಮಾಡುತ್ತೇವೆಂದು ಹೊರಟರು. ಶಿಕಾರಿಯೂ ಆಯಿತು. ಆದರೆ ಸತ್ತುದು–ಇವರು ಕರೆದುಕೊಂಡು ಹೋದ ಒಬ್ಬ ಆಳು. ಇವರ ಗುಂಡಿನೇಟಿಗೆ ಆತ ಬಲಿಯಾದನೆಂದು ಗೊತ್ತಾದೊಡನೆ, ಅಲ್ಲಿಂದೆದ್ದರು. ನೇರಾಗಿ ಆಳು ತರುವುದಕ್ಕೆಂದು ಹೊನ್ನಾವರದ ಕಡೆಗೆ ಸಾಗಿದರು. ನಾಗ ತಲೆ ತುರಿಸಿಕೊಂಡು ಹೆಣವನ್ನು ಹೂತು, ಯಲ್ಲಾಪುರಕ್ಕೆ ಓಡಿ ಹೋಗಿ, ಅಲ್ಲಿ ಕೇಂಪ್ ಮಾಡುತ್ತಿದ್ದ ಆದವರ್ ಸಾಹೇಬರಿಗೆ ಸುದ್ದಿಯನ್ನು ತಿಳಿಸಿ, ಯಾವತ್ತು ಅನಾಹುತವನ್ನು ಮುಚ್ಚಿಡಬೇಕಾಯಿತು.

'ಕಾಡಿಗೆ ಹೋದ ತನ್ನ ಗಂಡನು ಮನೆಗೆ ಬರಲಿಲ್ಲ' ಎಂದು ಕೂಗುವ ಅವನ ಹೆಂಡತಿಯ ಉಸಿರನ್ನು ಕಟ್ಟುವಂಥ ಕೆಲಸ ಸಾಮಾನ್ಯವಲ್ಲ. ಜತೆಗೆ ಹೋದ ಬೇಟೆಗಾರರನ್ನು ಒಳಸಂಚಿಗೆ ತೆಗೆದುಕೊಂಡು, ದುಡ್ಡಿಂದ, ಬೆದರಿಕೆಯಿಂದ ಅವರ ಬಾಯನ್ನು ಮುಚ್ಚಿಸಿದರು. ಅನಂತರ, ಸತ್ತ ಮನುಷ್ಯ ಯಲ್ಲಾಪುರಕ್ಕೆ ಹೋಗಿದ್ದಾನೆಂದು ಸುದ್ದಿಯನ್ನು ಹುಟ್ಟಿಸಿದರು. 'ಇಂದು ಬಂದಾನು, ನಾಳೆ ಬಂದಾನು' ಎಂದು ಅವಳಿಗೆ ಸಮಾಧಾನ ಹೇಳಿ, ಅವರ ಜತೆಗೆ, ತಮ್ಮ ಶಿಬಿರದಲ್ಲಿ ಐನೂರು ರೂಪಾಯಿ ಕಳವಾಗಿದೆ ಎಂಬ ಪುಕಾರನ್ನು ಹೊರಡಿಸಿದರು. ಅದನ್ನು ಹುಡುಕುವ ಗಲಭೆ ತೊಡಗಿತು. ಅದೃಶ್ಯನಾದ ಚೆನ್ನನೇ–ಅದನ್ನು ಕದ್ದಿರಬಹುದು ಎಂಬ ಅಪವಾದ ಹಾಕಿ, 'ದುಡ್ಡು ಕದ್ದು ಓಡಿ ಹೋದ' ಎಂಬ ಆರೋಪ ಹೊರಿಸಿ, ಚೆನ್ನನ ಹೆಂಡತಿ ಮಕ್ಕಳನ್ನು ಅವರ ಊರಿಗೆ ಕಳುಹಿಸಿಬಿಟ್ಟರು. ಹೋದ ಗಂಡ ಹೋದನೇ. 'ಆತನಿಗೆ ಏನೋ ಆಗಿದೆ; ತನ್ನ ಪತಿ ನಿರಪರಾಧಿ' ಎಂದಿಷ್ಟೇ ಆ ಬಡ ಹೆಂಗುಸಿಗೆ ಗೊತ್ತು.

ಆ ಮೇಲೆ ವೀರ ಸಾಹೇಬರು ಕೋವಿಯನ್ನು ಹಿಡಿಯಲಿಲ್ಲ. ಶಿಕಾರಿ ಮಾಡಲಿಲ್ಲ. ಇಂತಹ ಅನೇಕ ಗುಟ್ಟುಗಳ ದೆಸೆಯಿಂದಾಗಿ ನಾಗ, ನಂಜರ ವಿಚಾರದಲ್ಲಿ ಒಳ್ಳೆತನ ನಟಿಸಿ ಸಾಹೇಬರುಗಳು ದಿನ ಕಳೆದರೂ ಅವರನ್ನು ಕುರಿತು ಅಂಜಿಕೆ ಇದ್ದೇ ಇತ್ತು.

ಇಷ್ಟೆಲ್ಲ ಕಾರುಭಾರುಗಳನ್ನು ಅವರು ನಡೆಯಿಸುತ್ತಿದ್ದರೂ, ಮಾವ ಅಳಿಯಂದಿರಿಬ್ಬರೂ ತುಂಬ ಧೈರ್ಯವಾಗಿದ್ದರು. ಆ ಮಲೆನಾಡಿಗೆ ತಾವೇ ಅರಸರೆಂಬ ತಿಳುವಳಿಕೆ ಅವರಿಗೆ. ಯುದ್ಧ ಪ್ರಯತ್ನದಿಂದಾಗಿ ಅವರ ಮಾತುಗಳಿಗೆ ತಲೆದೂಗುವ ಅಧಿಕಾರಿಗಳು ಸಿಕ್ಕಿದಂತೆ, ಆ ಧೈರ್ಯ ಇನ್ನಷ್ಟು

ಹೆಚ್ಚಿತು. ಅದರಿಂದ ಸರಕಾರದ ಯುದ್ಧ ಪ್ರಯತ್ನದ ಸಲುವಾಗಿ ನಾಟ, ಜಂತಿ, ತೊಲೆ ಏನುಬೇಕಾದರೂ ಸಾಗುತ್ತಿದ್ದ ಹಾಗೆಯೇ, ಖಾಸಗಿ ವ್ಯಾಪಾರವನ್ನೂ ನಡೆಯಿಸತೊಡಗಿದರು. ಅರಣ್ಯದಲ್ಲಿ ಮರಗಳಿವೆ. ಅವನ್ನು ಹಗಲೂ ರಾತ್ರಿಯೂ ಕದ್ದು, ಗಾಡಿಗಳಲ್ಲಿ, ಲಾರಿಗಳಲ್ಲಿ ತುಂಬಿಸಿ ಮನಬಂದಂತೆ ಮಾರಾಟ ಮಾಡತೊಡಗಿದರು. ಬೊಗಸೆ ತುಂಬ ಹಣ ಸಂಪಾದಿಸಿದರು. ಯಲ್ಲಾಪುರಕ್ಕೆ ಹೋಗುವ ಲಾರಿ, ಅಂಕೋಲೆಗೆ ಹೋದದ್ದೂ ಉಂಟು, ಕಾರವಾರಕ್ಕೆ ಹೋದದ್ದೂ ಉಂಟು. ಯಾರಾದರೂ ತಡೆದು, ಪರ್ಮಿಟ್ ಕೇಳಿದರೆ "ಸಾಹೇಬರ ಮರ" ಎಂದರಾಯಿತು. ಆ ಸಾಹೇಬರು ಯಾರು ಎಂದು ಊರವರಿಗೆ ತಿಳಿದೇ ಇದೆ. ಹೊಸತಾಗಿ ವರ್ಗವಾಗಿ ಬಂದ ಒಬ್ಬ ರೇಂಜರು ಅಥವಾ ಇನ್ನಾವನೋ ನೌಕರ ತಡೆದರೆ, ಡ್ರೈವರ್ ಬುದ್ಧಿವಂತನಾಗಿ ಹಿಂದುಸ್ಥಾನಿ ಮಾತನಾಡುತ್ತಾನೆ. "ಇದು ಯಲ್ಲಾಪುರದ ರಸ್ತೆಯಲ್ಲವೆ? ನಾನು ಹೊಸಬ. ಅಂಕೋಲೆ ಯಲ್ಲಾಪುರಕ್ಕೆ ಸಮೀಪವಲ್ಲವೆ?" ಎಂದು ಕೇಳುತ್ತಾನೆ. ಅಷ್ಟರಲ್ಲಿ, ಅಂತಹ ಆಪತ್ತಿನ ಕಡೆಗಳಲ್ಲಿ, ಅವರ ಜನ ಬಂದು ಕಲೆಯುತ್ತಾರೆ. "ಏನದು? ಮರವೆ? ಪಂಚನಾಮೆ ಮಾಡಿ" ಎಂದು ಆಫೀಸರೊಡನೆ ಮಾತುಕತೆಯಾಗುವಾಗ, ಭೀತಿಯನ್ನು ನಟಸಿದ ಡ್ರೈವರು, ಗಾಡಿಯನ್ನು ಮಗ್ಗುಲಿಗೆ ತಿರುಗಿಸುವ ನೆಪದಿಂದ, ಪರ್ಮಿಟಿನಲ್ಲಿ ನಮೂದಿಸಿದಂತೆ ಯಲ್ಲಾಪುರಕ್ಕೇ ಓಡಿಸುತ್ತಾನೆ. ಲಾರಿಯ ನಂಬರು ಮೊದಲಾದದ್ದು ಬದಲಾಗಿರುತ್ತದೆ. ಆ ನೌಕರನು ಅತಿ ಪ್ರಾಮಾಣಿಕನಾಗಿ ವರ್ತಿಸಿದಲ್ಲಿ, ಅದಕ್ಕೆ ಆ ಪ್ರಪಂಚದಲ್ಲಿ ಗಿರಾಕಿಯಿಲ್ಲ, ಎಂಬ ಅನುಭವ ಅವನಿಗೂ ಕ್ರಮೇಣ ಬರುತ್ತದೆ.

ಇನ್ನೊಮ್ಮೆ ಆದಮ್ ಸಾಹೇಬರೇ ಇಂತಹ ಒಂದು ಅವಿವೇಕ ಮಾಡಿದರು. ಇಂದಿನ ವ್ಯವಹಾರಿ ಜಗತ್ತಿನಲ್ಲಿ ಅದನ್ನು ಅವಿವೇಕವೆನ್ನುವಂತೆಯೂ ಇಲ್ಲ. ಆ ಊರಿಗೆ ಒಬ್ಬ ಭಾರಿ ಆಫೀಸರರು ಬಂದರು. ತಮ್ಮ ಪ್ರದೇಶದ ಕಾರ್ಯಕಲಾಪಗಳನ್ನು ತೋರಿಸುವ ಸಲುವಾಗಿ ಸ್ಥಳಿಕ ನೌಕರರು ನೆರೆದರು. ಆದಮ್ ಸಾಹೇಬರಂತೂ ಅಂಥವೇಳೆ ಊರಲ್ಲಿ ಇದ್ದೇತೀರಬೇಕಲ್ಲ? ಒಮ್ಮೆಗೇ ಆರೆಂಟು ಮೋಟಾರುಗಳು ಸಾಲಾಗಿ ಹೊರಟು ಕುಂಬಾರಗುಡಿಗೆ ಬಂದುವು. ಆಗ ಮಳೆಗಾಲ ಕಳೆದು, ದಶಂಬರ ತಿಂಗಳ ಚಳಿಯು ಮೈಯನ್ನು ನಡುಗಿಸುತ್ತಿತ್ತು. ಬಂದ ದೊರೆಗಳ ಸಮುದಾಯಕ್ಕೆ ಕುಂಬಾರಗುಂಡಿ ಮಹಾಬಲೇಶ್ವರವಾಯಿತು. ಅಲ್ಲಿ ತಂಬುಗಳನ್ನು ಹೊಡೆದರು; ಸೀಸೆ

ಗಳು ಬಂದುವು; ಮೋಜುವಾನಿ ನಡೆಯಿತು; ಶಿಕಾರಿಗೆ ಏರ್ಪಾಟಾಯಿತು. ಸ್ಥಳಿಕ ಆಫೀಸರು ಸಾಹೇಬರನ್ನು ಹೊಗಳಿದರು. "ಸ್ಥಳದ ಕೂಲಿಗಳು ಮಲೇರಿಯದಿಂದ ಅಲ್ಲಿಗೆ ಬಂದಿರುವುದಕ್ಕೆ ಬೆದರುತ್ತಾರೆ. ವಸತಿಯ ಏರ್ಪಾಡು ಏನೇನೂ ಸಾಲದು. ಅದಕ್ಕಾಗಿ ಸಾಹೇಬರು ಹಂಚು, ಇಟ್ಟಿಗೆಗಳಿಂದ ಪಕ್ಕಾ ಕಟ್ಟಡಗಳನ್ನು ಮಾಡುವ ಯೋಚನೆ ಮಾಡಿದ್ದಾರೆ" ಎಂದು, ಅದರ ನಕಾಶೆಯನ್ನು ಬಂದ ದೊರೆಗಳಿಗೆ ತೋರಿಸಿದರು. ಅವರು ಈ ಯೋಜನೆಯನ್ನೊಪ್ಪಿದರು. ಈ ಪ್ರಯತ್ನಕ್ಕಾಗಿ ಅಷ್ಟೆಲ್ಲ ಸಿಮೆಂಟು, ಕಬ್ಬಿಣ ಸಾಗಿಸುವುದಕ್ಕೆ ಲಾರಿಗಳು ಬೇಕು ಎಂಬ ಅರ್ಜಿಯನ್ನು ಅವರ ಮುಂದಕ್ಕಿರಿಸಿಯಾಯಿತು. ಆಫೀಸಿನ ನಿತ್ಯಕ್ರಮಗಳಂತಾದರೆ ವರ್ಷ ಎರಡು ಕಳೆದರೂ ಅದಕ್ಕೆಬೇಕಾದ ಪರವಾನಗಿಯು ದೊರೆಯಲಾರದೆಂದು,ಆಟಮ್ ಸಾಹೇಬರವರು ವಿನಯದ ಒತ್ತಾಯಹೊರಿಸಿದರು. ಪರವಾನಗಿ ಕೊಡುವ ಭರವಸೆಯೂ ದೊರೆಯಿತು. ಬಂದ ದೊರೆಗಳು ಪುನೆಗೆ ಹೋಗಿ,ಒಂದು ತಿಂಗಳೊಳಗೇನೆ ಅದಕ್ಕೆ ಬೇಕಾದ ಏರ್ಪಾಟನ್ನು ಮಾಡಿದರು. ಸಾಹೇಬರ ಕೈಗೆ ಅವುಗಳು ಸೇರಿ ತಿಂಗಳು ಸರಿದರೂ, ಕುಂಬಾರ ಗುಂಡಿಯು ಕುಂಬಾರ ಗುಂಡಿಯೇ ಆಗಿ ಉಳಿಯಿತು; ಯಾವ ಬದಲಾವಣೆಯೂ ಆಗಲಿಲ್ಲ.

ನಂಜನ ಅಂದಾಜಿನಂತೆ-"ಆ ಹೆಡ್‌ದೊರೆಗಳು ಬಂದಾಗ ಮಾಡಿದ ಮೋಜುವಾನಿಗೇನೆ ಎರಡು ಸಾವಿರ ರೂಪಾಯಿಗಳಷ್ಟು ಖರ್ಚಾಗಬಹುದು. ಗೋವೆಯಿಂದಲೇ ತೆರ ತೆರನ ಸೀಸೆಗಳು ಬಂದಿದ್ದವು. ಇನ್ನು ಶಿಕಾರಿ, ಔತಣ, ಉಪಚಾರ, ಇವೆಲ್ಲ ಬರಿದೆ ಆಗುವಂಥವುಗಳಲ್ಲ. ಆದರೆ ಮಾಡಿದ ಖರ್ಚೊಂದು ಕಸ, ಸಾಹೇಬರ ಕಿಸೆಗೆ ಅದರಿಂದ ಒಂದು ಲಕ್ಷ ರೂಪಾಯಿಯಾದರೂ ಬಿದ್ದಿರಬಹುದು. ನಮ್ಮ ಸಾಹೇಬರ ಬಾಯಿಯೆಂದರೆ ಜೇನು ಸುರಿಯುವಂಥದು. ಎಂಥವರೂ ಒಂದು ಕ್ಷಣಕ್ಕೆ ಅವರ ಮಾತಿನ ಮಂಕು ಬೂದಿಗೆ ಮರುಳಾಗುವುದೇ" ಎನ್ನುತ್ತಾನೆ ನಂಜ.

ಆದರೆ ಈ ಮಂಕು ಬೂದಿ ಒಂದು ಕ್ಷಣಕ್ಕಲ್ಲ, ಆರು ತಿಂಗಳು ಅವಧಿಯ ತನಕವೂ ತನ್ನಕೆಲಸವನ್ನು ಮಾಡಿತು. ಆ ಮೇಲೆ ಅದು ಬಯಲಾಯಿತು. ಮುಂದಿನ ವರ್ಷ ಜುಲಾಯಿ ತಿಂಗಳ ಜಿರಿಮಳೆಯಲ್ಲಿ ಎರಡು ಮೋಟರುಗಳು ಬಂದು, ಕುಂಬಾರ ಗುಂಡಿಯ ರಸ್ತೆತಿರುಗುವಲ್ಲಿ ನಿಂತುವು. ಆ ಕೆಸರು ದಾರಿಯಲ್ಲಿ ಮೋಟರು ಹೋಗಲಾರದೆಂಬ ತಲೆಬೇನೆ ಅವರಿಗೆ.

ಒಬ್ಬ ಕರಿಯ ದೊರೆ, ಒಬ್ಬ ಬಿಳಿಯ ದೊರೆ-ಹೀಗೆ ಇಬ್ಬಿಬ್ಬರು ಬಂದಿದ್ದರು. ಅವರು ಕಾರನ್ನು ಮುಂದೊಯ್ಯಲಾರದೆ ಕೆಸರನ್ನು ತುಳಿಯುತ್ತ, ಮುಂದು ವರಿದಾಗ, ನಾಗ ಅವರನ್ನು ಕಂಡಿದ್ದ. ಅವರ ಬೆನ್ನಮೇಲೆ ರೈಫಲ್‌ಗಳಿದ್ದು ವಂತೆ! ಅವನು ಕುಂಬಾರ ಗುಂಡಿಯಿಂದ ಅಂಕೋಲೆಗೆ ಹೊರಟವನು. ಇವನೂ ಅವರನ್ನು ವಿಚಾರಿಸಲಿಲ್ಲ, ಅವರೂ ಇವನನ್ನು ಕೇಳಲಿಲ್ಲ.

ಸರಿ, ಬಂದ ಆಫೀಸರುಗಳು, ಕೆಸರಿನ ದಾರಿಯನ್ನು ತುಳಿದುಕೊಂಡು ಹಾಗೂ ಹೀಗೂ ಕುಂಬಾರ ಗುಂಡಿಯ ಕ್ಷೇತ್ರವನ್ನು ಸೇರಿದರು. ಅವರನ್ನು ಕಂಡ ಒಬ್ಬ ಆಳು ಮೆನೇಜರನಾದ ಬೇಡೇಕರನಲ್ಲಿಗೆ ಹೋಗಿ ಸುದ್ದಿಯನ್ನು ಕೊಟ್ಟ. ಬೇಡೇಕರರು ದುಸ್ತುಮಾಡಿಕೊಂಡು ಅವರನ್ನು ಸಂಧಿಸುವಾಗಲೇ ಹೊತ್ತಾಗಿತ್ತು. ಬಂದ ದೊರೆಗಳು ಆಚೀಚೆ ಸುತ್ತಾಡಿದರು. ತೀರ ಮಳೆಗಾಲ ವಾದುದರಿಂದ ಆಳುಗಳಾರೂ ಊರಿನಲ್ಲಿರಲಿಲ್ಲ; ನೂರಕ್ಕೆ ತೊಂಬತ್ತೈದ ರಷ್ಟು ಕೆಲಸ ನಿಂತಿತ್ತು. ಅವರು ಹಲವಾರು ಪ್ರಶ್ನೆಗಳನ್ನು ಕೇಳಿದರು. ಮೊದ ಮೊದಲು ಹೆಮ್ಮೆಯಿಂದ ಮಾತನಾಡತೊಡಗಿದ ಬೇಡೇಕರ್ ಕೊನೆಕೊನೆಗೆ "ನನಗೆ ಗೊತ್ತಿಲ್ಲ ಸರ್. ಮ್ಹಾಲಕರಿಲ್ಲ" ಎನ್ನತೊಡಗಿದ. ಅವರ ಜತೆಗೆ ಬಂದ ಒಬ್ಬ ಆಳು, ಕೊಂಕಣಿಯಲ್ಲಿ ಅವನಿಗೆ ಬೋಧನೆಮಾಡಿದ. ಎರಡು ಮೂರು ತಾಸುಗಳ ತನಿಖೆ ನಡೆಯಿತು. ಹೊಸ ಪರ್ಮಿಟಿನಂತೆ ಪಡೆದಂಥ ಲಾರಿ, ಸಿಮೆಂಟ್, ಕಬ್ಬಿಣ ಯಾವುದೂ ಅಲ್ಲಿಗೆ ಬಂದಿಲ್ಲವೆಂದು ಗೊತ್ತಾ ಯಿತು. ಬೇಡೇಕರನ ಸಹಿಯನ್ನು ಪಡೆದು, ಬಂದವರು ಹೊರಡುವುದಕ್ಕೆ ಅನುವಾದರು. ಆತ "ಸಾಹೇಬರು ಬೆಳಗಾಂವಿನಲ್ಲಿದ್ದಾರೆ! ನಾನೂ ಜತೆಗೆ ಬರು ತ್ತೇನೆ; ಅವರೇ ಸಮಾಧಾನ ಹೇಳಿಯಾರು" ಎಂದರೆ, ದೊರೆಗಳು "ಡೇಮ್ ಯುವರ್ ಸಾಹೇಬ್" ಎಂದು ಹಳಿದರು. ಆತ ಮುಖವನ್ನು ತಗ್ಗಿಸಿದ.

ಬೇಡೇಕರ್ ಎಷ್ಟು ಪ್ರಾರ್ಥಿಸಿದರೂ ಅವರು ಅಲ್ಲಿ ಊಟ ಉಪಹಾರ ಗಳೊಂದನ್ನೂ ಸ್ವೀಕರಿಸಲಿಲ್ಲ. ಬಂದವರು ಸೀಗೆಹಳ್ಳಿಗೆ ಹೋಗಿ, ಅಲ್ಲಿಂದ ಮೋಟರಿನಲ್ಲಿ ಕುಳಿತು ಅದೃಶ್ಯರಾದರು. ಬೇಡೇಕರನು ಕಾಳೂರಿಗೆ ಹೊರಟ. ಸಾಹೇಬರು ಎಲ್ಲೆಲ್ಲಿರಬಹುದೋ ಅಲ್ಲಿಗೆಲ್ಲ ಅಪಾಯ ಸೂಚ ನೆಯ ತಾರನ್ನು ಕೊಟ್ಟ. ಅವನಿಗೂ ಧನಿಗಳೆಲ್ಲಿದ್ದಾರೆಂಬುದು ನಿಶ್ಚಯವಾಗಿ ತಿಳಿದಿರಲಿಲ್ಲ. ಮರು ದಿನವೇ ಆದಮ್ ಸಾಹೇಬರು ಕುಂಬಾರ ಗುಂಡಿಗೆ ಬಂದುಬಿಟ್ಟರು. ಅಲ್ಲಿ ಬೇಡೇಕರನನ್ನು ಕಾಣದೆ, ಕಾಳೂರಿಗೆ ಜನ ಕಳು

ಹಿಸಿದರು. ಅವನು ಕೊಟ್ಟ ತಂತಿಯು ಅವರಿಗೆ ಸಿಕ್ಕಿಲ್ಲವಾದರೂ, ಅವರಿಗಿರುವ ಒಳಕೀಲುಗಳಿಂದ, 'ಪುನೆಯ ದೊರೆಗಳೊಬ್ಬರು-ಸಾಹೇಬರು ಪರ್ಮಿಟಿನಿಂದ ಪಡೆದ ಸಾಮಾನುಗಳನ್ನು ಕಾಳಸಂತೆಯಲ್ಲಿ ಮಾರಿದ್ದಾರೆ' ಎಂಬುದರ ತನಿಖೆಗಾಗಿ ಬಂದಿದ್ದರೆಂದು ತಿಳಿದಿತ್ತು. ಕುಂಬಾರ ಗುಂಡಿಗೆ ಬೇಡೇಕರ್ ಮರಳಿ ಬಂದ ಮೇಲೆ, ಸಾಹೇಬರಿಗೆ ನಡೆದ ಎಲ್ಲ ಸಂಗತಿ ವಿಶದವಾಯಿತು. ಒಂದು ಬಾರಿ ಕತ್ತನ್ನು ಹಿಗ್ಗಿಸಿದರು; ಮೇಲಕ್ಕೆತ್ತಿದರು; ಮೀಸೆ ತಿರುವುತ್ತ "ಏನು ಮಾಡುತ್ತಾರೋ ಮಾಡಲಿ! ನಾಳೆಗೆ ಈ ಕೆಲಸ ನಿಲ್ಲಿಸುತ್ತೇನೆ. ಈ ಜಿಲ್ಲೆಯಿಂದಲೇ ಒಬ್ಬನೇ ಒಬ್ಬ ಆಳು ಅವರಿಗೆ ಸಿಗದಂತೆ ಮಾಡುತ್ತೇನೆ. ಪರ್ಮಿಟಿನ ತನಿಖೆ ಇವರಿಗೆ ಮುಖ್ಯವೋ, ಯುದ್ಧ ಪ್ರಯತ್ನ ಮುಖ್ಯವೋ ಎಂದು ನೋಡಿಬಿಡುತ್ತೇನೆ" ಎಂದು ಧಿಮಾಕಿನ ಮಾತುಗಳನ್ನಾಡ ತೊಡಗಿದರು.

"ಬಂದವರು ಕೊಲ್ಲಾಪುರ, ಪುನೆ, ಲಾರಿ, ಸಿಮೆಂಟು.....ಎಂದರು. ಸಿ. ಐ.ಡಿ. ಯವರಿರಬಹುದೇ?" ಎಂದು ಅನುಮಾನಿಸಿ ಕೇಳಿದ ಬೇಡೇಕರ್.

"ಅವರ ಅಪ್ಪಂದಿರೇ ಬರಲಿ. ಆದಮ್ ಸಾಹೇಬರು ಯಾರೆಂಬುದನ್ನು ತೋರಿಸಿಬಿಡುತ್ತೇನೆ" ಎಂದು, ತಮ್ಮ ಸ್ವಾಭಾವಿಕವಾದ ಜಬರದಸ್ತಿಯ ಮಾತುಗಳನ್ನೇ ಅವರು ಆಡತೊಡಗಿದರು.

ಆದರೆ ಈ ಭಾರಿಯ ಅವಾಂತರವು ಅವರೆಣಿಸಿದಷ್ಟು ಸುಲಭದಲ್ಲಿ ತೊಲಗಲಿಲ್ಲ. ಈ ಕೆಲವು ವರ್ಷಗಳ ವ್ಯಾಪಾರ, ವ್ಯವಹಾರ ಅನೇಕ ಜನಗಳ ಕಣ್ಣನ್ನು ತೆರೆದಿತ್ತು. ಕಾಳೂರಿನ ಹಲವರು ಅವರಿಗೆ ದೊರಕಿದ ಗುತ್ತಿಗೆಗಾಗಿ, ಅವರು ಗೋಚುತ್ತಿರುವ ದುಡ್ಡಿಗಾಗಿ,ಅಸೂಯೆಗೊಂಡಿದ್ದರು. ಅಲ್ಲಿಗೆ ಜೀತಕ್ಕೆ ಹೋಗುವ ಸೆರೆಗಾರರು, ಕೂಲಿಗಳು, ಕಸಬುದಾರರು ಹೇಳುತ್ತಿದ್ದ ಕತೆಗಳಿಂದ ಜನಗಳ ಕಿವಿ ನಿಮಿರುತಿತ್ತು. 'ಕಾಲಕ್ಕೆ ತಕ್ಕಂತೆ ಕೋಲ' ನಡೆಸಿ, ದುಡ್ಡನ್ನು ಗಳಿಸಲಾರದ ಸಾಹಸಶೂನ್ಯರು, ತಾವು ಕೇಳಿ ತಿಳಿದಂಥ ಸುದ್ದಿಗಳನ್ನು ಸಂಗ್ರಹಿಸಿದರು. ಮೇಲಿನ ಅಧಿಕಾರಿಗಳಿಗೆ ಬಿನಾಮಿ ಅರ್ಜಿಗಳನ್ನು ಹಾಕಿದರು. ಅದಕ್ಕೆ ಸಮನಾಗಿ— ಇಲಾಖೆಯವರು ಕೊಲ್ಲಾಪುರದಲ್ಲಿ ಕಂಡು ಹಿಡಿದ ಕಬ್ಬಿಣ,ಸಿಮೆಂಟುಗಳ ಕಳ್ಳವ್ಯಾಪಾರದ ಒಂದು ಘಟನೆ, ಗಂಟು ಬಿದ್ದಿತ್ತು. ಇದರಿಂದಾಗಿ ಚಾಣಾಕ್ಷರಾದ ಆದಮ್ ಸಾಹೇಬರು ಹತ್ತೆಂಟು ದಿನ ಕಾಲ ನಿದ್ದೆ ಬಿಟ್ಟು ಓಡಾಡುವಂತಾಯಿತು. ಬೆಳಗಾಂವಿಗೆ

ಹೋದರು; ಪುನೆಗೆ ಹೋದರು; ಮುಂಬಯಿಗೂ ಓಡಿದರು. ಕುಪಿತರಾದ ಅಧಿಕಾರಿಗಳನ್ನು ಮುಖತಃ ಕಂಡು ಒಲಿಸುವ ಪ್ರಯತ್ನ ಮಾಡಿದರು. ಅವರಿಗೆ ಅನೇಕ ಪ್ರತಿಷ್ಠಿತ ಅಧಿಕಾರಿಗಳ ಬೆಂಬಲವೂ ಇದ್ದಿತ್ತು. ತಾಳ್ಮೆಗೆಟ್ಟ ಸಾಹೇಬರು "ಇದರ ಫಲ ಏನಾದೀತು? ನಾನೊಬ್ಬನೇ ಜೈಲಿಗೆ ಹೋದೇನು ಎಂದು ಅವರು ತಿಳಿದಿದ್ದಾರೆಯೆ? ಇವರ ಕುಲಕ್ಕೆ ಕುಲವನ್ನೇ ನನ್ನ ಜತೆಗೆ ಎಳೆದುಕೊಂಡು ಹೋಗುವುದಿಲ್ಲವೆ?" ಎಂದು ರೇಗಿ ಮಾತನಾಡುವ ತನಕ ಪರಿಸ್ಥಿತಿಯು ಮುಂದುವರಿಯಿತು.

ಆದರೆ ಅವರು ಮಾಡುತ್ತಿರುವ ಆಪತ್ಕಾಲದಯುದ್ಧ ಸಹಾಯವನ್ನು ಮೆಚ್ಚಿದಂತಹ ಮೆಹರ್ಬಾನ್ ಸರಕಾರವು, ಅಷ್ಟೆಲ್ಲ ತನಿಖಿ, ಸಂಶೋಧನೆ ನಡೆಯಿಸಿದ ಮೇಲೆಯೂ, ಏನೇನೂ ತಂಟೆಮಾಡಲಿಲ್ಲ. ಆ ವಿಚಾರವನ್ನು ಆದಮ್ ಸಾಹೇಬರು ಹೆಮ್ಮೆಯಿಂದಲೇ ಹೇಳುತ್ತಾರೆ "ಹೋಗಲಿ, ತಿನ್ನಲಿ, ನಾಯಿಗಳು—ಎಂದು ಐವತ್ತು ಸಾವಿರವನ್ನು ಗವರ್ನರರ ವಾರ್ ಫಂಡಿಗೆ ಎಸೆದುಬಿಟ್ಟೆ. ನಾನೇನು ಕೊಡುವುದು? ಅವರಿಂದ ಕಿತ್ತದ್ದರಒಂದು ಪಾಲು ಅವರ ಮುಸುಡಿಗೇನೆ ಎಸೆದ ಹಾಗಾಯಿತು. ಆದರೂ ನೋಡುವ, ದೇವರಿದ್ದಾನೆ. ಇದರ ಬಡ್ಡಿಯನ್ನೆಲ್ಲ ಅವರಿಂದ ವಸೂಲುಮಾಡುವ ಕಾಲ ಬಂದೀತು"—ಎಂದು.

ಈ ಪ್ರಕರಣದ ಸುದ್ದಿ ಕೆಲವು ಪತ್ರಿಕೆಗಳಲ್ಲೂ ಪ್ರಕಟವಾದುದರಿಂದ ಜನರು ಮನ ಬಂದಂತೆ ಮಾತನಾಡಬಾರದು ಎಂಬುದರಿಂದ, ಬೇರೆ ಹೊಸ ಆಫೀಸರುಗಳು ಬಂದರು. ಆರೋಗ್ಯ ಖಾತೆಯವರು ಬಂದರು. "ಕುಂಬಾರ ಗುಂಡಿಯ ಕೂಲಿ ಲೈನುಗಳು, ಕಾರ್ಖಾನೆಗಳು ಎಲ್ಲವನ್ನೂಕಾಯಿದೇಶೀರ್ ಮಾಡಿಸಬೇಕು ಸಾಹೇಬರೇ" ಎಂದು ಅವರ ಬೆನ್ನು ತಟ್ಟಿ ಹೇಳಿಹೋದರು.

"ಮುಂದಿನ ಸಾರಿ ನೀವು ಬರುವಾಗ ಇಲ್ಲಿ ನೋಡಬಹುದಲ್ಲ—ಪುನೆ, ಮುಂಬಯಿಗಳ ಗಿರಣಿಯ ಹಾಗೆ, ಅಲ್ಲ ಕಿರ್ಲೋಸ್ಕರವಾಡಿಯ ಹಾಗೆ—ಒಂದು ಪಟ್ಟಣವನ್ನೇ ಮಾಡಿಬಿಡುತ್ತೇನೆ. ನಿಮ್ಮಂಥವರ ಸಹಾಯವಿದ್ದರೆ ಏನು ಕಷ್ಟ?" ಎಂದು ನಗುವಿನ ಭರವಸೆಯನ್ನು ಅವರಿಗೆ ಕೊಟ್ಟರು.

ಅವರ ನಿಜವಾದ ಚಿಂತೆ ಅದನ್ನು 'ಕಾಯಿದೇಶೀರ್' ಕಾರ್ಖಾನೆಯನ್ನಾಗಿ ಮಾಡಬಾರದೆಂಬುದಲ್ಲ. ಆಳುಗಳಿಗೆ ಹಂಚಿನ ಬಂಗಲೆಯನ್ನು ಕಟ್ಟಿಕೊಡಬಹುದು. ಕಾರ್ಖಾನೆಯನ್ನು ಕಾಯಿದೆಗೆ ಸಮನಾಗಿ ಕಟ್ಟಿ ಕ್ರಮಬದ್ಧ

ವಾಗಿ ನಡೆಯಿಸಬಹುದು. ಆದರೆ ಅಲ್ಲಿ ನಾಳೆಯೂ ಕೆಲಸ ನಡೆದೀತು-ಎಂಬ ಭರವಸೆಯೆಲ್ಲಿಂದ? ಪ್ರತಿಯೊಂದು ಗುತ್ತಿಗೆಯೂ ಆರು, ಎಂಟು ತಿಂಗಳಿನದು. ದೀರ್ಘ ಅವಧಿ ಇಲ್ಲದಂಥ ಗುತ್ತಿಗೆ. "ಇವರು ಹತ್ತು ವರ್ಷಕಾಲ ಈ ಕಾಡಿನ ಗುತ್ತಿಗೆಯನ್ನೆಲ್ಲ ನನಗೇನೆ ಕೊಡುತ್ತೇನೆ'-ಎಂಬ ಕರಾರಿಗೆ ಒಪ್ಪುತ್ತಾರೆಯೇ? ನಾನು ಹಣ–ಸುರಿದು ಕೂಲಿಗಳ ಮನೆ, ಹಂಚಿನ ಶೆಡ್ಡುಗಳು-ಇವನ್ನೆಲ್ಲ ಕಟ್ಟಿ ಮುಗಿಸುವಾಗ–ನಾಳೆ ಈ ಗುತ್ತಿಗೆ ಇನ್ನೊಬ್ಬರಿಗೆ ಹೋಗಬಹುದು. ನೂರಾರು ಜನರಿಗೆ ನನ್ನ ಮೇಲೆ ಹೊಟ್ಟೆ ಉರಿಯಿದೆ" ಎನ್ನುತ್ತಾರೆ. ಅದೂ ನಿಜವೇ.

"ಈ ಪ್ರಾಂತ್ಯದಲ್ಲಿ ಸರಕಾರಿ ಕಂಟ್ರಾಕ್ಟುವಹಿಸಲು ಸಮರ್ಥರಾದವರು ಇವರೊಬ್ಬರೇನು? ನಮಗೂ ಯಾಕೆ ಕೊಡಬಾರದು?" ಎಂದು ಸಾಹೇಬರ ಸರ್ವಾಧಿಕಾರವನ್ನು ತಪ್ಪಿಸಲು ಪ್ರಯತ್ನಿಸುವ ಜನರಿದ್ದಾರೆ. ಅಂಥವರಿಗೆ ಬೆಂಬಲವಾಗಿ, ಸರಕಾರದಲ್ಲಿ ತಮ್ಮ ಪ್ರಭಾವವನ್ನು ಬೀರಬಲ್ಲ ಮಿತ್ರರಿದ್ದಾರೆ. ಹಣದ ಪ್ರವಾಹವನ್ನು ಆದಮ್ ಸಾಹೇಬರೊಬ್ಬರೇ ಹೀರುತ್ತಿರುವುದನ್ನು ಕಂಡು ಅಂಥವರು ಸುಮ್ಮನೆ ಕುಳಿತಾರೆಯೆ? ಗುತ್ತಿಗೆ ದರದಲ್ಲಿ ಪೈಪೋಟಿ ನಡೆಯಿಸಿ, ಇನ್ನೂ ಅಗ್ಗದಲ್ಲಿ ತಾವು ಮರ, ಮೋಪುಗಳನ್ನು ಸರಕಾರಕ್ಕೆ ಒದಗಿಸಿಕೊಡಬಲ್ಲೆವೆಂದು–ಗದಗಿನವರು, ಅಳನಾವರದವರು, ಹಳಿಯಾಳದವರು– ಹೆಚ್ಚೇಕೆ– ಕಾಳೂರಿನ ನಾಲ್ವರು ಗಟ್ಟಿಗ ಕುಳಗಳೇ ಪ್ರಯತ್ನಿಸುತ್ತಿದ್ದಾರೆ.

"ನಾನು ಬೆವರನ್ನು ಸುರಿಸಿ, ಹಣವನ್ನು ಚೆಲ್ಲಿ, ಹಣವನ್ನು ತೆಗೆದೆ. ಜೀವ ತೆತ್ತೆ. ಮನುಷ್ಯರ ಹುಳು ಬಂದು ವಾಸಿಸದಂಥ ಊರಿನಲ್ಲಿ ಇಷ್ಟನ್ನೆಲ್ಲ ಸಾಧಿಸಿದೆ. ಇನ್ನೊಬ್ಬ ಮಗನಿಗೆ ಆ ತ್ರಾಣವಿದೆಯೆ? ಕೆಲಸ ತೊಡಗಿದಾಗಲೇ ಒಂದು ಲಕ್ಷ ರೂಪಾಯಿಗಳನ್ನು ನೀರಿನಂತೆ ಸುರಿದೆ. ಈಗ ನನ್ನ ಕೈಗೆ ನಾಲ್ಕು ಕಾಸು ಬರುವಾಗ ಜನಕ್ಕೆ ಹೊಟ್ಟೆಯುರಿಯುತ್ತದೆ. ನನ್ನಂತೆ ಕಂಟ್ರಾಕ್ಟು ಹಿಡಿದು, ದಿವಾಳಿಯೆದ್ದು ಹೋದ ಜನರೆಷ್ಟು ಬೇಕು? ಹಣವಿದ್ದರೆ ಆಳಿಲ್ಲ; ಆಳಿದ್ದರೆ ಯಂತ್ರವಿಲ್ಲ; ಮರಸಿಗಿಸಿದರೆ ಸಾಗಿಸಲು ಲಾರಿ ಇಲ್ಲ—ಹೀಗಾಗಿ ಹಣ ಸುರಿದು, ಕೈಬರಿದು ಮಾಡಿಕೊಂಡು, ಬತ್ತಲೆ ಮನೆಗೆಹೋದ ಮಂದಿ ಇದ್ದಾರೆ" ಎಂದು ತಮ್ಮ ಉದ್ಯೋಗಕ್ಕೆ ಸಂಬಂಧಿಸಿದ ಕಷ್ಟ, ನಷ್ಟಗಳನ್ನು, ತೊಡಕು ತೊಂದರೆಗಳನ್ನು ಸಾಹೇಬರು ಹೇಳುತ್ತಾರೆ. ಆದರಿಂದ ಮೇಲಿ

ಸಿಂದ ಬಂದ ಆಕ್ಷೇಪ ಸಂಪೂರ್ಣ ನಿವಾರಣೆಯಾಗದಷ್ಟೆ? ತನಿಖೆಗೆ ಬರುವವರ ಕಣ್ಣಿಗೆ ಮಣ್ಣು ಹಾಕಲು ಕಾರ್ಖಾನೆ, ಮನೆ, ಮೊದಲಾದುವನ್ನು ಅವರು ದುರುಸ್ತಿ ಮಾಡಿಸಲೇ ಬೇಕಾಯಿತು.

ಅವರು ಕೆಲಸತೊಡಗಿದ ಮೂರು ವರ್ಷಗಳ ಕಾಲ ಸರಿದು ನಾಲ್ಕನೆಯ ವರ್ಷವೂ ಬಂದಿತು. ಮತ್ತೊಂದು ವರ್ಷದ ಕರಾರನ್ನು ಮಾಡಿಕೊಳ್ಳುವುದು ಶಕ್ಯವಾಯಿತು. ಆ ವರ್ಷದ ಮಳೆಗಾಲ ಎಂದಿನಂತೆಯೆ ಪ್ರಾರಂಭವಾಯಿತು. ಮಳೆಗಾಲದಲ್ಲಿ ಕುಂಬಾರಗುಂಡಿಯ ಜವುಗು ನೆಲದಲ್ಲಿ ಆನೆಹೂತು ಹೋದೀತು. ಆ ಶೀತ ಹವೆಯಲ್ಲಿ ಜನರು ಕಂಬಳಿ ಹೊದ್ದೇ ಕುಳಿತಿರಬೇಕು. ಬೇಸಿಗೆಯಲ್ಲಿಲ್ಲ ಹೇಳಿತೀರದಷ್ಟು ಮಲೇರಿಯ ಬೇನೆಯ ಹಾವಳಿ. ಆ ಬಾರಿ ಎಪ್ರಿಲ್ ತಿಂಗಳಿನಿಂದಲೇ ಮಳೆ ಬೀಳತೊಡಗಿತ್ತು.ಜೂನ್ ಜುಲಾಯಿ ತಿಂಗಳಲ್ಲಿ ಬಿಸಿಲು ಮಳೆ ಆವರ್ತನೆಯಿಂದ ಬಂತು. ಕೆಲಸಕ್ಕೆ ಬಂದ ಜನಗಳೆಲ್ಲ ಮೈನಡುಗುತ್ತ ಮಲಗಿಕೊಂಡರು. ಹೊಸ ಆಳುಗಳನ್ನು ತರುವುದೂ, ಕೆಲಸಮಾಡಿಸುವುದೂ ಸುಲಭದ ಕೆಲಸವಲ್ಲ. ದುಡ್ಡಿನ ಆಸೆ ತೋರಿಸಿದರೆ ಜನ ಬರುತ್ತಾರೆ. ಊರಲ್ಲಿ ಅಂದರೆ ಕರಾವಳಿಯಲ್ಲಿ, ಅಕ್ಕಿ, ಬತ್ತಗಳ ತಾಪತ್ರಯ ತೊಡಗಿದೆ. ಇದು ಸರಕಾರಿ ಕೆಲಸ-ಎನ್ನುವುದರಿಂದ ಯಾವ ಮೂಲೆಯಿಂದಲೂ ಅಕ್ಕಿ, ಬತ್ತ ತರಿಸಿಕೊಳ್ಳುವುದಕ್ಕೆ ಸಮನಾದ ರಹದಾರಿ ದೊರೆಯುತ್ತದೆ. ನಮ್ಮ ನಾಗ ನಂಜರು ಸಹ ಆಗಾಗ ಕದ್ದು ಮರೆಗಳ ಒಳ ವ್ಯಾಪಾರ ಮಾಡುತ್ತಿರುವಂತೆ, ಅಕ್ಕಿ ಬತ್ತಗಳನ್ನು ಸಾಗಿಸಿ, ಜನಗಳಿಗೆ ದುಬಾರಿ ಬೆಲೆಯಲ್ಲಿ ಮಾರಲು ಶಕ್ತರಾಗಿದ್ದಾರೆ. "ನನ್ನ ಅಕ್ಕಿಯಲ್ಲದಿದ್ದರೆ ಕಾಳೂರಿನ ಹತ್ತು ಮನೆಗಳಿಗೆ ಉಪವಾಸ" ಎನ್ನುತ್ತಾನೆ ನಾಗ. ಹೋಗಲಿ ಆ ವಿಚಾರ.

ಆದರೆ ಆ ವರ್ಷ ಅಕ್ಕಿ, ಬತ್ತ, ಮುಂಗಡದ ಹಣಗಳಿಂದ ಒಲಿಸಿ ತಂದ ಮುನ್ನೂರು ಮಂದಿ ಕೂಲಿಗಳು, ಕುಂಬಾರ ಗುಂಡಿಯಲ್ಲಿ ದುಡಿಯುತ್ತಿರುವ ಕಾಲದಲ್ಲಿಯೇ, ಅಲ್ಲಿನ ಜ್ವರದ ಸುಗ್ಗಿಯೂ ಬಲಿಯಿತು. 'ಬೇಸಾಯದ ವೇಳೆ ಊರಿಗೆ ಮರಳುವ ಎಂದರೆ,ಊರಲ್ಲಿಯೂ ಶಾಂತಿ, ಸಮಾಧಾನಗಳಿಲ್ಲ. ಊರಲ್ಲಿ ಬೇಸಾಯಗಾರರಿಗೂ ಧನಿಗಳಿಗೂ ಮನಸ್ತಾಪ ತೊಡಗಿತ್ತು. ಇದರ ಜತೆಗೆ ಮತ್ತಿಗುಂಡಿಯಲ್ಲಿ ಇನ್ನೊಂದು ಯುದ್ಧ ತರಬೇತಿಯ ಕ್ಷೇತ್ರ ಸ್ಥಾಪನೆಯಾಗಿ ವಿಸ್ತಾರಗೊಳ್ಳುತ್ತ ಬಂದಿದೆ. ಇವರು ದೊರಕಿಸಿಕೊಂಡ ಕೂಲಿಗಳು ಕಣ್ಣನ್ನು ತಪ್ಪಿಸಿ ಅಲ್ಲಿಗೆ ಒಳಹಾದಿಯಿಂದಲೇ ಓಡಿಹೋಗತೊಡಗಿದ್ದಾರೆ.

ಬಹು ದಿನ ಸಾಹೇಬರಿಗೆ ಹೀಗೆ ಜನಗಳು ಅದೃಶ್ಯರಾಗುತಿದ್ದ ವಿಚಾರವನ್ನು ಹುಡುಕುವುದಕ್ಕೇ ಆಗಲಿಲ್ಲ. ಆಮೇಲೆ ಒಮ್ಮೆಗೇ ಇದ್ದಕ್ಕಿದ್ದಂತೆ ಕುಂಬಾರ ಗುಂಡಿಯ ಆಳುಗಳ ವಸತಿಯಲ್ಲಿ ವಾಂತಿಭೇದಿಯೂ ತಲೆದೋರಿತು. ಜನರು ಒಬ್ಬೊಬ್ಬರಾಗಿ ಸಾಯತೊಡಗಿದರು. ಜೇಡೇಕರ್ ಸೀಗೆಹಳ್ಳಿಗೆ ಓಡಿ ವೀರ ಸಾಹೇಬರಿಗೆ ದೂರು ಕೊಟ್ಟ. ಅವರು ಜೂನ್ ಜುಲಾಯಿ ತಿಂಗಳಲ್ಲಿ ಕುಂಬಾರ ಗುಂಡಿಯ ನರಕದಲ್ಲಿ ಕಾಲಿಡುವವರಲ್ಲ. ಮೊದಲೇ ನೇವಸದ ಆಳು. ಬಂಗಲೆಯಲ್ಲಿ ಕುಳಿತು, ಗುಡುಗುಡಿ ಸೇದುವಾಗಲೆಲ್ಲ ಮೈ ನಡುಗುತ್ತದೆ. ಕೆಮ್ಮು ಬರುತ್ತದೆ. 'ಕಾಲರಾ' ಎಂದು ಕೇಳಿದರೆ, ಅವರು ಬಂದು ತನಿಖೆ ಮಾಡುತ್ತಾರೆಯೆ? ಆದರೆ ಆರೆಂಟು ಮಂದಿ ಸತ್ತಾಗ ಗಾಬರಿಯಾದರು. ಕುಂಬಾರ ಗುಂಡಿಯ ಹಾದಿಯು ಆ ವರ್ಷ ಸಾಕಷ್ಟು ದುರುಸ್ತಿಯಾಗಿತ್ತು. ಮೂರು ದಿನ ಚಲಿಸಿ, ಆರು ದಿನ ಮಲಗುವಂಥ ತಮ್ಮ ಕಾರಿನಲ್ಲಿ ಕುಳಿತುಕೊಂಡು ಬಂದರು; ಊರಿಗೆ ಅರ್ಧ ಮೈಲು ದೂರದಲ್ಲಿ ನಿಂತು ಸಂಗತಿಗಳನ್ನು ವಿಚಾರಿಸಿದರು.

ಮೊದಲಿನ ಆರೆಂಟು ಹೆಣಗಳು ಹೋಗುವಾಗ ನಂಜ, ಜನಕ್ಕೆ ಎಚ್ಚರ ಹೇಳುತಿದ್ದ. "ನಿಮಗೆ ನ್ಯಾಯವಾದ ಅಕ್ಕಿ ಪಡಿಯನ್ನು ಕೊಡುತ್ತಿರುತ್ತ ಹಲಸಿನ ಕಾಯಿ, ಹಲಸಿನ ಹಣ್ಣು ತಿಂದು ಯಾಕೆ ಜೀವ ಬಿಡುತ್ತೀರಿ?" ಎಂದು ಉಪದೇಶಮಾಡಿದ್ದ. ಅಂತು ಆ ಉಪದೇಶ ಸಾರ್ಥಕವಾಗಲಿಲ್ಲ. ಆರೆಂಟು ಕುಟುಂಬಗಳು ಹೆದರಿ ಓಡಿಹೋದವು. ವಾಂತಿಭೇದಿಯು ಅಲ್ಲಿಂದ ದೂರದ ಹಳ್ಳಿಗೂ ಪಸರಿಸಿತು; ಆರೋಗ್ಯ ಇಲಾಖೆಯ ಕಿವಿಗೂ ಹೋಯಿತು. ಅತ್ತ ಆದಮ್ ಸಾಹೇಬರಿಗೂ ತಂತಿ ಹೋಯಿತು. ಅವರು ಅವಸರಿಸಿ ಬಂದರು. ಇದು ವಾಂತಿಭೇದಿ. ಅದು ಪಸರಿಸುವ ಬೇನೆ; ಕುಂಬಾರ ಗುಂಡಿಯ ನೀರಿನ ಸರಬರಾಯಿ ಬಾವಿಯಿಂದಲ್ಲ. ಬರಿಯ ಒಂದು ಕೊಳದಿಂದ--ಎಂಬುದರಿಂದ, ಇನ್ನೂ ಅದು ಹಬ್ಬುವ ಭೀತಿಯಿದೆಯೆಂದು ಕಾಳೂರಿಗೆ ಮೋಟರಿನಲ್ಲಿ ಕುಳಿತು ಧಾವಿಸಿದರು.

ಮಧ್ಯಾಹ್ನ ಶಿವಪ್ಪ ಡಾಕ್ಟರರು ತಮ್ಮ ಅಂಗಡಿಯಲ್ಲಿ ಕುಳಿತಿರುವಾಗ ಕಾರು ಬಂದು ನಿಂತಿತು. ಆದಮ್ ಸಾಹೇಬರು ಬಂದು ಇಳಿದರು. ಡಾಕ್ಟರರಿಗೆ ಒಂದು ಸಲಾಂ ಹಾಕಿದರು.

ಸಲಾಮಿಗೆ ಸಲಾಮ್ ಆಲಿಕೂಮ್ ಸಂದು "ಏನು ಸಾಹೇಬರೆ,

ಅಂಗಡಿ ನನ್ನದು ಎಂದಿರಿ. ಈ ವರೆಗೆ ಒಬ್ಬರೂ ಬಂದು ಬಾಡಿಗೆ ಕೇಳಿದವರಿಲ್ಲ. ನಾನು ನಿಮ್ಮ ಹೆಸರಿನಲ್ಲಿ ಬಾಡಿಗೆಯ ಹಣವನ್ನು ಪೋಸ್ಟಾಫೀಸಿನಲ್ಲಿ ಇರಿಸಿದ್ದೇನೆ" ಎನ್ನುವುದರೊಳಗೆ "ಅದೆಲ್ಲ ಸಣ್ಣ ಸಂಗತಿ; ಬಿಟ್ಟುಬಿಡಿ. ಸ್ವಲ್ಪ ಈಚೆಗೆ ಬನ್ನಿ; ಮಾತನಾಡುವ ಜಂಬರವಿದೆ" ಎಂದರು. ಕಿವಿ ಮಾತಿನಲ್ಲಿ ತಮ್ಮ ಗಾಬರಿಯನ್ನು ಹೇಳಿದರು. ಶಿವಪ್ಪನವರು ಹೊರಡುವುದಕ್ಕೆ ಅಣಿಯಾದರು. ಸುದೈವದಿಂದ ಅವರ ಪರಿಚಯಸ್ಥ ಆರೋಗ್ಯಾಧಿಕಾರಿಗಳೇ ಊರಲ್ಲಿದ್ದುದರಿಂದ, ಇನಾಕ್ಯುಲೇಶನ್ ಸಾಮಗ್ರಿಗಳನ್ನು ತೆಗೆದುಕೊಂಡು ಅವರೊಂದಿಗೆ ತಾವೂ ಧಾವಿಸಿದರು. ಆ ಸಂಜೆಯ ಹೊತ್ತಿಗೆ ಅವರು ಕುಂಬಾರ ಗುಂಡಿಯನ್ನು ಸೇರುವಾಗ, ಜುಮಲಾ ಸಾವುಗಳ ಸಂಖ್ಯೆ ಮೂವತ್ತಕ್ಕೆ ಮೀರಿತ್ತು. ಊರಲ್ಲಿ ಆಳುಗಳ ಸಂಚಾರವೇ ನಿಂತಿತ್ತು. ಎಲ್ಲರೂ ತಲೆಯ ಮೇಲೆ ಕೈಯನ್ನಿರಿಸಿಕೊಂಡು ದುಃಖಪರವಶರಾಗಿ ಕುಳಿತಿದ್ದರು. ಅವರ ಫೋರ್‌ಮೆನ್ ಐಸಾಕ್‌ನಿಗೆ ವಾಂತಿಭೇದಿ ತೊಡಗಿ ನರಳುತಿದ್ದ. ಕತ್ತಲು ಹರಿದಿತ್ತು, ಪೆಟ್ರೋಮೇಕ್ಸ್ ದೀವಿಗೆಗಳನ್ನು ಉರಿಸಿ ಜನಕ್ಕೆ ಇನಾಕ್ಯುಲೇಶನ್ ಮಾಡಿದ್ದಾಯಿತು. ಶಿವಪ್ಪ ಡಾಕ್ಟರರು ನರಳುವ ರೋಗಿಗಳಿಗೆ ತಂದಷ್ಟು ಮದ್ದುಗಳನ್ನು ಕುಡಿಸಿದರು; ಪಥ್ಯ ಹೇಳಿದರು. ಮದ್ದು ಸಾಲದೆ, ಆ ರಾತ್ರಿಯೇ ತಿರುಗಿ ಕಾಳೂರಿಗೆ ಹೋಗಿ ಇನ್ನಷ್ಟು ಮದ್ದನ್ನು ತಂದು ಚಿಕಿತ್ಸೆ ನಡೆಸಿದರು. ಇಷ್ಟೆಲ್ಲ ಮಾಡುವುದಕ್ಕೆ ಇನ್ನೂ ಒಂದೆರಡು ದಿನಗಳು ತಡವಾಗಿದ್ದರೆ ಕುಂಬಾರ ಗುಂಡಿಯಲ್ಲಿ ಹೆಣ ಹೊರುವುದಕ್ಕೂ ಜನರು ಉಳಿಯುತ್ತಿರಲಿಲ್ಲ. ಆದಮ್ ಸಾಹೇಬರಿಗೆ ಶಿವಪ್ಪನವರ ಮೆಹನತ್ತಿನ ವಿಚಾರದಲ್ಲಿ ತುಂಬಾ ಆನಂದವಾಯಿತು. ಈಗಾದ ನಷ್ಟ ಸಾಕಷ್ಟು ಬಲವಾಗಿದ್ದರೂ, ಆಗಬಹುದಾದುದು ಅವರನ್ನು, ಅವರ ಕರಾರನ್ನೂ ಮುಳುಗಿಸುವಷ್ಟು ದೊಡ್ಡದಾಗಲು ಸಾಧ್ಯ ಎಂಬುದು ಗೊತ್ತಿತ್ತು.

"ತುಂಬ ಉಪಕಾರವಾಯಿತು ಡಾಕ್ಟರರೇ. ನಿಮ್ಮ ಮೆಹರ್ಬಾನಿನಿಂದ ಜನ ಉಳಿದರು. ಅದೃಷ್ಟ ಗಟ್ಟಿ ಇಲ್ಲದವರಷ್ಟೆ ಸತ್ತರು. ನಮ್ಮ ಐಸಾಕನೋ, ಬುಡಾನೋ, ಬೇಡೆಕರರೋ, ನಂಜನೋ ಸತ್ತಿದ್ದರೆ ನನ್ನ ಗೋಳು ಹೇಳುವುದಲ್ಲ" ಎಂದು ಉದ್ಗರಿಸಿದರು.

"ಇದು ಮುಗಿಯುತ್ತದೆ; ಅಥವಾ ಮುಗಿಯಿತು ಎನ್ನುವ ಧೈರ್ಯವೇ ನನಗಿಲ್ಲವಲ್ಲ–ಸಾಹೇಬರೆ. ಇವರ ಮನೆಗಳೊ! ಇವರ ಕುಡಿಯುವ ನೀರೊ!

–ಇವೆಲ್ಲಾ ಹೀಗೆಯೇ ಇದ್ದರೆ ಮತ್ತೇನಾದೀತು?"

"ಕೊಲೆರಾ ಅದರಿಂದ ಬರುತ್ತದೆಯೆ?" ಎಂದು ಗೊತ್ತಿದ್ದೂ ಪ್ರಶ್ನೆ ಕೇಳಿದರು. ಅನಂತರ "ಇಲ್ಲಿ ಮೆಲೇರಿಯವೂ ತುಂಬ; ಸೀಜನಿನಲ್ಲಿ ನೂರು ಜನ ಬಂದರೆ ದುಡಿಯುವುದಕ್ಕೆ ಇಪ್ಪತ್ತು ಜನ ಸಿಗುವುದಿಲ್ಲ. ಇಲ್ಲವಾದರೆ ಇದರ ನಾಲ್ಕು ಪಟ್ಟು ಕೆಲಸವಾಗುತಿತ್ತು" ಎಂದರು.

ಶಿವಪ್ಪನವರೊಡನೆ ಆದಮ್ ಸಾಹೇಬರಿಗೆ ಅಂಥ ಆತ್ಮೀಯತೆಯಿಲ್ಲ; ಪರಿಚಯ ಸಾಲದು. ಮೊದಲು ಕಂಡದ್ದು–ಅವರು ತಮ್ಮ ತಂದೆಯ ಮೃತ್ಯು ಶಯ್ಯೆಯ ಬಳಿಗೆ ಬಂದು ಹೋಗುತಿದ್ದಾಗ; ಅನಂತರ ಭೇಟಿಯಾದದ್ದು–ಮಾವನೊಡನೆ; ಗುಲಾಬಿಯ ಚಿನ್ನ ಮರಳಿ ಕೊಡುವುದಕ್ಕೆ ಹೋದಾಗ. ಹೀಗಾಗಿ ಡಾಕ್ಟರ್ ಶಿವಪ್ಪನವರನ್ನು ತಾನು ಇಂಥ ಸಂದರ್ಭಗಳಲ್ಲಿ ಒಲಿಸಿ ಕೊಳ್ಳಬೇಕೆಂದು ಅವರ ದೊಡ್ಡ ಮರ್ಜಿಗೆ ತೋರಿತು. "ನಾನು ಅದಕ್ಕೆ ನಾಳೆಯೇ ಬೇರೆ ಪ್ಲೇನ್ ಮಾಡುತ್ತೇನೆ. ಈ ಕೂಲಿ ಗುಡಿಸಲುಗಳನ್ನೆಲ್ಲ ಹಾರಿಸಿಬಿಡುತ್ತೇನೆ. ಹದಿನೈದು ದಿನಗಳೊಳಗೆ, ಉಳಿದ ಎಲ್ಲ ಕೆಲಸಗಳನ್ನು ನಿಲ್ಲಿಸಿ, ಸಿಮೆಂಟು ನೆಲಕ್ಕೆ ಹಾಕಿಸಿ, ಜಿಂಕ್ ಶೀಟಿನ ಶೆಡ್ಡುಗಳನ್ನು ಮಾಡಿಸು ತ್ತೇನೆ. ಒಂದು ಸಣ್ಣ ಆಸ್ಪತ್ರೆಯಂತಹ ಶೆಡ್ಡನ್ನು ಕಟ್ಟಿಸುತ್ತೇನೆ. ಇಗೊಳ್ಳಿ, ನೀವು ಹೇಳಿದ ಮದ್ದು ತರಿಸಿ ಇಡುತ್ತೇನೆ. ನೀವು ವಾರಕ್ಕೆ ಒಂದೆರಡು ಸಾರಿ ಬಂದು, ವಿಸಿಟ್ ಮಾಡಿ, ಜನರಿಗೆ ಬೇಕಾದ ಮದ್ದನ್ನು ಕೊಟ್ಟು ಹೋಗಿ. ಬಂದು ಹೋಗುವುದು ನನ್ನ ಲೆಕ್ಕಕ್ಕೆ. ತಿಂಗಳಿಗೆ ನೂರು ರೂಪಾಯಿ ಕೊಡು ತ್ತೇನೆ. ಇದು ಬರಿಯ ಬಾಯಬಡಾಯಿ ಎಂದು ತಿಳಿಯಬೇಡಿ; ಖಂಡಿತಕ್ಕೂ ಮುಂದಿನ ವಾರದಿಂದಲೇ ನೀವು ಬರಬೇಕು. ನಿಮ್ಮ, ನಮ್ಮ ಸ್ನೇಹ ಉಳಿಯ ಬೇಕು" ಎಂದು ಪ್ರಸನ್ನರಾಗಿ ಮಾತನಾಡಿದರು.

ಮರುದಿನ ಬೆಳಗ್ಗೆ ಡಾಕ್ಟರರನ್ನು ತಮ್ಮ ಮೋಟರಿನಲ್ಲಿ ಕುಳ್ಳಿರಿಸಿ ಕಳುಹಿಸಿಕೊಟ್ಟರು. ಬೀಳ್ಕೊಡುವಾಗ ಬೆಳ್ಳಿಯ ಒಂದು ಸಿಗರೇಟಿನ ಡಬ್ಬಿ ಯನ್ನೂ, ಇನ್ನೂರು ರೂಪಾಯಿಗಳನ್ನು ನಗದಾಗಿಯೂ ಕೊಟ್ಟರು. ಡಾ ಕ್ಟರ್ ಶಿವಪ್ಪನವರ ಕೈಮೇಲೆ ದಿನ ಎರಡು ದಿನಗಳ ಕೆಲಸದ ಬಗ್ಗೆ ಇನ್ನೂರು ರೂಪಾಯಿಗಳನ್ನು ಚೆಲ್ಲಿದ ಧೀರ ಒಬ್ಬನೂ ಇಲ್ಲ. ಅವರ ಒದ್ದಾಟದ ಸಾಂಪ ತ್ತಿಕ ಸ್ಥಿತಿಯಲ್ಲಿ 'ಆದಮ್ ಸಾಹೇಬರು ನಿಜಕ್ಕೂ ಹಾಗೆ ಮಾಡಿದರೆ ಆಗ ಬಹುದಿತ್ತು' ಎಂದೂ ಅನಿಸಿತು. ತಿಂಗಳಿಗೆ ನೂರು ರೂಪಾಯಿಗಳ ಖಂಡಿತ

ವರಮಾನ ಅದರ ಜೀವನಕ್ಕಷ್ಟೋ ನೆರವಾಗುತ್ತಿತ್ತು. ಆದರೂ ಮನೆಗೆ ಮರಳುವಾಗ—'ಆಗುವುದುಂಟೆ, ಹೋಗುವುದುಂಟೆ' ಎಂದು ಯೋಚಿಸಿಯೇ ಮರಳಿದರು.

*　　*　　*　　*　　*

ಯುದ್ಧದ ನಾಲ್ಕನೆಯ ವರ್ಷ ಬಂದಿದೆ. ಈ ಅವಧಿಯಲ್ಲಿ ಕಾಳೂರಿನ ಜನರು, ಮೊದಲು ತುಂಬ ಸಂಕಷ್ಟವನ್ನುಂಡು, ಬಡತನವನ್ನನುಭವಿಸಿ ಕಂಗಾಲಾದರು. ದಿನಗಳು ಸರಿದ ಹಾಗೆ ಹಲಕೆಲವರು 'ಯುದ್ಧದ ವೇಳೆಯಲ್ಲಿ ಬುದ್ಧಿ ಇದ್ದವರು ಬದುಕಲು ಕಲಿಯಬಹುದು' ಎಂಬ ಧಿಮಾಕಿನ ಜೀವನ ಕಲಿತರು. ಎಲ್ಲ ತೆರನ ಜನಗಳಿಗೂ ಹೊಸ ಅವಕಾಶ ದೊರೆಯುತ್ತಲಿದೆ. ಮೈಯಲ್ಲಿ ಮಾಂಸಖಂಡವಿದ್ದರೆ-ಶಿರ್ಶಿ, ಯಲ್ಲಾಪುರದ ತೋಟಗಳಿಗೆ ಕೆಲಸ ಬೇಡಿಕೊಂಡು ಹೋಗಬೇಕಾಗಿಲ್ಲ. ಅಲ್ಲಿನ ತೋಟದವರು ಜನರನ್ನು 'ಬನ್ನಿ' ಎಂದು ಬೇಡತೊಡಗಿದ್ದಾರೆ. ಅಂಥವರೆದುರು "ಕುಂಬಾರ ಗುಂಡಿಗೂ ಮತ್ತಿಗುಂಡಿಗೂ ಹೋದರೆ ದಿನಕ್ಕೆ ಐದು ರೂಪಾಯಿ ದುಡಿದೇವು. ನಿಮ್ಮ ಒಂದು ರೂಪಾಯ ಕೂಲಿಗೆ ಯಾರು ಬರುತ್ತಾರೆ?" ಎನ್ನಲು ಕಲಿತಿದ್ದಾರೆ. ಬಡಗಿಗಳು, ಕಮ್ಮಾರರು ತಮ್ಮ ವೇತನವನ್ನೇರಿಸಿದ್ದಾರೆ. ಉಳಿ, ಚಾಣ, ಕೊಡತಿ ಹಿಡಿಯಬಲ್ಲವರೆಲ್ಲರು ದಿನಗೂಲಿ ಮೂರು ರೂಪಾಯಿಗಳನ್ನು ಊರಲ್ಲಿಯೇ ಕೇಳತೊಡಗಿದ್ದಾರೆ. ಆ ಎರಡೂ ಉದ್ಯೋಗ ಸಾಗಿಸಲಾರದವರು ಮಿಲಿಟರಿಗೂ ಹೋಗುತಿದ್ದಾರೆ. ಕಾಳೂರಿನಲ್ಲಿಯೇ ಅಂಗಡಿಗಳ ಸಂಖ್ಯೆ ಬೆಳೆಯತೊಡಗಿದೆ. ಹಣವಿಲ್ಲ—ಎಂದು ಕೊರಗುತ್ತಿರುವವರೂ ಹರದಾರಿ ದೂರ ನಡೆಯುವುದಕ್ಕೆ ಬಸ್ಸುಗಳ ಮೂತಿ ಇದಿರುಕಾಯುತ್ತಿದ್ದಾರೆ. ತುಸು ಚಲಾಕಿ ಇದ್ದವರು, ವ್ಯಾಪಾರದ "ಖೂಬಿ" ಗೊತ್ತಿದ್ದವರು, ಕೈಹಾಕದಂಥ ವ್ಯವಹಾರವಿಲ್ಲ. ಗೋವೆಯಿಂದ ಭಟ್ಕಳದ ತನಕ ಸಾಮಾನು ಆಮದು ಮಾಡುತ್ತಾರೆ. ಯಾವುದನ್ನು ಮಾಡಲಾರರು ಎಂದು ಹೇಳುವಂತಿಲ್ಲ. ಬೆಟರಿದೀಪ, ಕ್ಷೌರದ ಬ್ಲೇಡು, ಗ್ರೈಪ್ ವಾಟರ್-ಎಲ್ಲ ತೆರನ ವಸ್ತುಗಳನ್ನು ಇದ್ದಲ್ಲಿಂದ, ಕೇಳಿದ ಬೆಲೆಗಳನ್ನು ಕೊಟ್ಟುತಂದು, ಇಲ್ಲದಲ್ಲಿಗೆ ಕದ್ದೊಯ್ದು ಹಣಕಾಸನ್ನು ಗುಟ್ಟಿನಲ್ಲಿಯೇ ಗಳಿಸುತ್ತಿದ್ದಾರೆ. ಬೆಳಗಾಂವಿಯು ಜನ ಮೊನ್ನೆ ಮೊನ್ನೆ ಕಾಳೂರಿಗೆ ಬಂದು ಟೂತ್ ಪೇಸ್ಟ್ ಖರೀದಿಮಾಡಿಕೊಂಡು ಹೋದರಂತೆ. ಮಾವಿನ ಎಲೆಯಿಂದ ಹಲ್ಲುಜ್ಜುವ ಜನರು ಟೂತ್ ಪೇಸ್ಟ್ ಕೊಳ್ಳುವಷ್ಟು ಸುಧಾರಿಸಿ

ಬಿಟ್ಟಿದ್ದಾರೆ — ಈ ಒಂದೆರಡು ವರ್ಷಗಳಲ್ಲಿಯೇ.

ಚಲ್ಲಣ, ಬೂಟ್ಸು, ಕೋಟು, ಹೇಟು ಧರಿಸಿ ಕಾಳೂರಿನ ಹುಡುಗರೇ ಡಾಕ್ಟರರ ಕಿವಿಯ ಬಳಿಗೆಬಂದು"ಬೆಳಗಾಂವಿಯಿಂದಬಂದೆ.ನಿಮಗೆ ಕ್ವಿನೀನ್ ಬೇಡವೆ? ಡಿ। ಜಾನ್ಸ್‌ಕಾಡ್‌ಲೀವರ್ ಆಯಿಲ್ ಬೇಡವೆ? ಎಮ್ ಎಂಡ್ ಬಿ ಬೇಡವೇ? ಸ್ವಲ್ಪ ಹೆಚ್ಚು ಹಣ ಕೊಟ್ಟರೆ ಬೇಯರ್ಸ್ ಪ್ರೋಡಕ್ಟು ಸಿಗುತ್ತದೆ." ಎಂದು ತಿಳಿಸುವಾಗ, ಡಾಕ್ಟರ್ ಶಿವಪ್ಪನವರಿಗೆ ದಂಗುಬಡಿಯಿತು. ಅವರಿಗೆ ಕ್ವಿನೀನೂ ಬೇಕು, ಎಮ್ ಎಂಡ್ ಬಿ ಯೂ ಬೇಕು. ನಿಯೊಸಾಲ್ವರಸನೂ ಬೇಕು. ಕ್ವಿನೀನು ದೊರೆಯದೆಯೆ ಅವರು ಕಂಗಾಲಾಗಿದಾರೆ. ಕಚ್ಚಾ ಸಿಂಕೋನಾ ತೊಗಟೆಯನ್ನು ಕೊಡುತ್ತಲಿದ್ದಾರೆ. ಪರ್ಮಿಟು, ಸರಕಾರಿ ಹುಕುಮು ಎಂದು ಬರೆದು ಬರೆದು ತೊಳಲುತ್ತಿದ್ದಾರೆ. ಮಲೇರಿಯದ ನಾಡಲ್ಲಿ ಅದೇ ವೈದ್ಯದ ಮುಕ್ಕಾಲು ಪಾಲು ಭಂಡವಾಳ. ಕ್ವಿನಿನೇ ದೇವತೆ. ಆದರೆ ರಾತ್ರಿಗೆ ಮುನ್ನೂರು ರೂಪಾಯಿಗಳಂತೆ ಮಾರುವ ಜನಗಳಿಂದ ಅವರೇನು ಕೊಂಡಾರು? ಅವರ ಅನೇಕ ಗಿರಾಕಿಗಳು ಜ್ವರದಿಂದ ನರಳುತ್ತಿದ್ದಾರೆ; ಕಂಗಾಲಾಗಿದ್ದಾರೆ. ಮುನ್ನೂರು ರೂಪಾಯಿಗಳ ಬೆಲೆಗೆ ಕೊಳ್ಳುವ ಧೈರ್ಯವಿಲ್ಲ; ಹಣವಿಲ್ಲ. ಕೊಂಡರೆ ಗಿರಾಕಿಗಳಿಂದ ಅದೇ ಪ್ರಮಾಣದಲ್ಲಿ ಬೆಲೆ ಬೇಡುವ ಉತ್ಸಾಹವೂ ಇಲ್ಲ. ಊರಿನ ನಿತ್ಯಬೇನೆಗಳಿಗೆ ಬೇಕಾಗುವ ಹಲವಾರು ಔಷಧಗಳನ್ನು ಅವರು ಹುಬ್ಬಳ್ಳಿಗೆ ಕಾಗದ ಬರೆದು ತರಿಸಿಕೊಳ್ಳುತಿದ್ದರು. ಈಗಲೋ-ಪತ್ರ ಬರೆದರೆ ಉತ್ತರವಿಲ್ಲ. ಕಾಗದದಲ್ಲಿ 'ಸ್ಟೋಕಿ'ಲ್ಲ ಎಂದು ಬರೆದು,ಬಾಯ್ದೆರೆಯಿಂದ ಅಲ್ಲಿಗೆ ಬಂದು ಕಣ್ಣು ಮುಚ್ಚಿ 'ಇದೆ ಸ್ವಲ್ಪ; ಆದರೆ ಬೆಲೆ ಇಷ್ಟು' ಎನ್ನುತ್ತಾರೆ. ಔಷಧದ ವ್ಯಾಪಾರವು ರೋಗಿಗಳ ದರೋಡೆಯಾಗಿದೆ. ಒಂದೆರಡು ಬಾರಿ ಹಾಗೂ ಬೆಲೆಯನ್ನು ಕೊಟ್ಟು ಕೊಂಡರು; ಕೊಂಡು ಬಳಸಿದರು. ಅದರಿಂದ ಮನಸ್ಸು ಇನ್ನಷ್ಟು ನೋಯುವಂತಾಯಿತು. 'ಕ್ವಿನಾರ್‌ಸಾಲ್' ಎಂಬ ಮದ್ದನ್ನು ಕೊಂಡು ತಮ್ಮ ರೋಗಿಗಳಿಗೆ ಚುಚ್ಚಿದರೆ,ತೊಗಲು ತೂತಾದದ್ದೇ ಬಂತು. ಅವರ ಜ್ವರ ನಿಲ್ಲಲಿಲ್ಲ.ಪರದೇಶಿ ಔಷಧಿಗಳ ಸೀಸೆಗಳೊಳಗೆ ನೀರು ತುಂಬಿಸಿ ಮಾರುವ ಹೊಸ ಉದ್ಯಮವೇ ತೊಡಗಿದೆ.ಕ್ವಿನೀನಿಗೆ ಮುನ್ನೂರು ರೂಪಾಯಿ ಎಂದಾಗ-ತತ್ತರಿಸಿ, ಅರ್ಧರಾತ್ಲನ್ನು ಕೊಂಡರೆ, ಕೊಂಡದ್ದು ಮುಕ್ಕಾಲು ಪಾಲು ಚೋಕಿನ ಪುಡಿಯಾಗಿತ್ತು. ಈ ಕಟುವಾದ ಅನುಭವಗಳಿಂದ ಶಿವಪ್ಪನವರು ಹೇಳುವುದುಂಟು: "ಜರ್ಮ

ನಿಯಲ್ಲಿ ಹಿಟ್ಲರ್ ಕಾಫಿ, ರಬ್ಬರುಗಳ ಬದಲು Erstz ಮ್ಹಾಲು ತಯಾರಿಸುತಿದ್ದಾನಂತೆ. ನಮ್ಮವರು ಅವನಿಗಿಂತಲೂ ಬುದ್ಧಿವಂತರು. ಪ್ರತಿಯೊಂದು ಔಷಧವೂ Estrz ಆಗಿಬಿಟ್ಟಿದೆ" ಎಂದು, ಕೈ ಕಚ್ಚಿಸಿಕೊಂಡು ನಗುತ್ತಾರೆ. ಮದ್ದಿಗಾಗಿ ಬಂದವರೊಡನೆ "ನಿನಗೆ ಬೆಲೆಕೊಡಲು ಬಂದರೆ ಈ ಇಂಜಕ್ಷನ್ ಕೊಡುತ್ತೇನೆ. ಗುಣವಾದರೆ ನಿನ್ನ ಅದೃಷ್ಟ"ಎಂದು ಮದ್ದಿನ ಯೋಗ್ಯತೆಯನ್ನು ಕುರಿತು ತಾವೇ ಅಂಜಿಕೆಯನ್ನು ತಿಳಿಸುತ್ತಾರೆ. ಎಂಟುದಿನಗಳ ಬಳಿಕ ಆತ ಬಂದು ಬೇನೆ ಗುಣವಾಯಿತೆಂದರೆ "ಅದೇ, ನಿನ್ನ ಅದೃಷ್ಟ!" ಎಂದು ಮತ್ತೊಮ್ಮೆ ಹೇಳುತ್ತಾರೆ. "ಹಾಗೇಕೆ ಹೇಳುತ್ತೀರಿ?" ಎಂದು ಪ್ರಶ್ನಿಸಿದರೆ, "ನಿನಗೆ ಗೊತ್ತಿಲ್ಲ. ಈಗ ಬರುವ ಮದ್ದುಗಳಲ್ಲಿ ಠಕಾರಿ ಎಷ್ಟು, ನಿಜ ಎಷ್ಟು ಎಂದು ಹೇಳುವುದು ಕಷ್ಟ"ಎಂದು ಉತ್ತರಿಸಬೇಕಾಗುತ್ತದೆ. ಇನ್ನೂ ಒಂದು ವಿಚಿತ್ರ-ಅನೇಕರು ಅವರಲ್ಲಿಗೆ ಬಂದು "ಡಾಕ್ಟರರೇ, ನೀವು ಖಾಲಿ ಮದ್ದಿನ ಸೀಸೆಗಳನ್ನು ಏನು ಮಾಡುತ್ತೀರಿ?" ಎಂದು ಅವನ್ನು ಕೊಳ್ಳುವುದಕ್ಕೂ ಬರುತ್ತಾರೆ. ಹಿಂದಿನ ದಿನಗಳಲ್ಲಿ ಅವನ್ನು ಧರ್ಮಕ್ಕೆ ಕೊಡುತ್ತಿದ್ದರು. ಮದ್ದಿನ ಪೆಟ್ಟಿಗೆಗಳನ್ನು ಮಕ್ಕಳಿಗೆ ಆಟವಾಡಲು ಕೊಡುತಿದ್ದರು. ಈಗ ಅವಕ್ಕೂ ಗಿರಾಕಿ ಬರುವುದನ್ನು ನೋಡಿ-ಇವೆಲ್ಲ ನೀರು ತುಂಬಿಸಿ ಮಾರುವ ಠಕ್ಕು ವ್ಯಾಪಾರಕ್ಕೆ ಹೋಗುತ್ತದೆಯೆಂದು ಗೊತ್ತಾಗಿ, ಮದ್ದಿನ ನಳಿಗೆಗಳನ್ನು ಪುಡಿ ಮಾಡುತ್ತಾರೆ; ಮುಖಚಿತ್ರಗಳನ್ನು ಕಿತ್ತು ಸುಟ್ಟುಹಾಕುತ್ತಾರೆ.

ಸ್ವಂತ ಜೀವನದಲ್ಲಿ ಅನೇಕ ಬಗೆಯ ನೋವು, ಕಷ್ಟಗಳನ್ನು ಅನುಭವಿಸುತ್ತಿದ್ದ ಅವರು, ತಮ್ಮ ಉದ್ಯೋಗದಿಂದ ತೃಪ್ತಿ ಪಡೆಯೋಣವೆಂದು ಹಂಬಲಿಸಿದರೆ ಮದ್ದಿನ ಕೊರತೆಯಿದೆ. ಊರ ಜನರು ನರಳುತ್ತ ದವಾಖಾನೆಗೆ ಬಂದು ಜೋಲು ಮುಖವನ್ನು ಮಾಡಿ ನಿಂತಾಗ, ಮಲೇರಿಯದಂತಹ ಬೇನೆಯಿಂದ ನರಳುತ್ತಿರುವಾಗ, ಕ್ವಿನೀನ್‌ನಂತಹ ಅಲ್ಪವಸ್ತುವನ್ನೂ ಸಂಗ್ರಹಿಸಿ ಕೊಡುವುದೆಂದರೆ ಒಂದು ತಪಸ್ಸು ಮಾಡಿದಂತಾಗುತ್ತದೆ. ಆದರೆ ಒಂದು ದಿಕ್ಕಿನಿಂದ ಸಹಾಯ ಕಳಚುವಾಗ ಮತ್ತೊಂದು ದಿಕ್ಕಿನಿಂದ ಸಹಾಯ ದೊರೆಯುವುದುಂಟು. ಹಾಗೆ ಅವರಿಗೆ ದೊರೆತಂಥ ಅಮೂಲ್ಯ ಸಹಾಯಗಳಲ್ಲಿ ಆಸ್ಪತ್ರೆಯಿಂದ ನಿವೃತ್ತಳಾಗಿ ಹೋಗುತಿದ್ದ ಸೂಲಗಿತ್ತಿ ಅವರ ದವಾಖಾನೆಯನ್ನು ಬಂದು ಸೇರಿದ್ದು: "ನನ್ನೂರು ಹುಬ್ಬಳ್ಳಿ. ನಾನಿದ್ದರೆ ಎರಡು ವರ್ಷ ಇದ್ದೇನು" ಎಂದಂದು, ಆಕೆ ಅಲ್ಲಿಗೆ ಬಂದಾಗ 'ಅಷ್ಟಾದರೆ ಅಷ್ಟು', ಎನ್ನುವ

ಆಸೆ ಶಿವಪ್ಪನವರದ್ದು.

ಅವರಿಗೆ ದೊರಕಿದ ಮತ್ತೊಂದು ಹೆಚ್ಚಿನ ನೆರವೆಂಬುದು ಗುಲಾಬಿಯಿಂದ ದೊರೆತದ್ದು. ಇಂದುಮತಿಗೂ ಆಕೆಗೂ ಬೆಳೆದು ಬಂದ ಸ್ನೇಹದ ದೆಸೆಯಿಂದ ಆಕೆ ಅವರ ಮನೆಗೆ ತುಂಬ ಸಮೀಪದವಳಾದಳು. ಎಷ್ಟೋ ಬಾರಿ ಅಲ್ಪ ಸ್ವಲ್ಪ ಹಣಕ್ಕಾಗಿ ಇಂದುಮತಿಯು "ದುಡ್ಡಿಲ್ಲ. ಇವತ್ತು ತುಪ್ಪ ಬೇಡ" ಎಂದು ಅಂದರೆ, ಅಲ್ಲಿ ಗುಲಾಬಿ ಇದ್ದುದಾದರೆ "ಯಾಕೆ ಚಿಂತೆಮಾಡುತ್ತೀರಿ? ನಾನು ಕೊಡುತ್ತೇನೆ" ಎನ್ನುವುದುಂಟು.

ಒಮ್ಮೆ ಆಕೆ ಹೀಗೆ ಸಾಲಕೊಡಲು ಮುಂದಾದಾಗ "ಯಾರು ಸಿಕ್ಕಿದರು ಮಹಾರಾಯಿತಿ!" ಎಂದು ಮೈಮರೆತು ಇಂದುಮತಿಯ ಬಾಯಿಯಿಂದ ಮಾತುಗಳು ಹೊರಬಿದ್ದುವು. ಆಡಿದವಳ ಮುಖ ಕಿರಿದಾದಂತೆ, ಆ ಮಾತುಗಳನ್ನು ಕೇಳಿದ ಗುಲಾಬಿಯ ಮುಖ ಮತ್ತಷ್ಟು ಸಣ್ಣದಾಯಿತು. "ಏನಮ್ಮ, ನಾನು ನನ್ನ ಜೀವನದ ಪ್ರತಿಯೊಂದು ಸಣ್ಣ ವಿಷಯವನ್ನು ನಿಮ್ಮಲ್ಲಿ ಹೇಳಿದರೂ ನೀವು ನಂಬುವುದಿಲ್ಲ—ಅಲ್ಲವೆ? ನಾನು ಇನ್ನೂ ಇನ್ನೂ ಕುಲದ ಕಸುಬಿನಲ್ಲಿರುವವಳು—ಎಂದು ತಿಳಿದ ಹಾಗೆ ಕಾಣುತ್ತದೆ" ಎಂದು ಪ್ರತ್ಯುತ್ತರ ಸಲ್ಲಿಸಿ ಹೊರಟು ಹೋಗಿಬಿಟ್ಟಳು. ಒಂದು ವಾರದ ತನಕ ಇಬ್ಬರ ಮನಸ್ಸೂ ಸಂಧಾನಕ್ಕಾಗಿ ಕುದಿಯುತೊಡಗಿತು. ಕೊನೆಗೆ ಗುಲಾಬಿ 'ಅವರ ಮೇಲಿನ ಸಿಟ್ಟಿಗೆ ನಾನು ಶಿವಪ್ಪನವರು ಮಾಡಿದ ಉಪಕಾರ ಮರೆಯುವುದೇ?' ಎಂದು ತಿರುಗಿ ಅವರ ಮನೆಗೆ ಹೋದಳು. ಇಂದುಮತಿಯು ನೊಂದವಳಾಗಿ ಅವಳನ್ನಿದಿರುಗೊಂಡು "ನಾನು ಆಡಬಾರದ್ದನ್ನು ಆಡಿದೆ. ನಿನಗೆ ತುಂಬ ಬೇಸರವಾಗಿರಬೇಕು—ಮರೆತು ಬಿಡು" ಎಂದು ಮನೆಗೆ ಕರೆದು ತಂದಳು. ತುಸು ಹೊತ್ತು ಅವರಲ್ಲಿ ಮಾತು ಮುಂದುವರಿಯುವುದಕ್ಕೆ ಅಡ್ಡಿಯಾಯಿತು. ಕಟ್ಟಕೊನೆಗೆ ತನ್ನ ಭಾರವನ್ನು ಇಳಿಸುವುದಕ್ಕಾಗಿ ಗುಲಾಬಿಯೇ ಸಂಭಾಷಣೆಗೆ ತೊಡಗಿದಳು. "ಅಮ್ಮ, ಎಷ್ಟೋ ಸಾರಿ ನನಗೊಬ್ಬ ಗಂಡನೆಂಬವನು ಇರಬಾರದೇ ಎಂದು ಬಯಸಿ ಕಣ್ಣೀರು ಸುರಿಸಿದ್ದೇನೆ. ನಮ್ಮವರಲ್ಲಿ ಮದುವೆಯಾಗುವವರಿಲ್ಲವೆ? ಆದರೆ, ಸಾಹೇಬರಿಂದ ನನ್ನ ಬದುಕು ಹಾಳಾದ ಮೇಲೆ, ನನ್ನನ್ನು ಯಾರು ಕೇಳುತ್ತಾರೆ? ಮದುವೆಯ ಮಾತಂತಿರಲಿ. ನನಗೆ ಮೆಚ್ಚುವವರೊಡನೆ ಬಾಳಿ ಬದುಕುತ್ತೇನೆಂದರೂ ಹಿತವಂದಿಗರು, ನಂಬಿಕೆಯವರು ಸಿಗುತ್ತಾರೆಯೆ? ನನಗವರು ದುಡಿದು

ತರುವುದು ಬೇಡ; ಒಂದೇ ಒಂದು ಕಾಸು ಕೊಡುವುದು ಬೇಡ" ಎಂದು ತನ್ನ ದುಃಖ ಸರ್ವಸ್ವವನ್ನು ತೋಡಿಕೊಂಡಳು.

"ಅಲ್ಲ, ನಿನಗೆ ನಾನಾಡಿದ ಮಾತುಗಳು ಬಹಳವಾಗಿ ಚುಚ್ಚಿರಬೇಕು. ನಾನು ಹಣ ಕೊಡುತ್ತೇನೆ–ಎಂದು ನೀನು ಹೇಳುವಾಗ, ನನ್ನ ನಾಲಗೆ ತೀರ ತಪ್ಪಿ ನುಡಿಯಿತು" ಎಂದು ಅವಳ ಕಣ್ಣಲ್ಲಿಯೂ ಕಂಬನಿ ಮೂಡಿತು.

"ನೀವು ಬೇಸರಮಾಡಬೇಡಿ. ನನ್ನ ಹಣೆಯ ಮೇಲೆ ಅಂಥ ಮಾತು ಕೇಳುವ ಯೋಗ ಬರೆದಿದೆ. ನಾನು ಹುಟ್ಟಿದ ಕುಲ ಅಂಥದು. ಜನರು ಏನಾದರೂ ಅಂದೇ ಅನ್ನುತ್ತಾರೆ; ನಾನು ಇಲ್ಲಿಗೆ ಆಗಾಗ ಬರುತ್ತಿರುವುದನ್ನು ಕಂಡು ಕೆಟ್ಟ ಮಾತುಗಳನ್ನು ಆಡುವವರೂ ಇದ್ದಾರೆ . . . ಅದಿರಲಿ. ನನ್ನಲ್ಲಿ ನಾಲ್ಕು ಕಾಸಿದೆ ಎಂದರೂ ಜನಕ್ಕೆ ಅನುಮಾನವೇ"--ಹೀಗೆಂದು ತನ್ನಲ್ಲಿರುವ ಹಣ ಹೇಗೆ ಬಂತೆಂದು, ತಾಯಿ ಅಡಗಿಸಿಟ್ಟ ಚಿನ್ನಾಭರಣಗಳ ಕತೆಯನ್ನು ಅವಳಿಗೆ ಹೇಳಿದಳು.

ಅವರಿಬ್ಬರ ಸಂಭಾಷಣೆಗಳ ವೇಳೆಗಳಲ್ಲಿ ಇಂದುಮತಿ ತಮ್ಮ ಜೀವನದ ಕಷ್ಟಗಳನ್ನು ಕುರಿತುಹೇಳುವುದುಂಟು. "ಅವರ ಕೈಯಲ್ಲಿ ದುಡ್ಡಾಗುವುದು ಎಂದೋ ಏನೋ! ಯಾವುದಕ್ಕೂ ಹಣವಿಲ್ಲ ಅನ್ನುತ್ತಾರೆ. ಚಿನ್ನಕ್ಕಿಲ್ಲ, ಮದ್ದಿಗಿಲ್ಲ; ಆಸ್ಪತ್ರೆಯನ್ನು ದೊಡ್ಡದು ಮಾಡವುದಕ್ಕಿಲ್ಲ; ಮನೆ ಬಡಾಯಿಸುವುದಕ್ಕಿಲ್ಲ. ನನಗಂತು ಕೇಳಿ ಬೇಸರವಾಗಿದೆ. ಮೊನ್ನೆ ಮೊನ್ನೆಯಷ್ಟೆ ಉಸ್ಸೆಂದು ಉಸಿರುಬಿಟ್ಟು ಹೇಳಿದರು: 'ಈಗ ನನ್ನೆಲ್ಲ ಸಾಲಗಳು ತೀರಿದ ಹಾಗಾಯಿತು. ನಗದು ಸಾವಿರ ರೂಪಾಯಿಯಷ್ಟು ಇದೆ. ನೀನೇನು ಮಾಡಬೇಕೆನ್ನುತ್ತೀ? ಚಿನ್ನವೆ? ಮನೆಯೇ?' ಎಂದರು. ನನಗೂ ಏನೆಂದು ತೋರುವುದಿಲ್ಲ; ನೋಡು, ಚಿನ್ನಕ್ಕೆ ವಿಪರೀತ ಬೆಲೆ ಕೊಟ್ಟು ನಗ ಮಾಡಿಸುವುದು; ನಾಳೆ ಪವನಿನ ದರ ಇಳಿಯುವುದು! ಹಾಗೆಂದು ಕೈಯಲ್ಲಿರುವ ಹಣ ಸುದ್ದಿಯಿಲ್ಲದೆ ಹೋಗಬಾರದೆಂದು ಒಂದು ಮನೆ ಕಟ್ಟಿಸುವ ಎಂದು ಯೋಚಿಸಿದರೆ, ಒಂದು ಸಾವಿರದಲ್ಲಾಗುತ್ತದೆಯೆ? ನಾಲ್ಕೋ, ಐದೋ, ಎಷ್ಟೋ ಬೇಕಂತೆ" ಎಂದು ಆಕೆಯು ತಮ್ಮ ಕಷ್ಟ ಹೇಳಿಕೊಳ್ಳುತ್ತಾಳೆ. ಗುಲಾಬಿಯ ನಾಲಗೆ ಇನ್ನೊಮ್ಮೆ ದುಡುಕಿತು! "ನಾನು ಕೊಡುತ್ತೇನೆ–ಅನ್ನುವಾಗ ಯಾಕೆ ತೆಗೆದುಕೊಳ್ಳಬಾರದು? ಕೊಡುವುದು ಸಾಲವಾಗಿ; ನೀವು ಬಡ್ಡಿಯನ್ನು ಕೊಡಬೇಕಾಗಿಲ್ಲ. ನನ್ನ ಹಣ ಅಲ್ಲಿಯೇ ಬಿದ್ದಿರುವ ಬದಲು, ನಿಮ್ಮ ಉಪಕಾರಕ್ಕೊದಗಿ ಬಂದರೆ ಆಗದೆ?"

ಎಂದು ತಾನಾಗಿ ಒತ್ತಾಯ ಹೊರಿಸಿದಳು.

ಆ ರಾತ್ರಿ ಶಿವಪ್ಪನವರ ಕಿವಿಗೂ ಆ ಸುದ್ದಿ ಹೋಯಿತು. ಅವರು ಮಾತನ್ನೇ ಆಡಲಿಲ್ಲ. ಎರಡು ಮೂರು ದಿನಗಳು ಕಳೆದರೂ ಉತ್ತರವಿಲ್ಲ. ಇಂದುಮತಿ "ಯಾಕೆ ಹಾಗೆ ಮಾಡಬಾರದು? ಅವಳು ಅಂಥವಳಲ್ಲ. ವಿರಾಮದಲ್ಲಿ ಮರಳಿ ಕೊಡಬಹುದು. ಈವತ್ತು ಊರಿನ ಜನರು ಏನೇನು ಕಾರುಭಾರು ಮಾಡುತ್ತಾರೆ! ಹೊಸಮನೆ, ಅಂಗಡಿ ಕಟ್ಟಿಸುತ್ತಿರುವವರೆಷ್ಟು ಮಂದಿ? ನಾವು ಇರುವುದಕ್ಕೆ ಒಂದು ನಾಲ್ಕು ಕೋಣೆಯ ಸಣ್ಣ ಮನೆಯನ್ನು ಕಟ್ಟಬಾರದೇ? ಮಾವನಿಗೂ ಅದರಿಂದ ಸಂತೋಷವಾದೀತು" ಎಂದಳು.

"ಊರವರ ಪುರಾಣ ನಮಗೇಕೆ? ಅವರು ಮಾಡಿದ ಹಾಗೆ ನಾವು ಮಾಡುವುದಕ್ಕೆ ಬರುತ್ತದೆಯೆ? ಅವರಂತೆ ದುಡ್ಡು ಮಾಡುವುದಾದರೆ-ಯಾರದ್ದಾದರೂ ಪ್ರಾಣ ಹೋಗುವ ಗಳಿಗೆಯಲ್ಲಿ 'ಇಷ್ಟು ಕೊಟ್ಟರೆ ಬರುತ್ತೇನೆ; ಇಲ್ಲವಾದರೆ ಇಲ್ಲ' ಎನ್ನಬಹುದು. ಇವತ್ತು ಆಸ್ಪತ್ರೆಗೆ ಹೋಗುವವರು ಕಡಿಮೆ. ನಾನೇ ಊರಿನ ಅರಸನಾಗಿರಬಹುದು. ಆದರೆ ಆಪತ್ತಿನಲ್ಲಿ ಇನ್ನೊಬ್ಬರನ್ನು ಹಿಂಡಿ ನಾನು ಪುಷ್ಟಿಯಾಗಿರಬೇಕು--ಎಂಬ ತತ್ವವೇ ನನಗೆ ಹಿಡಿಯುವುದಿಲ್ಲ".

"ನಾನು ಗುಲಾಬಿಯ ಮನಸ್ಸನ್ನೂ ಬಲ್ಲೆ. ಅವಳಿಗೆ ನನಗೆ ಸಹಾಯ ಮಾಡುವುದಕ್ಕೆ ಅಷ್ಟು ಮನಸ್ಸಿದ್ದರೆ ಅವಳ ದುಡ್ಡು ಬೇಡ. ಈಗಿರುವ ನಮ್ಮ ಸೂಲಗಿತ್ತಿ ಒಂದು ವರ್ಷ ಇದ್ದಾಳು. ಅವಳಿರುವಾಗಲೇ ಇವಳು ಬಂದು ಸೇರಿ, ಆ ಕೆಲಸ ಕಲಿತರೆ ನನಗೂ ತುಂಬ ಸಹಾಯ. ಅವಳಿಗೂ ಒಂದು ಉದ್ಯೋಗವಾಯಿತು".

ಇಂದುಮತಿಗೆ ಈ ಹೊಸ ಸೂಚನೆಯನ್ನು ಕೇಳಿ ಆಶ್ಚರ್ಯವಾಯಿತು. ಗುಲಾಬಿ ಅಂತಹ ಕೆಲಸ ಮಾಡಬಾರದೆಂದಲ್ಲ, ಮಾಡುತ್ತಾಳೆಯೇ-ಎಂದು. ಶಿವಪ್ಪನವರಿಗೆ ಅವಳನ್ನು ಕೇಳುವ ಆಸೆ ಹತ್ತು ಬಾರಿಯಾಗಿದ್ದರೂ ಒಂದು ಬಾರಿಯೂ ಅಭಿಪ್ರಾಯ ವ್ಯಕ್ತಮಾಡಿದವರಲ್ಲ. ಇಂದುಮತಿಗೆ "ಗುಲಾಬಿ ಅಂಥ ಕೆಲಸಕ್ಕೆ, ಅದೂ ಗೌರವವಿಲ್ಲದ, ಶ್ರಮದಾಯಕ ಕೆಲಸಕ್ಕೆ ಹೋದಾಳೆಂದು ತೋರಲಿಲ್ಲ. ಕೇಳಲೇ, ಬೇಡವೇ-ಎಂಬ ಅನುಮಾನ ಇಬ್ಬರಲ್ಲೂ ಉಂಟಾಯಿತು. ಮರುದಿನ ಆಕೆ ಮನೆಗೆ ಬಂದಾಗ ಅಳುಕಿ, ಅಳುಕಿ ಇಂದುಮತಿ ಸೂಚಿಸಿದಳು. ಮಾತು ಕಿವಿಗೆ ಬಿದ್ದುದೇ ತಡ-'ಹೊಂ' ಎಂದು ಹಿಗ್ಗಿ

ಒಪ್ಪಿದಳು ಗುಲಾಬಿ. ಕೆಲಸವಿಲ್ಲದೆ ಚಂಚಲವಾಗಿ ಓಡುತ್ತಿರುವ ಮನಸ್ಸಿಗೆ ಒಂದು ನೆಮ್ಮದಿ ಬಂದೀತು; ತನ್ನ ಜೀವನಕ್ಕೊಂದು ದಾರಿಯಾದೀತು-ಎಂದು ತೋರಿ 'ಖಂಡಿತವೆ?' ಎಂದು ಕೇಳಿದಳು. ಏನೋ, ಒಂದು ಪ್ರೀತಿ, ಅಭಿಮಾನ, ವಿಶ್ವಾಸಗಳಿಂದ ಶಿವಪ್ಪರೆಸ್ಸುವಂಥ ಯಾವ ಕೆಲಸಕ್ಕೂ ಅವಳು ಸಿದ್ಧಳು. ಆದರೆ ತನ್ನ ಒಂದು ಮಾತಿನ ಒತ್ತಾಯವನ್ನು ಪ್ರತಿಯಾಗಿ ಅವರ ಮೇಲೆ ಹೊರಿಸಬೇಕೆಂದು ಈ ಗಳಿಗೆಯಲ್ಲಿ ಅವಳೂ ಹೊಂಚು ಹಾಕಿದಳು. "ನನ್ನದೂ ಒಂದು ಶರ್ತವಿದೆ. ಅದು ಮತ್ತೇನಿಲ್ಲ. ನಾನು ಹಣ ಕೊಡುತ್ತೇನೆ. ಅದರಿಂದ ಒಂದು ಮನೆಯನ್ನಾದರೂ ಕಟ್ಟಿಸಲಿ, ಆಸ್ಪತ್ರೆಯನ್ನಾದರೂ ದೊಡ್ಡದು ಮಾಡಲಿ. ವಾರ್ಡನ್ನಾದರೂ ಕಟ್ಟಲಿ. ಅದನ್ನು ಸಾಲವೆಂದೇ ತಿಳಿಯಲಿ" ಎಂಬ ಶರ್ತ ಹೊರಿಸಿದಳು.

ಇಂದುಮತಿ ಮಧ್ಯವರ್ತಿಯಾದಳು. ಗುಲಾಬಿಯ ಒತ್ತಾಯವನ್ನು ಗಂಡನ ಮೇಲೆ ಹೇರಿದಳು. ಡಾಕ್ಟರರು ಅವಳಿಂದ ಎರವಾಗಿ ಹಣ ಪಡೆದು, ಒಂದು ಮನೆಯನ್ನು ಬೆಲೆಗೆ ಕೊಂಡು-ಬೇಕಾದ ಸಾಧನ, ಸಲಕರಣೆಗಳನ್ನು ಒದಗಿಸಿಕೊಂಡು ಉದ್ಯೋಗವನ್ನು ವಿಸ್ತರಿಸುವ ಯೋಚನೆ ಮಾಡುತ್ತೇನೆಂದರು. ಸ್ಥಳ ಯಾವುದೆಂದು ಹುಡುಕುವ ಪ್ರಯತ್ನ ನಡೆಯುತಿದ್ದಾಗಲೇ ಅವರ ಗುಲಾಬಿ--ದವಾಖಾನೆಯಲ್ಲಿ ದಾದಿಯಾಗಿ ಸೇರಿಕೊಂಡಳು. ಅವಳ ಮಗು ಪ್ರಭಾಕರನನ್ನು ಎಷ್ಟೋಬಾರಿ ಡಾಕ್ಟರರ ಮನೆಯಲ್ಲಿ ಆಡಲು ಬಿಟ್ಟು, ಅವಳು ದಿನವನ್ನು ದವಾಖಾನೆಯಲ್ಲಿ ಕಳೆಯ ತೊಡಗಿದಳು.

ಒಂದು ಸಹಾಯ ಈ ರೀತಿಯಿಂದ ಅವರಿಗೆ ಬಂದಾಗ, ಬರುತ್ತಿದ್ದಾಗ ಇನ್ನೊಂದು ನೆರವು ತಪ್ಪಿ ಹೋಯಿತು. ಕಂಪೌಂಡರ್ ಶೀನಪ್ಪ ಇದ್ದಕ್ಕಿದ್ದ ಹಾಗೆ "ನಾನು ಡಾಕ್ಟರರೇ ಮುಂಬಯಿಗೆ ಹೋಗುತ್ತೇನೆ. ಇಲ್ಲಿನ ಸಂಬಳ ಪೂರೈಸುವುದಿಲ್ಲ" ಎಂದು ಹೇಳಿ, ಕೆಲಸ ಬಿಟ್ಟ ಮಹಾನುಭಾವ, ಊರ ಕೆಲವರ ಪ್ರೋತ್ಸಾಹದಿಂದ ಅದೇ ಊರಿನಲ್ಲಿ ಖಾಸಗಿ ಶಾಪ್ ತೆರೆದನು. ಇವರನ್ನು ನಾಚಿಸುವಂಥ ಮದ್ದಿನಂಗಡಿಯನ್ನು ತೆರೆದಿದ್ದಾನೆ. 'ಏನೂ ತಿಳಿಯದ ಪೆದ್ದ ಶೀನು' ಎಂಬ ಡಾಕ್ಟರರ ಅಭಿಪ್ರಾಯವನ್ನು ಸುಳ್ಳುಮಾಡಿ, ಗುರುಗಳಿಗೇ ತಿರುಮಂತ್ರ ಹೇಳಿಬಿಟ್ಟ.

---

# ಅಧ್ಯಾಯ ೮.

ಮತ್ತಿಗುಂಡಿ ಎಂಬುದು ಕುಂಬಾರ ಗುಂಡಿಯಂತೆ ಜನಶೂನ್ಯವಾದ ಪ್ರದೇಶವಾಗಿತ್ತು. ಅದು ಹೆಸರಿಗೆ ಮಾತ್ರ ಗುಂಡಿ ಇಲ್ಲವೆ ಕಣಿವೆ ಎಂಬ ಅರ್ಥ ಬರುವಂತಿದ್ದರೂ, ಇಲ್ಲಿನ ಭೂಮಿ ಹೆಚ್ಚು ಕಡಿಮೆ ಸಮತಟ್ಟಾದ ಪ್ರದೇಶವಾಗಿದೆ. ಆದರೆ ಇದು ಸಹ ಕಾಡಿನದೇ ರಾಜ್ಯ. ಕಾಡಿನ ಎಡೆ ಎಡೆಗಳಲ್ಲಿ ಅಲ್ಲೊಂದು, ಇಲ್ಲೊಂದು ತುಣುಕು ಹುಲ್ಲುಗಾವಲು, ಗದ್ದೆ ಕಾಣಿಸುತ್ತದೆಯೆ ಹೊರತು ಹೆಚ್ಚಿನ ಭಾಗ ಕಗ್ಗಾಡಿನಿಂದ ತುಂಬಿಕೊಂಡಿದೆ. ಈ ಪ್ರದೇಶದ ಹೆಸರು ಜಂಗ್ಲಿ ಇಲಾಖೆಯವರಿಗೆ ಗೊತ್ತಿರಬಹುದೇ ಹೊರತು ದೂರದವರಿಗೆ ಅದನ್ನು ತಿಳಿಯುವ ಅವಶ್ಯವೂ ಇದ್ದಿರಲಿಲ್ಲ. ಈಗ ಹಾಗಲ್ಲ—ಕುಂಬಾರ ಗುಂಡಿಯಂತೆ ಇದು ಸಹ ಹೆಸರಾದ ಸ್ಥಳವಾಗಿದೆ. ಕುಮಟೆಯಿಂದ ಶಿರ್ಶಿಗೆ ಹೋಗುವ ಹಾದಿಯಲ್ಲಿ ದೀವಿಗಿ ಎಂಬಲ್ಲಿ ಹೊಳೆ ಕಳೆದ ಮೇಲೆ ಮತ್ತೂ ಮೂರು ಹರದಾರಿ ಸರಿದು ಅಡ್ಡ ತಿರುಗಬೇಕು. ಎಂಟು ಮೈಲಿನ ಒಳದಾರಿಯಿದೆ. ಅಲ್ಲಿ ಈಗ ಅನುಕೂಲವಾದ ರಸ್ತೆಯನ್ನೂ ಮಾಡಿದ್ದಾರೆ. ಕಾಡು ನಾಡಾಗಿದೆ. ನೂರಾರು ಮೋಟರುಗಳ ಸಂಚಾರವಿದೆ. ಹಲವಾರು ಎಕ್ರೆಗಳಲ್ಲಿನ ಕಾಡನ್ನು ಕಡಿದು ಮನೆ ಮಠಗಳನ್ನು ಕಟ್ಟತೊಡಗಿದ್ದಾರೆ. ಇದೂ ಮಹಾಯುದ್ಧದ ಆಶೀರ್ವಾದದ ಫಲ. ಆದರೆ ಕುಂಬಾರ ಗುಂಡಿಯಂತೆ ಮೋಪು ಮರಗಳ ವಹಿವಾಟು ನಡೆಯುವ ಬದಲು, ಮಿಲಿಟರಿ ಶಿಬಿರವೊಂದು ಹುಟ್ಟುತ್ತಿದೆ. ಒಂದಷ್ಟು ದಿನ ಇಲ್ಲಿಗೆ ಇಟಲಿಯ ಯದ್ಧ ಕೈದಿಗಳನ್ನು ತರುತ್ತಾರೆಂಬ ಸುದ್ದಿಯಿತ್ತು. ಸುದ್ದಿ ಹೇಗೂ ಇರಲಿ-ಇಲ್ಲಿ ಓಡಾಡುತ್ತಿರುವ ಮಿಲಿಟರಿ ವಾಹನಗಳ ಸಂಖ್ಯೆ ಅತಿಶಯ. ಅವುಗಳು ಸಾಲುಗಟ್ಟಿ ಧೂಳೆಬ್ಬಿಸಿಕೊಂಡು ಬರುತ್ತಿರುವಾಗ, ಆಚೀಚಿನ ಹಳ್ಳಿಯ ಜನ ಮಿಕಿ ಮಿಕಿ ನೋಡುತ್ತ ನಿಂತಿರುತ್ತಾರೆ. ತಮಗೂ ಅವಕ್ಕೂ ಏನು ಸಂಬಂಧವೆಂದು ತಿಳಿಯದ ಮಾನವ ಕೋಟಿಯೇ ಅಧಿಕ.

ಈ ನಿರ್ಮಾಣ ತೊಡಗುವ ಮುಂಚೆ ಮತ್ತಿ ಗುಂಡಿಯಲ್ಲಿ ವನವಾಸಿಗಳಂತೆ ಹತ್ತೆಂಟು ಬೇಸಾಯಗಾರರು ಮನೆ, ಮಾರು, ಹೊಲಗಳನ್ನು ಮಾಡಿಕೊಂಡು ತಮ್ಮದೇ ಆದ ಪ್ರಪಂಚದಲ್ಲಿ ಬಾಳ್ವೆಮಾಡಿಕೊಂಡಿದ್ದರು. ಅಂಥವರು ಅಲ್ಲಿಂದ ತಳಕಿತ್ತು ಹೊರಡಬೇಕಾಗಿ ಬಂದಿತು. ಹಣವೇನೊ

ಸಿಗುತ್ತದೆ. ಕೈತುಂಬ ಪರಿಹಾರ ದೊರೆತರೂ ದೊರಕೀತು. ಆದರೆ ಒಮ್ಮೆ ಮನೆ, ಮಠ, ದನ ಕರುಗಳನ್ನು ಅಟ್ಟಿಕೊಂಡು ಹೊರಟವರು ನಾಳೆ ಯಾವ ಊರಿಗೆ ಹೋಗಬೇಕು? ಯಾವ ಜೀವನ ಸಾಗಿಸಬೇಕು, ಈಗ ಹೇಗೆ ಹಣ ಒದಗಿಸಬೇಕು ಎಂಬುದನ್ನು ಊಹಿಸಲಾರರು. ಹಣ ಬರುವುದು ಎಂದೋ; ಹೊಲ ಗದ್ದೆಗಳನ್ನು ಬಿಟ್ಟು ಹೊರಡಬೇಕಾದದ್ದು ಮೊದಲೇ. ತಿಂಗಳ ಅವಧಿಯ ಒಳಗೇನೆ ಹೊರಟರು. ಅನಂತರ ತಮ್ಮ ಹಕ್ಕು, ಪರಿಹಾರಗಳಿಗಾಗಿ ಕುಮಟೆಗೆ ಮಾಮಲೆದಾರರ ಕಚೇರಿಯ ಮುಂದೆ ಸುಳಿಯತೊಡಗಿದರು. ಭೂಮಿಯಿಲ್ಲದ ಬರಿಯ ಗೇಣಿ ಒಕ್ಕಲುಗಳಿಗೆ ಆ ಆಸೆಯೂ ಇಲ್ಲ. ಅವರ ಶಾಂತ ಜೀವನಕ್ಕೆ ಪ್ರತಿಯಾಗಿ, ಉಸಿರಿಗೂ ಬಿಡುವಿಲ್ಲದ ಬೇರೊಂದು ಬಗೆಯ ಜೀವನ ಮತ್ತಿಗುಂಡಿಯಲ್ಲಿ ನಡೆದೀತೆಂದು ಎಣಿಸಿದವರಿಲ್ಲ.

ಮೊದಲಿಗೆ ಅರಣ್ಯಮಧ್ಯದಲ್ಲಿ ಸಾಲುಸಾಲು ತಂಬುಗಳು ಹುಟ್ಟಿಕೊಂಡುವು. ಅನಂತರ ಪಂಜಾಬಿನ ಗಡುತರ ಜೀವಿಗಳಾದ ಕಂಟ್ರ್ಯಾಕ್ಟರುಗಳು ಕಾಣಿಸಿದರು. ಹುಬ್ಬಳ್ಳಿ, ಬಳ್ಳಾರಿ, ಬಿಜಾಪುರ ಎಂದು ಯಾವಾವ ಊರಿನ ಆಳುಗಳನ್ನೊ, ಕಸುಬು ದಾರರನ್ನೊ ತಂದು ಸುರಿದರು. ಮರ ಮುಟ್ಟುಗಳಿಗೆ ಕೊರತೆಯಿಲ್ಲದ ಅರಣ್ಯದಲ್ಲಿ, ಇದ್ದ ಮರ ಸವರಿ, ಸುಟ್ಟು, ಇನ್ನೊಂದು ಊರಿನ ಮರಮುಟ್ಟುಗಳನ್ನು ತಂದು ಮನೆಗಳನ್ನೆಬ್ಬಿಸಿದರು. ಕಣ್ಣು ಹಾಯುವಷ್ಟು ದೂರ ಆವಾರ ವಿಸ್ತರಿಸಿತು. ಲಾರಿಗಳಲ್ಲಿ ಇಟ್ಟಿಗೆ, ಸಿಮೆಂಟು, ಹಂಚುಗಳು ಬಂದು ಸುರಿಯತೊಡಗಿದುವು. ಇವನ್ನೆಲ್ಲ ಕಾಣುತ್ತಿದ್ದ ಸ್ಥಳೀಯ ಜನಗಳಿಗೆ "ಏನಪ್ಪ ಇದು? ಮಿಲಿಟರಿಯವರಂತು ಪರವೂರವರು. ಇಲ್ಲಿ ಕೆಲಸ ಮಾಡುವವರೂ, ಮಾಡಿಸುವವರೂ ಎಲ್ಲರೂ ಪರವೂರಿನಿಂದಲೇ ಬರಬೇಕೇ? ಅವರು ಕನ್ನಡ ಮಾತನಾಡುವುದನ್ನು ಕಾಣೆವು" ಎಂದು ವಿಸ್ಮಯವಾಯಿತು. ಆದರೆ ಅಂಥ ಪರಿಸ್ಥಿತಿಯು ಬಹು ದಿನ ಉಳಿಯಲಿಲ್ಲ. ಅದಕ್ಕೆ ಮತ್ತಿಗುಂಡಿಯ ಹವೆಯೇ ಕಾರಣ. ಹೊರಗಿಂದ ಬಂದ ಕೆಲಸಗಾರರು ಜ್ವರದ ಬಾಧೆಯಿಂದ ಒಬ್ಬೊಬ್ಬರಾಗಿ ಮಲಗತೊಡಗಿದರು. ಹಲವರು ಓಡಿಯೂ ಹೋದರು. ಕೆಲಸದ ಕಂಟ್ರ್ಯಾಕ್ಟನ್ನು ವಹಿಸಿಕೊಂಡು ಬಂದ ಹರಪಾಲಸಿಂಗರು, ಹರ್ಬನ್‌ಸಿಂಗರು, ಕರ್ತರ್‌ಸಿಂಗರು, ಗಡ್ಡನೀವುತ್ತ ಕಣ್ಣು ತೀಡಿಕೊಳ್ಳಬೇಕಾಯಿತು. ಅವರಲ್ಲಿ ಚಿಂತೆ ಮೂಡಿತು. ಮೇಲುತನಿಖಿಗೆ ಕೆಲವರು ತಮ್ಮವರಿದ್ದರೆ ಸಾಕೆಂದೂ, ಉಳಿದೆಲ್ಲ ಕೆಲಸಗಳಿಗೆ ಆ ಜಿಲ್ಲೆಯಿಂದಲೇ

ಜನಗಳನ್ನೊದಗಿಸುವುದು ಅವಶ್ಯವೆಂದೂ ಯೋಚಿಸಿದರು. ತಾವು ವಹಿಸಿಕೊಂಡ ಗುತ್ತಿಗೆಯನ್ನು ಒಳಗುತ್ತಿಗೆಯಾಗಿ ಒಡೆದು, ಊರಿನ ಜನಕ್ಕೆ ಹಂಚಿಕೊಡಬೇಕಾಯಿತು. ಅಂದರೆ ತಮ್ಮ ಲಾಭದಲ್ಲೊಂದು ಅಂಶವನ್ನು ಒಳಗುತ್ತಿಗೆಯವರಿಗೆ ಕೊಡದೆ ನಿರ್ವಾಹವಿಲ್ಲ — ಎಂದೆನಿಸಿತು. ಅಂಥವರನ್ನು ಅರಸುತ್ತ ಕುಮಟೆ, ಕಾಳೂರು ಮೊದಲಾದ ಊರುಗಳಿಗೆ ಅಲೆದಾಡಬೇಕಾಯಿತು. ಆ ಕೆಲಸ ಮೊದಲು ಮೊದಲು ಸುಲಭವಾಗಲಿಲ್ಲ. ಯುದ್ಧದ ಮೊದಲ ದಿನಗಳಲ್ಲಿ "ಬಂದದ್ದನ್ನೆಲ್ಲ ಊರಲ್ಲಿದ್ದೇ ಅನುಭವಿಸುವ" ಎಂದು ಯೋಚಿಸಿದ ಸಾಮಾನ್ಯ ಜನರಿಗೆ, ಬೇಸಾಯಗಾರರಿಗೆ, ಪೇಟೆಯವರಿಗೆ ಮತ್ತಿ ಗುಂಡಿಯ ಕಂಟ್ರಾಕ್ಟು ಬೇಕಿರಲಿಲ್ಲ. ಯುದ್ಧದ ಕಾವು ಏರುತ್ತ ಹೋದಾಗ, ಕದ್ದು ಮಾರುವ ಅನೇಕ ದಾರಿಗಳಿರುವಲ್ಲಿ, ಮತ್ತಿ ಗುಂಡಿಗೆ ಹೋಗಿ, ಆಳುಗಳನ್ನು ಕಟ್ಟಿಕೊಂಡು ತಾವೂ, ಅವರೂ ಜ್ವರಕ್ಕೆ ತುತ್ತಾಗಬೇಕೇಕೆ?' ಎಂದು ತೋರಿತು.

ಈ ವೇಳೆಯಲ್ಲಿ ಕಾರ್ವಿ ವೆಂಕಟುವಿಗೆ ಮಾತ್ರ ಒಂದು ಹುಮ್ಮಸ ಹುಟ್ಟಿತು. ತಮ್ಮ ಧನಿಗಳ ಮಗಂದಿರು ಕುಂಬಾರಗುಂಡಿಯಲ್ಲಿ ಡಿಲ್ಲಿ ಪಟ್ಟಣ ಎಬ್ಬಿಸಿದ್ದಾರೆಂದು ಕೇಳಿದ್ದ; ಹೋಗಿ ಕಂಡಿದ್ದ. ಹಾಗಿದ್ದರೆ 'ಅಂಥ ಕೆಲಸ ನಮ್ಮ ಕರೀಮ್ ಸಾಹೇಬರಿಗೆ ಏಕೆ ಸಾಧ್ಯವಿಲ್ಲ' ಎಂದು ತೋರಿತು. ಸ್ವಾಮಿಭಕ್ತನಾದ ಅವನು ಕರೀಮ್ ಸಾಹೇಬರನ್ನು ಬಹುವಾಗಿ ಪ್ರೋತ್ಸಾಹಿಸಿದ. "ಅಂಗಡಿ ವ್ಯಾಪಾರ ಇದ್ದೇ ಇರುತ್ತದೆ; ಅದನ್ನು ನಿಮ್ಮ ಮಕ್ಕಳು ನೋಡಿಕೊಳ್ಳಲಾರರೇ! ಯಾವ್ಯಾವ ಊರಿನವರು ನಮ್ಮ ಊರಿಗೆ ಬಂದು ಹಣ ಸುಲಿಗೆಮಾಡುವಾಗ ನಾವು ಊರಲ್ಲಿದ್ದು ಅಂಥ ಸಂದರ್ಭ ಕಳೆದುಕೊಳ್ಳುವುದರಲ್ಲೇನು ಅರ್ಥ?" ಎಂದು ವಾದಿಸಿದ. ಅವನ ವಾದ ಗೆದ್ದಿತು. ಅದರಿಂದಾಗಿ ಕರೀಮು, ಕಾಸಿಮು ಸಾಹೇಬರು, ವೆಂಕಟು, ಅವನ ಹಿರಿಯ ಹುಡುಗ ಗಂಪು ಸೇರಿದರು; ಒಂದು ಲಟಕು ಮೋಟರನ್ನೇರಿ ಮತ್ತಿಗುಂಡಿಗೆ ದರ್ಶನ ಕೊಟ್ಟರು. ಅಲ್ಲಿನ ಗುತ್ತೇದಾರರು ವಾಯಿದೆಗೆ ಸಮನಾಗಿ ಶಿಬಿರ ನಿರ್ಮಾಣಮಾಡುವ ಭರವಸೆ ಕೆಟ್ಟು ಕುಳಿತಿದ್ದ ಕಾಲದಲ್ಲೇ ಇವರು ಹೋದುದು. ಈ ಮೊದಲು ಸುರಿದ ಹಣವೆಲ್ಲ ನಷ್ಟವಾಯಿತಲ್ಲ--ಎಂಬ ಚಿಂತೆ ಗುತ್ತಿಗೆಯವರಿಗಾಗಿತ್ತು.

ಕರೀಮ್ ಸಾಹೇಬರು ಆ ದಿನ ಹೋದ ಠೀವಿಯೇ ಠೀವಿ! ಪಕ್ಕಾ

ಜರತಾರಿ ಟೋಪಿ, ವೆಲ್‌ವೆಟಿನ ಕವಚ, ಮಸಲೀನ್ ಷರಾಯಿ, ರೇಶಿಮೆ ಲುಂಗಿ, ಪಂಜಾಬಿ ಮಾದರಿಯ ಜೂತ ಹಾಕಿ ಹೊರಟಿದ್ದರು. ಅವರ ಪುಷ್ಟವಾದ ಶರೀರ, ಕೆಂಪಾದ ಮುಖ, ದಪ್ಪ ಮೀಸೆಗಳು ಅವರಿಗೆ ಸುಲ್ತಾನರ ರೂಪು ಕೊಟ್ಟಿದ್ದುವು. ಮೀಸೆಯನ್ನು ತಿಕ್ಕಿ, ತೀಡಿ ಅವುಗಳ ತುದಿಯನ್ನು ಹುರಿಕಾಯಿಸಿ ಆಚೀಚೆ ಬಿಟ್ಟರೆ ಆ ಮುಖವನ್ನು ಕಂಡು ಹುಲಿಯೇ ಹೆದರಬೇಕು. ಮತ್ತಿ ಗುಂಡಿಯಲ್ಲಿ ಅವರು ಹೋಗಿ ಇಳಿಯುತ್ತಲೇ ಆ ವಿಗ್ರಹ ನೋಡುವುದಕ್ಕೇನೆ ನಾಲ್ಕುಮಂದಿ ಆಳುಗಳು ಬಂದರು. ಮುಖ್ಯ ಕಂಟ್ರಾಕ್ಟರ್ ಹರಪಾಲ ಸಿಂಗರಿಗೆ ಜನ ಹೋಯಿತು. ಅವರೇ ಖುದ್ದಾಗಿ ಬಂದು ಸಾಹೇಬರನ್ನು ಸ್ವಾಗತಿಸಿದರು.ಆಸಕ್ತಿಯಿದ್ದೂ ಇಲ್ಲದಂತೆ ನಟಿಸುತ್ತ, ಸಾಹೇಬರು ಅಲ್ಲಿನ ಕತೆಯನ್ನು ಕೇಳಿದರು. ಹರಪಾಲ ಸಿಂಗರು ತಮ್ಮ ತಲೆಬೇನೆಯನ್ನು ಬಿತ್ತರಿಸಿದರು. ತತ್ಕಾಲ ನಿರ್ಮಾಣವಾಗಬೇಕಾಗಿದ್ದ ಇನ್ನೂರು ಮನೆಗಳಲ್ಲಿ ಐವತ್ತು ಮಾತ್ರ ಅರ್ಧ ರಚನೆಗೊಂಡಿದ್ದಾವೆ. ಅಲ್ಲಿಂದ ಬಡಗಿಗಳಿಗೆ, ಕಮ್ಮಾರರಿಗೆ, ಆಳುಗಳಿಗೆ ಎಲ್ಲಕ್ಕೂ ಬರಗಾಲ ಬರತೊಡಗಿತು. ಎಲ್ಲವನ್ನು ಇನ್ನೆರಡು ತಿಂಗಳಲ್ಲಿ ಮಿಲಿಟರಿಯವರಿಗೊಪ್ಪಿಸಬೇಕಾಗಿತ್ತು. ಸಿಂಗರು "ನಿಮ್ಮ ತಾಬೆಯಲ್ಲಿ ಯಾರಿದ್ದಾರೆ? ಒಳ ಗುತ್ತಿಗೆಗಾದರೂ ಸರಿಯೆ, ಆಳುಗಳನ್ನು ಒದಗಿಸುವುದಾದರೂ ಸರಿಯೆ. ತಂದುಕೊಡುವ ಒಬ್ಬ ಆಳಿಗೆ ತಿಂಗಳಿಗೆ ಐದು ರೂಪಾಯಿಗಳ ಕಮಿಶನ್ ಕೊಡಬಹುದು. ಕೆಲಸಕ್ಕೆ ಆಣಿ, ಹಂಚು, ಸಿಮೆಂಟು ಒದಗಿಸಿಕೊಡುತ್ತೇವೆ. ಗುಡಿಸಲುಗಳ ಕೆಲಸ ವಹಿಸಿಕೊಂಡರೂ ಸರಿಯೆ. ಇದಾದ ನಂತರವೂ ಬೇರೆ ನೂರಾರು ಕೆಲಸಗಳಿವೆ" ಎಂಬ ಆಸೆಯನ್ನು ಹುಟ್ಟಿಸಿದರು.

ಔದಾಸೀನ್ಯದಿಂದ ತೊಡಗಿದ ಈ ಸಂಭಾಷಣೆಯು ಆಸಕ್ತಿಪೂರ್ಣವಾಗಿ ನಡೆಯತೊಡಗಿತು. ಹಣಕಾಸಿನ ಚರ್ಚೆಯಾಯಿತು. ಆಳುಗಳ ಲೆಕ್ಕವಾಯಿತು. ಬಡಗಿ, ಕಮ್ಮಾರರು, ಓಡಾರಿಗಳ ಲೆಕ್ಕವಾಯಿತು. ಸಾಮಾನ್ಯ ಕೂಲಿ ಜನಗಳ ಸಂಖ್ಯೆ ಐನೂರು ಮಂದಿ ಬೇಕೆಂದಾಯಿತು.ಬರಿಯ ಇಷ್ಟನ್ನು ಒದಗಿಸಿದರೂ ಕುಳಿತಲ್ಲಿ ತಿಂಗಳಿಗೆ ಎರಡೂವರೆ ಸಾವಿರ ರೂಪಾಯಿಗಳ ಆದಾಯ ದೊರೆಯುತ್ತದೆ–ಎಂದು ಸಾಹೇಬರು ಯೋಚಿಸಿದರು. ಅದಕ್ಕಿಂತ ಗುಡಿಸಲಿನ ನಿರ್ಮಾಣವನ್ನೇ ವಹಿಸಿಕೊಂಡಲ್ಲಿ ಇನ್ನೂ ಹೆಚ್ಚಿನ ಲಾಭವಿದೆ ಎಂದು ತೋರಿತು.

ಒಂದು ವಾರದೊಳಗಾಗಿ ಕರೀಮ್ ಸಾಹೇಬರ ದಂಡು ಮತ್ತಿಗುಂಡಿಯನ್ನು ಸೇರುವಂತಾಯಿತು. ಅವರ ಭೂಮಿಯಿಂದ ಆಳುಗಳು ಬಂದರು. ವೆಂಕಟು "ಈ ವರ್ಷ ಮಾರಿ ಬಲೆ ಬಿಟ್ಟರೂ ಚಿಂತೆಯಿಲ್ಲ. ನಮ್ಮ ಹುಡುಗರಿಗೊಂದು ಒಳ್ಳೆಯ ಕೆಲಸವಾಯಿತು. ಕೈ ತುಂಬ ದುಡ್ಡು ಸಿಗುವುದಕ್ಕೆ ಒಂದು ದಾರಿಯಾಯಿತು" ಎಂದು ಅವರನ್ನೆಲ್ಲ ಮತ್ತಿ ಗುಂಡಿಗೆ ಹೊರಡಿಸಿದ. ಬರಿಯ ಚಿಮಣಿ ತಗಡನ್ನು ಬೆಸೆಯುವವರು ಕಮ್ಮಾರರಾದರು; ಖಾಲಿ ಪೆಟ್ಟಿಗೆ ಜೋಡಿಸುವವರು ಬಡಗಿಗಳಾದರು. ಅವರ ದಂಡನ್ನು ಕಟ್ಟಿಕೊಂಡು ವೆಂಕಟುವೇ ಮತ್ತಿ ಗುಂಡಿಯಲ್ಲಿ ಬಿಡಾರಹೂಡಿದ. 'ಉಳಿದವರಿಗೆ ಅಂಟಿದ ಜ್ವರ ತಮಗೂ ಅಂಟಬಾರದೆಂದಿಲ್ಲ. ಕಾಳೂರಿಂದ ಹರದಾರಿ ದೂರದಲ್ಲಿ ಇದ್ದವರಿಗೂ ಅದು ಬರುತ್ತದೆ' ಎಂದು ಬೆದರದೆ ಹಣದ ಗಿರ ಹಿಡಿದವರಂತೆ ಮತ್ತಿಗುಂಡಿಯ ಶಿಬಿರವನ್ನು ವಾಯಿದೆಯೊಳಗೆ ಮುಗಿಸಿಕೊಟ್ಟರು. ಅಲ್ಲಿ ಕೆಲಸ ಮುಗಿಯಬೇಕಾದುದು ಮುಖ್ಯವೇ ಹೊರತು ಕೆಲಸದ ನಾಜೂಕಲ್ಲ. ಆಣಿ, ಗರಗಸಗಳಿಂದ ಮುಕ್ಕಾಲು ಮೂರು ವೀಸ ಮರಗೆಲಸವಾಗುತ್ತದೆ. ಸುಣ್ಣ, ದಾಮರುಗಳಿಂದ ಇಟ್ಟಿಗೆ ಗೋಡೆಯ ಕೊರತೆಗಳೆಲ್ಲ ಮುಚ್ಚುತ್ತವೆ. ಊರಲ್ಲಿದ್ದು, ಕೆಲಸಮಾಡಿ 'ಅದು ಸಮನಾಗಿಲ್ಲ, ಇದು ಸಮನಾಗಿಲ್ಲ' ಎಂದು ಬೈಯಿಸಿಕೊಂಡು ಸಂಬಳ ಕೊಳ್ಳುವುದಕ್ಕಿಂತ, ಇದೇ ಲೇಸಲ್ಲವೆ? ಮಾಡಿದ್ದೇ ಕೆಲಸ; ಬೇಡಿದ್ದೇ ಸಂಬಳ. ಕೆಲಸಗಾರರು ತಂತಮ್ಮೊಳಗೆ ನಗುವುದೂ ಉಂಟು: "ಇದು ಎಂತಹ ಯುದ್ಧ ಮಹಾರಾಯ? ಐನೂರು ರೂಪಾಯಿ ಬೇಡದ ಗುಡಿಸಲಿಗೆ ಎರಡು ಸಾವಿರವೇ? ಅದನ್ನು ಕಾಲಿಂದ ಗಟ್ಟಿಯಾಗಿ ಒದ್ದರೆ ನಿಲ್ಲಲಾರದು" ಎಂದು. ಆದರೂ ಎರಡು ತಿಂಗಳ ಕಾಲ ದುಡಿದರು. ಊರಲ್ಲಿ ಬಲೆಯನ್ನು ಬೀಸಿದವರಿಲ್ಲ; ಬೇಸಾಯವನ್ನು ನೋಡಿದವರಿಲ್ಲ; ಮನೆಗೆಲಸದ ಚಿಂತೆಯನ್ನು ಮಾಡಿದವರಿಲ್ಲ. ಅಂತಹ ಕೆಲಸಗಾರರ ದಂಡು ಸೇರಿ ಕೆಲಸವನ್ನು ಮುಗಿಸಿಕೊಟ್ಟಾಗ, ತಮ್ಮ ಮರ್ಯಾದೆ ಉಳಿಯಿತೆಂದು ಆ ಸಿಂಗ ತ್ರಯರಿಗೆ ನಿಜಕ್ಕೂ ಸಂತೋಷವಾಯಿತು. ಕರೀಮ್ ಸಾಹೇಬರು ಬಡಾ ಸಾಹೇಬರೆನಿಸಿಕೊಂಡರು.

ಗುಡಿಸಲುಗಳ ನಿರ್ಮಾಣ ಮುಗಿಯುತ್ತಲೇ, ಆ ವಠಾರದ ಸುತ್ತಲು ದೊಡ್ಡದೊಂದು ಮುಳ್ಳುಬೇಲಿಯ ಪ್ರಾಕಾರವನ್ನು ನಿರ್ಮಿಸುವ ಕೆಲಸ ತೊಡಗಿತು. ಅಲ್ಲಿ ಬಂದು ಬಿದ್ದ ಮುಳ್ಳುಸರಿಗೆಗಳ ರಾಶಿಗೆ ಲೆಕ್ಕವಿಲ್ಲ. ಆ

ಕೆಲಸ ನೋಡಿ ಖುಶಿಗೊಂಡ ವೆಂಕಟು, ತನ್ನ ಊರಿಗೆ ಬಂದು ತನ್ನ ಹಿತ್ತಿಲಿಗೂ ಅಂಥ ಬೇಲಿಹಾಕಿಸಿದ. ಮೀನು ಒಣಗಿಸುವ ಕಳಕ್ಕೂ ಒಂದು ಬೇಲಿ ಹಾಕಿಸಿದ–ನಾಯಿಗಳ ಕಾಟ ತಪ್ಪಿಸುವುದಕ್ಕೆ. ಯುದ್ಧದ ಬೇಲಿ ಅಲ್ಲಿಗೂ ಬಂದಂತಾಯಿತು. ಈ ಅವಧಿಯಲ್ಲಿ ವೆಂಕಟುವಿನ ವೇಷ ಬದಲಾಗದಿದ್ದರೂ ಅವನ ಮಗ ಗಂಪು ಎರಡೇ ಎರಡು ತಿಂಗಳಲ್ಲಿ ಬೂಟ್ಸು ಹಾಕುವುದಕ್ಕೆ ಕಲಿತಾಯಿತು. ಹರ್ಬನ್ ಸಿಂಗನ ಹಾಗೆ ಖಾಕಿ ಅಂಗಿ, ಚಲ್ಲಣಗಳನ್ನು ತೊಟ್ಟಾಯಿತು. ಅವರಂತೆ ತಲೆಗೆ ಪೇಟಾಸುತ್ತುವುದಕ್ಕೆ ತೊಡಗಿಯೂ ಆಯಿತು. ಅದರಿಂದ ಕಾರ್ವಿ ಗಂಪು 'ಗಂಪುಸಿಂಗ್' ಎನಿಸಿಕೊಂಡ. ಇನ್ನೆರಡು ತಿಂಗಳಲ್ಲಿ ಫೇಶನ್ ಬದಲಿಸಿದ. ಕುಮಟೆಯಿಂದಲೋ, ಹುಬ್ಬಳ್ಳಿಯಿಂದಲೋ ಎತ್ತರವಾದ ಉಣ್ಣೆಯ ಟೋಪಿಯೊಂದನ್ನು ತರಿಸಿ, ಬೇಸರ ಬಂದಾಗ ರುಮಾಲಿನ ಬದಲಾಗಿ ಅದನ್ನು ತೊಡ ತೊಡಗಿದ. ಕೂಲಿಗಳನ್ನು ಸಂಗ್ರಹಿಸುವ ಕೆಲಸ ವೆಂಕಟುವಿಗೆ; ಅವರ ಮೇಲು ತನಿಖಿಯು ಗಂಪುವಿಗೆ. ಒಟ್ಟು ಹಣಕಾಸಿನ ಹೊಣೆಗಳು ಕರೀಮ್ ಸಾಹೇಬರಿಗೆ.

ಕೆಲಸ ಮುಗಿಯುತ್ತ ಬಂದಂತೆ, ಮನೆಗಳ ಸಂಖ್ಯೆಯನ್ನು ಸಾವಿರಕ್ಕಾದರೂ ಏರಿಸಲಿ–ಎಂದು ಪ್ರಾರ್ಥಿಸತೊಡಗಿದರು. ಇದು ಕೆಲಸಗಾರರ ಪ್ರಾರ್ಥನೆ. ಅಷ್ಟಕ್ಕೆ–ಅಲ್ಲಿಗೆ ಇಟೆಲಿಯ ಕೈದಿಗಳನ್ನು ತರುವುದಿಲ್ಲ–ಎಂಬ ವಾರ್ತೆಯೂ ಹುಟ್ಟಿತು. ಆ ಶಿಬಿರದ ವಿಚಾರದಲ್ಲಿ ಹರಸಾಲ ಸಿಂಗರಿಗೆ, ಅವರ ಗೆಳೆಯರಿಗೆ ಇದ್ದ ಉತ್ಸಾಹ ಕಳೆಯಿತು. ಮೆಲೇರಿಯ ಬೇನೆಗೆ ತಾವು ತಕ್ಕ ಆಳಲ್ಲ; ಇಲ್ಲಿಗಿಂತ ಅನುಕೂಲವಾದ ಹವೆಯುಳ್ಳ ಇನ್ನೊಂದು ಪ್ರದೇಶಕ್ಕೆ ಹೋಗಬಹುದು. ಹರಿಹರ, ಬೆಂಗಳೂರು, ಪುನೆ–ಎಲ್ಲೆಲ್ಲಿಯೂ ಮಿಲಿಟರಿ ಶಿಬಿರಗಳಾಗುತ್ತಿದ್ದಾವೆ–ಎಂದು ಕೈಗೆ ಹಣ ಸಿಗಲಿ, ಸಿಗದಿರಲಿ ಅವರು ಕರಾರು ಮುಗಿಸಿ ಹೊರಡುವ ಯೋಚನೆಮಾಡಿದರು.

"ಯುದ್ಧದಲ್ಲಿ ಹಣವಿದೆ" ಎಂಬ ತತ್ವವನ್ನು ತಿಳಿಯುವುದಕ್ಕೆ ಕಾಳೂರಿನ ಜನಕ್ಕೆ ಬಹು ಸಮಯ ಹೋಗಲಿಲ್ಲ. ಮೊದಮೊದಲು ಈ ತಿಳುವಳಿಕೆ ರಕ್ತಕ್ಕೆ ನಾಟುವುದು ತುಸು ಮೆಲ್ಲಗಾದರೂ, ಮತ್ತಿಗುಂಡಿ, ಕುಂಬಾರ ಗುಂಡಿಗಳ ಗಾಳಿಯು ಬೀಸತೊಡಗಿದ ಬಳಿಕ ಅದರ ವೇಗ ಹೆಚ್ಚಿತು. ಕಾಳೂರಿನಂತಹ ಊರಿಗೂ ಆಫೀಸರರುಗಳು ಬಂದು ಯುದ್ಧ ಪ್ರಯತ್ನದ ಪ್ರೇರಣೆ ಕೊಡುತ್ತಿದ್ದಾರೆ. ಅಂಥ ಪ್ರಯತ್ನಗಳಲ್ಲಿ ಮರದ 'ಕಾವು'ಗಳ ಉತ್ಪನ್ನ ಒಂದಾಗಿತ್ತು.

ಕೊಡಲಿ ಕಾವು, ಹಾರೆ ಕಾವು, ಪಿಕ್ಕಾಸಿನ ಕಾವು- ಇಂಥ ತರಹವಾರಿ ಮರದ ಹಿಡಿಗಳ ನಿರ್ಮಾಣವನ್ನು ರಾಶಿಗಟ್ಟಲೆಯಿಂದ ಮಾಡಬೇಕಾಗಿ ಬಂದಿದೆ. ಯಾಕೂ ಬೇಡದ ಒಂದು ಮರದ ಕಾವಿಗೆ ಒಂದು ರೂಪಾಯಿಗಿಂತ ಹೆಚ್ಚು ಬೆಲೆ ಕೊಡುವಾಗ, 'ಹಿಡಿಯೊಂದರ ಎಂಟಾಣೆ ಲಾಭ' ಎಂದು ಅನೇಕರು ಗುಣಿಸತೊಡಗಿದರು. ಲಾಭವೇನೋ ಸರಿಯೆ. ಬೇಕಾಗುವ ಹಿಡಿಗಳ ಸಂಖ್ಯೆ ಮಾತ್ರ-ದಶ ಸಾವಿರ, ಶತಸಾವಿರಗಳಲ್ಲಿ. ಹೀಗಾಗಿ ಅನೇಕರು ಬರಿದೆ ಬಾಯಿ ಚಪ್ಪರಿಸಿಕೊಂಡರು. ಪತ್ರಿಕೆಗಳಲ್ಲಿ ಅಂತಹ ಜಾಹೀರಾತನ್ನು ಓದಿದ ನಮ್ಮ ಕರೀಮ್ ಸಾಹೇಬರು, ಅದನ್ನು ನೋಡಿದ ಮರುದಿನವೇ ನಿರ್ಧಾರಕ್ಕೆ ಬಂದರು—ಟೆಂಡರ್ ಕೊಟ್ಟರು. ಅವಸರ ಅವಸರದಿಂದ ರತ್ನಾಗಿರಿಗೆ ಹೋಗಿ, ಅಲ್ಲಿ ಕೆಲಸ ನಿಂತು ಮಲಗಿದ್ದೊಂದು ಮರದ ಗಿರಣಿಯನ್ನು ಕೊಂಡು ಸಾಗಿಸಿ ತಂದರು. ಅದನ್ನು ಮಚ್ವೆಯಿಂದಿಳಿಸಿದ ತಿಂಗಳಲ್ಲೇ, ಕಾಳೂರಿ ನಲ್ಲಿ ಕರೀಮ್ ಸಾಹೇಬರ ಮರದ ಗಿರಣಿಯೂ ಸ್ಥಾಪನೆಯಾಯಿತು. ಮತ್ತಿ ಗುಂಡಿಯ ಸಲುವಾಗಿ ಅವರು ಸೇರಿಸಿಕೊಂಡಿದ್ದ ಅರ್ಧ ಪಾಲು ಬಡಗಿಯರ ಜತೆಗೆ, ಜಾತಿ ಬಡಗಿಯರನ್ನು ಸೇರಿಸಿಕೊಂಡರು. ಹೊಸ ಕೆಲಸದ ಗುತ್ತಿಗೆ ಯನ್ನು ಪಡೆದು ಬಂದರು. ಒಂದೇ ಸವನೆ ನಿರ್ಮಾಣವನ್ನು ತೊಡಗಿಯೇ ಬಿಟ್ಟರು. 'ಕಂಟ್ರಾಕ್ಟೇನೋ ಯಾರಿಗೂ ಸಿಗುತ್ತದೆ. ಆದರೆ ಮಾದರಿ ತಯಾ ರಿಸಬೇಕು. ಆಫೀಸರುಗಳು ಬಂದು ಒಪ್ಪಬೇಕು; ಉತ್ಪನ್ನ ತೊಡಗಬೇಕು. ಮಾದರಿಗೆ ಸಮನಾಗಿಲ್ಲದವನ್ನು ಕಿತ್ತೆಸೆಯಬಹುದು' ಎಂಬ ವ್ಯವಹಾರದ ಕಟ್ಟುನಿಟ್ಟುಗಳನ್ನು ಕಂಡು, ಅನೇಕರು ಆ ಕೆಲಸಕ್ಕೆ ಹಿಂಜರಿದರು. ಆದರೆ ಕರೀಮ್ ಸಾಹೇಬರು-ಚಪ್ಪರ ಹಾಕಿಸಿ, ಎಂಜಿನ್ ನಟ್ಟು, ಗರಗಸ ಹೂಡಿ, ಮರಗಳನ್ನು ಬೇಕಾದ ಅಳತೆಗೆ ಕರಕರ ಸಿಗಿಯತೊಡಗಿದಾಗ "ಕಾವು ಹಿಡಿ ಗಳ ಕೆಲಸ ಇಷ್ಟು ಸುಲಭವೆ? ಅಳತೆಯಲ್ಲಿ ಮರ ಸಿಗಿದು ಕೊಟ್ಟರೆ ಬಡಗಿ ಯರು ಬಾಚಿಯಿಂದ ಕೆತ್ತಿ, ಉರುಟುಮಾಡಿ ಎಸೆಯುತ್ತಾರೆ. ಎರಡು ದಿನ ಕೈ ಪಳಗಿದರೆ ಆ ಮೇಲೆ ಕಾವನ್ನು ಮಾಡುವ ಕೆಲಸ ಹಪ್ಪಳ ಹಣಿದಷ್ಟು ಸುಲಭ" ಎಂದು ಜನ ಆಡಿಕೊಳ್ಳತೊಡಗಿದರು. ಸಾಹೇಬರು ಮಜೂರಿಯ ಗೊಡವೆಗೆ ಹೋಗಲಿಲ್ಲ. ತಾನು ತಿನ್ನುವಾಗ ಕೆಲಸಗಾರರೂ ತಿನ್ನಲಿ-ಎಂದು ಅರ್ಧ ಲಾಭ ಉಳಿಸಿಕೊಂಡು ಒಳ ಗುತ್ತಿಗೆಗೆ ಕೊಟ್ಟರು. ಕೆಲಸಗಾರರು ಕಾಲವನ್ನು ಮರೆತು, ದುಡಿದು, ದಿನಕ್ಕೆ ಆರೇಳು ರೂಪಾಯಿಗಳ ಗಳಿಮೆ

ಮಾಡುವುದನ್ನು ಕಂಡೊಡನೆಯೆ ಸಾಹೇಬರಿಗೆ "ದಿನಕೂಲಿಯೇ ಇದಕ್ಕಿಂತ ವಾಸಿ" ಎಂದು ತೋರಿತು. ಅದಕ್ಕೊಂದು ಉಪಾಯ ತೆಗೆದರು. ತಮ್ಮ ಜನಗಳ ಮುಂದೆ ಹೋಗಿ "ಧಾರವಾಡದಲ್ಲಿ ಯಾರೋ ದರಿದ್ರದವರು ಕಾವು ಒಂದರ ಹದಿನೆರಡು ಆಣೆಗೆ ವಹಿಸಿಕೊಂಡಿದ್ದಾರಂತೆ. ನಮ್ಮ ದರ ಹೆಚ್ಚಾಯಿತೆಂದು ಹೆದರಿಸಿದ್ದಾರೆ. ನಿಮಗೇನೆ ನಾನು ಹತ್ತಾಣೆಯನ್ನು ಕೊಟ್ಟರೆ ಹೇಗೆ ನಡೆದೀತು? ಮರದ ಖರ್ಚಿದೆ. ಆ ಮೇಲೆ ಮಾಡಿದ್ದರಲ್ಲಿ ಎಷ್ಟು ರಿಜೆಕ್ಟ್ ಮಾಡುತ್ತಾರೋ ದೇವರಿಗೇ ಗೊತ್ತು". ಎಂದು ತಮ್ಮ ದುಃಖ ಹೇಳಿಕೊಂಡು ಮೆಲ್ಲಗೆ ಗುತ್ತಿಗೆಯ ದರವನ್ನು ಇಳಿಸಿದರು. ಕಾವುಗಳನ್ನು ಪರಿಶೀಲಿಸಲು ಬರುವ ದೇವತೆಗಳಿಗೂ ಲಂಚ ಕೊಡಬೇಕಾಯಿತು. ಇಲ್ಲದಿದ್ದರೆ ರಿಜೆಕ್ಟ್ ಆಗುವ ಸಂಭವ ಹೆಚ್ಚು. ಎಷ್ಟಿದ್ದರೂ, ಯಾವ ದೇವತೆಗಳಿಗೆ ಪಾಲು ಸಲ್ಲಿಸಿದರೂ, ಮರದ ಕಾವು ಒಂದಕ್ಕೆ ನಾಲ್ಕಾಣೆ ಲಾಭ ದೊರೆಯಿತು.

ಮರದ ಗಿರಣಿಗೆ ಬೇಕಾದ ಮರಗಳನ್ನು ಒದಗಿಸುವುದಕ್ಕೆ ವೆಂಕಟು, ಗಂಪು ಮೊದಲಾದವರು ಓಡಾಡತೊಡಗಿದರು. ಎಲ್ಲೆಲ್ಲಿಂದಲೋ, ಹೇಗೆ ಹೇಗೆಯೋ ಮರ ಸಂಪಾದಿಸಿದರು. ಆದಮ್ ಸಾಹೇಬರು ಕುಂಬಾರ ಗುಂಡಿಯಲ್ಲಿ ಮರ ಕಡಿದು ಹಣ ಸಂಪಾದಿಸುತ್ತಾರೆ, ಎನ್ನುವುದಕ್ಕಿಂತ ಕಾಳೂರಿನಲ್ಲಿ ಕುಳಿತು ಕರೀಮ್ ಸಾಹೇಬರು ರೂಪಾಯಿಗೆ ಹತ್ತಾಣೆ ಮುನಾಫೆ ತೆಗೆಯುತ್ತಾರೆ ಎಂದರೆ— ಊರವರಿಗೆ ಅಸೂಯೆ ಹುಟ್ಟದಿದ್ದೀತೆ? ಸರಿ, ಪ್ರತಿಯೊಬ್ಬರ ಮನಸ್ಸೂ ಕಾಡಿನ ಕಡೆಗೆ ಹರಿಯಿತು–ಮರ ಕೊಳ್ಳುವುದು, ಕಳುಹಿಸುವುದು, ಕತ್ತಲಲ್ಲಿ ಸಾಗಿಸುವುದು, ಊರಿನಲ್ಲೇ ಸಿಗಿದು ರೂಪಾಂತರಗೊಳಿಸುವುದು–ಇವೇ ಮೊದಲಾದ ವನ ಯುದ್ಧ ಪ್ರಯತ್ನಗಳು ನಡೆದುವು. ಈ ಕೆಲಸಗಳಲ್ಲಿ ಗಂಪುವೂ ಸ್ವಂತ ಸಾಹಸಕ್ಕೆ ಕೈತೊಡಕಿದ.

ಊರಲ್ಲಿದ್ದವರು ಹೀಗೆ ಮಣಗಟ್ಟಲೆ ದುಡ್ಡು ಸಂಪಾದಿಸುತ್ತಾರಲ್ಲ ಎಂಬ ಭಾವನೆ ಚಲಪತಿಯ ತಲೆಗೂ ಹೋಯಿತು. 'ಛೀ, ಇಡೀ ದಿವಸ ಕೋರ್ಟಿನಲ್ಲಿ ಬೊಗಳಿ, ಮನೆಯಲ್ಲಿ ಕಕ್ಷಿಗಾರರಿಂದ ತಲೆನೋವು ಬರಿಸಿಕೊಂಡು ಒದ್ದಾಡುವುದಕ್ಕಿಂತ ಇದೇ ವಾಸಿ' ಎಂದುಕೊಂಡ. ಅವನ ತಮ್ಮ ವಿದ್ಯೆ ಮುಗಿಸಿ ಊರಿಗೆ ಬಂದವನಿಗೆ ಕುಮಟೆಯಲ್ಲಿ ಹೆರಿಗೆ ಆಸ್ಪತ್ರೆ, ವಾರ್ಡು, ಎಂದು ಬೋಧಿಸಿದಾತನು "ಔಷಧಕ್ಕೆ ಬರಗಾಲ ಬಂದಿರುವ ಈ ವೇಳೆಯಲ್ಲಿ ಅದೆಲ್ಲ ಏತಕ್ಕೆ?" ಎಂದು ಹೇಳಿದ. ಶ್ರೀಪತಿ ರಾಯರ ಮನೆ ಹಿಸೆ

ಯಾಗಿತ್ತು. ತಂದೆ ಮಕ್ಕಳು ಒಂದಾಗಿ, ತಮ್ಮ ಹಿಸೆ ಕೊಂಡು ಕುಳಿತಾಗಿತ್ತು. ತಂದೆಗೆ ವಕೀಲನಾದ ಮಗನ ಮೇಲೆ ತುಂಬ ಅಭಿಮಾನ. ಅವನ ಉಪದೇಶಕ್ಕೆ ಮರುಳಾದರು. ಉಳಿದ ಭೂಮಿಯನ್ನು ಅಡವಿನ ಸಾಲಕ್ಕೆ ಗುರಿಪಡಿಸಿ ಮಗರಾಯ ಕುಮಟೆಯಲ್ಲಿ ತೆರೆದ ಮರದ ಕಾರ್ಖಾನೆಗೆ ಹಣ ಸುರಿದರು. ಚಲಪತಿಯೂ ಕುಮಟೆಯಿಂದ ಪುನೆಯ ತನಕ ಓಡಾಡಿದ. ನಾಳಿನ ಭರವಸೆಯಿಂದ ಅವನೂ ಕಾವುಗಳ ಗುತ್ತಿಗೆಯನ್ನು ವಹಿಸಿಕೊಂಡು ಮರದ ಉದ್ಯಮಕ್ಕೆ ತೊಡಗಿದನು. ಕೆಲಸ ತೊಡಗಿತು. ಕಾಡುಗಳಲ್ಲಿ ಮರ ಕಡಿಸಿದರು. ಕೆಲಸದ ಆಳುಗಳ ಮೇಲೆ ಮುಂಗಡವಾಗಿ ಹಣ ಸುರಿದರು. ಅನೇಕರು ಅದನ್ನು ತಿಂದು ಹೋದರು. ಕಾವುಗಳೇನೊ ಧಾರಾಳವಾಗಿ ರಾಶಿಬಿದ್ದುವು. ಅಷ್ಟಕ್ಕೆ 'ಅವುಗಳು ಇನ್ನು ಬೇಕಿಲ್ಲ' ಎಂಬ ವಾರ್ತೆ ಬಂದಿತು. ಅಧಿಕಾರಿಗಳು ಹಾಗೆ ಹೇಳಿವರೆ, ತಮ್ಮ ಅಂದಾಜಿಲ್ಲದ ಗುತ್ತಿಗೆಯ ಬಗ್ಗೆ ತಾವೇ ತೊಡಕಿಗೀಡಾದೇವೆಂದು ತಿಳಿದು ತಲೆ ತುರಿಸಿಕೊಂಡರು. ಕಾವುಗಳ ಪರಿಶೀಲನೆಗೆ ಚಲಪತಿಯ ಕಾರ್ಖಾನೆಗೆ ಯಾರೂ ಬರಲೇ ಇಲ್ಲ. ಒತ್ತಾಯದಿಂದ ಅವನು ಕರೆದುಕೊಂಡು ಬಂದಾಗ–"ನಾವು ಹೇಳಿದ ಮರ ಇದಲ್ಲ. ಮಾದರಿಗೂ ಇದಕ್ಕೂ ಹೊಂದಿಕೆಯಿಲ್ಲ. ಇವನ್ನೆಲ್ಲ reject ಮಾಡುತ್ತೇವೆ" ಎಂದರು. ಚಲಪತಿಯು ದುಡ್ಡಿನ ಆಸೆಯಿಂದ-ಹತ್ತು ಸಾವಿರ ಕೇಳಿದಲ್ಲಿ ಐವತ್ತು ಸಾವಿರಗಳನ್ನು ಮಾಡಿದ್ದ. ಅದರಲ್ಲಿ ಅರ್ಧದಷ್ಟನ್ನು ಮಾರಿ ಹಣ ಗಳಿಸುವುದು ಕಷ್ಟವಾಯಿತು. ದುರ್ದೈವದಿಂದ ಅವನ ಈ ಪ್ರಥಮ ಪ್ರಯತ್ನವು ಮೂರನೆಯ ಮಹಾಯುದ್ಧವನ್ನು ಇದಿರುಕಾಯಬೇಕಾಯಿತು.

ಇಂಥ ವಿಚಾರದಲ್ಲಿ ಗೆದ್ದು ಬದುಕಿದವರು ಕರೀಮ್ ಸಾಹೇಬರು. ಯಾರ್‍ಯಾರ ಕೈಯನ್ನು ಬೆಚ್ಚಗೆ ಮಾಡಬೇಕೆಂದು ಕಲಿತುಕೊಂಡಿದ್ದರು. ಇನ್ನೆಲ್ಲಿಂದಲೋ ಕಡಿಮೆ ಬೆಲೆಯಲ್ಲಿ ತಯಾರಾದ ಕಾವುಗಳು ಬರುತ್ತಿವೆ ಎಂಬ ಸೂಚನೆ ಅವರಿಗೆ ತಿಳಿಯುತ್ತಲೆ ಆ ಉದ್ಯಮವನ್ನು ನಿಲ್ಲಿಸಿದರು. ತಮ್ಮಲ್ಲಿ ದಾಸ್ತಾನು ಬಿದ್ದ ನಾಟಗಳನ್ನು ಉಳಿಸಿದರು. ನೆಟ್ಟಗೆ,ಮರದ ವ್ಯಾಪಾರವನ್ನೇ ತೊಡಗಿದರು. ನಾಟ, ಮರ, ಮೋಪುಗಳ ವ್ಯಾಪಾರ ಬಹುವಾಗಿ ಬೆಳೆಯಿತು. ಬೆಂಕಿಪೆಟ್ಟಿಗೆ ಮಾಡುವವರಿಗೂ ಮರ ಬೇಕು; ಪ್ಲೈವುಡ್ಡಿನವರಿಗೂ ಮರ ಬೇಕು; ಪೆಟ್ಟಿಗೆಗಳಿಗೂ ಮರಬೇಕು- ಎಂಬುದನ್ನು ಅರಿತುಕೊಂಡು, ಗಿರಾಕಿಯ ಪ್ರಪಂಚವನ್ನು ಗೊತ್ತು ಹಚ್ಚಿಸಿದರು. ಜವುಳಿ ವ್ಯಾಪಾರ, ಸೀಗೆಕಾಯಿ

ಹುರಿಹಗ್ಗಗಳ ವ್ಯಾಪಾರಕ್ಕಿಂತ, ಹೆಚ್ಚಿನ ಗಮನವನ್ನು ಮರದ ವ್ಯಾಪಾರಕ್ಕೆ ಕೊಟ್ಟರು. ಹಳ್ಳಿಯ ಯಾವನಾದರೂ ಒಬ್ಬ ರೈತನಿಂದ ಅರ್ಧ ಎಕ್ರೆ, ಎಕ್ರೆ ಕಾಡುಗಳನ್ನು ಖರೀದಿ ಮಾಡಿದರು. ನೆಪಕ್ಕೆ ಅಷ್ಟಿದ್ದರೆ ಸಾಕು. ಅಷ್ಟರಿಂದ ಒಂದು ವರ್ಷದ ತನಕವೂ ಲಾರಿಗಳಲ್ಲಿ, ಗಾಡಿಗಳಲ್ಲಿ ಮರ ತುಂಬಿಸಿ, ಸಾಗಿ ಸುವ ಅನುಕೂಲತೆ ಬರುತ್ತದೆ. ಅದರಿಂದಲೇ ಅಷ್ಟೊಂದು ಮರಗಳು ಬರು ತ್ತವೆ ಎಂದಲ್ಲ; ಆ ಜಮೀನಿನ ಹತ್ತಿರದ ಕಾಡಿನ ಮರಗಳೆಲ್ಲವೂ ಕತ್ತಲಲ್ಲಿ ಅವರದೇ ಆಗುತ್ತವೆ. ಆಚೀಚಿನ ಗ್ರಾಮ ದೇವತೆಗಳಿಗೆ ಸಮನಾಗಿ ನಡೆದು ಕೊಂಡಲ್ಲಿ ಎಷ್ಟೊ ಮರಗಳನ್ನು ಕದ್ದು ಸಾಗಿಸಬಹುದು. ಅವರ ಪಾಲಿಗೆ ವನದೇವತೆಯೂ ಒಲಿದಳು.

ಹೀಗೆ ಸ್ವಂತ ವ್ಯವಹಾರ ಬೆಳೆಯಿಸಿದ ಒಂದು ವರ್ಷದಲ್ಲಿ ಮರದ ಗಿರಣಿ ಬೆಳೆಯಿತು. ಬಂದರಿನ ಬಳಿಯ ಖಾರಿಯಲ್ಲಿ ಲೆಕ್ಕವಿಲ್ಲದಷ್ಟು ಮರದ ದಿಂಡುಗಳು ಬಂದುವು; ಕೆಸರಿನಲ್ಲಿ ರಾಶಿಬಿದ್ದುವು.

ತಮ್ಮೂರಿನ ಕರೀಮ್ ಸಾಹೇಬರು, ಅವರ ತಮ್ಮ ಆದಮ್ ಸಾಹೇ ಬರು, ಭಟ್ಕಳದ ಮೀರ ಸಾಹೇಬರು ಗೆರಸೆಯಿಂದ ದುಡ್ಡುಗೋಚುತ್ತಿರು ವಾಗ ವಾಸಪ್ಪಯ್ಯನವರಾಗಲೀ, ಅವರ ಮಕ್ಕಳಾಗಲೀ ನಿದ್ದೆಮಾಡುತ್ತಿರು ತ್ತಾರೆಯೆ? ಅವರೂ ತಮ್ಮ ಅಂಗಡಿಯನ್ನು ಬೆಳೆಸಿದರು. ಚಿಮಣಿ ಎಣ್ಣೆ, ಸಕ್ಕರೆ, ಅರಿವೆ, ಕಬ್ಬಿಣ ಇವೆಲ್ಲಕ್ಕೂ ಹತೋಟಿ ಬಂದುದರಿಂದ ಒಳಿತೇ ಆಗಿತ್ತು. ಈ ಪ್ರತಿಯೊಂದಕ್ಕೂ ಕೈ ತುರುಕಿ, ಪರ್ಮಿಟ್ ಪಡೆದು, ಮಾರುವ ಉದ್ಯಮ ತೊಡಗಿದರು. ವ್ಯಾಪಾರದಲ್ಲೇ ಹುಟ್ಟಿ ಬೆಳೆದವರು. ಕುಟುಂಬದ ಹಿರಿಯ ಕಿರಿಯರೆಲ್ಲ ಒಂದೊಂದು ಬಗೆಯ ವ್ಯಾಪಾರಿ ಚಮತ್ಕಾರದಲ್ಲಿ ನುರಿತು ಪಾರಂಗತರಾಗಿಯೂ ಇದ್ದರು. ಅವರ ಅಂಗಡಿ ಒಂದಕ್ಕೆ ಮೂರಾ ಯಿತು. ಬಳಗದ ಆರೆಂಟು ಜನರಿಗೆ ಉದ್ಯೋಗವಾಯಿತು. ಒಳಗೆ ಕಾಣುವು ದಕ್ಕೆ ಸಾಮಾನು ಹೆಚ್ಚಿಗೆ ಇರುತ್ತಿರಲಿಲ್ಲ. ನೆಟ್ಟಗೆ ಬಂದು 'ಅರಿವೆಯಿದೆಯೇ, ಕಬ್ಬಿಣ ಇದೆಯೇ, ಸಿಮೆಂಟು ಇದೆಯೇ' ಎಂದು ಕೇಳಿದರೆ 'ಸ್ಟೋಕ್ ನಿಲ್' ಎಂಬ ಬೋರ್ಡನ್ನು ತೋರಿಸುತ್ತಾರೆ. ಆ ಮೇಲೆ "ಈ ಯುದ್ಧ ಬಂದು, ಈ ಕಂಟ್ರೋಲ್ ಬಂದು ನಮ್ಮಂತಹವರ ಬಾಯಿಗೆ ಮಣ್ಣಾಯಿತು" ಎಂದು ಅಳುತ್ತಾರೆ. ಬಂದ ಗಿರಾಕಿ ಅಂಗಲಾಚಿ, ಉದ್ದ ಮೋರೆಮಾಡಿ, ಹೇಳಿದಷ್ಟು ಬೆಲೆ ಕೊಡುವವನಾದರೆ, ಯಾರಿಗೂ ತಿಳಿಯದಂತೆ 'ಅಲ್ಲೆಲ್ಲೋ ಇದೆ,

ನಿಮ್ಮನ್ನು ಬಿಡಲಿಕ್ಕೆ ಆಗುತ್ತದೆಯೇ? ದರ ಮಾತ್ರ ಯದ್ವಾತದ್ವ ಎನ್ನುತ್ತಾರೆ. ನಾವು ಕಂಟ್ರೋಲ್ ಬೆಲೆಗೇನೆ ಮಾರಬೇಕು. ಕೊಡುವವರು ಯಾರೂ ಇಲ್ಲ. ನಾಲ್ಕುದಿನ ತಡೆದು ಬನ್ನಿ" ಎಂದು ಅನುಗ್ರಹ ತೋರಿಸಿ, ಲೆಕ್ಕಕ್ಕೆ ಬರೆಯದೆ ಮ್ಹಾಲು ಒದಗಿಸುತ್ತಾರೆ. ಹಾಗೆ ಬರೆಯುವ ಲೆಕ್ಕವೆಲ್ಲ, ಮ್ಹಾಲು ಬರುವ ಮೊದಲೇನೆ ಬರೆದು ಬಿಲ್ ಆಗಿ "ಸ್ಟೋಕ್ ನಿಲ್"ಆಗಿ ಹೋಗಿರುವಾಗ ಅವರಾದರೂ ಏನು ಮಾಡಬಲ್ಲರು? ಇಂಥ ಐಂದ್ರಜಾಲಿಕರು ಒಂದೆರಡು ವರ್ಷಗಳಲ್ಲಿ ಖಲೀಫರಾಗತೊಡಗಿದರು.

ಹೀಗೆಲ್ಲ ನಡೆಯುತ್ತಿರುವ ದಿನಗಳಲ್ಲಿ ಹರಪಾಲಸಿಂಗರು, ಹರ್ಬನ್ ಸಿಂಗರು,ಮತ್ತಿ ಗುಂಡಿಯನ್ನು ಬಿಟ್ಟು ಎಲ್ಲೆಲ್ಲಿಗೋ ಹೋದವರು ಇನ್ನೊಮ್ಮೆ ಕಾಳೂರಿಗೆ ಬಂದರು. ನೆಟ್ಟಗೆ ಕರೀಮ್ ಸಾಹೇಬರ ದರ್ಶನಕ್ಕೆ ಹೋದರು. ಅವರನ್ನು ಕಾಣುವುದಕ್ಕೆಂದು ಸಾಹೇಬರ ಮರದ ಗಿರಣಿಗೆ ಹೋದಾಗ ಪರಮಾನಂದವಾಯಿತು. ಅದಕ್ಕೆ ಕಾರಣವಿಷ್ಟೆ. ಬರಿಯ ಒಂದೆರಡು ವರ್ಷಗಳ ಮೊದಲು ಅವರು ಬಿಟ್ಟುಹೋದ ಮತ್ತಿ ಗುಂಡಿ ಇನ್ನೊಮ್ಮೆ ಸಜೀವವಾಗುವ ಕಾಲಬಂದಿದೆ. ಅಲ್ಲಿ ಮೊದಲಿಗಿಂತ ಇಮ್ಮಡಿ ಕೆಲಸವಾಗಬೇಕಾಗಿದೆಯಂತೆ. "ನಿಮ್ಮಂಥ ಹಳೆಯ ಸ್ನೇಹಿತರನ್ನು ನಂಬಿ, ನಾವೇನೆ ಗುತ್ತಿಗೆ ಪಡೆದು ಬಂದಿದ್ದೇವೆ. ಹಾಳು ಜ್ವರದ ಊರು. ಆದರೂ ನೀವೆಲ್ಲ ಇರುವಾಗ ಹೆದರಿಕೆ ಇಲ್ಲ" ಎಂದು ವಿಶ್ವಾಸವನ್ನು ತೋರಿಸಿದಾಗ ಸಾಹೇಬರಿಗಾದರೂ ಎಷ್ಟು ಆನಂದವಾಗಬೇಡ? ಇಟಲಿ ಕೈದಿಗಳ ಶಿಬಿರವಾಗಬೇಕಾಗಿದ್ದ ಮತ್ತಿ ಗುಂಡಿ ಈಗ ಜಂಗ್ಲಿಯುದ್ಧದ ಶಿಕ್ಷಣ ಕೇಂದ್ರವಾಗಿ ಆಗುತ್ತದಂತೆ. ಬಲವಾದ ಮಿಲಿಟರಿ ಶಿಬಿರವಾಗುತ್ತದೆ. ಯುದ್ಧ ಮುಗಿಯುವ ತನಕ ವಿವಿಧ ಪಡೆಗಳು ಬಂದು ಅಲ್ಲಿ ಅರಣ್ಯದಲ್ಲಿ ಕಾದಾಡುವ ಬಗೆಯನ್ನು ಕಲಿಯಲಿದ್ದಾರೆ. ಇಲ್ಲಿ ತರಬೇತಾದವರನ್ನು ನೇರಾಗಿ ಬರ್ಮಾ ಯುದ್ಧಕ್ಕೆ ಸಾಗುಹಾಕಲು ಅನುಕೂಲವಾದೀತೆಂದು ಯೋಚಿಸಿದ್ದಾರೆ. ಅದಕ್ಕೆ ಮತ್ತಿ ಗುಂಡಿಯಂತಹ ಯೋಗ್ಯ ಸ್ಥಳ 'ಇನ್ನೊಂದಿಲ್ಲ.

ಮತ್ತಿ ಗುಂಡಿ ತಿರುಗಿ ಜೀವ ತಾಳಿತು. ಮೊದಲಿನ ಶಿಬಿರಕ್ಕಿಂತ ಹತ್ತುಮಡಿ ವಿಶಾಲಿಸಿತು. ಎಲ್ಲಿ ನೋಡಿದರಲ್ಲಿ ಸೈನಿಕರ ಮನೆಗಳ ಏರ್ಪಾಟು ನಡೆಯ ತೊಡಗಿತು. ಆಸ್ಪತ್ರೆ, ಕೂಲಿ ವಸತಿ, ನೌಕರರ ವಸತಿ, ಸೈನಿಕರ ಬೆರಕ್‌ಗಳು ಒಂದೊಂದಾಗಿ ಹುಟ್ಟಬೇಕಾಯಿತು. ವಸತಿಗಳ ಸುತ್ತಮುತ್ತ

ಆರೋಗ್ಯ ಶುಚಿತ್ವಗಳ ಏರ್ಪಾಟುಗಳು ನಡೆಯ ಬೇಕು. ಮಲೇರಿಯ ಬೇನೆಯನ್ನು ನಿರೋಧಿಸುವ ವ್ಯವಸ್ಥೆಯೂ ಆಗಬೇಕಿತ್ತು. ಹರಪಾಲ ಸಿಂಗರು ಇಂಥ ದೊಡ್ಡ ಕಂಟ್ರಾಕ್ಟಿನ ಹೊಣೆಯನ್ನು ಹೊತ್ತು ಬಂದಿದ್ದರು.

ಕರೀಮ್ ಸಾಹೇಬರಿಗೆ ಈಗ ದೊರೆಯುತ್ತಿರುವುದು ಒಳಗುತ್ತಿಗೆ ಮಾತ್ರ; ಅದರಿಂದ ಅವರಿಗೆ ಬೇಸರವಿಲ್ಲ. ಹಣವನ್ನು ಎಲ್ಲಿ ಗಳಿಸಬೇಕು; ಎಲ್ಲಿ ಉಳಿಸಬೇಕು–ಎಂಬ ವಿಚಾರವನ್ನೆಲ್ಲ ಅವರು ಅರಿತುಕೊಂಡಿದ್ದಾರೆ. ಆದರೆ ಈ ಬಾರಿಯ ಯೋಜನೆಯಲ್ಲಿ ಮೊದಲಿನಂತೆ ಐನೂರು ಕೂಲಿಗಳ ಆಟ ನಡೆಯಲಾರದು. ಅದರ ಮೂರು ನಾಲ್ಕು ಪಾಲಿನಷ್ಟು ಜನರು ದುಡಿಯ ಬೇಕಾಗುತ್ತದೆ. ಇಂತಿಷ್ಟೇ ದಿನಗಳಲ್ಲಿ ಆ ಕೆಲಸ ಮುಗಿದೀತು ಎನ್ನುವ ನಿಶ್ಚಯವೂ ಇಲ್ಲ. ಕೆಲಸದ ಅವಧಿ ಎಷ್ಟೂ ಮುಂದಕ್ಕೆ ಹೋದೀತು.

ಬಂದ ಇಬ್ಬರು ಸಿಂಗರುಗಳು ಕೆಲಸದ ವಿಸ್ತಾರವನ್ನೂ, ಲಾಭದ ವಿಸ್ತಾರವನ್ನೂ ಹೇಳುತಿದ್ದಾಗ ಸಾಹೇಬರು ತದೇಕಚಿತ್ತರಾಗಿ ಕೇಳುತಿದ್ದರು; ನಡು ನಡುವೆ ಪ್ರಶ್ನಿಸುತ್ತಲೂ ಇದ್ದರು. ಆದರೆ ಲಾಭ ಇನ್ನೊಬ್ಬರಿಗೆ ಹಂಚಿ ಹೋಗುವುದು ಅವರಿಗೆ ಇಷ್ಟವಲ್ಲವಾದರೂ – ಭಾರಿಯ ಕೆಲಸ, ಹೊಣೆ ಹೆಚ್ಚು-ಎಂಬುದರಿಂದ ಉದಾರ ಮನಸ್ಸುಮಾಡಿ, ವಾಸಪ್ಪಯ್ಯ ಸಾಹುಕಾರರ ಬಳಿಗೆ ಹೋಗಿ "ಹೀಗೊಂದು ಪ್ರಸ್ತಾಪ ಬಂದಿದೆ; ವಹಿಸಿಕೊಳ್ಳೋಣ ಎಂದು ತೋರುತ್ತದೆ" ಎಂದರು. ಮೊದಲು ಅವರು ಉತ್ಸಾಹ ತೋರಲಿಲ್ಲ. ಕರೀಮ್ ಸಾಹೇಬರು ಒಬ್ಬರೇನೆ ಅಷ್ಟು ಮಾಡುವ ಧೈರ್ಯ ತಾಳಿದ್ದಾರೆಂದು ಕಂಡ ಮೇಲೆ ಇಂಥ ಸಂದರ್ಭವನ್ನು ಬಿಡಬಾರದೆಂದು ಅವರ ಜತೆಗೆ ಸೇರುವ ನಿಶ್ಚಯ ಮಾಡಿದರು. ಉಭಯತರೂ ಸೇರಿ ಮರದ ಗಿರಣಿಯನ್ನು ವಿಸ್ತರಿಸುವ ಹಂಚಿಕೆ ಮಾಡಿದರು. ಮತ್ತಿಗುಂಡಿಗೆ ಹೋಗಿ, ಅಲ್ಲಿ ಕುಳಿತು ಎಲ್ಲವನ್ನೂ ನಿರ್ಮಿಸುವುದರ ಬದಲು, ತಮ್ಮೂರಲ್ಲಿಯೇ ಕುಳಿತು, ಕಿಟಿಕಿ, ಬಾಗಿಲು, ಪಕ್ಕಾಸು, ರೀಪುಗಳಂತಹ ಉಪಕರಣಗಳನ್ನು, ಅಳತೆಗೆ ಸಮನಾಗಿ ಸಜ್ಜುಗೊಳಿಸುವ ಕೆಲಸವನ್ನು ದೊಡ್ಡ ಪ್ರಮಾಣದಲ್ಲಿಯೆ ಮಾಡುವ ಹಂಚಿಕೆ ಹೂಡಿದರು. ಮಲೇರಿಯ ಹಾವಳಿ ಇಲ್ಲದ ಕಾಳೂರಲ್ಲಿಯೇ ಬಹು ಮಟ್ಟಿನ ಕೆಲಸ ಸಾಗತೊಡಗಿತು. ಅದರ ಮೇಲು ತನಿಖಿಯೂ ಸುಲಭವಾಯಿತು; ಊರಿನ ನೂರಾರು ಜನಕ್ಕೂ ಕೆಲಸ ದೊರೆಯಿತು. ವೆಂಕಟು, ಗಂಪು ಮೇಸ್ತ್ರಿಗಳಾಗಿ ಆಳುಗಳ ಮೇಲೆ ಅಧಿಕಾರ ನಡೆಯಿಸತೊಡಗಿದರು.

ಕೆಲವು ಸಮಯದೊಳಗಾಗಿ ಗಂಪು ಅಲ್ಲಿಂದ ತಪ್ಪಿದ. ವ್ಯವಹಾರದ 'ಖೂಬಿ'ಯನ್ನು ಕಲಿತ. ತಾನೇ ಸ್ವಂತವಾಗಿ ಗುತ್ತಿಗೆ ವಹಿಸಿಕೊಂಡು ಕೆಲಸ ಮಾಡತೊಡಗಿದ.

ಸುಮಾರು ಎರಡು ವರ್ಷಗಳ ಕಾಲ ಕಾಳೂರಿನಿಂದ ಮತ್ತಿ ಗುಂಡಿಯ ತನಕ ಓಡಾಡುತ್ತಿದ್ದ ಮೋಟರು, ಲಾರಿ, ಜನಗಳ ಸಂಖ್ಯೆಯು ಅಷ್ಟಿಷ್ಟಲ್ಲ. ಇದರಿಂದಾಗಿ ಆಳುಗಳ ಕೊರತೆ ಎಲ್ಲೆಲ್ಲಿಯೂ ಹೆಚ್ಚಿತು. ಊರಿನ ಬೇಸಾಯ ಗಾರರು ಸಹಾಯಕರಿಲ್ಲದೆ ಎಲ್ಲ ಕೆಲಸಗಳನ್ನೂ ತಾವೇ ಮಾಡಿ ದಣಿಯ ಬೇಕಾಗಿಯೂ ಬಂದಿತು. ಗುತ್ತಿಗೆದಾರ ಗಂಪು ಮಾತ್ರ ಜನಗಳ ಮುಖಂಡ ನಾಗಿ ಮೆರೆಯುತ್ತಿದ್ದಾನೆ. ಮತ್ತಿ ಗುಂಡಿಯಲ್ಲಿ ಕೆಲಸಕ್ಕೆ ಜನ ಕಡಿಮೆಯಾಗಿ ಕಂಡರೆ, ಕಾಡಿನದಾರಿಯಿಂದಲೇ, ಕುಂಬಾರ ಗುಂಡಿಗೆ ಕದ್ದು ಪಯಣ ಬೆಳೆ ಯಿಸಿ, ತಮ್ಮೂರಿನ ಆಳುಗಳ ಗುರುತು ಹಿಡಿದು, ಅವರ ಕೈ ಮೇಲೆ ನೋಟು ತುರುಕಿಸಿ, ರಾತ್ರೆ ಬೆಳಗಾಗುವುದರೊಳಗೆ ಅವರನ್ನು ಕರೆದುಕೊಂಡು ತರು ತ್ತಾನೆ. ವಿೂರ ಸಾಹೇಬರು ಧಾವಿಸಿ, ಸೀಗೆಹಳ್ಳಿಯಿಂದ ಕುಂಬಾರ ಗುಂಡಿಗೆ ಬಂದರು. ಅವರು, ತಂದ ತಂದ ಜನರು ಮಾಯವಾಗುತ್ತಿದ್ದಾರೆ. "ಯಾರು ಓಡಿ ಹೋದದ್ದು? ಸೇರೆಗಾರ ಸಿದ್ಧನೆ? ಅವನೆಲ್ಲಿದ್ದರೂ ಅವನ ಚರ್ಮಸುಲಿ ಯುತ್ತೇನೆ. ತಾನು ಓಡಿ ಹೋಗುವುದಲ್ಲದೆ ಜನಗಳನ್ನೂ ಕದ್ದು ಸಾಗಿಸಿ ದ್ದಾನೊ?" ಎಂದು ಕಾಳೂರಿಗೆ ಹೋಗಿ ತನಿಖಿಮಾಡಿದರೆ, ಅವನ ಹೆಂಡತಿ ಹೇಳುತ್ತಾಳೆ; "ಅವರು ಕುಂಬಾರ ಗುಂಡಿಯಲ್ಲಿಯೆ ಇರಬೇಕಲ್ಲ. ಇಲ್ಲಿಗೆ ಅವರು ಬಾರದೆ ಮೂರು ತಿಂಗಳಾದುವು. ಖರ್ಚಿಗೆ ಒಂದು ಪಾವಾಣೆ ಯನ್ನು ಕೊಟ್ಟಿಲ್ಲ, ಕಳುಹಿಸಲಿಲ್ಲ. ಏನು ಮಾಡಿದಿರಿ ಅವರನ್ನು?" ಎಂದು ಸೇರೆಗಾರನ ಹೆಂಡತಿ ಮಹಾಂಕಾಳಿ ವಿೂರ ಸಾಹೇಬರನ್ನು ಪ್ರತಿಯಾಗಿ ಬೆದರಿಸುತ್ತಿದ್ದಾಳೆ.

ಕ್ರಮೇಣ, ತಮ್ಮ ಆಳುಗಳಲ್ಲಿ ಹಲವರು ಮತ್ತಿ ಗುಂಡಿಯಲ್ಲಿ ದುಡಿ ಯುತ್ತಿದ್ದಾರೆಂದು ಆದಮ್ ಸಾಹೇಬರಿಗೂ ವಿೂರ ಸಾಹೇಬರಿಗೂ ತಿಳಿದು ಬರುತ್ತಲೆ ಅವರು ತಲೆ ಅಲ್ಲಾಡಿಸಿದರು. "ಅದಕ್ಕೆಲ್ಲ ಜಗಳ ಪ್ರಯೋಜನ ವಿಲ್ಲ. ನಮ್ಮ ಜನಗಳನ್ನು ಅವರು ಜಾರಿಸಿದರೆ, ಅವರ ಜನಗಳನ್ನು ನಾವು ಜಾರಿಸಿದರಾಯಿತು" ಎಂದು ಮಾವನಿಗೆ ಅಳಿಯ ಹೇಳಿದರು. ಈ ಕೆಲಸಕ್ಕೆ ಸಮರ್ಥರಾದ ನಾಗ, ನಂಜರು ಇದ್ದೇ ಇದ್ದಾರೆ. ಆ ಕೆಲಸಕ್ಕಾಗಿ ಅವರು

ಮತ್ತಿ ಗುಂಡಿಗೂ ಹೋಗಬೇಕಾಗಿರಲಿಲ್ಲ. ನೂರು ಮಂದಿಗಿಂತ ಹೆಚ್ಚು ಜನ ಕರೀಮರ ಗಿರಣಿಯಲ್ಲಿ ಕೆಲಸಮಾಡುತ್ತಿದ್ದಾರೆ. ನೂರಾರು ಜನ ಆ ಸಮೀಪದ ಕಾಡುಗಳಲ್ಲಿ ದುಡಿಯುತ್ತಿದ್ದಾರೆ; ಮರಗಳು ಹಾಳಾಗದಂತೆ ರೆಂಬೆ ಕೊಂಬೆಗಳನ್ನು ಸುಟ್ಟು ಇದ್ದಲು ಮಾಡುತ್ತಾರೆ. ಮತ್ತಿ ಗುಂಡಿಗೆ ನಾಲ್ಕೆಂಟು ಮೈಲು ಸುತ್ತಣ ಪ್ರದೇಶದಲ್ಲಿ ಈ ವರೆಗೆ ಮಾಡದಂತಹ ಹೊಸ ಕೆಲಸವಾದ ಇಟ್ಟಿಗೆ ಬೇಯಿಸುವ ಕೆಲಸದಲ್ಲಿಯೂ ನಿರತರಾಗಿದ್ದಾರೆ. ಅವರೆಲ್ಲ ಗೋವೆಯವರಲ್ಲ, ಲೋಂಡಾದವರಲ್ಲ; ತಮ್ಮ ಊರು ಮನೆಯವರು. ಉಪಾಯವಾಗಿ ಮಾತನಾಡಿಸಿ, ಮುಂಗಡದ ಬೆಲ್ಲವನ್ನು ಮುಂಗೈಗೆ ಸವರಿ ಬಿಟ್ಟರೆ ಅಲ್ಲಿಂದ ತಪ್ಪಿ ಇಲ್ಲಿಗೆ ಬರುತ್ತಾರೆ—ಹೀಗೆಂದು ಯೋಚಿಸಿದರು.

ಸೋದರರ ಈ ಪರಸ್ಪರ ಸ್ಪರ್ಧೆಯಿಂದ ದುಡಿಯುವ ಶ್ರಮಜೀವಿಗಳಿಗೆ ತುಂಬ ಅನುಕೂಲವಾಯಿತು. ಊರು ಮನೆಯವರು ಹೊಲದಲ್ಲೊ, ಹಿತ್ತಿಲಲ್ಲೊ ದುಡಿಯುವುದಕ್ಕೆ ಕರೆದರೆ "ಅಯ್ಯಾ, ಯಾರಿಗೆ ಪುರುಸೊತ್ತಿದೆ ಎಂದು ಬೇಡವೆ?" ಎಂದು ಹಾರಿಸಿಬಿಡುತ್ತಾರೆ. ಸ್ನೇಹ, ಹಂಗು ತೋರಿಸಿ ಒತ್ತಾಯಿಸಿದರೆ "ಆಯಿತಪ್ಪ; ನಾಳೆ ಬರುತ್ತೇನೆ; ನನ್ನ ಭಾವನನ್ನೂ ಕರೆದು ಕೊಂಡು. ಈಗ ನನಗೊಂದು ಐದು ರೂಪಾಯಿ ಕೊಡಿ"ಎನ್ನುತ್ತಾರೆ. ಅಂತಹ ಐದು ರೂಪಾಯಿಗಳನ್ನು ಅವರೆಷ್ಟು ಅರಗಿಸಿಕೊಂಡಿದ್ದಾರೊ! ಹಣ ಕೊಂಡು ಹೋದರೆ ಮುಂದಿನ ವರ್ಷದ ತನಕ ಆಸಾಮಿಯೇ ಕಾಣೆ. ಒಮ್ಮೆ-ದುರ್ದೈವದಿಂದ ಒಂದು ಆದಿತ್ಯವಾರವೊ, ಒಂದು ಬೆಳಗಿನ ನಸುಕಿಗೊ ಅವನ ಮನೆಗೆ ಹೋಗಿ ಸತ್ಯಾಗ್ರಹ ಹೂಡಿದ್ದಾದರೆ, ಅವನು ಹೊರಕ್ಕೆ ಬಂದು ನಕ್ಕು ಹೇಳುತ್ತಾನೆ "ಹೌದಯ್ಯ, ನೀವು ಬರುವುದಕ್ಕೆ ಹೇಳುತ್ತೀರಿ, ನಿಜ; ನಾನು ಬರಬೇಕಾದದ್ದು ನ್ಯಾಯ; ಆದರೆ ಬೆಳಗಿಂದ ಸಂಜೆಯ ತನಕ ಜೀವಹಿಂಡಿ ಕೆಲಸ ಮಾಡಿದರೆ ಎಂಟು ಪಾವಲಿ ಕೊಡುವುದಕ್ಕೆ ನೀವು ಗುಡುಗುಡಿಸುತ್ತೀರಿ. ಮತ್ತಿ ಗುಂಡಿಯವರು ಇಲ್ಲಿಗೆ ಬಂದು 'ಐದೈದು ರೂಪಾಯಿ ಕೊಡುತ್ತೇನೆ ದಿನಕ್ಕೆ' ಎಂದು ದಮ್ಮಯ್ಯ ಹಾಕುತ್ತಾರೆ. ಊರು ಮನೆಯಲ್ಲಿಯೆ ಕರೀಮ್ ಸಾಹೇಬರಲ್ಲಿ ದುಡಿದರೆ ಮೂರರಿಂದ ನಾಲ್ಕು ರೂಪಾಯಿಗಳ ತನಕ ತೆಗೆಯಬಹುದು. ಅದನ್ನು ಬಿಟ್ಟು, ನಿಮ್ಮಲ್ಲಿಗೆ ಬರಬೇಕು ಅನ್ನುತ್ತೀರಾ?" ಎಂದು ಹಂಗಿಸುತ್ತಾನೆ.

ಹೋದವನು ದಿಗಿಲಾಗಿ 'ಆಗಲಿ ಮಹಾರಾಯ, ನಾಲ್ಕು ಐದು

ರೂಪಾಯಿ ಕೊಡುವ ತ್ರಾಣ ನನಗಿಲ್ಲ. ಕರೀಮ್ ಸಾಹೇಬರಿಗೆ ಮಿಲಿಟರಿ ಗುತ್ತಿಗೆಯಿದೆ. ಊರಿನ ಕಾಡುಗಳೆಲ್ಲ ಅವರದ್ದೇ. ನಾಲ್ಕೂ ಕೊಟ್ಟಾರು; ಹತ್ತೂ ಕೊಟ್ಟಾರು. ನನಗೆ ಸಿಗುವ ಇಪ್ಪತ್ತು ಮಾನಿಗೆ ಹುಟ್ಟುವಳಿಯಲ್ಲಿ ನಿನಗೆ ಎರಡು ರೂಪಾಯಿಯನ್ನು ನಾನು ಕೊಡುವುದೂ ಹೆಚ್ಚೇ. ಆಗಲಿ, ಬಾರದಿದ್ದರೂ ಚಿಂತೆಯಿಲ್ಲ. ನಾನು ಕೊಟ್ಟ ಐದು ರೂಪಾಯಿಗಳನ್ನಾದರೂ ಹಿಂದಕ್ಕೆ ಕೊಡು" ಎಂದು,ಅಂಗಲಾಚಬೇಕು.

"ಹೋ, ಅದೊಂದು ಬಾಕಿ ಇದೆಯಲ್ಲವೆ, ಕೊಡುತ್ತೇನಪ್ಪ. ಅವಕ್ಕೆ-ಕೋಳಿ ಕೂಗುವ ಮುಂಚೆ ಬಂದು ವಸೂಲಿಗೆ ನಿಂತದ್ದೇ? ನೀವು ಬರುತ್ತೀರಿ ಎಂದು ನನಗೇನು ಸ್ವಪ್ನವೇ? ಹಾಗೆ ಸ್ವಪ್ನವಾಗಿದ್ದರೆ ರಾತ್ರೆ ತಲೆದಿಂಬಿನ ಕೆಳಗೆ ಐದು ರೂಪಾಯಿ ನೋಟನ್ನು ತಂದಿರಿಸಿಕೊಂಡು ಮಲಗಿಬಿಡುತಿದ್ದೆ" ಎಂದು ಉಪನ್ಯಾಸ ಮಾಡುತ್ತಾನೆ. ಆತ್ಮಗೌರವವಿದ್ದ ವ್ಯಕ್ತಿ, ಇದ್ದ ಗೌರವವನ್ನಾದರೂ ಉಳಿಸಿಕೊಳ್ಳಬೇಕು ಎಂದು ಯೋಚಿಸಿ, ಆ ಕ್ಷಣಕ್ಕೆ ಅಲ್ಲಿಂದ ತೊಲಗಿಹೋಗುತ್ತಾನೆ. "ನನ್ನ ಗ್ರಹಚಾರ. ಅವನನ್ನು ದೂರಿ ಫಲವೇನು?" ಎಂದು ತನ್ನ ವಿಧಿಯನ್ನು ದೂರಿಕೊಳ್ಳುತ್ತಾನೆ. ಊರಲ್ಲಿ ಹಣದ ಚೆಲ್ಲಾಟ ತೊಡಗಿದೆ—ಎಂದರೆ ಮನುಷ್ಯನಿಗೆ ಮನುಷ್ಯನ ಗುರುತು ಮರೆಯತೊಡಗಿದೆ. ಆಪತ್ತಿನಲ್ಲಿ ಮಾಡಿದ ಸಹಾಯಗಳೆಲ್ಲ ಮರವೆಯಾಗುತ್ತವೆ. ಪರೋಪಕಾರವೆಂಬುದು ಒಳ್ಳೆಯ ಶೀಲವೆನಿಸುವ ಬದಲು ಹೆಡ್ಡುತನ, 'ಭೋಳೆ'ತನ ಆಗಿಬಿಡುತ್ತದೆ.

ಆಳುಗಳಿಗೆ ಇಷ್ಟು ಬರಗಾಲ ಬಂದರೂ, ಕಸುಬುದಾರರಿಗೆ ಕೊರತೆಯಿದ್ದರೂ, ಮನೆ ಕಟ್ಟಿಸುವ ಅದೃಷ್ಟವಂತರು ಕಟ್ಟಿಸುತ್ತಾರೆ; ಆಸ್ತಿ ಕೊಳ್ಳುವವರು ಕೊಳ್ಳುತ್ತಿದ್ದಾರೆ; ಚಿನ್ನಾಭರಣ ಮಾಡಿಸುವವರು ಮಾಡಿಸುತ್ತಾರೆ. ಇದರಿಂದಾಗಿ ಹಳೆಯ ಕಾಳೂರು ಹೊಸತಾಗುತ್ತ ಬಂದಿದೆ. ಹಿಂದೆ ಆ ಪೇಟೆಯಲ್ಲಿ ಕತ್ತಲಾದರೆ-ಒಂಬತ್ತು ಗಂಟೆ ರಾತ್ರಿಯ ತನಕ ಕುರುಡು ಚಿಮಣಿ ದೀಪವನ್ನು ಉರಿಸಿಕೊಂಡು ಕುಳಿತವರಿಲ್ಲ. ಮೊನ್ನೆ ಮೊನ್ನೆಯ ತನಕ ವಾಸಪ್ಪ ಸಾಹುಕಾರರ ಅಂಗಡಿಯಲ್ಲಿ ಉರಿಯುತ್ತಿದ್ದದು—ಹೊನ್ನೆ ಎಣ್ಣೆಯ ನೀಲಾಂಜನ. ಚಿಮಣಿ ಎಣ್ಣೆಗೆ ಅಭಾವವಾಗಿ ಬಡಜನರು ಅದನ್ನು ದೊರಕಿಸಿಕೊಳ್ಳಲಾರದೆ, ಹಣತೆಯ ದೀಪ ಉರಿಸಬೇಕಾಗಿ ಬಂದ ಕಾಲದಲ್ಲಿ, ಕಾಳೂರಿನ ಪೇಟೆಯುದ್ದಕ್ಕೂ, ಪ್ರತಿ ಅಂಗಡಿಯಲ್ಲೂ ಬೀಡಿ, ಬೀಡಾ ಅಂಗಡಿಗಳಲ್ಲೂ

ಪೆಟ್ರೋಮೆಕ್ಸ್ ದೀವಿಗೆಗಳು ತುಂಬಿರುತ್ತವೆ. ದುಡಿಯ ಬಲ್ಲವರಿಗೆ, ಹಣ ಮಾಡುವ ದಾರಿ ತಿಳಿದವರಿಗೆ, ಈ ಇಂಥ ದುಷ್ಕಾಲದಲ್ಲೂ ಪೆಟ್ರೋಮೆಕ್ಸ್ ಉರಿಸುವುದಕ್ಕೆ ಸಾಧ್ಯವಿದೆ. ಮೊನ್ನೆ ಮೊನ್ನೆಯ ತನಕ ಹಣದ ಮುಗ್ಗಟ್ಟಿಂದ ಹಳ್ಳಿಯ ಬೇಸಾಯಗಾರರು ತುಂಬ ಕಂಗಾಲಾಗಿದ್ದರು. ಈಗ ಮುಗ್ಗಟ್ಟಿನ ಮಾತಿಲ್ಲ. ಹಣದ ಉಬ್ಬರ ತೊಡಗಿದೆ. ಒಬ್ಬ ಕೂಲಿಯವನು ರೂಪಾಯಿ ನೋಟನ್ನು ಕಸದಷ್ಟು ಸಲೀಸಿನಿಂದ ಎಸೆಯುತ್ತಿದ್ದಾನೆ. ಕಾಳೂರಿನ ನಾಲ್ಕಾರು ಕತ್ತಲೆ ಮನೆಗಳು, ಚಾ ದುಕಾನುಗಳು, ಈಗ ಭರ್ಜರಿಯಾದಂಥ 'ಕಫೆ, ರೆಸ್ಟೋರೆಂಟ್, ವಿಲಾಸ, ಭವನ'ಗಳಾಗಿವೆ. ವೆಂಕಟು ಅಲ್ಲಿಗೆ ಬಂದರೆ 'ಎರಡು ರೂಪಾಯಿ ತಿಂಡಿ ತಿಂದರೂ ಹೊಟ್ಟೆ ತುಂಬುವುದಿಲ್ಲ' ಎಂದು, ನಕ್ಕು ನೋಟನ್ನೆಸೆದು ಹೋಗುತ್ತಾನೆ. ಅವನ ಮಗನೋ! 'ಗಂಪು ಸಿಂಗ್' ಆಗಿದ್ದಾನೆ. ಅನೇಕ ತರುಣರ ಮುಂದಾಳಾಗಿದ್ದಾನೆ; ಒಬ್ಬ ತುಂಡರಸನೇ ಆಗಿದ್ದಾನೆ. ನಾಲ್ಕು ಜನ ಮಿತ್ರರಿಲ್ಲದೆಯೆ ಅವನು ಹೊಟೇಲಿಗೇನೆ ಬರುವುದಿಲ್ಲ. 'ದರ್ಬಾರ್ ಕಫೆ'ಯ ಮಾಲಕರಾದ ನಾರಾಯಣ ಕಮ್ತಿಯವರು 'ಹೌದೋ ಕಾಳ, ಗಂಪುಸಿಂಗರು ಬಂದರು; ಥಟ್ಟನೆ ಟೇಬಲ್ ಉಜ್ಜಿಬಿಡು' ಎಂದು ಅವನಿಗೆ ಕೇಳಿಸುವಂತೆಯೇ ಮಾತಾಡಿ ಹುಮ್ಮಸ ಹುಟ್ಟಿಸುತ್ತಾರೆ.

ಆತ ಅಂಗಡಿಯನ್ನು ಹೊಕ್ಕರೆ ಒಂದು ಬಾರಿಗೆ ಐದು ರೂಪಾಯಿಗಳಾದರೂ ವೆಚ್ಚಕ್ಕೆ ಬೇಕು. ಒಂದು ಕಾಲದಲ್ಲಿ ಆತ, ಕತ್ತನ್ನು ಅಡ್ಡಹಾಕಿ "ಕಮ್ತಿಯವರೇ, ಒಂದು ಬೀಡಿಯನ್ನು ಕೊಡಿ' ಎಂದು ಕೇಳಿದ ದಿನವಿತ್ತು. ಈಗ ಆತ 'ಗೋಲ್ಡ್ ಫ್ಲೇಕ್, ಪ್ಲೇಯರ್ಸ್ ತ್ರೀ'ಗಳಿಗಿಂತ ಕಡಿಮೆ ತೆರನ ಸಿಗರೇಟ್ ಎಳೆಯುವುದೆಂಬುದೇ ಇಲ್ಲ. ಒಂದು ಕಡೆಯಲ್ಲಿದ್ದ ಕುರ್ಚಿಯನ್ನು ಸದ್ದುಮಾಡಿ ಇನ್ನೊಂದು ಕಡೆಗೆ ಎಳೆದುಕೊಂಡು, ಕಾಲಿನ ಮೇಲೆ ಕಾಲು ಹಾಕಿ, "ಕಮ್ತಿಯರೆ, ಪರ್ಮಿಟ್ ಸಿಕ್ಕಿತು. ಒಂದು ಲಾರಿ, ಒಂದು ಕಾರು ಆರ್ಡರ್ ಮಾಡಿದ್ದೇನೆ. ಬೇಗ ಬಂದೀತು. ಮತ್ತಿಗುಂಡಿ, ಮತ್ತೊಂದು ಗುಂಡಿಯೆಂದು ಈ ಸೈಕಲ್, ಬಸ್ಸುಗಳನ್ನು ಹತ್ತಿ ನನ್ನ ಜೀವವೇ ಪುಡಿಯಾಯಿತು" ಎಂದು ಬಡಾಯಿ ಕೊಚ್ಚಿಕೊಂಡಾಗ ಕಾಳೂರಿನ ಬಹುಮಂದಿ ಅವನ ಮಾತನ್ನು ನಂಬಲಿಲ್ಲ. ಹೊಟೇಲಿನ ಕಮ್ತಿಯು, "ಏನು ಸಿಂಗರೇ, ನಿಮ್ಮ ಕಾರು ಇನ್ನೂ ಬಂದಿಲ್ಲ" ಎಂದು ಆಗಾಗ ನಕಲಿ ಮಾಡಿದ್ದುಂಟು. ಆದರೆ ಒಂದು ದಿವಸ ಹುಬ್ಬಳ್ಳಿಯಿಂದ ಆತ ಹಸುರು ಬಣ್ಣದ ದೆವ್ವದಂಥ

ಮೋಟರನ್ನು ಹತ್ತಿ, ಬಂದಿಳಿದಾಗ "ನಿಜಕ್ಕೂ ತಕ್ಕೊಂಡೆಯ! ಎಷ್ಟು ಕೊಟ್ಟೆ ಮಹಾರಾಯ? ಹೊಸತೇ? ಹಳತೇ?" ಎಂದು ಕೇಳಬೇಕಾಯಿತು.

"ಹೊಸತು ಈಗೆಲ್ಲಿ ಸಿಗುತ್ತದೆ? ಸಿಕ್ಕಿದರೆ ಬಿಟ್ಟೇನೆಯೆ? ಇದು ಫಸ್ಟ್ ಕ್ಲಾಸ್ ಸೆಕೆಂಡ್ ಹೇಂಡ್ ಶವರ್‌ಲೇಟ್ ಗಾಡಿ. ಮುಂಬಯಿಯಲ್ಲಿ ಇದಕ್ಕೆ ಇಪ್ಪತ್ತು ಸಾವಿರ ಹೇಳುತ್ತಾರೆ. ನಾನು ಹದಿನೈದಕ್ಕೆ ತೆಗೆದು ಕೊಂಡೆ" ಎಂದಾಗ ಕಮ್ತಿಯರು ಏನೇನೂ ನಂಬಲಿಲ್ಲ. ಅಂತರಂಗವಲ್ಲಿ "ಯಾರದ್ದೋ ಬಾಡಿಗೆಯ ಬಂಡಿ. ಇವನ ಬಡಾಯಿಗೊಂದು ತಲೆಬುಡ ಬೇಡವೆ? ಇಂಥ ವರದ್ದೇ ಒಂದು ಕಾಲ. ಬಾಡಿಗೆಯನ್ನಾದರೂ ಕೊಡುವ ಒಂದು ತ್ರಾಣ ಅವ ನಿಗುಂಟಲ್ಲ–ಅದನ್ನು ಹೇಳಿ. ನಾವು ಇಲ್ಲಿ ರವೆ ಇದ್ದರೆ ಸಕ್ಕರೆ ಇಲ್ಲ, ಸಕ್ಕರೆ ಇದ್ದರೆ ರವೆಯಿಲ್ಲ ಎಂದು ಒದ್ದಾಡುತ್ತಿದ್ದೇವೆ. ನಮಗ್ಯಾಕೆ ಬೇಕು?" ಎಂದು ಉದ್ಗರಿಸಿದರು. ಆಬರೆ ಕೆಲವು ದಿವಸಗಳಲ್ಲಿ ಆ ಮೋಟರ್ ವಾಹನ ಗಂಪು ವಿನದ್ದೆಂದು ಅವರಿಗೂ ಖಚಿತವಾಯಿತು. ಅದರ ಬೆನ್ನಿಗೊಂದು ಲಾರಿಯೂ ಬಂದಿತು. ಬೆಲೆ ಇಪ್ಪತ್ತು ಸಾವಿರ. ಅವೆರಡೂ ಈಗ ಓಡಾಡುತ್ತಿವೆ. ಒಂದು ಮೈಲಿಗೆ ಎರಡು ರೂಪಾಯಿ, ಮೂರು ರೂಪಾಯಿಗಳಂತೆ ದುಡಿದರೆ, ಮ ತ್ತೊಂದು ನಾಲ್ಕು,ಐದರಂತೆ ದುಡಿಯುತ್ತಿದೆ.ಒಂದೇ ಒಂದು ದಿನ ಅವು ಬಿಡು ವಾಗಿ ಕುಳಿತುದೆಂಬುದಿಲ್ಲ. ದರ್ಬಾರು ಕಫೆಯ ನಾರಾಯಣ ಕಮ್ತಿಯವರು ಈ ಅವಧಿಯಲ್ಲಿ ಮಾಡಿದಂಥ ಮಹಾ ಸಾಹಸವೆಂದರೆ-ಐವತ್ತು ರೂಪಾಯಿ ಕೊಟ್ಟು ಒಂದು ಪೆಟ್ರೊಮೆಕ್ಸ್ ದೀಪ ಕೊಂಡದ್ದು; ಯದ್ವಾ ತದ್ವಾ ಬೆಲೆ ಯನ್ನು ಕೊಟ್ಟು ಮುಂಬಯಿಯಿಂದ ನಾಲ್ಕು ಮಾರ್ಬಲ್‌ಮೇಜುಗಳನ್ನು ತರಿಸಿದ್ದು; ಮತ್ತೆರಡು ನಿಲುಗನ್ನಡಿಗಳನ್ನು ತಂದದ್ದು. ಕಫೆಯಲ್ಲಿ ಅವನ್ನು ತಂದು ಪ್ರದರ್ಶಿಸಿದಾಗ ಅವನ್ನು ಮೆಚ್ಚಿದ ಜನಗಳೂ ಇಲ್ಲ. ಗಂಪು ಸಿಂಗ ನೊಬ್ಬನೇ ಆ ನಿಲುಗನ್ನಡಿಯ ಮುಂದೆ ನಿಂತು ತನ್ನ ಕಿರಿಮೀಸೆಗಳನ್ನು ತಿರು ವುತ್ತ "ಇದನ್ನು ನೀವು ತಂದದ್ದುಂಟಲ್ಲ ಕಮ್ತಿಯರೇ, ಬಹಳ ಫಸ್ಟಾಯಿತು" ಎಂದು ಪ್ರಶಂಸಿಸಿದವನು.

ಗಂಪುವಿನ ಕೈಯಲ್ಲಿ ಅಷ್ಟೆಲ್ಲ ದುಡ್ಡು ಓಡಾಡುತ್ತಿರುವುದು ಹೇಗೆಂದು ಜನ ಸಾಮಾನ್ಯರಿಗೆ ವಿಸ್ಮಯ. ಬಲೆ ಬೀಸಿ ಜೀವನ ಸಾಗಿಸುತ್ತಿದ್ದ ಸಾಮಾನ್ಯ ಬೆಸ್ತರ ಹುಡುಗನೊಬ್ಬ,ಇಂದು ಬರಿಯ ನಾಲ್ಕೈದು ವರ್ಷಗಳ ಅವಧಿಯಲ್ಲಿ ಮೋಟರು ಗಾಡಿಯಲ್ಲಿ ಓಡಾಡುವುದು ಯಾರಿಗೂ ಆಶ್ಚರ್ಯವನ್ನು ಹುಟ್ಟಿಸ

ಬೇಕು. ಯುದ್ಧಕಾಲವು ಚೆಲ್ಲಿದ ದುಡ್ಡಿನ ಮಳೆಯಿಂದ ಹೀಗೆ ಅಲ್ಪಾವಧಿಯಲ್ಲಿ ಚಿಗುರಿ, ಬೆಳೆದು, ದೊಡ್ಡದಾದ ವ್ಯಕ್ತಿಗಳೆಷ್ಟೋ ಮಂದಿ ಇದ್ದಾರೆ. ಗಂಪುವಿನ ವರ್ಚಸ್ಸು ಸಹ ಆಚೀಚಿನ ಜನಗಳ ಮೇಲೆ, ಆಸುಪಾಸಿನ ನಗರಗಳಲ್ಲಿ ಎಷ್ಟೊಂದು ಬೆಳೆದಿದೆ ಎಂಬುದನ್ನು ಕಾಳೂರಿನವರು–ಅರಿತಿದ್ದಾರೆಯೋ ಇಲ್ಲವೋ. ಇದೆಲ್ಲ ಅವರವರ ಅದೃಷ್ಟ. ಊರ ಶಾಲೆಯಲ್ಲಿ ಮೂರು ತರಗತಿ ಇಂಗ್ಲಿಷನ್ನು ಓದಿಕೊಂಡು ಅನಂತರ ಬಿಟ್ಟು, ಕುಲದ ಕಸುಬೇ ತನಗೆ ಒಗ್ಗದೆಂದು ಬೇಸರಗೊಂಡಿದ್ದ ಆತಗೆ, ಅವನ ಸ್ವಭಾವಕ್ಕೆ ಸಮನಾದ ಓಡಾಟದ, ಸಾಹಸದ ಈಜೀವನ ಒಗ್ಗಿತು. ಅವನು ಕಲಿತ ಚೂರುಪಾರು ಇಂಗ್ಲಿಷೂ ಅವನಿಗೆ ಸಹಾಯವಾಯಿತು.

"ಏನು ಗಂಪು ಸಿಂಗರೇ, ನಮ್ಮ ಕಾಳೂರಿಗೂ ಮತ್ತಿಗುಂಡಿಗೂ ಒಳಗಿಂದೊಳಗೆ ಸುರಂಗವಿದೆಯೆ? ಸರಕಾರದವರು ಅಲ್ಲಿ ಚೆಲ್ಲಿದ ಕಾಸೆಲ್ಲ ಇಲ್ಲಿಗೆ ಹರಿದು ಬರುತ್ತಿದೆಯಲ್ಲ?" ಎಂದು ಅಸೂಯೆಯ ಮಾತುಗಳನ್ನೂ ಆಡಿದ್ದರು. ಕಾಲಸರಿದಂತೆ ಅದು ತೀರ ನಿಜವಾಗಿ ಪರಿಣಮಿಸಿತು.

ಯುದ್ಧದಿಂದ ಕಾಳೂರಿಗೆ ಪ್ರತಿಷ್ಠೆಯನ್ನು ತರತೊಡಗಿದ ವ್ಯಕ್ತಿಗಳಲ್ಲಿ ಗಂಪು ಒಬ್ಬನೇ ಎಂದು ತಿಳಿಯಬೇಕಾಗಿಲ್ಲ.ಆತ ಕೈಗೆ ಕಾಸು ಬಂದಿದೆ ಎಂದು ತೋರಿಸಿಕೊಳ್ಳುವ ಚಪಲವುಳ್ಳವ; ತೋರಿಸಿಕೊಳ್ಳುತ್ತಾನೆ. ಹಾಗೆ ತೋರಿಸಿಕೊಳ್ಳದೆ, ಬಾಯಿಯಿಂದ 'ಕಾಲಸ್ಥಿತಿ ಮೊದಲಿಗಿಂತಲೂ ಕೀಳಾಗಿದೆಯಲ್ಲ' ಎನ್ನುತ್ತಲೇ ಇದ್ದು, ಸಂಪತ್ತಿನಿಂದ ಬೀಗುತ್ತಿರುವವರೂ ಇದ್ದಾರೆ. ಅಂಥವರಲ್ಲಿ ವಾಸಪ್ಪ ಸಾಹುಕಾರರ ಮನೆಯವರು ಅಗ್ರಗಣ್ಯರು. ಅವರ ಅಂಗಡಿಯ ವ್ಯಾಪಾರ, ಭೂಮಿಕಾಣಿಕೆಗಳು ಪ್ರತಿಯೊಂದೂ ವಿಶಾಲಿಸಿವೆ. ಆದರೆ"ಎಂಥ ದರಿದ್ರ ಕಾಲ ಬಂದಿತಪ್ಪ! ನಿಮ್ಮಂಥವರಿಗೆ ಕೊಡುವ ಎಂದರೆ ಒಂದು ಜತೆ ಪಂಚೆಯಿಲ್ಲ; ಒಂದು ಪಂಥೇರು ಸಕ್ಕರೆಯಿಲ್ಲ. ಮೊನ್ನೆ ರಾಮಚಂದ್ರ ಹೆಗ್ಗಡೆಯರು ಆರು ಸೀಸೆ ಚಿಮಣಿ ಎಣ್ಣೆ ಕೇಳಿದರೆ ಕೊಡುವುದಕ್ಕಿರಲಿಲ್ಲ. ಬರುವುದಕ್ಕೆ ನೂರೈವತ್ತು ಡಬ್ಬೆ ಎಣ್ಣೆ ಬಂದಿತ್ತು. ಚಿಲ್ಲರೆ ವ್ಯಾಪಾರಿಗಳು ಬಂದು, ಬಕಪಕ್ಷಿಗಳ ಹಾಗೆ ಕುಳಿತು, ಅಷ್ಟನ್ನೂ ಕೊಂಡು ಹೋದರು. ನಮ್ಮದು ಹೋಲ್‌ಸೇಲ್‌ವ್ಯಾಪಾರ ನೋಡಿರಿ. ಸೀಸೆಗೆ ಮೂರು ಕಾಸೂ ಸಿಗುವುದಿಲ್ಲ. ನನ್ನಿಂದ ಮೂರಾಣೆಗೆ ಕೊಂಡವರು ಸರಾಸರಿ ಹದಿನಾರಾಣೆಗೆ ಮಾರಿದ್ದಾರೆ" ಎಂದು ಕಾಲಗತಿಯನ್ನು ಬಣ್ಣಿಸುತ್ತಾರೆ. "ನಮ್ಮ ಮೂಡುಮನೆ ಹೆಗ್ಗಡೆ

ಯರು-ಮಗಳು ಮನೆಗೆ ಹೆರಿಗೆಗೆ ಬಂದಿದ್ದಾಳೆ. ದೀಪವಿಲ್ಲದೆಯೆ ಕಳೆಯದು, ಎಂದರೆ ನಾನೇ ಮೂರು ರೂಪಾಯಿ ಕೊಟ್ಟು ನಾಲ್ಕು ಸೀಸೆ ಎಣ್ಣೆತೆಗೆಸಿ ಕೊಡಬೇಕಾಯಿತು. ಹಾಗೆ ಮಾರುವವರಿಗೇ ಇದು ಕಾಲ." ಎಂದು ಸಂತಾಪ ವನ್ನು ಸೂಚಿಸುತ್ತಾರೆ.

ಅವರಾಗಲಿ, ಅವರ ಮಕ್ಕಳಾಗಲಿ ಬಾಯಿ ತೆರೆದಾಗಲೆಲ್ಲ ಧರ್ಮ ದೇವತೆಯ ಅವತಾರಗಳು. ಆದರೆ ಊರವರನ್ನು ಕೇಳಿದರೆ "ಇವತ್ತು ನಮ್ಮೂ ರಲ್ಲಿ ಆದಮ್ ಸಾಹೇಬರೂ ಅಲ್ಲ; ಕರೀಮ್ ಸಾಹೇಬರೂ ಅಲ್ಲ—ಘಟ್ಟಿ ಕುಳುವಾರು ಬೇಕಾದರೆ ಅದು ವಾಸಪ್ಪಯ್ಯನವರು; ಅವರ ಮಕ್ಕಳು" ಎನ್ನು ತ್ತಾರೆ. ಆದಾಯ ತೆರಿಗೆಯ ಹೊರೆಯನ್ನು ತಪ್ಪಿಸುವುದಕ್ಕೆ ಅವರೆಲ್ಲ ಬೇರೆ ಯಾಗಿದ್ದಾರೆ. "ಮಕ್ಕಳು ದೊಡ್ಡವರಾದರು. ನಮ್ಮ ಮಾಧವನು ಇದ್ದುದನ್ನು ಲಗಾಡಿ ತೆಗೆದ ಮೇಲೆ ಅವರವರ ಹಣೆಯಲ್ಲಿ ಬರೆದುದು ಅವರಿಗಿರಲಿ ಎಂದು ಎಲ್ಲವನ್ನು ಹಂಚಿಕೊಟ್ಟೆ. ನಾನಿರಿಸಿಕೊಂಡದ್ದು ಶ್ರೀಪತಿರಾಯರಿಂದ ಕೊಂಡ ಭೂಮಿ, ಮತ್ತು ಈ ಬರಿದಾದ ಭಂಡಸಾಲೆ ಮಾತ್ರ. ಅದಕ್ಕೆ ಸಾಲವೂ ಇದೆ. ಆದರೆ ನನ್ನ ಮಟ್ಟಿಗೆ ದೇವರು ನಡೆಸಿಕೊಟ್ಟಿದ್ದಾನೆನ್ನುವ. ನಾನು ಯಾರಿಗೂ ಅನ್ಯಾಯ ಮಾಡಿಲ್ಲ. ಶ್ರೀಪತಿರಾಯರಿಂದ ಕೊಂಡ ಭೂಮಿಯಲ್ಲಿ ಒಂದು ತುಂಡನ್ನು ಮಾರಿ ಪಾರಾದೆ. ಅದರಿಂದ ಹತ್ತು ಹದಿನೈದು ಸಾವಿರ ಲಾಭ ಬಂದಿರಬಹುದು. ಅದು ಲೆಕ್ಕಕ್ಕೆ. ಮಕ್ಕಳ ವಿದ್ಯಾಭ್ಯಾಸ, ಮಗಳ ಮದುವೆ ಎಂದು ಅದನ್ನು ಚೊಕ್ಕಮಾಡಿದೆ. ಈಗ ಸಾಲವಿಲ್ಲದೆ ಸುಖವಾಗಿ ದ್ದೇವೆ–ಗಂಡಹೆಂಡಿರು. ಮಕ್ಕಳು ಅವರವರ ಜೀವನವನ್ನು ಅವರವರು ನಡೆ ಯಿಸುತ್ತಿದ್ದಾರೆ" ಎಂದೆನ್ನುವುದುಂಟು.

ಆದರೆ ಅಂಗಡಿಯ ಲೆಕ್ಕ ಪತ್ರಗಳನ್ನು ಬಹು ಕಾಲದಿಂದ ನೋಡಿ ಕೊಂಡಿದ್ದ ಕಿಟ್ಟಪ್ಪ ಮಾಸ್ತರರಿಗೆ ಮನೆ ಹಿಸೆಯಾಗುವಾಗ ಕುಟುಂಬದ ಆಸ್ತಿಯ ಮೇಲೆ ಸ್ವಲ್ಪ ಸಾಲವಿತ್ತೆಂದು ತೋರಿಸಿದ್ದರು. ಆ ಕಾಲದಲ್ಲಿ ವಾಸಪ್ಪಯ್ಯನವರು ಸ್ವಂತವಾಗಿ ಮಗನನ್ನು ಬ್ಯಾಡಗಿಗೆ ಕುಳುಹಿಸಿ ಸಾವಿರ ಮೂಟೆ ಮೆಣಸು ಸಾಟೆಮಾಡಿದ್ದರು. ಊರಲ್ಲಿ ಇಪ್ಪತ್ತು ಖಂಡಿ ಅಡಿಕೆಯನ್ನು ಖರೀದಿ ಮಾಡಿದ್ದರು. ಅವನ್ನು ಬರೆದದ್ದು ಸ್ಲೇಟಿನಲ್ಲೇ ಹೊರತು ಬೂಕಿ ನಲ್ಲಲ್ಲ; ಅದು ಅವರ ಕ್ರಮ. ಆದಾಯ ಕರದ ಹಿಂಸೆ ತಪ್ಪಿಸುವುದಕ್ಕೆ ತೀರ ಪ್ರಾಮಾಣಿಕರಾಗಿದ್ದರೆ ಆಗದು ಎಂಬುದು ಅವರಿಗೆ ಗೊತ್ತು. ಹಿಸೆಯಾಗ

ಬೇಕಾಗಿದ್ದ ಆ ಕಾಲದಲ್ಲಿ ತೇಜಿ, ಮುಂದಿಯ ಬಿರುಗಾಳಿ ಒಂದೊಂದು ವಸ್ತಾಲಿಗೆ ಒಂದೊಂದು ತೆರನಾಗಿ ಬೀಸುತ್ತಿತ್ತು. ಮೆಣಸಿನ ಕಾಯಿಯ ಪಿಂಡೆಗೆ ಹತ್ತು ರೂಪಾಯಿಗಳ ವರೆಗೆ ದರ ಕುಸಿಯಿತು. ಅಡಿಕೆಯ ಖಂಡಿಗೆ ನೂರರಷ್ಟು ದರ ಏರಿತು. ಆಗ ಸ್ವಾಭಾವಿಕವಾಗಿ ಅಗ್ರಜರಾದ ವಾಸಪ್ಪಯ್ಯ ನವರು ಮೆಣಸಿನ ಲೆಕ್ಕವನ್ನು ಪುಸ್ತಕದಲ್ಲಿ ಬರೆದು, ಅಡಿಕೆಯ ಲೆಕ್ಕವನ್ನು ಸ್ಲೇಟಿಂದ ಉಜ್ಜಿದರು. ಹೀಗಾಗಿ ಕುಟುಂಬಕ್ಕೊದಗಿದ ನಷ್ಟದಲ್ಲಿ ಸ್ವಲ್ಪಾಂಶ ವನ್ನುಬಿಟ್ಟರು;"ನನ್ನ ಸಾಟಿಯ ವ್ಯಾಪಾರದಿಂದ ನೀವು ದಂಡ ಸಹಿಸಬೇಕಿಲ್ಲ" ಎಂಬಂಥ ಔದಾರ್ಯ ತೋರಿದರು. ಮನೆ, ಭೂಮಿ ಹಿಸೆಯಾಗುವ ಕಾಲ ಬಂತು. ತಮ್ಮಂದಿರಿಗೆ, ಮಕ್ಕಳಿಗೆ-ಊರಲ್ಲಿರುವ ನಾಲ್ಕೆಂಟು ಮನೆಗಳಲ್ಲಿ ನಿಮಗೆ ಬೇಕಾದುದನ್ನು ತಕ್ಕೊಳ್ಳಿ; ಉಳಿದದ್ದು ನನಗೆ-ಎಂದರು. ಬಹಳ ಚಂದದಲ್ಲಿ ಹಿಸೆಯಾಯಿತು. ಮುಕಾದುಮ್ ಸಾಹೇಬರಲ್ಲಿನ ಗದ್ದಲ, ಶ್ರೀಪತಿರಾಯರಲ್ಲಿನ ನಂಜು-ಯಾವುದೊಂದೂ ತಲೆದೋರಲಿಲ್ಲ. ಮನೆಯ ಹೆಂಗುಸರು ಚಾಡಿಯ ಮಾತಿನಿಂದ ತಂತ್ರಮ್ಮ ಗಂಡಂದಿರ ತಲೆಯನ್ನು ಕೆಡಿಸ ಬಾರದೆಂದು, ಪ್ರತಿಯೊಬ್ಬಳಿಗೂ ಇಪ್ಪತ್ತು ಪವನಿಗೆ ಕಡಿಮೆಯಿಲ್ಲದಂತೆ ಆಭರಣಗಳನ್ನು ಹಂಚಿಕೊಟ್ಟರು. ತಮ್ಮಂದಿರಲ್ಲಿ ಹೆಣ್ಣು ಮಕ್ಕಳು ಹೆಚ್ಚು; ಇವರಿಗೆ ಗಂಡು ಸಂತಾನ; ಬರಿಯ ಒಂದು ಹೆಣ್ಣು ಮಾತ್ರ. ಹೀಗಾಗಿ ಚಿನ್ನಾಭರಣಗಳ ವಿಚಾರದಲ್ಲೂ ತಮ್ಮಂದಿರು ಅಸಂತೋಷಪಡುವಂತಿರ ಲಿಲ್ಲ.

ಈಗ ಹಿಸೆಯಾಗಿ ಮೂರು ವರ್ಷಗಳು ಸಂದಿವೆ. ಆ ಕಾಲದಲ್ಲಿ ಸಾಹುಕಾರರ ತಮ್ಮಂದಿರು ಕಿಟ್ಟಪ್ಪ ಮಾಸ್ತರರನ್ನು ಆತ್ಮೀಯವಾಗಿ ಕರೆದು "ಮಾಸ್ತರರೇ,ನಿಮಗೆ ನಮ್ಮ ಅಣ್ಣನ ವ್ಯವಹಾರ ನಮಗಿಂತ ಚೆನ್ನಾಗಿ ಗೊತ್ತು. ನಿಜಕ್ಕೂ ಹೇಳಿ-ನಮಗೆ ಹಿಸೆಯಾಗುವಾಗ ಅವರು ಕನಿಷ್ಠ ಇಪ್ಪತ್ತು ಸಾವಿರ ವನ್ನಾದರೂ ಅಡಗಿಸಿ ಇರಿಸಲಿಲ್ಲವೇ" ಎಂದು ಸಂಶಯವನ್ನು ತೋರಿದರು. ಆದರೆ ಅಷ್ಟು ಸಂಗತಿ ಅವರಿಗೂ ತಿಳಿದಿರಲಿಲ್ಲ. ಮಾಸ್ತರರು ಅದಕ್ಕೆ ಪ್ರತಿ ಯಾಗಿ"ಅದು ಒಬ್ಬೊಬ್ಬರ ನಸೀಬು ಅಲ್ಲವೆ-ನೋಡಿ. ರಾಯರ ಮನೆಯಿಂದ ಕೊಂಡ ಆಸ್ತಿಯನ್ನು ನೀವು ಅವರಿಗೇನೆ ಬಿಟ್ಟಿರಿ; ಆಗಿನ ಬೆಲೆ ಇಪ್ಪತ್ತು ಸಾವಿರವಿತ್ತು. ಅದೇನೆ ಕಣ್ಮುಚ್ಚಿ ನಾಲ್ವತ್ತೈದಕ್ಕೆ ಹೋಗಲಿಲ್ಲವೇ?" ಎಂದು ಸಮಾಧಾನ ಹೇಳಿದರು. ಪಾಲಿನ ಆ ವ್ಯವಹಾರವು ಹೇಗಿದ್ದರೂ ಕಿಟ್ಟಪ್ಪ

ಮಾಸ್ತರರಿಗೆ ವ್ಯವಹಾರ ಚತುರರಾದ ವಾಸಪ್ಪಯ್ಯನವರನ್ನು ಕಂಡರೆ ತುಂಬ ಗೌರವ. "ಹೆಚ್ಚು ಕಡಿಮೆ ನನಗೂ ಅವರಿಗೂ ಒಂದೇ ಪ್ರಾಯ. ಅವರ ವ್ಯಾಪಾರ ವಹಿವಾಟುಗಳನ್ನು ಎಷ್ಟೋ ಸಮಯದಿಂದ ನಾನು ನೋಡುತ್ತಾ ಇದ್ದೇನೆ. ಒಳ್ಳೆಯ ದೆಸೆ ಅವರದ್ದು. ಆ ಮಾಧವ ಒಬ್ಬನನ್ನು ಬಿಟ್ಟರೆ, ತಂದೆ ಮಕ್ಕಳೆಲ್ಲ ತುಂಬ ಬಡಕಾಯಿಸಿದ್ದಾರೆ. ಅಲ್ಲದೆ ಈ ಪ್ರಪಂಚದಲ್ಲಿ ಹೇಗಿರ ಬೇಕು ಎಂಬುದು ಅವರಿಗೆ ಗೊತ್ತು; ನಮ್ಮ ಮಹರಾಯ ಶಿವನಂತಲ್ಲ." ಎನ್ನುವುದುಂಟು; ಅಂತಹ ಮಾತುಗಳನ್ನು ಮನೆಯಲ್ಲಿ ಬಂದು ಹೇಳುವುದೂ ಉಂಟು.

ಮಗನ ವಿಚಾರದಲ್ಲಿ ಅವರಿಗೆ ಅಸಮಾಧಾನವುಂಟಾಗಿ ಬಹು ದಿನ ಗಳಾದುವು–"ಆತ ವ್ಯರ್ಥ. ಧರ್ಮಾರ್ಥವಾಗಿ ಮಾವ ಕೊಟ್ಟ ಹಣವನ್ನು ತಿರುಗಿ ಅವರಿಗೇ ಕೊಡುವಷ್ಟು ಮೂರ್ಖನಾದಾನು ಎಂದು ನಾನು ತಿಳಿದಿರ ಲಿಲ್ಲ" ಎನ್ನುತ್ತಾರೆ. ಅಲ್ಲಿಂದಲೇ ಅವರ ಮನಸ್ಸು ತಿರುಗಿದ್ದು. ಅದಕ್ಕಿಂತ ಮೊದಲು ಮಗನ ಮೇಲೆ ಯಾವ ಬೇಸರವೂ ಇದ್ದಿರಲಿಲ್ಲ; ಸೊಸೆಯ ಮೇಲೂ ಇಷ್ಟವಿತ್ತು. 'ನನ್ನ ಮಗ ಡಾಕ್ಟರು' ಎಂದೆನ್ನುವುದರಲ್ಲಿ ಸಂತೋಷ ವಿತ್ತು; ಹೆಮ್ಮೆಯಿತ್ತು. ಹೆಂಡತಿ ಕಾಲವಾಗುತ್ತಲೇ ಮನಸ್ಸಿಗೆ ಗ್ರಹಣ ಹಿಡಿ ದಂತಾಯಿತು. ಅನಂತರ ಅವರ ಕಣ್ಣಿಗೆ ಕಾಣಿಸಿದ ಒಂದು ಅಪ್ರಿಯವಾದ ಘಟನೆ — ಮಗನು ಹೆಂಡತಿಯ ಚಿನ್ನವನ್ನೆಲ್ಲ ಮಾರಿ ಮಾವನ ಋಣ ಸಂದಾಯಕ್ಕೆ ಹೊರಟದ್ದು. ಅಲ್ಲಿಂದ ಒಂದೊಂದಾಗಿ ಕಹಿ ಮಾತುಗಳು ಅವರ ನಾಲಗೆಯಿಂದ ಉದುರ ತೊಡಗಿದುವು. "ನಾನು ಇಪ್ಪತ್ತು ರೂಪಾ ಯಿಯ ಶಾಲಾ ಮಾಸ್ತರನಿರುವಾಗಲೇ ದುಡಿದು, ಉಳಿಸಿ, ನಾಲ್ಕು ಕಾಸು ಸಂಪಾದಿಸಿ ಕಟ್ಟಿದ ಮನೆಗೆ, ಡಾಕ್ಟರನಾಗಿ ಬಂದ ಇವನು, ಒಂದು ಅಂಕಣ ಜಾಗವನ್ನು ಕೂಡಿಸಿದ್ದುಂಟೇ?" ಎನ್ನತೊಡಗಿದರು.

ಊರಲ್ಲಿ ಪ್ರತಿಯೊಬ್ಬರೂ ಯುದ್ಧದಿಂದ ದೊರೆತ ಅವಕಾಶವನ್ನು, ಯಾವ ರೀತಿಯಿಂದಲೇ ಆಗಲಿ, ಸ್ವಲಾಭಕ್ಕೆ ತಿರುಗಿಸಿಕೊಂಡು, ಸಾಮಾನಿಗೆ ಬೆಲೆಯೇರುತ್ತ ಹೋದರೂ ದುಡ್ಡನ್ನು ಕಸವೆಂದು ತಿಳಿದು ವರ್ತಿಸುತ್ತಿರುವು ದನ್ನು ಕಂಡು, "ಡಾಕ್ಟರನಾದ ತನ್ನ ಮಗ–ಹತ್ತು ಜನರ ಗಾಯ ತೊಳೆಯು ವವ, ನೂರು ಜನಗಳ ರೋಗಕ್ಕೆ ಮದ್ದು ಕೊಡುವವ ಒಂದು ಬಂಗಲೆ ಕಟ್ಟಿಲ್ಲ; ತನ್ನ ಹೆಂಡತಿಯ ಕೊರಳಿಗೆ ಹತ್ತು ಪವನಿನ ಚಿನ್ನ ಹಾಕಲಿಲ್ಲ.

'ಅಪ್ಪ ಇಕೊ' ಎಂದು ನನ್ನ ಕೈ ಮೇಲೆ ನೂರು ರೂಪಾಯಿ ಇಡಲಿಲ್ಲ–ಎಂಥ ನಾಚಿಕೆಗೇಡು" ಅನ್ನುತ್ತಿದ್ದಾರೆ. "ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿ ದೆಯೇ ಅಂದರೆ, ಬೆಳಿಗ್ಗೆದ್ದು ಹೋದರೆ ಹೊತ್ತು ಮೀರಿದ ಮೇಲೆಯೆ ಬಂದು ಊಟ ಮಾಡುವುದು. ಮಧ್ಯಾಹ್ನ ಊಟ ಮಾಡಿ ಹೋದರೆ ರಾತ್ರಿ ಬರುವಾಗ ಒಂಬತ್ತು ಗಂಟೆ. ಇಷ್ಟಿದ್ದರೂ ಅವನ ಕೈಯಲ್ಲಿ ಕಾಸಿಲ್ಲ. ಉಪಚಾರಕ್ಕಾ ದರೂ ನನಗೆ ನೂರು ರೂಪಾಯಿ ಕೊಟ್ಟಿಲ್ಲ; ನನಗೆ ಅವನ ದುಡ್ಡು ಬೇಡ" ಎಂದು ಕಂಡವರೊಡನೆ ದೂರುತ್ತಾರೆ.

ಹಾಗೆಂದು ತಾವಾಗಿ ಮಗನೊಡನೆ ಈ ತನಕ ಒಂದು ಕಾಸನ್ನೂ ವೆಚ್ಚಕ್ಕೆ ಬೇಡಿದವರಲ್ಲ. ಮನೆಗೆ ಬೇಕಾಗುವ ಖರ್ಚು ವೆಚ್ಚ, ಗಂಡನ ಹಣ ದಿಂದ ಇಂದುಮತಿ ಮಾಡುತಿದ್ದಾಳೆ. ವಾಸಪ್ಪಯ್ಯನವರಿಂದ ದೊರಕುವ ಸಂಬಳದಿಂದ ತಂದೆಯ ಚಿಲ್ಲರೆ ಖರ್ಚುಗಳು ಹೋಗುತ್ತಿದೆಯೆಂದು ಮಗನ ಊಹೆ. ಮನೆಗೆ ಬರುತ್ತಿದ್ದ ಅಕ್ಕಿಯ ವರಮಾನವನ್ನು ತಂದೆಯು ಬೇಕೆಂದೇ ತಪ್ಪಿಸಿದ್ದಾರೆ. ಶಿವಪ್ಪನವರು ಅಕ್ಕಿಯನ್ನೂ ನಗದು ಬೆಲೆಗೆ ಕೊಂಡುಕೊಳ್ಳು ತ್ತಿದ್ದಾರೆ. ತಂದೆಯು ಅದನ್ನು ವಿಕ್ರಯಿಸಿ "ಕೊಳ್ಳಲಿ, ಬೇಕಾದ ಬೆಲೆ ಕೊಟ್ಟು" ಎಂದು ವಕ್ರಮಾರ್ಗವನ್ನು ಹಿಡಿದರು; ಸೇಡಿನ ದಾರಿ ಹಿಡಿದರು. ಈಗೀಗ ಮನೆಗೆ ಬಂದರೂ ಬಂದರೇ; ಇಲ್ಲವಾದರೂ ಇಲ್ಲ. ಹತ್ತೆಂಟು ದಿನ ಮಗಳಂದಿರುಗಳ ಮನೆಗೆ ಸರ್ಕೀಟು ಹೊಡೆದು ಬರುತ್ತಾರೆ. ವಾಸಪ್ಪಯ್ಯ ನವರ ಅಂಗಡಿಗೂ ಹೋಗಿ ಬರುತಿದ್ದಾರೆ. ಅಲ್ಲಿ ಈಗ ಬರೆದಿಡಬೇಕಾದ ಲೆಕ್ಕಾಚಾರ ಕಡಿಮೆ. ಸಾಹುಕಾರರೂ, ಗುಮಾಸ್ತರೂ ಸೇರಿ ಹರಟೆಹೊಡೆ ಯುತಿದ್ದರೂ ನಡೆಯುವ ಸಂಪಾದನೆ ನಡೆಯುತ್ತದೆ. ಅಂಥ ವೇಳೆಯಲ್ಲಿ ಸಾಹುಕಾರರೊಂದು ದಿನ ಉದ್ದೇಶವಿಲ್ಲದೆ ಮಾಸ್ತರರ ಮನಸ್ಸನ್ನು ಚುಚ್ಚಿ ದರು: "ಕಿಟ್ಟಪ್ಪಯ್ಯ, ಈಗಿನ ದಿವಸದಲ್ಲಿ ನಮ್ಮೂರಲ್ಲಿ ಬುದ್ಧಿಯಿದ್ದವರೆ ಲ್ಲರೂ ದುಡ್ಡು ಮಾಡುತಿದ್ದಾರೆ. ಊರಿಂದೂರಿಗೇ ಒಂದು ಚಾನ್ಸ್ ಬಂದಿದೆ. ತೋಟದವರಿಗೆ–ಅಡಿಕೆಗೆ ಧಾರಣೆ ಬಂದಿದೆ; ರೈತರಿಗೆ- ಅಕ್ಕಿಗೆ ಬೆಲೆಯಿದೆ; ಕೂಲಿಗಳು ಹೇಳಿದ್ದೇ ಸಂಬಳ. ಇಂಥವರಲ್ಲಿ–ಬಂದಲಾಗಾಯಿತು ಇಷ್ಟಾ ದರೂ ಹೆಚ್ಚು ಕಡಿಮೆ ಇಲ್ಲದೆಯೆ ಇವರುವವರೆಂದರೆ ಒಂದು ನಮ್ಮ ಮಗ; ಒಂದು ನಿಮ್ಮ ಮಗ" ಎಂದರು.

ಅವರ ಮಗ ಮದ್ದು ಊರು ಬಿಟ್ಟು ಹೋಗಿ ನಾಲ್ಕು ವರ್ಷಗಳಿಗೆ

ಸಮೀಪವಾಗುತ್ತ ಬಂತು. ಅವನ ಹೆಂಡತಿ ಮಕ್ಕಳು ಕೆಲವು ದಿನ ತಾಯಿಯ ಮನೆಗೆ ಹೋಗುತ್ತಾರೆ. ಕೆಲವು ದಿನ ಮಾವನ ಮನೆಗೆ ಬಂದು ಜೀವನ ಕಳೆಯುತ್ತಾರೆ. ಮಾಧವ ಮುಂಬಯಿಯಲ್ಲಿ ಬೀಡುಬಿಟ್ಟಿದ್ದಾನೆ. "ಏನೇನೋ ಕಾರುಭಾರು ಮಾಡುತಿದ್ದಾನಂತೆ; ದರ್ಬಾರು ಮಾಡುತ್ತಿದ್ದಾನಂತೆ. ನಮ್ಮ ಊರವರು ಒಬ್ಬರಿಗೂ ಕಾಣುವುದಕ್ಕೂ ಸಿಗುವುದಿಲ್ಲವಂತೆ. ಹಾಗೆ ನಿಮ್ಮ ಮಗನೂ ಒಬ್ಬನಾದನಲ್ಲ" ಎನ್ನುತ್ತಾರೆ ವಾಸಪ್ಪಯ್ಯ.

"ಏನಿಲ್ಲ — ಇವರ ಕೈಯಲ್ಲಿ ತರಬೇತಾದ ಶೀನ, ಇವತ್ತಿನ ಮಟ್ಟಿಗೆ ನಮ್ಮ ಊರಿಗೆ ಒಬ್ಬ ಸಣ್ಣ ಡಾಕ್ಟರನಾಗಿದ್ದಾನೆ. ನಾನು ಕೇಳಿದ್ದು; ಬಲ್ಲವರು ಹೇಳಿದ್ದು. ಅವನ ಹತ್ತಿರ ಇರುವಷ್ಟು ಮದ್ದು, ಮತ್ತೊಂದು ಇವರ ಹತ್ತಿರ ಇಲ್ಲವಂತೆ. ಇವರು ಈ ಸಮಯದಲ್ಲಿ-ಹತ್ತಾದರೆ ಹತ್ತು, ನೂರಾದರೆ ನೂರು ಕೊಟ್ಟು ಬೇಕಾದ ಔಷಧಗಳನ್ನು ತರಿಸಿ ಇರಿಸಿಕೊಂಡರೆ ಜನರು ಕೊಂಡು ಕೊಳ್ಳುವುದಿಲ್ಲ ಅನ್ನುತ್ತೀರಾ? ಯಾವುದನ್ನು ಮಾಡದೆ—ಸಿಕ್ಕಿದ ಮದ್ದನ್ನು, ಒಂದು ಕ್ವಿನೀನೊ,ಮತ್ತೊಂದೋ ತಂದು ಮಾರಿದರೆ ಹಣವುಂಟು. ಕಂಪೌಂಡರ್ ಶೀನು ಬೆಳಗಾಂವಿನಿಂದ ಭಟ್ಕಳದ ತನಕ ಇರುವ ಪ್ರತಿಯೊಬ್ಬ ಡಾಕ್ಟರಿಗೂ ಮದ್ದು ತಂದು ಮಾರುತ್ತಿದ್ದಾನಂತೆ. ಅವನಿಗೆ ಡ್ರಗ್ ಲೈಸೆನ್ಸ್ ಕೊಡಲಾರರು ಎಂದಿತ್ತು; ಅದನ್ನೂ ದೊರಕಿಸಿಕೊಂಡನಲ್ಲ. ಅಷ್ಟು ಮಾತ್ರವಲ್ಲ—ಇವರ ಹಾಗೆ ಬೇಕುಬೇಕಾದ ಇಂಜಕ್ಷನ್ ಕೊಡುವುದಕ್ಕೆ ಕಲಿತಿದ್ದಾನಂತೆ" ಎಂದು ದೀರ್ಘ ಉಪನ್ಯಾಸ ಮಾಡುವಾಗ, ಕಿಟ್ಟಪ್ಪ ಮಾಸ್ತರರು ತಲೆದೂಗಬೇಕಾಯಿತು; ಮಗನ ವಿಚಾರದಲ್ಲಿ ಅವರು ಕೇಳದಂಥ, ತಿಳಿಯದಂಥ ಸತ್ಯ ಅದಲ್ಲವಷ್ಟೆ.

"ಏನೋ,ಅವನ ಗ್ರಹಗತಿಯೇ ಅಂಥದು. ಯುದ್ಧ ಸುರುವಾಗುವಾಗ ಹೆಂಡತಿಯ ಚಿನ್ನ ಮಾರಿ, ಬಂದ ಹಣವನ್ನು ಮಾವನಿಗೆ ಕಳುಹಿಸಿಕೊಟ್ಟ. ಆಗ ಆ ಮೂರುನಾಲ್ಕು ಸಾವಿರ ರೂಪಾಯಿಗಳ ಮದ್ದನ್ನು ದಾಸ್ತಾನು ಇರಿಸಿಕೊಂಡಿದ್ದಾಗಿದ್ದರೆ ಒಂದೇ ವರ್ಷದಲ್ಲಿ ಅಷ್ಟು ಲಾಭ ಬರುತಿತ್ತು" ಎಂದರು. ವಾಸಪ್ಪಯ್ಯನವರು ತಮ್ಮ ಮಾತಿನ ಬಳ್ಳಿಯನ್ನು ಬೆಳೆಸುತ್ತ "ಅದೃಷ್ಟವಲ್ಲ, ಮತ್ತೊಂದಲ್ಲ, ಊರವರೆನ್ನುತ್ತಾರೆ—ನಿಮ್ಮ ಮಗನ ಸಂಪಾದನೆಯೂ ಚೆನ್ನಾಗಿದೆ ಎಂದು. ಆದರೆ ಗಳಿಕೆ ಎಷ್ಟಿದ್ದರೇನು? ಎರಡೆರಡು ಬಿಡಾರ ನಡೆಸುವುದು ಸಾಧ್ಯವೇ?" ಎಂಬ ಅನುಮಾನದ ಬೀಜವನ್ನು ಅವರು ಬಿತ್ತಿದರು.

ನಿತ್ಯ ತಮ್ಮ ಮನೆಗೆ ಬರುತ್ತಿರುವ ಗುಲಾಬಿಯನ್ನು ಕಾಣುತಿದ್ದ ಮಾಸ್ತರರಿಗೆ ಸಾಹುಕಾರರ ಅನುಮಾನಕ್ಕೆ ಕಾರಣಳಾದ ವ್ಯಕ್ತಿ ಆಕೆಯೆಂಬುದು ಹೊಳೆ ಯಲಿಲ್ಲ. ಅದರಿಂದ "ಎರಡೆರಡು ಬಿಡಾರ ಎಂದರೆ?" ಎಂದು ಪ್ರಶ್ನಿಸಿದರು. "ನಿಮಗೆ ತಿಳಿಯದೇ? ನಮ್ಮ ಮುಕಾದಮ್ ಸಾಹೇಬರು ಸತ್ತಮೇಲೆ ಅವರ ಆಸ್ತಿ ಇವರಿಗೆ ಟ್ರಾನ್ಸ್‌ಫರ್ ಆಗಿದೆಯೆಂಬ ಸುದ್ದಿಯೊಂದು ಉಂಟು. ಸುದ್ದಿ ಯೇನು? ನಿಜದ ಸಂಗತಿ" ಎಂದಂದರು.

ಆ ಮಾತುಗಳನ್ನು ಕೇಳಿ ಕಿಟ್ಟಪ್ಪ ಮಾಸ್ತರರ ಮನಸ್ಸು ಹೇಗಾಯಿ ತೆಂದು ಹೇಳಲು ಸಾಧ್ಯವಿಲ್ಲ. ಅದೇ ಸಂಗತಿಯನ್ನು ಮನಸ್ಸಿನಲ್ಲಿ ಮರ್ದಿಸ ತೊಡಗಿದರು. 'ಅವಳು ಆಗಾಗ ಮನೆಗೆ ಬರುತ್ತಿದ್ದಾಳೆ; ಚಿನ್ನಾಭರಣಗಳನ್ನು ತಂದು ಕೊಟ್ಟಿದ್ದಾಳೆ; ಒಯ್ದಿದ್ದಾಳೆ. ಅವನ್ನು ತರುವುದೇಕೆ; ಒಯ್ಯುವು ದೇಕೆ? ಇವೆಲ್ಲ ತಮ್ಮ ಕಣ್ಣಮುಂದೆ ಕಟ್ಟಿದ ನಾಟಕವೇ? ಅಥವಾ ಇಂದು ಮತಿಯನ್ನು ವಂಚಿಸಲು ಹೂಡಿದ ಇಂದ್ರಜಾಲವೇ' ಎಂದು ತಮ್ಮಷ್ಟಕ್ಕೆ ವಿಚಾರ ಮಗ್ನರಾದರು. ಅನಂತರದ ದಿವಸಗಳಲ್ಲಿ ಗುಲಾಬಿ ಎಂದಾದರೂ ಮನೆಗೆ ಬಂದರೆ ನಂಜಿನ ಮಾತನ್ನಾಡತೊಡಗಿದರು; "ಏನು ಗುಲಾಬಿ? ಬೆಳ ಗ್ಗೆದ್ದು ಹೊರಟುಬಿಟ್ಟೆ? ನಿನಗೇನು? ಅಡುಗೆ ಕೆಲಸಕ್ಕೆ ಜನವಿರಬೇಕು; ಪುಣ್ಯ ವಂತಿ ನೀನು" ಎನ್ನತೊಡಗಿದರು. ಎರಡು ಮೂರು ಬಾರಿ ಇಂಥ ಮಾತು ಗಳನ್ನು ಕೇಳಿದ ಅವಳಿಗೆ, ತನ್ನ ವಿಚಾರದಲ್ಲಿ ಮಾಸ್ತರರಿಗೆ ತಿರಸ್ಕಾರವುಂಟಾ ಗಿದೆ ಎಂಬ ಭಾವನೆ ಉಂಟಾಯಿತು. ಆದರೆ ತಾನು ಬಂದು ಹೋಗುವುದನ್ನು ಕಡಿಮೆಮಾಡಲಿಲ್ಲ. ತಾನೇಕೆ ತನ್ನ ನೋವನ್ನು ಇಂದಮ್ಮನ ಮುಂದೆ, ಡಾಕ್ಟರರ ಮುಂದೆ ತೋರಿಸಿಕೊಳ್ಳಬೇಕು-'ಆಡುವವರು ಆಡುತ್ತಾರೆ. ನನ್ನ ಎದೆಯನ್ನು ಸೀಳಿ, ಅಂತರಂಗವನ್ನು ನೋಡಬಲ್ಲವರಿಗೆ ಗೊತ್ತಾದೀತು' ಎಂದು ಸುಮ್ಮಗಾಗುತ್ತಿದ್ದಳು.

ಊರವರ ಪಾಲಿಗೆ ಇದು ಕೇವಲ ಊಹಾಶಕ್ತಿಯಿಂದ ತೀರ್ಮಾನಿಸ ಬಲ್ಲ ಸತ್ಯವೆನಿಸಿತ್ತು. ಹಿರಿಯ ಸಾಹೇಬರು ಮಡಿದು ಮೂರು ವರ್ಷಗಳ ಮೇಲೆ ಕಳೆದುವು. ಜೀವನದ ಮಟ್ಟಿಗಾದರೂ ಇನ್ನೊಬ್ಬರನ್ನು ಕಟ್ಟಿಕೊಳ್ಳ ಬೇಕಾದ ಗುಲಾಬಿ, ಬರಿದೆ ಇರುವ ಕಾರಣ ಇದೇನೆ-ಎಂದು ಹಲವು ವಿಲಾಸಿ ಗಳ ಕಲ್ಪನೆಯಾಗಿತ್ತು. ಅಲ್ಲದೆ ಅವಳ ಬೇನೆಯ ಕಾಲದಿಂದಲೂ ಡಾಕ್ಟರರು ಅಲ್ಲಿಗೆ ಅನೇಕ ಬಾರಿ ಹೋಗಿ ಬರುತ್ತಿದ್ದುದರಿಂದ, ಕಲ್ಪನೆಗೆ ಕಳೆಯುಂ

ಟಾಯಿತು. ಈ ಬಗೆಯ ಸುದ್ದಿ ಹರಡಿದ್ದುದರಿಂದ ಅಪರೋಕ್ಷವಾದ ಒಂದು ಪ್ರಯೋಜನವೇನೋ ಗುಲಾಬಿಗೆ ದೊರೆಯಿತು. ಅವಳನ್ನು ಬೊಗಸೆಗಣ್ಣಿನಿಂದ ಬೇಡುವವರೂ, ಪತ್ರಮುಖೇನ ವಿನಂತಿಸುವವರೂ ಸುಮ್ಮನಾಗುವಂತಾಯಿತು. ಆದರೆ ಈ ಸುದ್ದಿಯು ಮಾಸ್ತರರ ಕಿವಿಯನ್ನು ಸೇರಿ ಅವರ ನಾಲಗೆಯಿಂದ ನಂಜನ್ನು ಕಕ್ಕಿಸಿದ ಮೇಲೆ, ನೋವಿಲ್ಲದೆ ಅದನ್ನು ಸಹಿಸುವುದು ಕಷ್ಟವಾಗಿತ್ತು. "ಅವರಂಥವರು ನನ್ನ ಪಾಲಿಗೆ ಸಿಗುವ ಪುಣ್ಯವಿದೆಯೇ?"ಎಂದು ಗುಲಾಬಿ ಯೋಚಿಸಿದಳು.ಅವಳ ಸ್ವಾಭಾವಿಕ ಕಾಮದ ಕೆರೆ, ಶೃಂಗಾರ ಮೋಹಗಳ ಚಾಂಚಲ್ಯ ವೃತ್ತಿ,ಮಾಧುವಿನ ಪ್ರಕರಣದಿಂದ ಸುಟ್ಟು ಕರಿಕಲಾಗಿತ್ತು; ಮನ ನಿರಾಶೆಗೊಂಡಿತ್ತು. ಡಾಕ್ಟರರು ತನ್ನೊಡನೆ ತೋರಿದ ಸಹಾನುಭೂತಿಯಿಂದ ಅವನ್ನು ಸಹಿಸಿ ಬಾಳುವುದು ಸಾಧ್ಯವಾಗಿತ್ತು. ಅವರ ವಿಷಯದಲ್ಲಿನ ನಂಬಿಕೆ, ಅಭಿಮಾನ, ಗೌರವಗಳು ಆಕೆಯ ಮನಸ್ಸಿನಲ್ಲಿ ಬೆಳೆದು ಬಂದುವು.

ಇಂತಹ ಸುದ್ದಿಯು ಕಾಳೂರಿನಲ್ಲಿ-ಯುದ್ಧ ವಾರ್ತೆ, ಆ ಸಂಬಂಧದ ಹಣದ ಚಟುವಟಿಕೆ, ವಿಲಾಸಗಳ ದೆಸೆಯಿಂದಾಗಿ--ಮಹಾ ಸುದ್ದಿ ಎನಿಸಬೇಕಾಗಿರಲಿಲ್ಲ. ಈ ಮೊದಲು ಅಂತಹ ಏನಾದರೊಂದು ವಿಷಯ ನಡೆದದ್ದಾದರೆ ನಾಲ್ಕು ಜನ, ನಾಲ್ಕು ದಿನ ಆಡಿಕೊಳ್ಳುತ್ತಾರೆ. ಅನಂತರ ಸುದ್ದಿ ಹಳಸಿ, ಕುತೂಹಲ ಮುಗ್ಗಿ ಬಿಡುತ್ತಿತ್ತು. ಈಗ ಊರಲ್ಲಿ ಸಾಹಸ ಹೆಚ್ಚಿದೆ. ಹಣದ ಓಡಾಟ ಬಹುವಾಗಿದೆ. ವ್ಯವಹಾರ ಕೌಶಲ್ಯ ಬೆಳೆದಿದೆ. ಕೆಲಸವಿದ್ದೊ, ಇಲ್ಲದೆಯೊ ತಿರುಗಾಡುವ ಜನರ ಸಂಖ್ಯೆ ಹೆಚ್ಚಿದೆ. ಕೆಲವೇ ಅನುಕೂಲವಂತರ ಹೆಮ್ಮೆಗೆ ಕಾರಣವಾದ ವಿಷಯ ವಿಲಾಸ, ಊರಲ್ಲಿ ಬಹುವಾಗಿ ಪಸರಿಸಿದೆ. ಗೋವೆಯಿಂದಲೂ ಕಾಳೂರಿಗೆ ಬಂದು ನೆಲಸಿ, ಅಲ್ಲಿನ ರಸಿಕ ಜೀವನಕ್ಕೆ ಕಳೆಗೊಡುತ್ತಿರುವ ನಾಲ್ಕೆಂಟು ಕಲಾವಂತ ಬಳಗಗಳೂ ಇವೆ.

ಗುಲಾಬಿ ದಾದಿತನ ಮೊದಲಾದ ಉದ್ಯೋಗಗಳನ್ನು ಕಲಿಯುವುದಕ್ಕೆ ಬಿಳಿಯ ಸೀರೆಯುಟ್ಟು ದವಾಖಾನೆಯನ್ನು ಸೇರಿದ ಬಳಿಕ, ಸೂಲಗಿತ್ತಿ ಮೇರಿಯ ಜತೆಗೆ ಅಲೆದಾಡ ತೊಡಗಿದ ಬಳಿಕ,ಕಂಪೌಂಡರ್ ಶೀನನಂಥವರ ನಾಲಗೆಗಳ ಕಡಿವಾಣ ಕಳಚುವುದು ಕಷ್ಟವಿರಲಿಲ್ಲ. ಅವನೆನ್ನುತ್ತಾನೆ "ಈಗಲಾದರೆ ನಮ್ಮ ಡಾಕ್ಟರರು ಸಮನಾದ ಉಪಾಯ ಕಲಿತರು. ಮುಂಬಯಿಯಲ್ಲಿ ಎಷ್ಟೋ ಅಂಗಡಿಗಳಲ್ಲಿ,ಮ್ಹಾಲು ಮಾರಾಟಕ್ಕೆ,ಹೆಂಗಸರನ್ನು ತಂದಿರಿ

ಸುತ್ತಾರೆ. ವ್ಯಾಪಾರ ತನ್ನಂತೆಯೇ ಹೆಚ್ಚುತ್ತದೆ. ಹೀಗಿರುತ್ತ ಶಿವಪ್ಪನವರು ಮಾಡಿದ ಉಪಾಯ ಸರಿ–ಮದ್ದು ತರಿಸುವುದಕ್ಕೆ ದುಡ್ಡಿಲ್ಲ; ಮದ್ದು ಕೊಟ್ಟರೆ ನಾಟುವುದಿಲ್ಲ. ನಾನು ಅಂಗಡಿಯನ್ನು ತೆರೆದ ಮೇಲಂತು ಜನ ಇಲ್ಲಿಗೇನೆ ಬರುತ್ತಿದ್ದಾರೆ. ಅದಕ್ಕಾಗಿ ಹೊಸ ಹಿಕ್ಮತ್ತ್ ತೆಗೆದಿದ್ದಾರೆ. ಗುಲಾಬಿಯಂಥ ಚಂದದ ನರ್ಸ್ ಇದ್ದಾಳಾದರೆ ಅವಳನ್ನಾದರೂ ನೋಡಿ ಕಾಯಿಲೆಯ ಜನ ಬಂದಾರಲ್ಲ?" ಎಂದು ತನ್ನ ಕೃತಘ್ನ ನಾಲಗೆಯ ಚಪಲವನ್ನೆಲ್ಲ ತೀರಿಸಿ ಕೊಳ್ಳುತ್ತಿದ್ದ.

ನಾಲ್ವರ ಮುಂದೆ ಆಡುವಂತಹ ಇಂಥ ಮಾತುಗಳು ಕಿವಿಯಿಂದ ಕಿವಿಗೆ,ಬಾಯಿಂದ ಬಾಯಿಗೆ ಪ್ರಸಾರಗೊಂಡು,ಇಂದುಮತಿಯ ಕಿವಿಯನ್ನೂ ಸೇರಿದುವು. ಎಲ್ಲಿಲ್ಲದ ಅನುಮಾನ ಮೂಡಿತು. ಅವಳೊಬ್ಬಳಿದ್ದಾಗ, ಅವಳ ಮನಸ್ಸನ್ನು ಅದು ಕಾಡಿತು. ಆದರೆ ಗುಲಾಬಿಯು ಮನೆಗೆ ಬಂದು ತನ್ನನ್ನೂ ತನ್ನ ಮಗುವನ್ನೂ ಜೀವದಂತೆ ಸ್ನೇಹಭಾವದಿಂದ ನೋಡುವಾಗ ಅವಳ ಮನಸ್ಸು ಸಂಶಯ ಕಳೆದುಕೊಳ್ಳುತ್ತಿತ್ತು. "ಅವಳು ಹಾಗಿದ್ದರೆ ನನ್ನ ಮೇಲೆ ಅಸೂಯೆಪಡಬೇಕು; ನನ್ನ ಸಾವನ್ನೆಣಿಸಬೇಕು. ಎಲ್ಲ ಸುಳ್ಳುಸುದ್ದಿಗಳು. ನಾಲಗೆಯಿಂದ ಒಳ್ಳೆಯ ಮಾತು ಬಾರದವರು ಇಷ್ಟಾದರೂ ಉಪಕಾರ ಮಾಡುತ್ತಾರಲ್ಲ!" ಎಂದು ತನಗೆ ತಾನೇ ಸಮಾಧಾನ ಹೇಳುತ್ತಿದ್ದಳು.

ಶೀನಪ್ಪನ ಪರಿಹಾಸ್ಯದ ಮಾತು ಡಾಕ್ಟರರ ಕಿವಿಗೂ ಮುಟ್ಟದಿರ ಲಿಲ್ಲ. ಅವರು ಕೇಳಿ ನಕ್ಕರು; "ಆಡುತ್ತಾರೆ ಜನ. ಆಡುವವರಿಗೆ ಅವಕಾಶವೂ ಇದೆ. ನನಗೆ ಅವಳು ಬೇಕಾಗಿದ್ದರೆ ಏನು ಕಷ್ಟವಿದೆ?"ಎಂದು ನಗುತ್ತಿದ್ದರು. ಉದ್ಯೋಗದಿಂದ ವಿರಾಮ ಕಳೆಯುತ್ತಿದ್ದ ಕಾಲದಲ್ಲಿ, ಸುದ್ದಿಯ ಮಾತಿ ಗಾಗಿ ಕೊರಗಿ ಕುಳಿತಿರುವವರು ಅವರಲ್ಲ. ಈಗಂತು ವಾರಕ್ಕೊಮ್ಮೆ ಯಾದರೂ ಕುಂಬಾರ ಗುಂಡಿಯ ತನಕ ಹೋಗಿ ಬರಬೇಕು. ನಡುವೆ ಕರೆ ದಾಗಲೂ ಹೋಗಬೇಕು. ಶೀನಪ್ಪ ಪಸರಿಸಿದ ಸುದ್ದಿಯಿಂದ ಅವರ ಸ್ನೇಹಿತ ರೊಬ್ಬರೂ ಅವರ ಕೈ ಬಿಟ್ಟಿಲ್ಲ; ದವಾಖಾನೆಗೆ ಬರುವುದನ್ನೂ ಬಿಟ್ಟಿಲ್ಲ.

ಕುಂಬಾರ ಗುಂಡಿಯಲ್ಲಿನ ಮರದ ಉದ್ಯಮವು ಈಗ ಶಾಶ್ವತವಾದ ಒಂದು ಉದ್ಯಮವಾಗುವ ಸ್ಥಿತಿಗೆ ಬಂದು ಮುಟ್ಟಿದೆ. ಯುದ್ಧ ಮುಗಿದ ಮೇಲೆಯೂ ಅದನ್ನು ನಡೆಸಿಕೊಂಡು ಹೋಗುವ ಹಂಚಿಕೆ ಮಾಡಬೇಕೆಂದು ಹಲವರು ಆದಮ್ ಸಾಹೇಬರಿಗೆ ಹೇಳುತ್ತಿದ್ದಾರೆ. ಒಂದು ಪ್ಲೈವುಡ್

ಕಾರ್ಖಾನೆಯನ್ನು ಸ್ಥಾಪಿಸಿದರೆ–ತುಂಬ ಹಣ ಬಂದೀತೆಂದು ಬೋಧಿಸುತ್ತಿದ್ದಾರೆ. ಸಾಹೇಬರಿಗೆ ಆ ಉದ್ಯಮದ ತಲೆ ಬುಡ ಗೊತ್ತಿಲ್ಲದೆ ಇನ್ನೂ ಎಣಿಕೆ ಹಾಕುತ್ತಿದ್ದಾರೆ. ಮರ ಸಿಗಿಯುವುದು ಮಾತ್ರ ಎಂದಿನಂತೆ ನಡೆದು ಬಂದಿದೆ. ಕೂಲಿಗಳ ವಸತಿ ಬೆಳೆದಿದೆ. ಆರೋಗ್ಯ ಸೌಕರ್ಯ ಹೆಚ್ಚಿದೆ. ಆದರೂ ಚಿಕ ಪುಟ್ಟ ಕಾಯಿಲೆಗಳ ಸಲುವಾಗಿ ಡಾಕ್ಟರರು ಬಂದು ಹೋಗುತ್ತಿದ್ದಾರೆ. ಆದಮ್ ಸಾಹೇಬರು ಶಿವಪ್ಪನವರೊಡನೆ ಮಾಡಿದ ಕರಾರನ್ನು ನಡೆಯಿಸಿ ಕೊಂಡು ಬಂದಿದ್ದಾರೆ. ವಾರಕ್ಕೊಂದು ದಿನ, ಹೆಚ್ಚಾಗಿ ಆದಿತ್ಯವಾರದ ದಿನ, ಸಾಹೇಬರ ಮೋಟರು ಅವರನ್ನು ಕರೆತರಲು ಹೋಗುತ್ತದೆ. ಆದಮ್ ಸಾಹೇಬರಿರಲಿ, ಇಲ್ಲದಿರಲಿ, ಆ ಮೋಟರು ಹೋಗಿ ಅವರನ್ನು ಬೆಳಿಗ್ಗೇನೆ ಕರೆದುಕೊಂಡು ಬರುತ್ತದೆ. ಶಿವಪ್ಪ ಡಾಕ್ಟರರು ಬರುವ ದಿನ ಯಾವುದೆಂದು ಅಲ್ಲಿನವರಿಗೂ ಆಚೀಚಿನವರಿಗೂ ಗೊತ್ತು. ಕರೆದು ತರುವ ಕಾರು ಮಾತ್ರ ಇಂಥದ್ದೇ ಎಂಬ ನಿರ್ಣಯವಿಲ್ಲ. ಒಂದಲ್ಲ ಒಂದು ವಾಹನ ಬರುತ್ತದೆ. ಅದು ಹೊರಟು,ಮೊದಲು ಕುಂಬಾರ ಗುಂಡಿಗೆ ತಿರುಗುವಲ್ಲಿನ ಸೀಗೆಹಳ್ಳಿಯ ಬಂಗಲೆಗೆ ಹೋಗುತ್ತದೆ. ಮೀರ ಸಾಹೇಬರ ಭೇಟಿ ಮೊದಲಿಗೆ ನಡೆಯ ಬೇಕು. ಅನಂತರ ಅಲ್ಲಿಂದ ಮಾಮೂಲಿನಂತೆ, ಕುಂಬಾರ ಗುಂಡಿಗೆ ಬಂದು ಅಲ್ಲಿನ ಕೂಲಿಗಳ ಆರೋಗ್ಯ ವಿಚಾರಿಸುತ್ತಾರೆ.

ಮೀರ ಸಾಹೇಬರಿಗೆ ವೈದ್ಯರ ನೆರವು ತೀರ ಅನಿವಾರ್ಯ. ಅವರಿಗೆ ಮೊದಲಿಂದ ಬಂದ ಕಾಯಿಲೆ–ನೇವಸ. ವಯಸ್ಸಾದ ಮೇಲೆ ತೊಡಗಿರುವ ಕಾಯಿಲೆ ಡಾಯಬಿಟಿಸ್. ಹಾಲು, ತುಪ್ಪ, ಸಕ್ಕರೆಗಳಲ್ಲಿ ಅದ್ದಿ ತೇಲುತ್ತಿರುವ ಅವರು ನೇವಸವಿದ್ದರೂ ಊಟ ಬಿಡಲಾರರು; ಸಿಹಿ ಮೂತ್ರವಿದ್ದರೂ ಸಕ್ಕರೆ ಬಿಡಲಾರರು. ವಾರದ ನಡುವೆಯೂ ಇನ್‌ಸುಲಿನ್ ಕೊಡುವುದಕ್ಕೆ ಡಾಕ್ಟರರು ಬಂದು ಹೋಗಬೇಕಾಗುತ್ತದೆ. ಈ ಎರಡು ಬೇನೆಗಳ ಜತೆಗೆ ಸ್ವಸಂಪಾದನೆಯ ಗುಪ್ತರೋಗಗಳೂ ಇವೆ. ಆದರೆ ಒಂದು ಸುಖವಿದೆ; ಮದ್ದಿನ ಹೆಸರು ಹೇಳಿದರಾಯಿತು;ಮರು ದಿನವೇ ಎಷ್ಟು ಬೆಲೆಯುಳ್ಳ ಮದ್ದಾದರೂ, ಎಷ್ಟು ಅಪೂರ್ವದ ಔಷಧವಾದರೂ ಅವರ ಮನೆಗೆ ಬಂದು ಬೀಳುತ್ತದೆ. ಬೇಕಾದಂಥ ಔಷಧವಿರಲಿ—ಹುಬ್ಬಳ್ಳಿ, ಬೆಳಂಗಾವ್, ಎಲ್ಲಿಯೂ ಸಿಕ್ಕದೆ ಹೋದರೆ ಗೋವೆಯಿಂದಲೇ ತರಿಸುತ್ತಾರೆ. ಸಾಹೇಬರ ಜನಗಳಿಗೆ ಗೋವೆ ನೆರಮನೆ. ಯಾವೊಂದು ಸರಕಾರಿ ರಸ್ತೆಯನ್ನು ತುಳಿಯದೆ, ಸುಂಕದ ಕಟ್ಟೆ

ಯನ್ನು ಹಾಯದೆ, ಗೋವೆಯಿಂದ ಅವರ ಬಂಗ್ಲೆಗೆ ಬೇಕಾದ ವಸ್ತುಗಳನ್ನು ಆಳು ಕಳುಹಿಸಿ, ತರಿಸಿಕೊಳ್ಳುವ ಶಕ್ತಿ ಅವರಿಗಿದೆ. ಹಾಗೆಂದು ಡಾಕ್ಟರರು ತಮಗಾಗಿ "ಒಂದಿಷ್ಟು ಕ್ವಿಸೀನು ಬೇಕಿತ್ತಲ್ಲ" ಎಂದು ಕೇಳಿದರೆ "ಹೂಂ, ಅದಕ್ಕೇನು? ನೋಡುವ. ಆದರೆ ದರ ವಿಪರೀತ ಹೇಳುತ್ತಾರೆ. ಮೊದಲು ದರ ವೇನೆಂದು ವಿಚಾರಿಸುವ. ತರಿಸುವುದು ಕಷ್ಟವಲ್ಲ" ಎಂದು ಮುಂದಿನ ವಾರ ದಲ್ಲಿ ದರವೆಷ್ಟೆಂದು ತಿಳಿಸುತ್ತಾರೆ. ಶಿವಪ್ಪನವರಿಗೂ ಅದು ತಲೆ ತಿರುಕ ಬರುವ ದರವಾಗುತ್ತದೆ. ಒಂದೆರಡು ಸಾರಿ ಅವರು ಕೇಳಿದ ಔಷಧಗಳನ್ನು ತರಿಸಿಕೊಟ್ಟಿದ್ದಾರೆ. ಆದರೆ ದುಡ್ಡನ್ನು ಸಾಹೇಬರಾಗಿ ಕೇಳಲಿಲ್ಲ. ಇವರಾಗಿ ಕೊಡಲು ಹೋದಾಗ "ನಿಮ್ಮಿಂದ ತೆಗೆದುಕೊಳ್ಳುವುದೇ!" ಎಂದು ಹೇಳಿದು ದರಿಂದ, ಮುಂದೆ ಶಿವಪ್ಪನವರು ಅವರ ಸಹಾಯವನ್ನು ಬೇಡಲಿಲ್ಲ.

ಸಾಹೇಬರ ಸೇವೆ ನಡೆಯಿಸಿ, ಅವರ ಕೆಪ್ಟನ್ ನಂಜನಿಗೂ ನಾಗನಿಗೂ "ನಿಮಗೇನು?" ಎಂದು ಕೇಳಿ, ಕುಂಬಾರ ಗುಂಡಿಗೆ ಹೋದರೆ, ಅಲ್ಲಿ ಸಂಜೆಯ ತನಕ ಕೆಲಸವಿದೆ. ಅಲ್ಲಿನ ನಿವಾಸ ಸೌಕರ್ಯ ಹೆಚ್ಚಿದ್ದರೂ, ಕಾಯಿಲೆಗಳ ಸಂಖ್ಯೆ ಬೆಳೆಯುತ್ತಿದೆಯೆಂದು ಅವರ ಅನುಭವ. ಮೊದಲಿನ ದಿನಗಳಲ್ಲಿ ಚಳಿ ಜ್ವರ ಒಂದೇನೆ ಅಲ್ಲಿನ ಪ್ರಧಾನ ಕಾಯಿಲೆಯಾಗಿತ್ತು. ಈಗ ಸನ್ನಿಪಾತ ಇದೆ; ಹುಕ್‌ವರ್ಮ ಇದೆ; ಆಮಶಂಕೆಯಿದೆ; ಅವುಗಳ ಜತೆಯಲ್ಲಿ ಹೆಣ್ಣು ಗಂಡು ಗಳ ಸಾಮುದಾಯಿಕ ಜೀವನದ ಫಲವಾಗಿ ಬಂದಿರುವ ಬೇನೆಗಳೂ ಇವೆ. ಔದ್ಯೋಗಿಕ ಜೀವನ ಬೆಳೆದ ಹಾಗೆ, ಇಂಥ ರೋಗಗಳು ಅನಿವಾರ್ಯ ಎಂಬ ತೀರ್ಮಾನಕ್ಕೆ ಅವರೂ ಬಂದಂತಿತ್ತು. ಆದರೆ ಉಳಿದ ಯಾವತ್ತು ಕಾಯಿಲೆ ಗಳಿಗೆ ಮದ್ದು ಕೊಡುವಷ್ಟು ಸುಲಭವಲ್ಲ, ಶ್ರೀಮಂತರ ಕಾಯಿಲೆಯಾಗಿ ಬಂದಿರುವ ಗುಪ್ತ ಬೇನೆಗಳಿಗೆ ಮದ್ದಿಗಾಗಿ ಹಣ ವ್ಯಯಿಸುವವರು ಯಾರು? ಒಮ್ಮೆ ಆದಮ್ ಸಾಹೇಬರೊಡನೆ ಡಾಕ್ಟರರು "ಸಾಹೇಬರೇ, ಒಂದಿಷ್ಟು ನಿಯೊ ಸಾಲ್ವರಸನ್ ತರಿಸಿಕೊಡದೆ ಉಪಾಯವಿಲ್ಲ" ಎಂದಾಗ, "ಹೂಂ, ಜನಗಳು ಸೊಕ್ಕಿ, ತಾವಾಗಿ ತಂದುಕೊಂಡ ಸೌಭಾಗ್ಯಕ್ಕಾಗಿ, ನಾನು ದಂಡ ತೆರಬೇಕೆನ್ನುತ್ತೀರಾ?" ಎಂದು ನಕ್ಕು ಹೇಳಿದರು.

ಅದೂ ನಿಜವೇ. ಆ ದಿನಗಳಲ್ಲಿ ನಿತ್ಯೋಪಯೋಗಿಯಾದ ಕ್ವಿನೀನು, ವಿಟಮಿನ್, ಅಮಿಟೀನ್ ಮೊದಲಾದ ಔಷಧಗಳನ್ನು ತಂದಿರಿಸುವುದಕ್ಕೇನೆ ಅವರಿಗೆ ಸಾಕಷ್ಟು ಹಣ ವ್ಯಯವಾಗುತ್ತಿದೆ. ಅದನ್ನೂ ಅವರು ಮಾಡುವವ

ರಲ್ಲ. ಜ್ವರದಿಂದ, ಆಮಶಂಕೆಯಿಂದ, ಇನ್ನೊಂದರಿಂದ ಕೂಲಿಗಳು ಮಲಗಿ, ತಮ್ಮ ಕೆಲಸ ನಿಲ್ಲುತ್ತದೆ, ನಷ್ಟವಾಗುತ್ತದೆ—ಎಂಬುದರಿಂದ ಅಷ್ಟು ಮಾಡುತ್ತಿದ್ದಾರೆಯೆ ಹೊರತು, ಕೂಲಿಕಾರರ ಮೇಲಿನ ಮಮತೆಯಿಂದಲ್ಲ. ಕೂಲಿಗಳ ಸಲುವಾಗಿ ಡಾಕ್ಟರರು ಬೇಡದೆಹೋದರೂ, ಸೋದರ ಮಾವನಿಗಾಗಿ ಒಬ್ಬರು ಬೇಕೇ ಬೇಕಿತ್ತು. ಅವರ ಸಲುವಾಗಿ ವಾರಕ್ಕೊಮ್ಮೆಯೂ ಬರಬೇಕು; ಕರೆದಾಗಲೂ ಬರಬೇಕು.

ವೀರ ಸಾಹೇಬರ ಮಟ್ಟಿಗೆ, ಶರೀರ ಕಾಯಿಲೆಗೊಂಡಿದ್ದರೂ, ಮನಸ್ಸಿಗೆ ಕಾಯಿಲೆಯಿಲ್ಲ. ವಿಲಾಸಕ್ಕೆ ಎಂದೂ ಸಿದ್ಧ; ಕೆಲಸಕ್ಕೂ ಸಿದ್ಧ. ಅಳಿಯ ಬೇಡವೆಂದರೂ, ಅವರು ಕುಂಬಾರ ಗುಂಡಿಗೆ ವಾರಕ್ಕೆ ನಾಲ್ಕು ಬಾರಿಯಾದರೂ ಹೋಗಿ ಬರುತ್ತಾರೆ. ತಾವಿಲ್ಲದೆ ಅಲ್ಲಿನ ಒಂದು ಕಡ್ಡಿಯೂ ಅಲುಗಾಡದೆಂದು ತಮ್ಮ ಮನಸ್ಸಿನಲ್ಲಿ ತಿಳಿದುಕೊಂಡಿದ್ದಾರೆ. ಕಡ್ಡಿ ಅಲುಗಲಿ, ಅಲುಗದಿರಲಿ—ಹೋಗಿ ಬರುವುದರಿಂದ ಅವರಿಗೆ ಪ್ರಯೋಜನವಿದೆ. ಭಟ್ಕಳದಿಂದ ತಿಂಗಳು ಎರಡು ತಿಂಗಳಿಗೊಮ್ಮೆ ಸೀಗೆಹಳ್ಳಿಗೆ ಬರುತ್ತಿರುವ ಅವರ ಮಕ್ಕಳ ಕೈಯಲ್ಲಿ ಹಸುರು ನೋಟುಗಳನ್ನು ಕೊಟ್ಟು ಕಳುಹಿಸುವುದಕ್ಕಾಗುತ್ತದೆ. ಆ ಮಕ್ಕಳು ಊರಲ್ಲಿ ಸ್ವಂತ ಆಸ್ತಿ, ಪಾಸ್ತಿಗಳನ್ನು ಮಾಡಿಕೊಳ್ಳುತ್ತಿದ್ದಾರೆ.

ಶಿವಪ್ಪನವರು ಕುಂಬಾರ ಗುಂಡಿಗೆ ಬಂದರೆ ಮಧ್ಯಾಹ್ನಊಟ ಮಾಡುವುದಿಲ್ಲ. ಒಂದೆರಡು ಬಾರಿ ಬೇಡೇಕರ್ ಊಟಕ್ಕೆ ಕರೆದಿದ್ದ: ಆ ಊಟ ಸಾಕಾಗಿ ಹೋಯಿತು. ಮಧ್ಯಾಹ್ನವಾಯಿತೆಂದರೆ ಅಲ್ಲಿರುವ ಚಾ ದುಕಾನಿನಿಂದ ಚಹ ತರಿಸುತ್ತಾರೆ. ಡಾಕ್ಟರರ ಮಟ್ಟಿಗೆ ಆತ ಬೆಲ್ಲದ ಬದಲು, ಸಕ್ಕರೆ ಹಾಕಿ ಚಹ ಮಾಡಿಕೊಡುತ್ತಾನೆ. ತಿನ್ನುವ ತ್ರಾಣವಿದ್ದರೆ, ತುಪ್ಪದ ಡಬ್ಬಿಗೆ ಸಮೀಪವಾಗಿ ಬೇಯಿಸುವ ಎಣ್ಣೆಯ ತಿಂಡಿಯನ್ನೂ ಕೊಡುತ್ತಾನೆ. ಅದೂ ಬೇಡವಾದರೆ, ಔಷಧಕ್ಕೆ ಬರುವ ಕೂಲಿಯ ಆಳುಗಳು ಒಂದೆರಡು ಹಣತೆ ಬಾಳೆಯ ಹಣ್ಣುಗಳನ್ನು ತಂದುಕೊಡುತ್ತಾರೆ. ಅಷ್ಟು ಭೋಜನದಿಂದ ತೃಪ್ತರಾಗಿ, ಸಂಜೆಯ ತನಕ ದುಡಿದು ಹೊರಡಲು ಸಿದ್ಧರಾಗುತ್ತಾರೆ. ಆ ವೇಳೆಗೆ ಅವರನ್ನು ತಂದುಬಿಟ್ಟ ಮೋಟರಿಗೆ ತೆರವಾದರೆ, ಅದು ಹೊರಡುತ್ತದೆ. ಇಲ್ಲವಾದರೆ ಮರಸಾಗಿಸುವ ಲಾರಿಯೊಂದರಲ್ಲಿ ಕುಳಿತು ಊರಿಗೆ ಮರಳುತ್ತಾರೆ; ಹೋಗಿ ಬರುವಾಗ ಸೋತು ಸುಣ್ಣವಾಗಿಯೆ ಬರುತ್ತಾರೆ. ಹಾಗೆ—ದಣಿದು, ಧೂಳು ಮುಚ್ಚಿಕೊಂಡು ಬರುವ ಗಂಡನನ್ನು ಕಂಡು ಕನಿಕರದಿಂದ ಇಂದು

ಮತಿಯು "ಇವತ್ತಿನ ಯಾತ್ರೆಯಾಯಿತೇ? ಒಂದು ಆದಿತ್ಯವಾರವಾದರೂ ರಜೆ ತೆಗೆದುಕೊಂಡು ಮನೆಯಲ್ಲಿರಬಾರದೇ? ನೂರಾರು ಜನಗಳ ಚಾಕರಿ ಮಾಡಿ ಇಪ್ಪತ್ತೈದು ರೂಪಾಯಿ ಸಂಪಾದಿಸಿದರೇನು ಬಂದಿತು? ಜೀವ ದೊಡ್ಡದಲ್ಲವೆ?" ಎನ್ನುತ್ತಾಳೆ. ಅವರು ನಗುತ್ತ "ಯಾವುದಿಲ್ಲವಾದರೂ ಅವರು ತಿಂಗಳಿಗೆ ಕೊಡುವ ನೂರು ರೂಪಾಯಿ ಖಾತ್ರಿಯಷ್ಟೆ? ಮೊದ ಮೊದಲು ಇಡಿಯ ತಿಂಗಳಿಗೆ ನೂರು ಸಿಗುತ್ತಿರಲಿಲ್ಲ. ಈಗ ಇದು ಮುಮ್ಮಡಿಸಿದೆ. ಆದು ಹೆಚ್ಚಿದರೂ ಮನೆಯ ಖರ್ಚುವೆಚ್ಚ ಸಾಗುವುದು ಕಷ್ಟವಾಗಿದೆ. ಹೀಗಿರುತ್ತ ಮದ್ದಿನ ಖರ್ಚಿಲ್ಲದೆಯೆ ಬರುವ ಈ ನೂರು ರೂಪಾಯಿಗಳನ್ನು ಬೇಡವೆನ್ನುತ್ತೀಯಾ?"

"ಅಲ್ಲದೆ ನನಗೊಂದು ಆಸೆಯಿದೆ—ಆದವರ್ ಸಾಹೇಬರು ಒಳ್ಳೆ ಖುಶಿಯಲ್ಲಿರುವಾಗ ಮಾತನಾಡಿಸಿದರೆ, ಒಂದಲ್ಲ ಒಂದು ದಿನ ದವಾಖಾನೆ ದುರಸ್ತಿ ಮಾಡಿಕೊಟ್ಟಾರು; ದೊಡ್ಡದು ಮಾಡಿಕೊಟ್ಟಾರು. ನಾನೊಂದು ಮನೆ ಕಟ್ಟುವುದಾದರೂ—ಮರ ಮಟ್ಟು ನಿಮ್ಮಿಂದಾಗ ಬೇಕೆಂದರೆ- ಅವರಿಗೆ ಕೊಡುವುದು ನಿಮಿಷದ ಕೆಲಸ. ನನಗೆ ಕೇಳುವುದಕ್ಕೆ ಬಾಯಿ ಬರುವುದಿಲ್ಲವಷ್ಟೇ ಹೊರತು ಕೇಳಿದರೆ ಎಂದೂ 'ಒಲ್ಲೆ' ಎನ್ನಲಾರರು. ನನಗೇನೆ ಕೇಳುವುದಕ್ಕಾಗದೆ ಕುಳಿತಿದ್ದೇನೆ. ಬೇಕಾದವರಿಂದ ಹೇಳಿಸಿ ನೋಡಬೇಕು" ಎನ್ನುತ್ತಾರೆ.

ಅಂಥ ಪಯಣ ಮಾಡಿ ಅವರು ಮನೆಗೆ ಬರುವಾಗಲೆಲ್ಲ ರಾತ್ರಿ ಎಂಟು ಗಂಟೆಯಾದರೂ ಆಗುತ್ತದೆ. ಕಿಟ್ಟಪ್ಪ ಮಾಸ್ತರರು ಮನೆಯಲ್ಲಿರುವ ಪರಿಪಾಠ ತೀರ ಕಡಿಮೆಯಾಗಿದೆ. ಇಂದುಮತಿಯ ಸಹಾಯಕ್ಕೆ ತಂದು ಹಾಕುವ ಅಡುಗೆಯ ಜನರು ಆರು ತಿಂಗಳಿಗೊಮ್ಮೆ ಬದಲಾಗುತ್ತ ಹೋಗಿದ್ದಾರೆ. ಅವರು ಕೊಡುವ ಸಂಬಳ ಜನರಿಗೆ ಕಣ್ಣಿಗೆ ಕಾಣಿಸದು. ಗಂಡಾಳು ನಿಲ್ಲುವುದಿಲ್ಲ; ಹೆಂಗುಸರು ಬಂದರೆ, ಕದ್ದು ತಿನ್ನುವುದೋ, ತರಲೆ ಹೆಕ್ಕುವುದೋ ಹೆಚ್ಚಾಗುತ್ತದೆ. ಅದರಿಂದ ಒಂದಷ್ಟು ದಿವಸಗಳಿಂದ "ಯಾರೂ ಬೇಡ. ನಾನೇ ನೋಡಿಕೊಳ್ಳುತ್ತೇನೆ" ಎಂದು ಅವಳೇ ಮನೆಯ ಎಲ್ಲ ಕೆಲಸಗಳನ್ನೂ ಸಾಗಿಸುತ್ತಿದ್ದಾಳೆ. ಮುದ್ದು ಮಗುವಾದ ರತ್ನಾಕರನನ್ನು ಆಡಿಸಿ, ತಿರುಗಾಡಿಸಿ ಸಂತೋಷದಿಂದ ಹೊತ್ತು ಹೋಗುತ್ತದೆ. ಈಗ ಅವಳು ಎರಡನೆಯ ಬಾರಿಗೆ ತಾಯಾಗುವವಳಿದ್ದಾಳೆ. ಕೆಲಸಮಾಡುವುದು ಸ್ವಲ್ಪ ಕಷ್ಟವಾದರೂ ಸಾಗಿಸಿಕೊಂಡು ಹೋಗುತ್ತಿದ್ದಾಳೆ. ಆದಿತ್ಯವಾರದ ದಿನ ಸಂಜೆಯಾದರೆ, ಗುಲಾಬಿ

ತನ್ನ ಮಗುವನ್ನು ಕರೆದು ತರುತ್ತಾಳೆ. ಮಕ್ಕಳಿಬ್ಬರೂ ಹಿತ್ತಿಲಲ್ಲಿ, ಅಂಗಳದಲ್ಲಿ ಕೂಗಿ, ಕಿರುಚಿ, ನಲಿವಾಡುತ್ತಿರುವಾಗ ಇಬ್ಬರು ಹರಟೆಹೊಡೆಯುತ್ತಾರೆ. ಈ ಹರಟೆಯ ಮಾತಿನಲ್ಲಿ ಗುಲಾಬಿಗೆ ಮರವೆಯಾಗದ ಒಂದು ಸಂಗತಿ ಬಹು ದಿನದಿಂದಲೂ ಕಾಡುತ್ತಿದೆ. ಒಂದು ದಿನ ಇಂದಮ್ಮನೊಡನೆ "ಡಾಕ್ಟರರಿಗೆ ನೀವು ಹೇಳಬಾರದೇ? ನಾನು ನನ್ನ ಮಾತಿನಂತೆ ನರ್ಸಿಂಗ್ ಕಲಿತಾಯಿತು. ಈಗ ಎಲ್ಲ ಕೆಲಸಮಾಡುವವಳು ನಾನೇ. ಇವರು ಮಾತ್ರ ತಮ್ಮಮಾತನ್ನು ನಡೆಯಿಸಲಿಲ್ಲ. ಆಸ್ಪತ್ರೆಯ ಸುದ್ದಿಯನ್ನು ಮಾತಾಡುವುದಿಲ್ಲ, ವಾರ್ಡಿನ ಕತೆಯನ್ನೂ ಹೇಳುವುದಿಲ್ಲ. ಪ್ರಾಯಶಃ ನನ್ನ ಕೈಯಿಂದ ಹಣ ತೆಗೆದು ಕೊಳ್ಳುವುದು ಅವಮಾನವೆಂದು ತಿಳಿದಿದ್ದಾರೋ ಏನೋ. ಸಾಲವಾಗಿ ತೆಗೆದುಕೊಳ್ಳಬಾರದೆ?" ಎಂದು ತಿರುಗಿ ನೆನಪು ಹುಟ್ಟಿಸಿದಳು.

"ಸಾಲವೆಂದರೆ ಹೆದರುತ್ತಾರಪ್ಪ ಅವರು. ನಾನು ಹೇಳಿದೆ. ಅವಳು ದುಡ್ಡು ಕೊಡುತ್ತೇನೆಂದು ಹೇಳುವಾಗ ಯಾಕೆ ತೆಗೆದುಕೊಳ್ಳಬಾರದು? ಈ ಸಮಯದಲ್ಲಿ ಆಸ್ಪತ್ರೆಯನ್ನು ದೊಡ್ಡದು ಮಾಡಿದರೆ ಒಂದು ಪ್ರಯೋಜನ. ನಾಳೆ ಇನ್ನೊಬ್ಬರು ಈ ಊರಿಗೆ ಬಂದು ಹಾಗೆ ಮಾಡಿದರೆ, ನಿಮ್ಮ ಕನಸು ಕನಸಾಗಿಯೇ ಉಳಿಯುತ್ತದೆ. ನಿಮ್ಮ ಎದುರಿಗೆ ಅಂಗಡಿಯಿಟ್ಟ ಶೀನಪ್ಪನೇ ಹಾಗೆ ಮಾಡಿದರೂ ಮಾಡಿದ' ಎಂದು ಎಷ್ಟು ಹೇಳಿದ್ದೇನೆ ಗೊತ್ತೇ-ಎಂದರೆ "ಅವಸರ ಬೇಡ, ನಿನ್ನ ಬಾಣಂತಿ ತನ ಕಳೆಯಲಿ. ನಾನು ಆ ಯೋಚನೆ ಬಿಟ್ಟಿಲ್ಲ ಎನ್ನುತ್ತಾ ಇದ್ದಾರೆ."

ಹೊತ್ತು ಕಂತಿತು. ಗುಲಾಬಿಯು ತನ್ನ ಮಗುವನ್ನು ಕರೆದುಕೊಂಡು ಮನೆಗೆ ಹೋದಳು. ಇಂದುಮುಖಿಯು ಅಡುಗೆಗೆ ಹೊತ್ತಾಯಿತೆಂದು ಹೊರ ಟಳು. ಅಷ್ಟರಲ್ಲಿ ಮಾವನವರ ಸವಾರಿ ಆಕಸ್ಮಿಕವಾಗಿ ಮನೆಗೆ ಬಂದಿತು. ಬಂದವರನ್ನು ಕಂಡು "ಬಾಯಾರಿಕೆ ಬೇಕೆ?" ಎಂದು ಉಪಚರಿಸಿದಳು. "ಎಲ್ಲಿ ಶಿವಪ್ಪ?" ಎಂದು ಅವರು ಕೇಳಿದರು. "ಬಂದಿಲ್ಲ--ಇವತ್ತು ಆದಿತ್ಯ ವಾರವಲ್ಲವೆ? ಕುಂಬಾರ ಗುಂಡಿಗೆ ಹೋಗಿದ್ದಾರೆ" ಎಂದು ನುಡಿದು ಅವಳು ಒಳಕ್ಕೆ ಹೊರಟಳು.

ಅಷ್ಟರೊಳಗಾಗಿ ಕಿಟ್ಟಪ್ಪ ಮಾಸ್ತರರು "ಆದಮ್ ಸಾಹೇಬರು, ವೀರ ಸಾಹೇಬರು ಇವನ ಗುರುತಿನವರಾಗಿದ್ದರೂ ಒಂದು ಮನೆಯನ್ನೂ ಕಟ್ಟಿಕೊಳ್ಳಲಾರದಂಥ ನಮ್ಮ ಶಿವು ಬಹಳ ಬುದ್ಧಿವಂತನಪ್ಪ. ಈ ಸಮಯ

ದಲ್ಲಿ ಎಷ್ಟು ಜನ ಉದ್ಧಾರಗೊಂಡರು? ಆದರೆ ಇವನಿಗೆ ಮಾತ್ರ . . . . ." ಎಂದು ದೂರತೊಡಗಿದರು.

"ಏನೊ! ಎಲ್ಲರ ಅದೃಷ್ಟವೂ ಒಂದೇ ತೆರನಾಗಿರುತ್ತದೆಯೇ? ಒಬ್ಬೊಬ್ಬರ ಅದೃಷ್ಟ ಒಂದೊಂದು ತೆರ" ಎಂದು ಮನಸ್ಸಿಲ್ಲದೆ ಇಂದುಮತಿ ಹೇಳಬೇಕಾಯಿತು. ಅವರು ಕುಳಿತಲ್ಲಿಂದ ಸ್ವಲ್ಪ ಬಿರುಸಾಗಿಯೇ "ಹೌದೌದು. ನಾವು ಯದ್ವಾ ತದ್ವ ಮಾಡಿದರೆ ಅದೃಷ್ಟವನ್ನು ಹಳಿದು ಬಂತೇನು? ಬರುವ ದುಡ್ಡನ್ನು ಇಲ್ಲಿ ಮನೆಗೂ ಕೊಡಬೇಕು, ಅಲ್ಲಿ ಗುಲಾಬಿಗೂ ಕೊಡಬೇಕೆಂದರೆ ಸಾಕಾದೀತೆ? . . . ನೋಡು, ನಾನು ಮುದುಕನಾಗಿದ್ದೇನಲ್ಲವೆ? ವರ್ಷ ಅರವತ್ತಕ್ಕೆ ಸಮೀಪ. ಇವನಿಂದ ಮನೆಕಟ್ಟಿಸುವುದಕ್ಕಾಗದಿದ್ದರೆ, ಈ ಪ್ರಾಯದಲ್ಲಿ ನಾನು ಒಂದು ಮನೆ ಕಟ್ಟಿಸದಿದ್ದರೆ ಮತ್ತೇಕೆ? ಬೇಡಿದರೂ ಸರಿಯೆ—ಅನ್ನಲಿ ಜನ! 'ಮಗ ಡಾಕ್ಟರ. ಅಪ್ಪ ಬೇಡಿ ತಿನ್ನುತ್ತಾನೆ'ಂದು. ಏನಿಲ್ಲ; ನಮ್ಮ ವಾಸಪ್ಪಯ್ಯನವರ ಹತ್ತಿರ ಒಂದಿಷ್ಟು ಮರ ಕೊಡಿ ಎಂದರೆ- 'ಎಷ್ಟು ಬೇಕು ತೆಗೆದುಕೊಂಡು ಹೋಗಿ' ಎಂದಾರು" ಎಂದು ಶಪಥತೊಟ್ಟು ಕಾಲು ತೊಳೆಯುವುದಕ್ಕೆ ಹೋದರು.

ಇಂದುಮತಿ ತನ್ನ ಮಾವ ಊಟಕ್ಕಿದ್ದಾರೆಂದು ಯೋಚಿಸಿ, ಬೇಗ ಬೇಗನೆ ಅಡುಗೆಮಾಡಿ, ಎಲೆ ಬಡಿಸಿ, ಹೊರಕ್ಕೆ ಕರೆಯಲು ಬಂದರೆ, ಅವರು ಅಷ್ಟು ಹೇಳುವುದಕ್ಕೇನೆ ಬಂದವರಂತೆ-ಬಂದು, ಹೇಳಿ, ಹೊರಟೇ ಹೋಗಿದ್ದರು. ಬಹು ಸಮಯದ ಹಿಂದೆ ವಾಸಪ್ಪಯ್ಯನವರಿಂದ ತಾವು ತಿಳಿದ ಸುದ್ದಿಯನ್ನು, ಉಪ್ಪು ಕಾರಗಳನ್ನು ಹಚ್ಚಿ ಹೇಳುವ ಮಹಾ ಜನಗಳಿಂದ ಪೋಷಿಸಿಕೊಂಡು, ತಮ್ಮಲ್ಲಿಯೇ ಬಚ್ಚಿಟ್ಟುಕೊಂಡಿದ್ದರು; ಗುಲಾಬಿಗೂ ಚುಚ್ಚಿನುಡಿದರು. ಅವಳು ದಾದಿಯಾಗಿರುವುದನ್ನು ಕಂಡು ಮತ್ತಿಷ್ಟು ಕೋಪಾವಿಷ್ಟರಾದರು. ಅಳಿಯಂದಿರ ಮನೆಗೆ ಸುತ್ತಾಡಿದರು. ಹುದುಗಿದ್ದ ಹೊಟ್ಟೆ ಉರಿಗೆ ಅಲ್ಲಿಂದಲೂ ಗಾಳಿ ಬೀಸಿಕೊಂಡು, ಇಂಥ ಪ್ರತಿಜ್ಞೆಯನ್ನು ತಿಳಿಸುವುದಕ್ಕೇನೆ ತಮ್ಮ ಮನೆಗೆ ಬಂದು ಸೊಸೆಯೊಡನೆ ನಂಜು ಕಾರಿದರು.

ಇಂದುಮತಿಯ ಮನಸ್ಸು ಬೆಂದು, ಬೇಗುದಿಗೊಂಡಿತು. ಮುಖ ಕಳೆಗುಂದಿತು. ಕಂಬನಿ ತುಟುಕಿತು. 'ಎಂಥ ಮಾತನ್ನು ಕೇಳುವ ಕಾಲ ಬಂತು' ಎಂಬ ಚಿಂತೆ ಉದಯಿಸಿತು. ಹಾಗೆಯೇ ಊಟದ ಕೋಣೆಯಲ್ಲಿ ಮಗುವನ್ನು ಮಲಗಿಸಿಕೊಂಡು, ಅದರೊಡನೆಯೂ ಮಾತನಾಡುವ ಮನವಿಲ್ಲದೆ,

ಗೋಡೆಗೆ ಮುಖತಾಗಿಸಿ ಒರಗಿಕೊಂಡಳು. ಕಪೋಲವು ತೊಯ್ದಿತು; ನೆಲ ಒದ್ದೆಯಾಯಿತು; ಕಣ್ಣು ಬಾಡಿತು.

ಶಿವಪ್ಪನವರು ಮನೆಗೆ ಬಂದಾಗ ಆಕೆ ಮಲಗಿಯೇ ಇದ್ದಳು. 'ಇಂದೂ' ಎಂದು ಕರೆದರೂ ಆಕೆ ಎಚ್ಚರಗೊಳ್ಳಲಿಲ್ಲ; ಅವಸರದಿಂದ ಒಳಕ್ಕೆ ಹೋಗಿ ಅವಳ ಮೈದಡವಿ "ನಿದ್ದೆ ಮಾಡಿದೆಯಾ?" ಎಂದು ಎಚ್ಚರಗೊಳಿಸಿದರೆ, "ಆಂ, ಯಾರು?" ಎಂದು ಸ್ವಪ್ನ ಭಂಗಿತಳಾದಂತೆ ಎದ್ದು ಕುಳಿತಳು. ತೊಯ್ದ ಕಪೋಲಕ್ಕೆ ಅಂಟಿದ ನೆಲದ ಧೂಳು, ಅವಳು ಪಟ್ಟ ಪಾಡನ್ನು, ಶಿವಪ್ಪನವರ ಕಂಡ ನೋಟಕ್ಕೇನೆ ಹೇಳಿತು.

---

# ಅಧ್ಯಾಯ ೯.

ಇಂದುಮತಿಯ ಮುಖವನ್ನು ನೋಡುವಾಗಲೇ ಮನೆಯಲ್ಲಿ ಏನೋ ಪ್ರಸಂಗ ನಡೆದಿದೆಯೆಂದು ಶಿವಪ್ಪನವರಿಗೆ ಅನಿಸಿತು. ಏನು ಸಂಗತಿಯೆಂದು ಮೇಲಿಂದ ಮೇಲೆ ಕೇಳಿದರು. "ಮಾವ ಬಂದಿದ್ದರು, ಅಡುಗೆಮಾಡಿದೆ, ಊಟ ಮಾಡದೆ ಹೋದರು" ಎಂದಿಷ್ಟೇ ಹೇಳಿದಳು ಹೊರತು, ಎರಡೆರಡು ಬಿಡಾರಗಳನ್ನು ಕುರಿತು ಅವರು ಹೊರಿಸಿದ ಅಪವಾದವನ್ನು ಗಂಡನ ಮುಂದಿರಿನಲಿಲ್ಲ. ತನ್ನ ಮನಸ್ಸು ಅದರಿಂದ ಬಹುವಾಗಿ ನೊಂದಿದ್ದರೂ, ಆವರ ಮನಸ್ಸನ್ನು ನೋಯಿಸುವುದಕ್ಕೆ ಆಕೆ ಸಿದ್ಧಳಾಗಿರಲಿಲ್ಲ.ಆ ದಿನದ ಮಟ್ಟಿಗೆ,ಪತಿಯ ಸಮಾಧಾನದ ಮಾತುಗಳಿಂದ ಅವಳ ಮನಸ್ಸು ಶಾಂತಗೊಂಡರೂ, ಅವರು ಬಿತ್ತಿಹೋದ ಸಂಶಯದ ಬೀಜವು ಅಳಿಯಲಿಲ್ಲ. ಅದು ಅವಳ ಮನಸ್ಸನ್ನು ಕೊರೆಯತೊಡಗಿತು. ಗುಲಾಬಿಯು ತಮ್ಮ ಮನೆಗೆ ಬಂದು ಅಷ್ಟೊಂದು ಪ್ರೀತಿಯಿಂದ ವರ್ತಿಸುವುದನ್ನು ಕಂಡರೆ, ತನ್ನ ಚಿನ್ನಾಭರಣಗಳನ್ನು ಅವರ ಸಲುವಾಗಿ ಮಾರುವುದಕ್ಕೂ ಸಿದ್ಧಳಾಗಿರುವುದನ್ನು ಕಂಡರೆ, ಈ ಸಂಶಯಕ್ಕೆ ಪುಷ್ಟಿಯೂ ಬರುತಿತ್ತು. ಮನದಲ್ಲಿ ಮೂಡಿದ ಸಂಶಯವನ್ನು ಚರ್ಚೆಯಿಂದ ಬಗೆಹರಿಸಬೇಕೆಂದು ತೋರಿದರೂ, ಅಂಥ ವಿಷಯಗಳನ್ನು ಕುರಿತು ಚರ್ಚಿಸುವುದು ಇನ್ನಷ್ಟು ತೊಡಕಿಗೆ ಕಾರಣ-ಎಂಬ ಭಯವೂ ಉಂಟಾಯಿತು.

ಇವೆಲ್ಲವುಗಳ ಪರಿಣಾಮವಾಗಿ--ಅನಂತರದ ಒಂದೆರಡು ದಿನಗಳಲ್ಲಿ ಗುಲಾಬಿ ತಮ್ಮ ಮನೆಗೆ ಬಂದಾಗ ಉತ್ಸಾಹ ಕುಂದಿತ್ತು; ನಡೆನುಡಿಗಳಲ್ಲಿ ಮೊದಲಿನ ಹಿತೋಷ್ಣ ಉಳಿಯಲಿಲ್ಲ. ಇಂದಮ್ಮನಿಗೆ ಬೇಸರವಾಗಿದೆಯೆಂದು ಆಕೆಗೆ ತಿಳಿಯುವುದು ಕಷ್ಟವಾಗಲಿಲ್ಲ. "ಏನಮ್ಮ, ಬಹು ಬೇಸರವಾಗಿದ್ದೀರಿ. ಮೊನ್ನೆ ಡಾಕ್ಟರರು ಎಷ್ಟು ಹೊತ್ತಿಗೆ ಬಂದರು? ಮಾವನವರು ಬಂದಿದ್ದರೆ?" ಎಂದು ವಿಚಾರಿಸಿದುದಕ್ಕೆ "ಏನೋಪ್ಪ, ನನಗ್ಯಾಕೆ ಅದೆಲ್ಲ" ಎಂದು ಸೆರಗು ತಪ್ಪಿಸುವ ಪ್ರತ್ಯುತ್ತರವನ್ನು ಸಲ್ಲಿಸಿದಳು. ಆದರೆ ಬೇಸರದಲ್ಲಿಯೇ ತೊಡಗಿದ ಅವರ ಸಂಭಾಷಣೆಗಳು, ತುಸು ತುಸುವಾಗಿ ಮೊದಲಿನ ಸ್ನೇಹಮಯ ಉತ್ಸಾಹವನ್ನು ಗಳಿಸಿದುವು. 'ಯಾಕ್ಯಾರ ಮಾತುಗಳನ್ನು ಕೇಳಿ ನಾನು ಗುಲಾಬಿಯಲ್ಲಿ ಇಲ್ಲದ ದೋಷ ಎಣಿಸಬಾರದು. ಗುಲಾಬಿಯೇ ಅಂದಿಲ್ಲವೆ? ಜನ ಹೀಗೂ ಆಡಿಕೊಳ್ಳುತ್ತಿದ್ದಾರೆಂದು. ಒಮ್ಮೆ ಅದನ್ನು ನಿಜವೆಂದೇ ತಿಳಿಯುವ.

ತಾನೇಕೆ ಕೊರಗಬೇಕು? ತನಗಾವ ಸುಖ ಕಡಿಮೆಯಾಗಿದೆ? ಯಾರು ತನ್ನನ್ನು ದೂಷಿಸಿದ್ದಾರೆ, ದ್ವೇಷಿಸಿದ್ದಾರೆ? ಪತಿ ದುಡಿದು ದಣಿದಿರುವಾಗಲೂ, ಹಣದ ಅಡಚಣೆಯಿಂದ ನರಳುತ್ತಿರುವಾಗಲೂ, ತನ್ನ ಮೇಲಿನ ಪ್ರೇಮವನ್ನು ಇಷ್ಟಾದರೂ ಕಡಿಮೆಮಾಡಿಲ್ಲ. ಒಂದು ದಿನವಾದರೂ ಸಿಟ್ಟುಗೊಂಡುದಿಲ್ಲ. ಹೊಸ ಮನೆಯನ್ನು ಕಟ್ಟಲಿಲ್ಲ; ಚಿನ್ನಾಭರಣಗಳನ್ನು ಮಾಡಿಸಲಿಲ್ಲ–ಎಂಬುದರಿಂದ ಅವರು ತೋರಿಸುವ ಪ್ರೀತಿ ಸುಳ್ಳಾಗುತ್ತದೆಯೆ" ಎಂದು ಆತ್ಮತೃಪ್ತಿಯನ್ನು ತಂದುಕೊಳ್ಳುತ್ತಾಳೆ.

ಮರು ರಾತ್ರಿ ಶಿವಪ್ಪನವರು ಹಿಂದಣ ದಿನದ ಘಟನೆಯನ್ನು ನೆನೆದು ಇಂದುಮತಿಯ ಬೇಸರವನ್ನು ಕಳೆಯುವುದಕ್ಕಾಗಿ ಇನ್ನಷ್ಟು ಪ್ರಯತ್ನ ಮಾಡಿದರು: "ಇಂದೂ, ಅಪ್ಪ ಸಿಟ್ಟಾಗುವುದು ನ್ಯಾಯವೇ. ನಾನು ಮನೆ ಕಟ್ಟಿಲ್ಲ ಎಂದು ಅವರಿಗೆ ಬೇಸರವಾಗಿರಬಹುದು. ನಾವು ಯಾತಕ್ಕೆ ಅದರಿಂದ ಬೇಸರಗೊಳ್ಳಬೇಕು? ಇವತ್ತು ನನ್ನ ಕೈಯು ಅವರು ತಿಳಿದಷ್ಟು ಬರಿದಾಗಿಲ್ಲ. ಮೂರು ಸಾವಿರ ರೂಪಾಯಿಗಳಾದರೂ ಇದೆ ನನ್ನಲ್ಲಿ; ಅಷ್ಟು ಹಣ ಮನೆಗೆ ಸಾಕಾಗುತ್ತದೆಯೆ? ಒಬ್ಬಿಬ್ಬರು ಗುರುತಿನವರನ್ನು ಕೇಳಿ ನಾಲ್ಕೈದುಸಾವಿರ ರೂಪಾಯಿ ಎತ್ತಬಹುದು. ಗುಲಾಬಿ ಮೇಲಿಂದ ಮೇಲೆ 'ನನ್ನ ಚಿನ್ನ ಅಡವಿಟ್ಟು ಹಣ ಪಡೆಯಬಹುದೆ'ಂದರೂ, ಸುಮ್ಮನೆ ಅನ್ಯರ ಋಣದಲ್ಲಿ ಬೀಳುವುದು ಒಳ್ಳೆಯದೆಂದು ನನಗೆ ಕಾಣುವುದಿಲ್ಲ. ಈ ಮನೆ ಚಿಕ್ಕದು; ನಮಗೆ ಸಾಲದು–ಎಂದು ಇನ್ನೊಬ್ಬರು ಹೇಳಬೇಕೆ? ಇರುವ ಹಣದಲ್ಲಿ ಈ ವೇಳೆಯಲ್ಲಿ ಒಂದಿಷ್ಟು ಔಷಧವನ್ನು ತರಿಸಿ ಇಟ್ಟುಕೊಂಡರೆ, ನಾಲ್ಕು ಕಾಸು ಹೆಚ್ಚಿಗೆ ಸಂಪಾದನೆಯಾದೀತು" ಎಂದರು.

"ನಿಮಗೆ ತಿಳಿದಂತೆ ಮಾಡಿ. ಮನೆ ಆಗಲೇಬೇಕೆಂಬ ಹಟ ನನಗಿಲ್ಲ. ಜೀವನ ಸುಖವಾಗಿ ಹೋದರೆ ಸಾಕು. ಮನೆಯ ಒದ್ದಾಟಕ್ಕೆ ಹೋಗಿ ಸಾಲದ ಋಣ ಕಟ್ಟಿಕೊಳ್ಳಬೇಕಾಗಿಲ್ಲ" ಎಂದೆನ್ನುತ್ತ, ಆ ಸಂಗತಿಯನ್ನು ಮರೆಯುವುದಕ್ಕಾಗಿ ಬೇರೆಯೆ ಪ್ರಸ್ತಾಪ ತೆಗೆದಳು. "ನನಗೆ ಈ ಸಾರಿಯ ಬಾಣಂತಿತನಕ್ಕೆ ಧಾರವಾಡಕ್ಕೆ ಹೋಗುವ ಮನಸ್ಸು. ಹೋಗದೆ ಮೂರು ವರ್ಷಗಳೇ ಆದುವು. ಅವರೂ ಬರೆಯುತ್ತಿದ್ದಾರೆ. ನೀವೊಬ್ಬರೇ ಇರುವುದನ್ನು ಕಂಡು ಹೋಗುವುದಕ್ಕೂ ಮನಸ್ಸಿಲ್ಲ."

"ನನ್ನ ಯೋಚನೆಯೇನು? ಒಂದು ಮೂರು ತಿಂಗಳ ಕಾಲ ನಾನೊ

ಬ್ಬನೇ ಇರಲಾರೆನೇ? ಅಥವಾ ಧಾರವಾಡ ಅಷ್ಟೊಂದು ದೂರದ ಊರೇ?"

"ದೂರವಲ್ಲ, ಸಮೀಪವೇ. ಆದರೂ ಹೋಗದೆ ವರ್ಷ ಮೂರಾಯಿತು. ಒಂದೊಂದು ಸಾರಿ ಹೀಗೂ ಕಾಣಿಸುತ್ತದೆ–ಅವರೆಲ್ಲರೂ ಕಷ್ಟದಲ್ಲಿರುವಾಗ ಹೋಗಿ ನೋಡಿ ಬರಬೇಕೆಂದು. ಆದರೆ ಬಾಣಂತಿತನಕ್ಕೆ ನಿಲ್ಲುವುದು ಬೇಡ ವೆಂದುತೋರುತ್ತದೆ. ಅವರ ಕಷ್ಟದಲ್ಲಿ ನನ್ನ ಚಿಂತೆಯನ್ನು ಏಕೆ ಸೇರಿಸ ಬೇಕು?"

ಒಂದು ವಾರದ ತನಕ ತವರು ಮನೆಯನ್ನು ಕುರಿತಾದ ಮಾತು ಬರು ತಿತ್ತು; ಚರ್ಚೆ ನಡೆಯುತಿತ್ತು. ತೀರ್ಮಾನ ಮಾತ್ರ-ಒಂದು ಗಳಿಗೆಗೆ ಹಾಗೆ; ಇನ್ನೊಂದು ಗಳಿಗೆಗೆ ಹೀಗೆ-ಎಂದು ಆಗುತ್ತಿತ್ತು. ಇಂದುಮತಿಯ ಮನಸ್ಸು ತವರಿಗೆ ಹೋಗಲು ತುಂಬಾ ಹಂಬಲಿಸುತ್ತದೆ–ಎಂಬುದನ್ನು ಡಾಕ್ಟರರು ಬಲ್ಲರು. ಕಳುಹಿಸುವುದಕ್ಕೂ ತೊಡಕಿಲ್ಲ. ತೊಡಕು ಒಂದೇನೆ-ಆಕೆ ಅಲ್ಲಿಂದ ಮದುವೆಯಾಗಿ ಬಂದಾಗ,ಮೈತುಂಬ ಆಭರಣ ಹಾಕಿಕೊಂಡು ಬಂದಿದ್ದಳು. ಎರಡನೆಯ ಬಾಣಂತಿತನಕ್ಕೆ ಕಳುಹಿಸುವಾಗ ಚಿನ್ನಾಭರಣವಿಲ್ಲದೆ ಕಳುಹಿಸ ಬೇಕಲ್ಲ–ಎಂಬ ಬೇಸರ ಅತಿಶಯವಾದದ್ದು. ತಮ್ಮ ಮಗಳ ಚಿನ್ನಾಭರಣ ಗಳನ್ನು ಮಾರಿಯೇ ಅಳಿಯ ಋಣ ಸಂದಾಯ ಮಾಡಿದ-ಎಂಬ ಗುಟ್ಟು ಹೊರಬೀಳಬಾರದೆಂಬ ಸಂಕೋಚ ಶಿವಪ್ಪನವರಿಗೆ. ಅದರಿಂದ ಅವರಾಗಿ ಒಂದು ದಿವಸ "ಇಂದು, ನೀನು ಹೋಗುವುದು ಹೋಗುವುದೇ. ನಾಲ್ಕು ದಿನ ಕಳೆದು ಹೋಗು. ನಾನು ಹೇಳುತ್ತಿರುವುದು ಮತ್ತೇಕಲ್ಲ–ಬರಿ ಮೈಯಿಂದ ಹೋಗುವುದು ಪಸಂದವಲ್ಲ. ನೀನು ಅದಕ್ಕಾಗಿಯೇ ಇಷ್ಟು ದಿನ ಹೋಗ ಲಿಲ್ಲ ಎಂಬ ಅನುಮಾನ ಅವರಿಗೆ ಬರುವುದು ಸರಿಯಲ್ಲ"

"ಹಾಗೇನು ನನಗೆ ಅವಸರವಿಲ್ಲ. ನನಗೀಗ ಐದು ತಿಂಗಳಷ್ಟೆ. ಇನ್ನೂ ತಿಂಗಳು ಹೋಗಲಿ; ಮತ್ತೂ ಒಂದು ತಿಂಗಳು ಹೆಚ್ಚಿದರೂ ಚಿಂತೆಯಿಲ್ಲ. ಆದಷ್ಟು ಬೇಗ ಬರುತ್ತೇನೆಂದು ಬರೆದರಾಯಿತು."

ಈ ಒಂದು ಚಿಂತೆ ಮಾತ್ರ ಇಂದುಮತಿಯ ಮನಸ್ಸಿನಲ್ಲಿ ಮನೆಗಿಂತ ಹೆಚ್ಚಿನ ಬಾಧೆ ಕೊಡುತ್ತಿತ್ತು. ಕೈಯಲ್ಲಿದ್ದುದು ಇಲ್ಲದಾದರೆ, ಶ್ರೀಮಂತಿಕೆ ಕಳೆದು ಬಡತನ ಬಂದಂತೆ ಕಂಡರೆ, ಪ್ರಪಂಚವನ್ನರಿಯದ ಎಳೆಯ ಮನಸ್ಸು ಗಳು ಸಹಿಸುವುದು ಕಷ್ಟ. ಶಾಂತಿ, ಸಮಾಧಾನಗಳು ಬರುವುದೂ ಕಷ್ಟ. ಲೋಕಾನುಭವವಿಲ್ಲದ ಬಹು ಮಂದಿ ಹೆಣ್ಣುಮಕ್ಕಳ ಬಾಳಿನಲ್ಲಿ ಸುಖ,

ಸಾಧನಗಳು ಮಿತವಾದುವು—ಉಡುವುದಕ್ಕೆ ಬೇಕಷ್ಟು ಸೀರೆ, ತೊಡುವುದಕ್ಕೆ ಮೈತುಂಬ ಚಿನ್ನ, ಆಡುವುದಕ್ಕೆ ಬಾಯಿತುಂಬ ಮಾತು, ಕಣ್ಮುಂದೆ ನಲಿದಾಡುವ ಕೂಸುಗಳು–ಈ ನಾಲ್ಕರಿಂದಲೇ ಬಾಳು ತುಂಬಿ ಹೋಗುತ್ತದೆ. ಇವುಗಳಲ್ಲಿ ಅಂತರವಾದರೆ-ಸುಖದುಃಖಗಳ ಅಂತರ ಒಂದಕ್ಕೆನಾಲ್ಮಡಿಯಾಗುತ್ತದೆ. ಈ ಅರಿವೆ,ಆಭರಣಗಳನ್ನು ನಿತ್ಯಜೀವನದಲ್ಲಿ ಉಟ್ಟು,ತೊಟ್ಟು ಮೆರೆಯಬೇಕೆಂಬ ಚಪಲ ಅವರಿಗೂ ಇರುವುದಿಲ್ಲ. ಅಮ್ಮನವರ ಗುಡಿಗೆ ಹೋಗುವಾಗಲೋ, ಊರಿನ ಜಾತ್ರೆಗಳಲ್ಲೋ, ಮದುವೆ ಮುಂಜಿಗಳಲ್ಲೋ ಅವಕ್ಕೆ ಅವಕಾಶ. ಎಳೆಯರಾಗಿದ್ದರೆ–ಅಮ್ಮನವರ ಗುಡಿಗೆ ಹೋಗುವಾಗ ಅಲಂಕಾರಗೊಂಡು ಹೋದರೆ ಸಂತೋಷ. ಬೆಳೆದವರಿಗೆ ಅದೂ ಇರುವುದಿಲ್ಲ. ಹಾಗೆ ಹೋಗುವಾಗ ಕತ್ತು, ಮೈ ಬೋಳಾಗಿದೆ–ಎಂದು ಮನಸ್ಸಿಗನಿಸಿದರೆ ಮನಸ್ಸು ಬರಿದಾದಷ್ಟೇ ನೋವು. ಇಂದುಮತಿ ಹಿಂದೆ ಚಿನ್ನಾಭರಣ ಹಾಕಿದವಳು, ತವರು ಮನೆಯಿಂದ ತಂದುದನ್ನು ಮೆರೆಯಿಸಿದವಳು. ತಾನಾಗಿ ಅವನ್ನು ವಿಕ್ರಯಿಸಲು ಕೊಟ್ಟಿದ್ದರೂ, ಈಗ•ಅವಿಲ್ಲ–ಎಂಬ ಕೊರತೆ ಸಿಜವಾದದ್ದು. ಹಾಗೆಂದು ಗುಲಾಬಿಯ ಒತ್ತಾಯಕ್ಕೂ ಕಿವಿಗೊಡದವಳು ಅವಳು. ಅವಳಿಗೆ ಅವರ ಮನೆಯ ಚರಿತ್ರೆಯು ತಿಳಿಯದ್ದಲ್ಲ. "ಅಮ್ಮ, ನನ್ನ ಚಿನ್ನ ಪೆಟ್ಟಿಗೆಯಲ್ಲಿ ಧೂಳು ಹಿಡಿಯುವುದೇಕೆ? ನನ್ನ ಈ ವೇಷಕ್ಕೆ, ಕೆಲಸಕ್ಕೆ, ಅವು ಬೇಕಾಗಿಯೇ ಇಲ್ಲ. ನನಗೆ ಅವನ್ನಿರಿಸಿಕೊಂಡು ತಿರುಗಾಡುವುದಕ್ಕೂ ಅಂಜಿಕೆ. ನಿಮಗೇನು? ಹಾಕಿಕೊಳ್ಳಬಾರದೇ? ಚಿನ್ನ ಸವೆಯುತ್ತದೆಂದೇನು? ಸವೆದರೂ ಎಷ್ಟು ಸವೆದೀತು" ಎಂದು ಅವಳು ಒತ್ತಾಯಿಸುವುದೂ ಉಂಟು.

ಹಾಗೆ ಮಾಡುವುದಕ್ಕೆ ಮಾತ್ರ ಅವಳ ಮನಸ್ಸು ಅಳುಕುತ್ತದೆ. ತನ್ನಲ್ಲಿಲ್ಲ ಎಂಬ ಕೊರತೆಯನ್ನು ಅದು ಇನ್ನಷ್ಟು ಒತ್ತಿ ಹೇಳುತ್ತದೆ. ಹಾಕಿದ್ದು ತನ್ನದಲ್ಲ–ಎಂಬ ನೋವನ್ನುಂಟುಮಾಡುತ್ತದೆ. ಹಾಗೆ ಹಾಕಿದರೂ ಯಾವಳಾದರೂ ಒಬ್ಬಳು ಪುಣ್ಯಾತ್ಗಿತ್ತಿ "ಇಂಥವನ್ನೇ ಗುಲಾಬಿಯ ಮೈ ಮೇಲೆ ಕಂಡ ಹಾಗಿದೆಯಲ್ಲ?" ಎಂದಂದರೆ ತೀರಿತು. ಅವಳೆಷ್ಟೇ ಸ್ನೇಹಿತಳಿರಲಿ, ಅವಳ ಚಿನ್ನ ತೊಡುವುದೆಂದರೆ ಅವಮಾನ. ಅಂದು ಗುಲಾಬಿಯು ಪ್ರೀತಿಯ ಕಾಣಿಕೆಯಾಗಿ ಅವಳ ಮಗು ರತ್ನಾಕರನಿಗೆ ಸರವನ್ನು ಉಡುಗೊರೆಯಾಗಿ ಕೊಟ್ಟಾಗಲೇ ಅದನ್ನೇ ಹಾಕುವುದಕ್ಕೆ ಅವಳು ಅಂಜಿದ್ದಾಳೆ.

ಅವಳ ಸ್ವಂತ ಮನೋವೃತ್ತಿ ಹೀಗಿದ್ದರೆ, ತಾರತಮ್ಯದಿಂದ ಊರ ಜನಗಳ ಮನೋವೃತ್ತಿ ಕಣ್ಣಿಗೆ ಹೊಳೆದು ಕಾಣುತ್ತದೆ. ಊರ ಜನರೂ ಮೊದಲಿನಂತಿಲ್ಲ. ಮೊದಲಿಗಿಂತ ಹೆಚ್ಚಿನ ಆಡಂಬರ, ಮೆರೆದಾಟ ಕಾಣುತ್ತದೆ. ಚಿನ್ನಕ್ಕೆ ದಿನ ದಿನ ಬೆಲೆ ಏರುತ್ತಿದೆಯಾದರೂ, ಅದನ್ನು ಧರಿಸಿ ಮೆರೆಯುವವರ ಸಂಖ್ಯೆ ಹೆಚ್ಚುತ್ತಿದೆ. ಒರಿಯ ಕಪ್ಪು ಸೀರೆಗಳಿಂದಲೇ ತೃಪ್ತಿ ಪಡುತ್ತಿದ್ದ ಹೆಂಗಸರು ರೇಶಿಮೆ, ಆರ್ಟ್ ಶಿಲ್ಕ್--ಎಂದು ವಿಪರೀತ ಬೆಲೆಯ ಸೀರೆಯುಟ್ಟು ಮೆರೆಯುವುದನ್ನು ಕಂಡರೆ, ಅವರ ಬಣ್ಣ ಬೆಡಗುಗಳು ಕಣ್ಣು ಕುಕ್ಕುತ್ತವೆ. 'ತಾನು ಡಾಕ್ಟರರ ಹೆಂಡತಿ' ಎಂದು ಸ್ವಲ್ಪವಾದರೂ ಪ್ರತಿಷ್ಠೆಯುಳ್ಳ ಇಂದುಮತಿ, ಅಂಥವರ ಸಮೂಹದಲ್ಲಿ ಸೇರಿ ಒಂದಾಗುವುದಕ್ಕೆ ಇಷ್ಟಪಡುವುದಿಲ್ಲ. ಈ ಸ್ವಸಾಧಿತ ಏಕಾಂತವಾಸದಿಂದ ಮನಸ್ಸಿನ ಬೇಸರ ಇನ್ನಷ್ಟು ಹೆಚ್ಚುತ್ತದೆ. ಶಿವಪ್ಪನವರು 'ಚಿನ್ನ ಮಾಡಿಸಿಕೊಂಡೇ ತವರಿಗೆ ಹೋಗು' ಎಂದ ದಿವಸ, ಅವಳ ಮನಸ್ಸು ಎಷ್ಟು ಸುಖದ ಸುಗ್ಗಿಯಲ್ಲಿ ತೇಲಿತೆಂದು ಹೇಳುವುದಕ್ಕಿಲ್ಲ. ಹಾಗೆ ಹೇಳಿದ ಮೂರು ದಿನಗಳಲ್ಲಿ, ಮನೆಗೇನೆ ಸೊನೆಗಾರನನ್ನು ಕರೆಯಿಸಿ, ಬಿಡುವಿಲ್ಲವೆಂದು ನಟಿಸಿದ ಅವನನ್ನು ಒತ್ತಾಯಿಸಿ, ಪವನು ತರಿಸಿ, ಮನೆಯ ಜಗುಲಿಯಲ್ಲಿ ಕುಳ್ಳಿರಿಸಿದಾಗ, ಅವಳ ಜೀವ ಎಷ್ಟು ಪ್ರಸನ್ನಗೊಂಡಿತೋ! ಒಲೆಯ ಮುಂದಕ್ಕೆ ಕಳೆಯದಷ್ಟು ವೇಳೆಯನ್ನು ಅವಳು ಸೊನೆಗಾರನ ಕುಲುಮೆಯ ಮುಂದೆ ಕುಳಿತುಕಳೆದಳು. ಮುದ್ದು ರತ್ನಾಕರ ಅಲ್ಲೇ ಬಂದು, ಅವಳ ತೊಡೆಯ ಸಿಂಹಾಸನವನ್ನೇರಿ "ನಂಗೂ ಚರ, ನಂಗೂ ಬಳೆ" ಎಂದಾಗ ಮನಸ್ಸು ಮುದುರಿತು. "ಹೋಗಲಿ, ನನ್ನದೇ ಒಂದು ಸರಪಣಿಯನ್ನು ಕಡಿಮೆಮಾಡಿ ಮಗುವಿಗೆ ಬಳೆ ಮಾಡಿಸುವ" ಎಂದಳು; ಶಿವಪ್ಪನವರು "ಪಾಪ! ಅದಕ್ಕೂ ಆಗಲಿ. ಗಂಡು ಮಕ್ಕಳೇನು-ಎಷ್ಟು ದಿನ ಹಾಕುತ್ತವೆ. ಎರಡು ಮೂರು ಪವನು ಬೇಕಾದೀತು. ಅದಕ್ಕಾಗಿ ನಿನ್ನ ಒಂದು ಸರಪಣಿ ಕಡಿಮೆಮಾಡಬೇಕಾಗಿಲ್ಲ" ಎಂದೆನ್ನುತ್ತ ಅವಳ ಹರ್ಷಕ್ಕೆ ನೆರವಾದರು.

ಈ ಸ್ವರ್ಣ ಮಾರುತವು ಬೀಸಿದುದರಿಂದ, ತಮ್ಮ ಇಂದುಮತಿಯ ಮುಖದ ಗೆಲುವು ಎಷ್ಟೊಂದು ಹೆಚ್ಚಿತೆಂದು ಮನಗಂಡ ಅವರಿಗೆ "ಪಾಪ! ಇದನ್ನು ಹಂಬಲಿಸಿ, ಹಂಬಲಿಸಿ ನನ್ನಿಂದಾಗಿ ಇದ್ದುದನ್ನು ಕಳೆದುಕೊಂಡ ಅವಳು ನಿಜಕ್ಕೂ ಎಷ್ಟೆಲ್ಲ ಬೇಸರಪಟ್ಟಳೋ" ಎಂದು ಅನಿಸಿತು.

ತಿಂಗಳಲ್ಲಿ ಚಿನ್ನಾಭರಣಗಳ ಸಂಪತ್ತು ದೊರೆಯಿತು. ಆಕೆಯನ್ನೂ, ಮಗುವನ್ನೂ ಶಿವಪ್ಪನವರು ಧಾರವಾಡದ ತನಕ ಕರೆದೊಯ್ದು ಬಿಟ್ಟು ಬಂದರು. ದೀರ್ಘ ಕಾಲದ ಬಳಿಕ ಮನೆಗೆ ಬಂದ ಅಳಿಯನನ್ನು ಕಂಡು ರಂಗರಾಯರು ನಗುತ್ತ "ಏನು ಶಿವು, ನಾವು ಬಡವರಾದ ಮೇಲೆ ನಿನಗೂ ನಿನ್ನ ಹೆಂಡತಿಗೂ ಅಷ್ಟು ದೂರವಾದೆವೇ" ಎಂದಂದಾಗ ಮಾತ್ರ ಅವರ ಮುಖ ತೀರ ಬಾಡಿತು. ಅವರ ಸಮಾಧಾನಕ್ಕಾಗಿ 'ಮಾವ, ನೀವೂ ಹಾಗೆನ್ನುತ್ತೀರಾ? ನಿಮ್ಮಿಂದಾಗಿ ನಾನೊಬ್ಬ ಮನುಷ್ಯನಾದದ್ದು; ಸಂಸಾರಿಯಾದದ್ದು. ಅದನ್ನೆಲ್ಲ ಮರೆತೇನೆಯೆ? ನಿಮಗೆ ಕಷ್ಟ ಬಂದಿತು. ನನ್ನಿಂದೇನೂ ಸಹಾಯ ಮಾಡುವುದಾಗಲಿಲ್ಲವಲ್ಲ–ಎಂಬುದರಿಂದ ಬಾರದೆ ಕುಳಿತೆ. ಅಲ್ಲದೆ ನನ್ನ ಡಾಕ್ಟರಿಕೆಯ ಕೆಲಸ ಸಹ ಏನೇನೂ ಬಿಡುವು ಕೊಡುವ ಕೆಲಸವಲ್ಲ. ಈಗ ಎರಡು ದಿನಗಳಿಗಾಗಿ ಬಂದೆ. ನನ್ನ ಮನಸ್ಸೆಲ್ಲ ಕಾಳೂರಿನಲ್ಲಿವೆ. ಒಂದು ಸೀರಿಯಸ್ ನಿಮೊನಿಯಾ ಕೇಸಿದೆ. ಮತ್ತೊಂದು ಟಾಯಿಫ್ಯಾಯಿಡ್ ಇದೆ. ನಾನು ಊರನ್ನು ಸೇರುವ ತನಕ ಅವರು ಶಾಪ ಕೊಡುತ್ತಲೇ ಇರುತ್ತಾರೆ" ಎಂದು ಸಮಾಧಾನದ ಮಾತುಗಳನ್ನು ಹೇಳಿದರು. ಅವರಿಬ್ಬರೂ ಹೊಸಬರಲ್ಲವಷ್ಟೆ. "ಸುಮ್ಮನೆ ಹೇಳಿದೆ ಶಿವು, ಚೇಷ್ಟೆಗೆ; ಅದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ" ಎಂದು ರಂಗರಾಯರೂ ಸಮಾಧಾನ ಹೇಳಿದರು.

ರಾಯರ ಸಾಂಪತ್ತಿಕ ಅನುಕೂಲತೆ ಕಡಿಮೆಯಾಗಿದ್ದರೂ, ಹಿಂದೆ ಚೆನ್ನಾಗಿ ಬಾಳಿದವರಾದುದರಿಂದ, ಬಾಯಿ ಮಾತುಗಳು ದೊಡ್ಡವೇ ಆಗಿದ್ದುವು. ಅಳಿಯನೊಡನೆ "ಹೇಗಿದೆ ನಿನ್ನ ವ್ಯವಹಾರ? ಒಳ್ಳೆಯ ಸಂಪಾದನೆ ಇದೆಯೇ? ಮೆಡಿಕಲ್ ಉದ್ಯೋಗದಲ್ಲಿ ದುಡ್ಡಿನ ಸುರಿ ಮಳೆ ಇದೆಯಂತಲ್ಲ. ಈ ಊರಿನಲ್ಲೀಗ ಒಂದು ಇಂಜಕ್ಷನಿಗೆ ಐದು ರೂಪಾಯಿ ಹೇಳುತ್ತಾರೆ. ವಿಸಿಟಿಗೆ ಹತ್ತು ರೂಪಾಯಿ. ಮದ್ದಿನ ಖರ್ಚು ಹೇಗೂ ಇದೆಯಲ್ಲ. ನೀನು ಧಾರವಾಡದಲ್ಲಿಯೇ ಬಂದಿರುತ್ತಿದ್ದರೆ ಈ ಆರೇಳು ವರ್ಷಗಳಲ್ಲಿ ಕಾರಿಟ್ಟು ಮೆರೆದಾಡ ಬಹುದಿತ್ತು" ಎಂದರು. ತಾವು ವ್ಯಾಪಾರದಲ್ಲಿ, ವ್ಯವಹಾರದಲ್ಲಿ ಸೋತು ಹೋಗಿದ್ದರೂ ಅಳಿಯನಿಗೆ "ಇನ್ನಾದರೂ ಯೋಚಿಸು. ಕಾಳೂರು ಸಂಪಾದನೆಗೆ ಅಷ್ಟು ಪ್ರಯೋಜನವಿಲ್ಲ–ಅನ್ನುತ್ತೀಯಾ. ಧಾರವಾಡಕ್ಕೆ ಬಂದು ಬಿಡಬಾರದೇ?" ಎಂದೂ ಬೋಧಿಸಿದರು. ತಂದೆಯ ಮಾತುಗಳನ್ನು ಕೇಳಿದ ಇಂದುಮತಿ, ಅವರು ಸರಿದು ಹೋದ ಮೇಲೆ "ನಮ್ಮಪ್ಪ, ನಿಮ್ಮಪ್ಪ

ಇಬ್ಬರೂ ಒಂದೇ ಜಾತಿಯವರು. ಬೇರೆಯವರಿಗೆ ಬೇಕಷ್ಟು ಬುದ್ಧಿಯನ್ನು ಹೇಳಬಲ್ಲರು" ಎಂದಂದಳು.

"ಪಾಪ! ಅವರಿಗೆ ನಿಜಕ್ಕೂ ಹಾಗೆ ಕಾಣಿಸುತ್ತಿರಬಹುದು. ನನಗೇನು ಧಾರವಾಡ ತಿಳಿಯದ್ದೇ? ಈ ಊರಲ್ಲಿಯೂ ಮೋಟರ್ ಕಾರಲ್ಲಿ ಮೆರೆಯುವ ಡಾಕ್ಟರರಿರುವಂತೆ, ಶೀಶನಿಗೆ ಬೇಕಾದ ದುಡ್ಡನ್ನು ಎಲ್ಲಿಂದ ತರಲಿ-ಎನ್ನುವ ಡಾಕ್ಟರರೂ ಇದ್ದಾರೆ. ಎಲ್ಲರ ಅದೃಷ್ಟವೂ ಒಂದೇ ತೆರನಾಗಿರುವುದಿಲ್ಲ" ಎಂದು ಹೇಳಬೇಕಾಯಿತು. ಅಂತೂ ಇದ್ದ ಎರಡು ದಿನ, ಮಾವನ ಮನೆಗೆ ತಾನು ಬಂದುದು ಒಳಿತೇ ಆಯಿತು, ಅವರಿಗಿಷ್ಟು ಸಮಾಧಾನವಾದರೂ ಆಯಿತಲ್ಲ—ಎಂದೆಣಿಸಿ ಊರಿಗೆ ಹೋದರು.

ಇಂದುಮತಿ ತವರಿನಲ್ಲಿ ಸುಖವಾಗಿದ್ದಳು ಎನ್ನುವುದಕ್ಕಿಲ್ಲ. ಅದಕ್ಕೆ ಆ ಮನೆಯ ಅವರಣವು ಕಾರಣವಾಗಿತ್ತು; ಮನೆ ಮೊದಲಿನದ್ದೇ. ದೊಡ್ಡ ಮನೆಯೇ; ಜನರು ತುಂಬಿದ ಸಂಸಾರ. ಮೊದಲಿನ ಯಾವ ಬೆಡಗೂ ಇಲ್ಲ; ಹಾಲು ಹಯನಿನ ಅನುಕೂಲತೆಯಿಲ್ಲ. ಮನೆಯಲ್ಲಿ ನಲಿದಾಡುವ ಮಕ್ಕಳನ್ನು ಕಂಡರೆ, ಗೌಳಿಗ ಕೊಡುವ ನೀರಿಂದ ಅವು ಬದುಕಿದಂತಿತ್ತು. ಅತ್ತ ಆಕೆಗೆ ಗಂಡ ಹಣ ಕೊಟ್ಟು ಹೋಗಿದ್ದರೂ ಅದು ವೆಚ್ಚವಾಗುವುದೊಂದೆ ಕಾಣು ತಿತ್ತು. ಎಷ್ಟಿದ್ದರೂ ಸಾಕಾಗದ ಮನೆ. ಬಾಣಂತಿ ತನಕ್ಕೆ ಬಂದವಳಿಗೆ ತಾನು ಬಂದುದು ಉಚಿತವೇ-ಎಂದು ಯೋಚಿಸುವುದಕ್ಕೆ ಹತ್ತು ದಿನ ಹಿಡಿಯಲಿಲ್ಲ. ರತ್ನಾಕರನ ಲೂಟಿ, ತುಂಟತನಗಳ ಸಲುವಾಗಿ ಅವನ ಬೆನ್ನ ಹಿಂದೆಯೇ ಇರ ಬೇಕು. ತಾನು ಊರಲ್ಲಿದ್ದರೆ ಕರೆದ ಗಳಿಗೆಯಲ್ಲಿ ನೆರವಾಗ ಬಲ್ಲ ಗುಲಾಬಿ ಇಪ್ಪಳು. ಇಲ್ಲಿ ಅಂಥ ದಾದಿಯರಿಲ್ಲ, ಗೆಳತಿಯರಿಲ್ಲ. ಇದ್ದರೂ ಕರೆಯಿಸು ವುದಕ್ಕೆ ಅನೂಕೂಲತೆಯಿಲ್ಲ. 'ತಿಂಗಳ ದಿನ ಇಲ್ಲಿದ್ದು, ತಂದೆಯನ್ನೊಲಿಸಿ, ಊರಿಗೆ ಮರಳುವುದು ಒಳ್ಳೆಯದಲ್ಲವೆ' ಎನ್ನುವ ಯೋಚನೆ ಅವಳಿಗೆ ಬರು ವಂತಾಯಿತು.

ಶಿವಪ್ಪನವರು ಊರಿಗೆ ಮರಳಿದ ತಿಂಗಳೊಳಗೆ ಇಂದುಮತಿಯಿಂದ "ನಾನು ನಾಡಿದ್ದು ಬರುತ್ತೇನೆ. ಅಮ್ಮನನ್ನು ಒಪ್ಪಿಸಿದ್ದೇನೆ. ಅವರನ್ನೆಲ್ಲ ನೋಡ ಬೇಕೆಂಬ ಆಸೆಯಿತ್ತು. ಅದು ಕಳೆಯಿತು. ಹೆರಿಗೆಗೆ ನಾನು ಇಲ್ಲಿಯೇ ನಿಂತರೆ ಅವರಿಗೂ ಕಷ್ಟ, ನನಗೂ ಕಷ್ಟ" ಎಂದು ಬರೆದಿದ್ದಳು. ಅವಧಿ ಸಮೀಪವಾಗಿತ್ತು. ಪತ್ರ ಮುಖೇನ ಕಾರಣವೇನೆಂದು ಕೇಳುವುದಕ್ಕೆ ಅವ

ಕಾಶವಿರಲಿಲ್ಲ. ಪತ್ರ ಬಂದ ಮೂರನೆಯ ದಿನ ಸಂಜೆಗೆ, ಧಾರವಾಡದಿಂದ ಬರುವ ಬಸ್ಸಿನ ದಾರಿಯನ್ನು ಕಾದು, ಮಡದಿಯನ್ನೂ, ಮಗನನ್ನೂ ಸ್ವಾಗತಿಸಿ, ತಮ್ಮ ಮನೆಗೆ ಕರೆದೊಯ್ದರು. ಇಂದು ಸಂತೋಷ ಚಿತ್ತಳಾಗಿಯೇ ಬಂದುದರಿಂದ ಬಂದುದೇ ಒಳಿತಾಯಿತೆಂಬ ಸಮಾಧಾನ ಅವರಿಗೂ ಉಂಟಾಯಿತು.

ಧಾರವಾಡದ ಯಾತ್ರೆಯಿಂದ ಶಿವಪ್ಪನವರ ಮನಸ್ಸು ಸಮಾಧಾನಗೊಂಡಿತು. 'ತಾನೊಂದು ಮನೆಯನ್ನು ಕಟ್ಟಿಸಬಾರದೇಕೆ? ಮುಂದುವರಿಸಿದಷ್ಟೂ ಆಗಬೇಕಾದ ಕೆಲಸ ಹಿಂದೆ ಉಳಿಯುತ್ತದೆ. ತಂದೆ ಬಂಗಲೆಯನ್ನು ಕಟ್ಟುವ ಭೀಷ್ಮ ಪ್ರತಿಜ್ಞೆಯನ್ನು ನಡೆಯಿಸಲಿ, ಬಿಡಲಿ, ತಾನಾದರೂ ತನ್ನ ಸಲುವಾಗಿ, ತನ್ನ ಮಡದಿಯ ಸಲುವಾಗಿ, ಮನೆಗೆ ಬರುವ ನಾಲ್ವರು ಇಷ್ಟ ಮಿತ್ರರ ಸಲುವಾಗಿ-ಒಂದು ಮನೆಯನ್ನು ಕಟ್ಟಿಸಿಯೇ ಬಿಡುತ್ತೇನೆ. ಮಾವನಿಗೂ ಅದನ್ನು ಕಂಡು ಸಂತೋಷವಾದೀತು,ಎಂದು ನಿರ್ಧರಿಸಿದರು. ಮನೆಗೆ ಬೇಕಾಗುವ ಸಾಮುಗ್ರಿಗಳ ಬೆಲೆಯನ್ನು ವಿಚಾರಿಸಿದರು. ಹೊಸ ಮನೆ ಕಟ್ಟಿಸಿದ ಮಿತ್ರರನ್ನು "ಎಷ್ಟು ಖಿತ್ತು, ಏನು ಬಿತ್ತು?" ಎಂದು ಕೇಳಿ ನೋಡಿದರು. ಕೇಳಿ ದೊರಕಿಸಿಕೊಂಡಂಥ ಅನುಭವ ಮಾತ್ರ ಉತ್ಸಾಹಕರವಾಗಿರಲಿಲ್ಲ. ಏರಿದ ಬೆಲೆ, ಸಾಮುಗ್ರಿಗಳ ಅಭಾವ, ಕೆಲಸಗಾರರ ಕೊರತೆ-ಇವೆಲ್ಲ ತಲೆ ತಿರುಕು ಹುಟ್ಟಿಸುತ್ತಿದ್ದುವು. "ಯುದ್ಧ ಬೇಗನೆ ಮುಗಿಯಲಾರದೇ" ಎಂದು ಆಶಿಸಿದರು. ದವಾಖಾನೆಯಲ್ಲಿ ಮನೆ ಕಟ್ಟುವ ಖರ್ಚು ವೆಚ್ಚ ವಿಚಾರಿಸುತ್ತಿರುವ ಡಾಕ್ಟರರ ಮಾತುಗಳನ್ನು ಕೇಳುತ್ತಿದ್ದ ಗುಲಾಬಿಯು "ಏನು ಡಾಕ್ಟರರೆ, ಹೆದರಿ ಕುಳಿತರೆ ಏನೂ ಆಗುವ ಹಾಗಿಲ್ಲ. ನೀವು ಕೆಲಸ ತೊಡಗಿದರೆ ಆಗಿಯೇ ಆಗುತ್ತದೆ" ಎಂದು ಹೇಳಿದಳು. "ಅಂತೂ ಡಾಕ್ಟರರ ಮನಸ್ಸಿಗೆ ಆ ಯೋಚನೆ ಬಂದಿದೆಯಲ್ಲ; ಬಂದಾಗಲೇ ಅದಕ್ಕೆ ಗಾಳಿ ಹಾಕಬೇಕು" ಎಂದು ತನ್ನಲ್ಲಿಯೇ ಯೋಚಿಸಿ, ಇಂದುಮತಿಯನ್ನು ಹುರಿದುಂಬಿಸತೊಡಗಿದಳು. "ಇಂದಮ್ಮ, ಅವರು ಯಾಕಷ್ಟು ಹೆದರುವುದಂತೆ? ಕೆಲಸತೊಡಗಿದರೆ ಅವರಿಗೆಂದೂ ಕಷ್ಟವಾಗಲಾರದು. ಎಷ್ಟು ಜನರ ಗುರುತಿದೆ; ಏನು ಕತೆ? ಒಂದಿಷ್ಟು ಮರಮುಟ್ಟು ಬೇಡಿದರೆ ಸಾಹೇಬರು ಕೊಡಲಾರರೆ? ಕಬ್ಬಿಣ, ಸಿಮೆಂಟು ಕೇಳಿದರೆ ಕಂಟ್ರೋಲ್ ದರದಲ್ಲಿ ವಾಸಪ್ಪಯ್ಯನವರು ಕೊಡಲಾರರೆ? ಅವರ ಮಕ್ಕಳಿಗೆ ಇವರ ಹಂಗಿಲ್ಲವೆ? ಪರ್ಮಿಟ್ ಬೇಕೇ ಆದರೂ

ಅದೊಂದು ಕಷ್ಟವಾಗಲಾರದು. ಕೂಲಿ ಕಸಬಿನವರು ಹೆಚ್ಚು ಕೇಳುತ್ತಾರೆ– ನಿಜ. ಆದರೆ ಯುದ್ಧ ಮುಗಿದ ಮೇಲೆಯೂ ಅದು ಕಡಿಮೆಯಾದೀತೆಂದು ನಾನು ನಂಬುವುದಿಲ್ಲ" ಎಂದು ಉಪದೇಶ ಮಾಡಿದಳು. ಅಷ್ಟೆಲ್ಲ ವಿವರವಾಗಿ ಗೆಳತಿ ಉಪದೇಶಿಸಿದ್ದನ್ನು ಇಂದು ಗಂಡನಿಗೆ ಸಲ್ಲಿಸಿದರೆ, ಅವರು "ಯಾರು ಹೇಳಿದ್ದು ನಿನಗೆ? ಗುಲಾಬಿಯಲ್ಲವೆ?" ಎಂದು ನಕ್ಕು ನುಡಿದರು.

"ಅವಳೇನು ಅಷ್ಟು ಹೆಡ್ಡಳೇ?"

"ನಿನಗೆ ತಿಳಿಯದು. ಅವಳು ಹೇಳುವಂತಿಲ್ಲ–ಸ್ಥಿತಿ. ನಾನು ಮೊನ್ನೆ ಯಷ್ಟೆ ಅಂಗಡಿಯ ನೆಲ ಕಿತ್ತು ಹಾಳಾಗಿತ್ತೆಂದು ದುರಸ್ತಿಮಾಡಲು ಹೇಳಿದೆ. 'ಒಂದೆರಡು ಚೀಲ ಸಿಮೆಂಟಿದ್ದರೆ ಸಾಕು' ಎಂದು ಮೇಸ್ತ್ರಿ ಹೇಳಿದ್ದ. ಸಾಹು ಕಾರರಲ್ಲಿಗೆ ಜನ ಕಳುಹಿಸಿದೆ. 'ಬಂದುದೆಲ್ಲ ಮುಗಿದಿದೆ. ಇನ್ನೆಂದು ಬರು ತ್ತದೋ, ಇನ್ನೊಮ್ಮೆ ಬಂದಾಗ ಕೊಡುವ' ಎಂದು ಹೇಳಿದರು."

"ಅಷ್ಟೇಯೇ!"

"ಅಷ್ಟೇ ಅಲ್ಲ. ಕೊನೆಗೆ ನಮ್ಮ ಮೇಸ್ತ್ರಿಯೇ ಬೇರೆಯವರ ಮೂಲಕ ಚೀಲಕ್ಕೆ ಹತ್ತು ರೂಪಾಯಿಗಳಂತೆ ಕೊಟ್ಟು, ಅವರಿಂದಲೇ ತಂದುಕೊಟ್ಟ. ಲಾಭಕ್ಕಾಗುವಾಗ ಯಾರಿಗೂ ನಮ್ಮ ಗುರುತಿರುವುದಿಲ್ಲ. ಇನ್ನೊಂದು ಅಂಥ ಕತೆಯನ್ನು ಹೇಳುತ್ತೇನೆ. ಜವುಳಿ ಮಳಿಗೆಯ ಪುಂಡಲೀಕ ಪ್ರಭುಗಳಲ್ಲಿ ಹೊಸ ಪಂಚೆಗಳು ಬಂದಿದ್ದಾವೆ ಎಂದು ಕೇಳಿದೆ. ಕೇಳಿದವನೇ ಒಂದು ಚೀಟಿ ಕಳುಹಿಸಿದೆ. ನನ್ನ ಚೀಟಿಯು ಹೋಗುವುದರೊಳಗೆ ಬಂದದ್ದೆಲ್ಲಾ ಮುಗಿಯಿತು, ಎಂದರು. ಏನಿಲ್ಲ, ಮೂರು ದಿನಗಳಿಗೆ ಮುಂಚೆ ತಮ್ಮ ಮಗು ವಿಗೆ ಅತಿಸಾರವೆಂದು ಮದ್ದು ಕೇಳುವುದಕ್ಕೆ ಬಂದಿದ್ದರು. ಆದರೆ ನಾನು ಪಂಚೆ ಕೇಳಿದರೆ 'ಇಲ್ಲ' ಎಂದರು. ಅದಕ್ಕೆ ಸಮನಾದ ಪುರಸ್ಕಾರವೂ ದೊರೆ ಯಿತು. ಹಾಗೆಲ್ಲ ಕಣ್ಣೆದುರಿಗೇನೆ ಬಂದ ಮಾಲನ್ನು ಮಂಗಮಾಯ ಮಾಡಿ ದರೆ, ನಾನು ಸುಮ್ಮನೆ ಕುಳಿತಂತೆ, ಎಲ್ಲರೂ ಕುಳಿತಿರುತ್ತಾರೆಯೆ? ಯಾರೋ ಚಾಡಿ ಬೆಸೆದುಕೊಟ್ಟರು. ಮಾಮಲೇದಾರರು ಬಂದು ಅವರ ಅಂಗಡಿ ಜಡತಿ ಮಾಡಿದರು. ಬಿಲ್ ಪುಸ್ತಕದಲ್ಲಿ ಬರೆದಂತೆ ಮಾಲು ಮುಗಿದಿತ್ತು. ಪಂಚೆ ಗಳು ಮಾತ್ರ ಒಳಗೇನೆ ಇದ್ದುವು. ಈಗ ಸಿಕ್ಕಿಬಿದ್ದಿದ್ದಾರೆ. ಕೈದು ಮಾಡಿ ದರು. ಜಾಮೀನಿನ ಮೇಲೆ ಬಿಟ್ಟಿದ್ದಾರೆ. ಅದನ್ನು ಕಂಡ ಮೇಲೆ ನನ್ನ ಮನಸ್ಸು ತಡೆಯದೆ "ಏನು ಸಾಹುಕಾರರೆ, ನನಗೂ ಇಲ್ಲ ಎಂದು ಟೋಪಿ

ಹಾಕಿದಿರಲ್ಲ" ಎಂದುದಕ್ಕೆ ಅವರೆಂದದ್ದು ಗೊತ್ತೇ? 'ನಾನೆಂದಾದರೂ ಹಾಗೆ ಮಾಡಿಯೇನೆ? ನಿಮ್ಮ ಜನ ಬಂದಾಗ ಅಂಗಡಿಯಲ್ಲಿ ಎಂಟು ಮಂದಿ ಇದ್ದರು. ಅವರೆದುರಿಗೆ ಮಾಲನ್ನು ಹೊರಕ್ಕೆ ತೆಗೆದರೆ, ಮೊದಲೇ ಕೇಳಿ ಕೊಡುತ್ತೇನೆಂದವರಿಗೆ, ನಾನು ಸಾಮ ಹಾಕಬೇಕು. ಅವರಿಗೆಲ್ಲ ತೆಗೆದಿರಿಸಿ-ಎರಡು ಜತೆ ಉಳಿಯುತಿತ್ತು. ಮಾಲು ಬರುವ ಮೊದಲೇ ನಾವು ಬಿಲ್ ಬರೆಯುವುದು ಅದಕ್ಕೆ. ಯಾವನೋ,ವ್ಯಾಪಾರದ ಕಷ್ಟ ಸುಖ ಗೊತ್ತಿಲ್ಲದವ,ಅನ್ಯಾಯವಾಗಿ ನನ್ನನ್ನು ದೂರಿ ಮಾಮಲೇದಾರರಿಗೆ ತಿಳಿಸಿದ. ಇಲ್ಲದೆ ಹೋಗಿದ್ದರೆ ಆ ರಾತ್ರಿಯೇ ನಿಮ್ಮ ಮನೆಗೆ ಒಂದು ಪಂಚೆಯನ್ನು ತಂದುಕೊಡುತಿದ್ದೆ--ನಾನಾಗಿ. ನಿಮ್ಮಂಥವರಿಗೆ ತಂದುಕೊಡದಿದ್ದರೆ, ನಾವು ಊರಿನಲ್ಲಿದ್ದೇನು ಫಲ? ನನ್ನ ಗ್ರಹಚಾರ. ನ್ಯಾಯವಾಗಿ ಆರ್ಡರ್ ಬರೆದಿಟ್ಟುಕೊಂಡು, ಅದೇ ಕ್ರಮದಲ್ಲಿ ಬಿಲ್ ಬರೆದಿಟ್ಟದ್ದು ನನ್ನ ಅಪರಾಧವಾಯಿತು. ಒಟ್ಟಾರೆ ನಮ್ಮ ಸರಕಾರಕ್ಕೆ ಸಾಹುಕಾರರ ಬಗೆಯುವರನ್ನು ಹಿಂಡಿ,ಯುದ್ಧ ನಿಧಿಗೆ ಹಣಮಾಡಬೇಕಾಗಿದೆ. ಅವಕ್ಕೆ ನ್ಯಾಯ ನೀತಿ ಎಂಬುದಿಲ್ಲ. ನಾನು ಮಾಮಲೇದಾರರ ಮುಂದೆ ಸತ್ಯದ ಸಂಗತಿಯನ್ನು ಹೇಳಿದೆ:'ವಾರ್ ಫಂಡಿಗೆ ಕೊಡುವ ತ್ರಾಣ ನನಗಿಲ್ಲ. ಬೇಕಾದರೆ ಬಟ್ಟೆ ಲೈಸನ್ಸ್ ರದ್ದು ಮಾಡಿ' ಎಂದೆ. 'ದಾವೆ ಮಾಡುತ್ತಾರಂತೆ. ಮಾಡಲಿ ನೋಡುವ' ಎಂದು ಉದ್ದವಾದ ಪುರಾಣವನ್ನೇ ತೆಗೆದರು. ಅದರಲ್ಲಿ ಸತ್ಯವೆಷ್ಟು, ಸುಳ್ಳೆಷ್ಟು ಎಂದು ಪರಮಾತ್ಮನೇ ಹೇಳಬೇಕು. ಹಾಗೆ ಪ್ರತಿಯೊಬ್ಬನೂ ಘಟಿಂಗ ಎಂದು ನಾವು ತಿಳಿಯುವುದೂ ತಪ್ಪು. ನಾಲ್ಕು ಜನ ಮೋಸಮಾಡುತ್ತಾರೆಂದು ಉಳಿದವರನ್ನು ವಂಚಕರೆಂದು ಹೇಳುವುದೇ?"

"ನೋಡುವ; ಮನೆ ಕಟ್ಟುತ್ತೇನಪ್ಪ. ದೇವರಿದ್ದಾನೆ. . . ."ಎನ್ನುತ್ತಿರುವಾಗ, ಮನೆಗೆ ತುಸು ದೂರದ ರಸ್ತೆಯಿಂದ ಒಂದು ಮೋಟರಿನ ಶಂಖವಾದ್ಯ ಬಲವಾಗಿ ಕೇಳಿಸಿತು. ಜಗುಲಿಯಲ್ಲಿ ನಿಂತು ಹಣಕಿ ನೋಡಿದರು. "ನಮ್ಮ ಗಂಪು ಸಿಂಗರ ಮೋಟರೆಂದು ಕಾಣುತ್ತದೆ. ನೋಡು ಇಂದುಮತಿ, ಅದೃಷ್ಟಎಂದರೆ ಹಾಗಿರಬೇಕು. ಅವನು ನಮ್ಮ ಕಾರ್ವಿ ವೆಂಕಟುವಿನ ಮಗ. ಹೆಚ್ಚಿನ ವಿದ್ಯೆಯಿಲ್ಲ; ಬುದ್ಧಿ ಅಷ್ಟಕ್ಕಷ್ಟೆ. ಈವತ್ತಿಗೆ ದೊರೆಯಂತಿದ್ದಾನೆ. ಕಾರ್ ಇದೆ, ಲಾರಿಗಳಿವೆ. ದೊಡ್ಡ ದೊಡ್ಡ ಗುತ್ತಿಗೆ ಮಾಡಿಕೊಂಡು ಸಾವಿರಾರು ರೂಪಾಯಿ ಗಳಿಸುತಿದ್ದಾನೆ" ಎನ್ನುವಾಗಲೇ ಗದ್ದೆಗಳನ್ನು ಹಾದು, ಓಣಿಯನ್ನು ದಾಟಿ, ತನ್ನ ಬೂಟ್ಸುಗಳು ಕೊಳೆಗೊಂಡುದಕ್ಕೆ ಬೇಸರಿಸಿದ

ಗಂಪುವಿನ ಸವಾರಿಯು ಅವಸರದಿಂದ ಅಲ್ಲಿಗೆ ಬಂದಿತು. ಹಿತ್ತಿಲಿಗೆ ಕಾಲಿರಿಸುತ್ತಲೇ, ಯಾರನ್ನೋ ಕೇಳುವಂತೆ "ಹೌದೆ-ಶಿವಪ್ಪ ಡಾಕ್ಟರರ ಮನೆ ಇದೇ ಅಲ್ಲವೆ?" ಎಂದು ಕೂಗಿ ಕೇಳಿದ. ಆಚೆ ಯಾರೋ ಅವನನ್ನು ಕಂಡು ತಲೆ ಅಲ್ಲಾಡಿಸಿರಬೇಕು. ಡಾಕ್ಟರರ ಮನೆಗೆ ಬಂದ ಅವನ ಆತ್ಮವಿಶ್ವಾಸಕ್ಕೇನೂ ಕಡಿಮೆಯಿಲ್ಲ. ಅವರಿಗೊಂದು ಮಿಲಿಟರಿ ಸಲಾಮು ಕೊಟ್ಟು "ಡಾಕ್ಟರರೆ, ನೀವು ಥಟ್ಟನೆ ಹೊರಡಬೇಕಾಯಿತಲ್ಲ. ಈ ಮೂಲೆಯಲ್ಲಿ ಏಕೆ ಮನೆಮಾಡಿಕೊಂಡಿರಿ ಮಹಾರಾಯರೆ? ಈ ಗದ್ದೆ, ಓಣಿಗಳನ್ನು ದಾಟಿ ಕಾರು ಬರುವ ಹಾಗೆಯೂ ಇಲ್ಲ" ಎಂದು ನುಡಿದು, "ಒಂದು ಸಾರಿ ನಮ್ಮ ಮನೆಯ ತನಕ ಬರಬೇಕು" ಎಂದು ಜರೂರಿಯಿಂದ ಮಾತನಾಡಿದ. ಅವನ ಮಾತಿನ ಸರಣಿಯನ್ನು ಕಂಡರೆ, ಅತಿ ಹೆಚ್ಚಿನ ಪರಿಚಯವಿದ್ದವರೂ ಸಹ, ಅಂಥ ಸಲುಗೆಯಿಂದ ಮಾತನಾಡಿಸಲಾರರು ಎನಿಸಬೇಕು.

ಶಿವಪ್ಪನವರು "ಹೌದು. ಮನೆ ಸ್ವಲ್ಪ ಮೂಲೆಯಲ್ಲಿದ್ದು ತೊಂದರೆಯೇ. ಇರಲಿ, ನೀವೇನು ಬಂದದ್ದು?"

"ಮನೆಗೆ ಹೋಗುವ. ಕಾರು ರಸ್ತೆಯಲ್ಲಿ ನಿಂತಿದೆ."

"ಆಯಿತು-ಬರುತ್ತೇನೆ. ಮದ್ದು ಗಿದ್ದು ಬೇಡವೇ? ನರ್ಸನ್ನು ಕರೆದುಕೊಳ್ಳಬೇಕೆ? ಯಾರು ಕಾಯಿಲೆ, ಏನು ಕಾಯಿಲೆ-ಎಂದು ತಿಳಿಯದೆ ಹೊರಡುವುದೇ?"

"ಕಾಯಿಲೆ ಕಾಯಿಲೆಯೇ; ನಾನಾದರೂ ಮನೆಯಲ್ಲಿದ್ದೇನೆಯೇ? ನಿನ್ನೆಯಲ್ಲಾಪುರಕ್ಕೆ ಹೋಗಿದ್ದೆ. ನಾಲ್ಕಾರು ದಿನಗಳ ತನಕ ಮನೆಯಲ್ಲಿರಲಿಲ್ಲ. ಈಗ ಬಂದು ನೋಡುವಾಗ ಹೇಳುವುದೇನು! ಎದೆ ನೋವು, ಮಣ್ಣು, ಮಸಣ-ಎಂದು ಮಲಗಿದ್ದಾಳೆ ನನ್ನ ಹೆಂಡತಿ. ನಮ್ಮ ಅಪ್ಪನ ಸವಾರಿಯೂ ಊರಲ್ಲಿಲ್ಲ. ಹೆಂಗುಸರ ವ್ಯಾಪಾರವಲ್ಲವೆ. . . . ಏನೇನೋ ಮದ್ದು ಗಿದ್ದು ಮಾಡಿದ್ದಾರೆ. ಈಗ ಅವಳಿಗೆ ಉಸಿರುಬಿಡುವುದಕ್ಕೂ ಕಷ್ಟವಾಗಿದೆ" ಎಂದಾಗ ಆತನ ಮಾತುಗಳಿಂದ ಇಂಥ ಕಾಯಿಲೆ ಎಂದು ತಿಳಿಯುವಂತಾಗಲಿಲ್ಲ. ನೋಡಿಯೇ ನಿರ್ಧರಿಸಬೇಕು. ತಕ್ಷಣವೇ ಹೊರಟರು. ಕೈಚೀಲ ಹಿಡಿದುಕೊಂಡು ಅವನ ಮೋಟರನ್ನು ಸೇರಿ, ಅಲ್ಲಿಂದ ದವಾಖಾನೆಗೆ ಹೋಗಿ, ಇನ್ನಷ್ಟು ಮದ್ದುಗಳನ್ನು ತುಂಬಿಸಿಕೊಂಡರು. "ಅದಕ್ಕೆಲ್ಲ ಏನವಸರ? ಮೊದಲು ಅವಳನ್ನು ನೋಡಿ, ಪರೀಕ್ಷಿಸಿ, ಮದ್ದಿಗೆ ಇನ್ನೊಮ್ಮೆ ಬರುವ" ಎನ್ನುತ್ತಾನೆ ಗಂಪು.

ಒಂದೆರಡು ತಿಂಗಳಿಂದಲೂ ಡಾಕ್ಟರರು ಕಾರ್ವಿ ಕೇರಿಯ ಕಡೆಗೇನೆ ಹೋಗಿರಲಿಲ್ಲ. ಗಂಪುವಿನ ಮನೆಯ ಭಾಗಕ್ಕೆ ಸುಳಿಯದೆಯೆ ಎರಡು ವರ್ಷಗಳೇ ಸಂದಿದ್ದುವು. ಈಗೇನು? ಕಾರು ಹೊರಟು ಹೋಗಿ ನಿಂತುದೇ ಅವರ ಮನೆಯ ಮುಂದಕ್ಕೆ. ಆ ಮರಳಿನ ದಂಡೆಯಲ್ಲಿ ಕಲ್ಲಿನ ಜಲ್ಲಿಯನ್ನು ಸುರಿದು, ಮೋಟರು ಹೋಗುವ ರಸ್ತೆಯನ್ನು ಗಂಪುವೇ ಮಾಡಿಸಿದ್ದಾನೆ. ಆ ತಂದೆ, ಮಕ್ಕಳಿಬ್ಬರೂ ಸೇರಿ ಹಳೆಯ ಮನೆಯನ್ನು ಕಿತ್ತೆಸೆದು, ದೊಡ್ಡ ಮನೆಯನ್ನು ಕಟ್ಟಿಸಿದ್ದಾರೆ. ಕಾರಿಂದ ಇಳಿಯುವ ಮೊದಲೇ ಆತ ಹೆಮ್ಮೆಯಿಂದ "ನಮ್ಮ ಮನೆಗೆ ಡಾಕ್ಟರರು ಈ ವರೆಗೆ ಬಂದಿಲ್ಲ ಎಂದು ಕಾಣುತ್ತದೆ" ಎಂದ.

"ಈಗ ಬಂದೆನಲ್ಲ" ಎಂದರು ಶಿವಪ್ಪನವರು.

ಅವರಿಲ್ಲದು ಮನೆಯ ಅಂಗಳವನ್ನು ಸೇರಿದೊಡನೆಯೆ "ಯಾರು ಮಕ್ಕಳೇ ಅದು? ಒಳ್ಳೆಯ ನಾಲ್ಕು ಸೀಯಾಳ ತೆಗೆಯಿರಿ" ಎಂದು ಸರದಾರರ ಹುಕುಮ್ ಹೊರಟಿತು.

"ಏನಿದು ನಿಮ್ಮ ಕತೆ? ನನ್ನನ್ನು ಕಾಯಿಲೆಯವರನ್ನು ತೋರಿಸಲು ಕರೆದದ್ದೇ? ಅಥವಾ ಮದುವೆಯ ಸಮ್ಮಾನಕ್ಕೇ" ಎಂದು ಡಾಕ್ಟರರು ವಿಸ್ಮಯ ಸೂಚಿಸಿದ ಮೇಲೆ, ಅವರನ್ನು, ಕೋಣೆಯೊಂದರಲ್ಲಿ ಮಂಚದ ಮೇಲೆ ಮಲಗಿಸಿದ ಹೆಂಡತಿಯ ಬಳಿಗೆ ಕರೆದೊಯ್ದ. ಆಕೆಯ ಹಣೆ ತುಂಬ ಸೊಪ್ಪಿನ ಲೇಪವಿತ್ತು, ಕತ್ತಿಗೂ ಲೇಪವಿತ್ತು; ಹಣೆಗೆ ಹಚ್ಚಿದ ಲೇಪ ಅರ್ಧ ತಲೆಗೆ ಟೊಪ್ಪಿಯಾಗಿತ್ತು; ತೀರ ಸಮೀಪದಲ್ಲಿ ಉಗುಳುವುದಕ್ಕೊಂದು ಪೀಕದಾನಿಯೂ ಇತ್ತು. ಅಷ್ಟರಲ್ಲಿ ಆತನ ತಾಯಿ, ರೋಗಿಯ ಬಳಿಗೆ ಬಂದು "ತಿಮ್ಮಿ, ಗಂಜಿ ಈಗ ಉಣ್ಣುತ್ತೀಯಾ ಹ್ಯಾಗೆ? ಸ್ವಲ್ಪ ಉಂಡು ಬಿಡು ಮಗು" ಎಂದು ಉಪಚರಿಸುವ ಸಂಭ್ರಮ ಬೇರೆ. ಮಲಗಿದವಳು ಮಾತ್ರ ಕಣ್ಣನ್ನು ಅಲುಗಾಡಿಸುತ್ತಿರಲಿಲ್ಲ. ಅವಳ ಎದೆಯುಸಿರು ನಿಡಿದು ಬರುತಿತ್ತು; ಕೆಲವೇ ದಿನದ ಜ್ವರ, ನಿರಾಹಾರಗಳಿಂದ ಚರ್ಮವೆಲ್ಲ ಸಿರಿಗಟ್ಟಿತ್ತು. ಶಿವಪ್ಪನವರು ಆ ಮುದುಕಿಯನ್ನು, ಅವರ ಹಿಂದೆ ಬಾಲವಾಗಿ ಬಂದಂಥ ನಾಲ್ಕಾರು ಮಂದಿ ಹೆಂಗುಸರನ್ನು, ಆಚೀಚೆ ಸರಿದು ನಿಲ್ಲಲು ಹೇಳಿದರು. ಸ್ಟೆತಸ್ಕೋಪನ್ನು ಹಿಡಿದು ಎದೆ,ಬೆನ್ನುಗಳ ಪರೀಕ್ಷೆ ಮಾಡಿದರು. ಆತುರದಿಂದ ಮತ್ತೂ,ಮತ್ತೂ ಬೆರಳಿಂದ ಶರೀರವನ್ನು ಬಡಿದು ಸಪ್ಪುಳ ಮಾಡಿ ಆಲಿಸಿದರು. 'ಗಂಪು' ಎಂದು ಕರೆದರು.

"ಏನು ಸರ್" ಎಂದು ಬಂದಿತು ಉತ್ತರ.

"ತುಂಬ ಅಜಾಗ್ರತೆ ನಿಮ್ಮದು. ಇದು ನಿಮೋನಿಯ. ಎರಡೂ ಶ್ವಾಸ ಕೋಶಗಳಿಗೆ ಅಡರಿದೆ. ತೀರ ಕಠಿಣಾವಸ್ಥೆಯಲ್ಲಿ ಈಕೆ ಇದ್ದಾಳೆ. ಇಷ್ಟು ವಿಷಮಕ್ಕೆ ಹೋಗುವ ತನಕವೂ ಬರಿದೆ ಕುಳಿತಿರಲ್ಲ! ಅದರಲ್ಲಿಯೂ ಗಂಜಿ ತಿನಿಸುವುದು,ಊಟಮಾಡಿಸುವುದು-ಇಂಥ ಮೂರ್ಖತನ ಮಾಡಿದರೆ ಹೇಗೆ? ಅವಳು ಉಳಿಯಬೇಕು ಎಂದು ನಿಮಗಿದ್ದರೆ, ನಾನು ಹೇಳಿದ ಹಾಗೆ ಕೇಳು ವಂತಿರಬೇಕು. ಕೊಡುವ ಮದ್ದು, ಹೇಳುವ ಪಥ್ಯಗಳನ್ನು ಎಚ್ಚರದಿಂದ ನಡೆ ಸುವ ಹಾಗಿದ್ದರೆ ಪ್ರಯೋಜನ" ಎಂದರು. ಅಷ್ಟರಲ್ಲಿ ತಿಮ್ಮಿಯ ಚಿಕ್ಕ ಮಗು ವೊಂದು ಬಳಿಗೆ ಬಂದು "ಅಮ್ಮಾ, ಅಮ್ಮಾ" ಎಂದು ಕರೆಯಿತು. ಮಗುವಿನ ಧ್ವನಿಗೆ ಆಕೆ ಕಣ್ಣು ಹೊರಳಿಸಿದಳು; ತನ್ನ ಭವಿಷ್ಯವನ್ನೂ, ಅದರ ಭವಿಷ್ಯ ವನ್ನೂ ನೆನೆದು, ದುಃಖ ಉಕ್ಕಿಬಂದಿತು. ಬಹು ಹೊತ್ತು ಮಾತನಾಡಿರದ ಆಕೆ ಈಗ ರೋದಿಸಿದಳು; "ಡಾಕ್ಟರರೆ, ಒಂದು ಸಾರಿ ನನ್ನನ್ನು ಬದುಕಿಸಿರಿ" ಎಂದು ದುಃಖದಿಂದ ನುಡಿದಳು; ನುಡಿತದ ಬೆನ್ನಿಗೆ ಕೆಮ್ಮಿದಳು. ಆ ಕೆಮ್ಮಿನ ಭರವು ಅವಳ ಶರೀರವನ್ನೆಲ್ಲ ಒಮ್ಮೆಗೇ ಕುಲುಕಿಸಿತು. ಪರೀಕ್ಷಿಸುವ ಕಾಲ ದಲ್ಲಿ "ಕೆಮ್ಮು, ಗಟ್ಟಿಯಾಗಿ ಕೆಮ್ಮು, ಗಟ್ಟಿ ಉಸಿರು ತೆಗೆ" ಎಂದು ಎಷ್ಟು ಡಾಕ್ಟರರು ಹೇಳಿದರೂ ಹಾಗೆ ಮಾಡದ ಅವಳು, ಈಗ ಕೆಮ್ಮಿದಾಗ, ಅವಳ ಬೇನೆಯ ಘೋರ ರೂಪವೆಲ್ಲ ಸ್ಪಷ್ಟಗೊಂಡಿತು. ಕೆಮ್ಮು, ಕಫಗಳಿಂದಾಗಿ ಅರೆ ಗಳಿಗೆಯ ತನಕ ಒದ್ದಾಡಿದಳು. ಅವಳನ್ನು ಹಿಡಿದು, ತಿರುಗಿ ಒರಗಿಸುವ ತನಕ ಗಂಪುವಿಗೂ ಜೀವವಿಲ್ಲ; ಆಕೆಗೂ ಉಸಿರಿಲ್ಲ. ಗಂಪು ಸರದಾರನ ಧೈರ್ಯದ ಎದೆ ಆಗ ಕುಸಿಯಿತು. ತನ್ನ ಇನಿಯಳಿಗೆ ಅಷ್ಟೊಂದು ವಿಷಮ ಸ್ಥಿತಿ ಬಂದೊದಗಿದೆ ಎಂಬ ತಿಳಿವೇ ಅವನಿಗಾಗಿರಲಿಲ್ಲ. ಗುತ್ತಿಗೆ, ವ್ಯವಹಾರ, ಬಾಡಿಗೆ-ಎಂದು ಮೂರು ಲೋಕ ಸುತ್ತುತ್ತಿದ್ದ ಅವನಿಗೆ, ಅವಳ ಪಾಡು ತಿಳಿ ದಿರಲಿಲ್ಲ. ಮನೆಯ ಹೆಂಗುಸರೊ-ಶೀತ, ಶೀತಜ್ವರ ಎಂದು ಮೊದಲು ಉದಾ ಸೀನರಾದರು. ಅನಂತರ ಗೃಹ ಚಿಕಿತ್ಸೆಯನ್ನು ನಡೆಸಿದರು. ಆ ಮೇಲೆ ಹರಕೆಗಳನ್ನು ಹೊತ್ತರು.

ಗಂಪು ಇಷ್ಟನ್ನು ಕಂಡ ಮೇಲೆ "ಡಾಕ್ಟರರೇ" ಎಂದೆನ್ನುವಾಗಲೇ ಅವನ ಮಾತು ನಡುಗುತ್ತ ಬಂದಿತು. ವಿಧಿ ಏನು ಬರೆದಿದ್ದಾನೋ ಎಂಬ ಅನುಮಾನ ಅವನಿಗೂ ಹುಟ್ಟಿತು. "ನಾನು ಖರ್ಚಿಗೆ ಹೆದರುವವನಲ್ಲ; ನಿಮ್ಮ

ಲಿಕ್ಕಕ್ಕೆ ನನ್ನ ತಿಮ್ಮಿಯು ಉಳಿಯಬೇಕು. ನಾನು ಇನ್ನು ಯಾರನ್ನೂ ಕರೆಯಿಸುವುದಿಲ್ಲ. 'ಶೀನಪ್ಪ ಕಂಪೌಂಡರರಿಗೆ ಹೇಳು' ಅಂದರು. 'ಮಡಗಾಂವಕರರನ್ನು ಕರೆಯಿಸು'—ಎಂದರು. ನನಗೆ ಹೆಚ್ಚು ಗೊತ್ತಿಲ್ಲವಾದರೂ, ನಿಮ್ಮನ್ನು ನಂಬಿ ಕರೆದೆ; ನಿಮ್ಮ ಕೈಗುಣದಿಂದ ಅವಳನ್ನು ಉಳಿಸಿಕೊಡಬೇಕು" ಎಂದು ಬೇಡಿದ.

"ಗಂಪು, ನೀನು ನನಗೆ ಅಷ್ಟೆಲ್ಲವನ್ನು ಹೇಳಬೇಕಾಗಿಲ್ಲ ಬಂದಿದ್ದೇನೆ. ಬಂದ ಮೇಲೆ ನನ್ನ ಕೆಲಸ" ಎಂದು ಮದ್ದನ್ನು ಚುಚ್ಚಿದರು. ಅವಸರವಾಗಿ ದವಾಖಾನೆಗೆ ಹೋಗಿ ಬಂದು ಆಕೆಯ ಎದೆಗೆ ಎಂಟಿಫ್ಲೊಜಿಸ್ಟಿನ್ ಲೇಪವನ್ನು ಹಾಕಿದರು. ಅವಳ ಕುಸಿಯುವ ಶಕ್ತಿಯನ್ನು ಉಳಿಸುವ ಪ್ರಯತ್ನ ಮಾಡಿದರು. ಆ ಸಂಜೆಯ ತನಕವೂ ಎರಡೆರಡು ಬಾರಿ ಆತುರಗೊಂಡು ರೋಗಿಯ ಬಳಿಗೆ ಹೋಗಿಬಂದರು. ಜ್ವರ ಇಳಿಯಲಿಲ್ಲ; ಕೆಮ್ಮು ಕಡಿಮೆಯಾಗಲಿಲ್ಲ. ರೋಗಿ ಉಳಿದಾಳೆಂಬ ವಿಶ್ವಾಸವೂ ಶಿವಪ್ಪನವರಿಗೆ ಬರಲಿಲ್ಲ. ಆ ಸಂಜೆ ಗಂಪುವನ್ನು ಕರೆದು "ಸಾಹುಕಾರರೇ, ನನ್ನಿಂದಾಗುವ ಪ್ರಯತ್ನ ಮಾಡುತ್ತೇನೆ. ಧೈರ್ಯ ಹೇಳಲಾರೆ; ನನ್ನ ಹತ್ತಿರವಿರುವ ಔಷಧದಿಂದಲೇ ಆದೀತೆಂದು ಹೇಳಲಾರೆ. ಇನ್ನೊಂದು ಔಷಧವಿದ್ದರೆ ಧೈರ್ಯವನ್ನಾದರೂ ಹೇಳುತ್ತಿದ್ದೆ; ಪೆನ್ಸಿಲಿನ್ ಎಂಬುದೊಂದಿದೆ; ಇಲ್ಲಿ ಸಿಗಲಾರದು. ಹುಬ್ಬಳ್ಳಿಯಲ್ಲಿ, ಸರಕಾರಿ ಆಸ್ಪತ್ರೆಗಳಲ್ಲಿ ಸಿಗುತ್ತದೋ ಏನೋ. ಗೋವೆಯಲ್ಲಿ ಸಿಗುತ್ತದೆ ಎನ್ನುತ್ತಾರೆ. ರಾತ್ರಿ ಬೆಳಗಾಗುವುದರೊಳಗೆ ಅದನ್ನು ತರಿಸುವುದಕ್ಕೆ ಸಾಧ್ಯವಿದ್ದರೆ ನೋಡಿ."

"ಏನೆಂದು ಬರೆದುಕೊಡಿ."

ಡಾಕ್ಟರರು ಹೆಸರನ್ನು ಬರೆದುಕೊಟ್ಟರು. ಬರೆದು ಕೊಡುತ್ತ "ಬೆಲೆ ಎಷ್ಟೋ ಏನೋ! ಇನ್ನೂರೋ, ಮುನ್ನೂರೋ; ಸಿಕ್ಕಿದರೆ ತರಬೇಕು. ಬೆಲೆ ತುಂಬ ಹೆಚ್ಚು" ಎನ್ನುವಾಗ ಆತ "ಅಷ್ಟೇ ಅಲ್ಲವೆ?" ಎಂದ. "ಗೋವೆಗೇ ಹೋಗುವುದು ಒಳ್ಳೆಯದು. ಹೋದರೆ ನಾನೇ ಹೋಗಬೇಕಷ್ಟೆ. ಬೆಳಗಿನೊಳಗೆ ಬರುತ್ತೇನೆ. ಅಲ್ಲಿಯ ತನಕ ಅವಳನ್ನು ಕಾಯುವ ಭಾರ ನಿಮ್ಮದು" ಎಂದು ಹೇಳಿ ಹೊರಟುಹೋದ.

ಪಾಪ! ಆ ರಾತ್ರಿ ಶಿವಪ್ಪನವರು ತಮ್ಮ ಮನೆಗೆ ಹೋದರೆ, ವಿರಮಿಸುವುದಕ್ಕಾಗಲಿಲ್ಲ. "ಅಲ್ಲಿಯ ತನಕ ಕಾಯುವ ಭಾರ ನಿಮ್ಮದು" ಎಂದಿದ್ದಾನೆ

ಗಂಪು. ಆ ಮಾತು ಅವರ ಮನಸ್ಸನ್ನು ಕೊರೆಯತೊಡಗಿತು. ಮದ್ದಿನ ಚೀಲ ವನ್ನು ಹಿಡಿದುಕೊಂಡು, ಮನೆಯಿಂದೆದ್ದರು. ದಾರಿಯಲ್ಲಿ ದಾದಿ ಗುಲಾಬಿ ಯನ್ನು ಕರೆದುಕೊಂಡು ನೆಟ್ಟಗೆ ಗಂಪುವಿನ ಮನೆಗೆ ಹೋದರು. ಅವರಷ್ಟು ಮಾಡಬೇಕೆಂದಿರಲಿಲ್ಲ. ಆದರೆ ತಿಮ್ಮಿ ಉಳಿದಾಳೆಂಬ ಧೈರ್ಯ ಅವರಿಗಿರ ಲಿಲ್ಲ; ಉಳಿಸಬೇಕೆಂಬ ಹಟವೇನೋ ಇತ್ತು. ತಮ್ಮಲ್ಲಿರುವ ಸಲ್ಫಾ ವರ್ಗದ ಔಷಧವನ್ನು ಕೊಟ್ಟಿದ್ದರು. ಆದರೆ ಮನಸ್ಸಿನೊಳಗೆ-ಮದ್ದಿನ ಆಟ ಸಣ್ಣದು; ವಿಧಿಯ ಆಟ ದೊಡ್ಡದು—ಎಂದೇ ತೋರುತಿತ್ತು. ಆ ರಾತ್ರಿ ವೆಂಕಟುವಿನ ಮನೆಯ ಜಗುಲಿಯಲ್ಲಿ ಅವರುಆರಾಮ ಕುರ್ಚಿಯೊಂದರಲ್ಲಿ ವಿರಮಿಸಿದರು. ಗುಲಾಬಿ ರೋಗಿಯ ಕಾವಲನ್ನು ಮಾಡಿದಳು. ತೂಕಡಿಕೆಯಲ್ಲಿ, ಎಚ್ಚರದಲ್ಲಿ ರೋಗಿಯ ಗಳಿಗೆ ಗಳಿಗೆಯ ಪರಿಶೀಲನೆಯಲ್ಲಿ ಸಮಯ ಕಳೆದರು. ಥಟ್ಟನೆ ಏನೋ ಮನಸ್ಸಿಗನಿಸಿತು. "ಪೆನ್ಸಿಲಿನ್ ತಾ ಎಂದಿದ್ದೆ. ಮೆಡಿಕಲ್ ಜರ್ನಲ್ ನಲ್ಲಿ ಓದಿಕೊಂಡ ನೆನಪಷ್ಟೆ ಇದೆ. ಚಿಕಿತ್ಸೆಯ ಕ್ರಮ ಸಂಪೂರ್ಣ ನೆನಪಿಗೆ ಬಾರದಲ್ಲ" ಎಂದು ಅವರು ಇನ್ನೊಮ್ಮೆ ಅಂಗಡಿಗೆ ಓಡಿದರು. ಅಂಗಡಿಯ ಲ್ಲಿಯೇ ಕುಳಿತು, ದೀವಿಗೆ ಹೊತ್ತಿಸಿ, ಅದರ ಪಾರಾಯಣ ಮಾಡಿದರು.

ಬೆಳಗಿನ ನಸುಕಿಗೆ ಗಂಪುವಿನ ಗಾಡಿಯ ಹಾರ್ನ್ ಕೇಳಿಸಿತು. ಧಾ ವಿಸಿ ಹೊರಕ್ಕೆ ಬಂದು, ಅವನನ್ನು ನಿಲ್ಲಿಸಿ, ಅವನ ಬಂಡಿಯನ್ನೇರಿ, ಅವನ ಮನೆಗೆ ಹೋದರು. ಗಾಡಿಯು ನಿಂತ ಕ್ಷಣ ಆತ "ಇಗೊಳ್ಳಿ ಡಾಕ್ಟರರೇ,ನಿಮ್ಮ ಪೆನ್ಸಿಲ್ ಮದ್ದು. ಆರುನೂರು ರೂಪಾಯಿ ಬಿತ್ತು. ಆರುನೂರಲ್ಲ; ಸಾವಿರ ವಾದರೂ ಕೊಡುತಿದ್ದೆ. ಎರಡು ಮೂರು ತಾರಿಗಳನ್ನು ದಾಟುವುದಲ್ಲವಾಗಿ ದ್ದರೆ, ಇನ್ನೆರಡು ಗಂಟೆಗಳಷ್ಟು ಮುಂಚೆ ಬರುತಿದ್ದೆ" ಎಂದು ನುಡಿದ. ದಾರಿ ಯಲ್ಲಿ ಡಾಕ್ಟರರೂ ಹೆಚ್ಚಿನ ಭರವಸೆ ಹೇಳಲಿಲ್ಲ.

ಅವರ ಮನೆಯನ್ನು ಸೇರಿದಾಗ ರೋಗಿ ಕಣ್ಣು ಬಾಡಿಸಿದ್ದಳು. ದೂರ ದಲ್ಲಿ ಚಾಪೆಯ ಮೇಲೆ ಗುಲಾಬಿ ಒರಗಿದ್ದಳು. ಡಾಕ್ಟರ ಜತೆಗೆ, ತಿರುಗಿ ತನ್ನ ಹೆಂಡತಿಯ ಮುಖವನ್ನು ನೋಡಲು ನಿಂತ ಗಂಪುವಿಗೆ, ಆಕೆಯ ತೇಜೋ ವಿಹೀನವಾದ ಮುಖವನ್ನು ಕಾಣುವಾಗ 'ಹೋಯಿತೇ' ಎನ್ನುವಷ್ಟು ದಿಗಿಲಾ ಯಿತು. ಒಂದು ದಿನದ ಚಿಂತೆಯಿಂದಲೇ ಅವನು ಹಣ್ಣಾಗಿ ಕೂಸಿನಂತಾ ಗಿದ್ದ. ಮನಸ್ಸೆಲ್ಲ ಹಿಂಜಿ ಹೋಗಿತ್ತು. 'ತಾನೆಂಥ ಮೂರ್ಖ! ದುಡ್ಡನ್ನು ಸಂಪಾದಿಸುವ ಅವಸರದಲ್ಲಿ ಮನೆಯನ್ನಿಷ್ಟು ದಿನ ಮರೆತೆನಲ್ಲ' ಎಂಬ

ಭಾವನೆ ಮೂಡಿತ್ತು. ಅಷ್ಟೇ ವೇಳೆಗೆ ಮತ್ತಿ ಗುಂಡಿಗೆ ಜನ ಹೋಗಿ, ಅಲ್ಲಿಂದ ವೆಂಕಟು ಬಂದಿದ್ದ. ಸೊಸೆಯನ್ನು ಕಂಡ ಅವನ ಬಾಯಿಂದ ಈಗಾಗಲೇ ಸಾವು ಆದಷ್ಟು ಅಳು ಬೊಬ್ಬರಿದು ಬಂತು.

"ಯಾಕೆ ಗಾಬರಿಯಾಗುತ್ತೀರಿ? ಮದ್ದು ಬಂದಿದೆ" ಎಂದು ರೋಗಿಯ ತೋಳಿಗೆ, ಅದನ್ನು ಚುಚ್ಚಿ ತುಂಬಿಸಿದರು. ಹಾಗೆ ತುಂಬಿಸುವಾಗ ಮಾತ್ರ ಮನಸ್ಸು ದೈವವನ್ನು ಮೊರೆಯಿಡುತಿತ್ತು. 'ದೇವರೇ-ಇದು ನನ್ನ ಮಾನ ಉಳಿಸಿದಂತಲ್ಲ. ನಿನ್ನ ಮಾನ ಉಳಿಸಿದಂತೆ' ಎಂದೆನ್ನುತಿತ್ತು.

ಬೆಳಕು ಹರಿಯಿತು; ಕತ್ತಲು ಕಳೆಯಿತು. ದೈವವೊ, ಔಷಧವೊ-ಯಾವುದೇ ಇರಲಿ, ಹೊಸ ಔಷಧವನ್ನು ನಾಲ್ಕು ಬಾರಿ ಕೊಟ್ಟ ಮೇಲೆ ಸ್ಥಿತಿ ಪಲ್ಲಟವಾಯಿತು. ಆ ಸಂಜೆಯ ತನಕ ಅವರು ಯಾವ ಮಾತನ್ನೂ ಹೇಳದೆ ಚಿಕಿತ್ಸೆ ನಡೆಯಿಸಿದರು; ಉಳಿದವರಿಗೆ ದೈರ್ಯವನ್ನೂ ಹೇಳಿದರು. ಮರುದಿನ ಸಂಜೆ "ಇನ್ನೇನೂ ಹೆದರ ಬೇಡಿ. ನಿಮ್ಮ ಹೆಂಡತಿ ಪಾರಾದಳು" ಎಂದಾಗ, ಗಂಪುವಿನ ಕಣ್ಣಲ್ಲಿ ನಿಜಕ್ಕೂ ಆನಂದ ಭಾಷ್ಪ ಉದುರಿತು. ಆ ಮಾತನ್ನು ಅವರು ಹೇಳಿ ಮುಗಿಯಿಸುವುದರೊಳಗಾಗಿ, ಮೊಣಕಾಲೂರಿ ಶಿವಪ್ಪನವರ ಪಾದಗಳನ್ನು ಹಿಡಿದು, ತನ್ನ ಕಂಬನಿಯ ಸ್ನಾನವನ್ನು ಅವರ ಪಾದಗಳಿಗೂ ಮಾಡಿಸಿಯಾಯಿತು. ಮನಸ್ಸು ಲಘುವಾಯಿತು, ಕಂಠ-ಸಡಿಲಾಯಿತು, ಭೀತಿ ತೊಲಗಿತು. "ಡಾಕ್ಟರರೇ, ನನ್ನ ತಿಮ್ಮಿ ಸತ್ತಿದ್ದರೆ ನಾನು ಜೀವ ಇಟ್ಟುಕೊಳ್ಳುತ್ತಿರಲಿಲ್ಲ. ಅವಳ ಕೈಹಿಡಿದ ದಿನದಿಂದ, ಅವಳ ಕಾಲಿನ ಧೂಳು ಈ ನೆಲಕ್ಕೆ ಬಿದ್ದಂದಿನಿಂದ, ನಾನು ಮನುಷ್ಯನಾದದ್ದು, ಲಕ್ಷ್ಮಿ ಒಲಿದದ್ದು" ಎಂದು ಹಸುಗೂಸಿನಂತೆ ತನ್ನ ಕೃತಜ್ಞತೆಯನ್ನು ಸೂಚಿಸಿದ. ತಿಮ್ಮಿಗೆ ಸಲಿಸಬೇಕಾಗಿದ್ದ ಮಾತಿನ ಮುಡಿಪನ್ನು ಅವರ ಮುಂದೆ ಸಲ್ಲಿಸಿದ.

ಶಿವಪ್ಪನವರು ಪಟ್ಟ ಶ್ರಮ, ವಹಿಸಿದ ಆತುರ, ಬಿಟ್ಟ ನಿದ್ದೆ-ಎಲ್ಲವೂ ಸಾರ್ಥಕವಾದುವು. ಗಂಪುವಿಗೆ ಅವರೊಬ್ಬರು ದೇವರೇ ಅನಿಸಿದರು. ಅವನ ಬಾಯಲ್ಲಿ "ಕಾಳೂರಿನವರಿಗೆ ನಮ್ಮ ಡಾಕ್ಟರರ ಯೋಗ್ಯತೆ ಗೊತ್ತಿಲ್ಲ. ಅವರು ಮುಂಬಯಿಯಲ್ಲಿದ್ದರೆ ಸಾವಿರಾರು ರೂಪಾಯಿ ಗಳಿಸಬಹುದು. ಅವರಲ್ಲಿದ್ದರೆ ನನ್ನ ಹೆಂಡತಿಯೆಲ್ಲೋ, ನಾನು ಎಲ್ಲೋ" ಎಂದು, ಹೋದ ಹೋದಲ್ಲಿ ಅವರ ಸಲುವಾಗಿ ಪ್ರಚಾರ ಮಾಡಿದರೂ, ಪ್ರತಿವಾದಿಯಾಗಿ ನಿಂತಿರುವ ಕಂಪೌಂಡರ ಶೀನಪ್ಪನಂಥ ವ್ಯಕ್ತಿಗಳು "ಪೆನ್ಸಿಲಿನ್ ತಂದು ಕೊಟ್ಟರೆ ನೆಗಡಿ,

ಕೆಮ್ಮಲು, ನಿಮೋನಿಯಗಳನ್ನು ಗುಣಮಾಡುವುದಕ್ಕೆ ಶಿವಪ್ಪ ಡಾಕ್ಟರರು ಬೇಕೇ? ವಂಡರ್ ಡ್ರಗ್ ಎನ್ನುತ್ತಾರೆ ಅದನ್ನು. ಯುದ್ಧದಿಂದಾಗಿ ನಮ್ಮಂಥವರ ಕೈಗೆ ಸಿಗುವುದಿಲ್ಲ. ಗಂಪುವಿನಂಥವರಿಗೆ ಎಲ್ಲೆಲ್ಲೂ ಕೈಯಿದೆ; ದುಡ್ಡು ಕೊಡುವ ತ್ರಾಣವಿದೆ. ಕೊಟ್ಟ, ತಂದ. ಇವರ ಕೈ ಮೇಲಿರಿಸಿದ. ಇವರೊಂದು ತೋಳನ್ನು ಚುಚ್ಚಿ ಮದ್ದು ತುಂಬಿಸಿರಬಹುದು ನೆಪಕ್ಕೆ" ಎಂದು ಪ್ರತಿ ಮಾತನ್ನಾಡಿದರೂ, ಅದರಿಂದ ಶಿವಪ್ಪನವರ ಹೆಸರಿಗೆ ಕೊರತೆ ಬರಲಿಲ್ಲ.

ಶಿವಪ್ಪನವರು, ಆ ಮದ್ದು ಬರುವ ತನಕವಾದರೂ ರೋಗಿಯ ಉಸಿರನ್ನು ಉಳಿಸಿ, ವಿಷಮಕ್ಕೆ ತಿರುಗಿದ ಬೇನೆಯು ಮತ್ತೂ ವಿಷಮಕ್ಕೆ ತಿರುಗದಂತೆ ನೋಡಿಕೊಳ್ಳುವುದಕ್ಕಾದರೂ ಸ್ವಲ್ಪ ಶ್ರಮ, ಬುದ್ಧಿಗಳು ಬೇಕೆಂದು ಶೀನನಂಥ ಮಹಾ ಪಂಡಿತನಿಗೆ ಹೇಗೆ ಹೊಳೆಯಬೇಕು?

ಆ ದಿನ ಎಂದರೆ 'ಇನ್ನು ನಿಮ್ಮ ಹೆಂಡತಿ ಪಾರಾದಳು' ಎಂದು ಡಾಕ್ಟರರು ಹೇಳಿ ಅಲ್ಲಿಂದ ಹೊರಡುವ ವೇಳೆಗೆ ಅವರಿಗೆ ಒಂದು ಪರಿಹಾಸ್ಯದ ಮಾತನ್ನು ಆಡುವ ಮನಸ್ಸಾಯಿತು. ಅವರು ತೀರ ದಣಿದಿದ್ದರು; ನೀರಡಿಕೆಯಾಗಿತ್ತು; ಗಂಪು ಬಂದ ಗಳಿಗೆಯಲ್ಲಿ ಮಾಡಿದ ಉಪಚಾರದ ನೆನಪಿತ್ತು: "ಈಗಲಾದರೆ ಒಂದು ಸೀಯಾಳ ತರಿಸಿ ಕೊಡು; ತುಂಬ ಬಾಯಾರಿಕೆಯಾಗಿದೆ" ಎಂದರು.

"ಮೊನ್ನೆ ತರಿಸಿದ್ದನ್ನು ನೀವು ಕುಡಿಯಲೇ ಇಲ್ಲ."

"ಮೊನ್ನೆ ಕುಡಿಯುವುದಕ್ಕೆ, ನಿನ್ನ ಬುದ್ಧಿಯಂತೆ ನನ್ನ ಬುದ್ಧಿಯೂ ಸ್ವಾಧೀನದಲ್ಲಿರಲಿಲ್ಲ. ಅದನ್ನು ತರಿಸಿದ ನೀನೇ ಕೊಡಲು ಮರೆತಿರಿ" ಎಂದು ನಕ್ಕು ಹೇಳಿದರು.

ಈ ಪ್ರಕರಣದಿಂದ ಗುಲಾಬಿಯ ಮನಸ್ಸಿಗೇನೊ ತುಂಬ ಸಂತೋಷವಾಯಿತು. ಗಂಪು ಅಸಂಸ್ಕೃತನಾದವನು; ಆದರೂ ಧಾರಾಳಿ, ಅಲ್ಪಬುದ್ಧಿಯವನಲ್ಲ. ನಮ್ಮ ಡಾಕ್ಟರರಿಗೆ ಯಾವ ಸಹಾಯ ಬೇಕಾದರೂ ಮಾಡಬಲ್ಲ ಶಕ್ತಿಯುಳ್ಳವ–ಎಂಬ ಸೂಚನೆಯಾಗಿತ್ತು. ನಾಲ್ಕು ದಿನ ಅವರ ಚಾಕರಿ ಮಾಡಿದ ಅವಳಿಗೇನೆ, ಮನೆಗೆ ಬಂದಾಗ "ಇಕೊಳ್ಳಿ ಅಮ್ಮ, ಇದು ನಿಮ್ಮ ಮೆಹನತ್ತಿಗೆ. ಅವಳು ಸಮ ಹುಶಾರಾಗಿ, ತಿರುಗಾಡುವ ಸ್ಥಿತಿಗೆ ಬಂದ ಮೇಲೆ ನಮ್ಮ ಮನೆಗೆ ನೀವೊಂದು ಸಾರಿ ಬಂದುಹೋಗಬೇಕು." ಎಂದು ಕೈಮೇಲೆ ಒಂದು ನೋಟನ್ನು ಇರಿಸಿದ. ಚಿಲ್ಲರೆ ನೋಟಲ್ಲ, ನೂರರ ಒಂದು ನೋಟು.

ಕಾರಿನಲ್ಲಿ ಅವಳನ್ನೂ ಡಾಕ್ಟರರನ್ನೂ ಕರತಂದು, ಅವಳನ್ನು ಬಿಟ್ಟು, ಮುಂದೆ ಸರಿದು ಹೋಗುವಾಗ ಡಾಕ್ಟರರ ಕಿವಿಯಲ್ಲಿ "ಅವಳಿಗೆ ಕೊಟ್ಟದ್ದು ಸಾಕಲ್ಲವೆ?" ಎಂದು ಕೇಳಿದ.

"ಸಾಲದೆ ಏನು? ಅವಳೂ ತುಂಬ ದಣಿದಳು. ಮೂರು ನಾಲ್ಕು ದಿನ ನಿದ್ರೆ ಬಿಟ್ಟು ಕಾವಲು ಹಾಕಿದ್ದಾಳೆ."

"ನಾನು ನೋಡಲಿಲ್ಲವೆ? ದೇವರು ನಮಗೆ ಕೊಟ್ಟಿರುವಾಗ ಇನ್ನೊಬ್ಬರಿಗೆ ಕೊಡುವಾಗ ಕೈ ಗಿಡ್ಡ ಮಾಡಬಾರದು."

"ಹಾಗೆ ತಿಳಿಯುವವರು ಕಡಿಮೆ."

"ನಾನು ಡಾಕ್ಟರರೆ, ನಿಮಗೆ ಈಗೇನೂ ಕೊಡುವುದಿಲ್ಲ. ಹಾಗೆಂದು ಮರೆತು ಬಿಟ್ಟೆ—ಎಂದು ತಿಳಿಯಬೇಡಿ. ನಿಮ್ಮ ಮರ್ಯಾದೆಗೆ ತಕ್ಕ ಹಾಗೆ ಕೊಡಬೇಕಲ್ಲ".

ಒಂದು ಕ್ಷಣಕ್ಕೆ ಶಿವಪ್ಪನವರು ಅವಾಕ್ಕಾದರು.

"ಇನ್ನೇನೂ ಎಣಿಸಬೇಡಿ. ನೀವು ಇಂತಿಷ್ಟೇ ಕೊಡಬೇಕು ಎಂದರೆ ಕೊಡುತ್ತೇನಲ್ಲ; ಆದರೆ ಒಂದು ಜೀವವನ್ನೇ ಉಳಿಸಿದ್ದೀರಿ. ಅದರ ಬೆಲೆಯೆಷ್ಟೆಂದು ನಾನು ಬಲ್ಲೆನೇ"ಎಂದಾಗ, ಶಿವಪ್ಪನವರ ಮನಸ್ಸು ತುಂಬ ತೃಪ್ತಿಗೊಂಡಿತು. 'ಈ ವ್ಯಕ್ತಿ ಜನಗಳೆನ್ನುವ ಹಾಗಿಲ್ಲ. ಅವನು ದುಡ್ಡು ಮಾಡಿದ್ದಾನೆ. ದುಡ್ಡಿನ ಸೊಕ್ಕಿನಿಂದ ಮೆರೆಯುತಿದ್ದಾನೆ' ಎಂದು ಜನ ಆಡಿಕೊಳ್ಳುತ್ತಾರೆಯೆ ಹೊರತು, ಅವನ ಮನಸ್ಸು ಎಷ್ಟು ಉದಾರವಾಗಿದೆ; ನಡತೆ ಎಷ್ಟು ಸರಳವಾಗಿದೆ—ಎಂದು ತಿಳಿದವರು ಕಡಿಮೆ. ಅಂಥವನು ನನ್ನ ಋಣ ಇಟ್ಟುಕೊಳ್ಳಲಾರ. ನನಗೊಂದು ಪ್ರಯೋಜನವಾಗುವ ರೀತಿಯಲ್ಲಿ ಸಂಭಾವನೆ ಕೊಟ್ಟಾನು. ನಾನು ಬಾಯಾರೆ ಕೇಳುವುದಕ್ಕಿಂತ, ಆತ ಸಂತೋಷದಿಂದ ತಾನಾಗಿ ಕೊಡುವುದನ್ನು ಕೊಂಡರೆ ಭೂಷಣ—ಎಂದು ತೋರಿತು. ಗಂಪು ಅವರನ್ನು ಮನೆಯ ಹಾದಿಯಲ್ಲಿ ಬಿಟ್ಟು, 'ಥೇಂಕ್ಸ್' ಎಂದು ಕೂಗುತ್ತ ಹೊರಟುಹೋದ.

ಮನೆಗೆ ಬಂದು, ಈ ಎಲ್ಲ ಕತೆಗಳನ್ನು ಶಿವಪ್ಪನವರು ತಮ್ಮ ಇಂದುಮತಿಗೆ ತಿಳಿಸಿದಾಗ, ಅವಳಿಗೆ ಅಂಥ ವಿಚಿತ್ರ ನಡತೆಯ ಅರ್ಥವೇ ಹೊಳೆಯಲಿಲ್ಲ. 'ಗುಲಾಬಿಗೆ ನೂರು ರೂಪಾಯಿ ಕೊಟ್ಟವರು ತನ್ನ ಗಂಡನಿಗೆ ಬರಿಯ ಮಾತಿನ ಉಪಚಾರದಿಂದಲೇ ಮುಗಿಸಿಬಿಟ್ಟರಲ್ಲ' ಎಂದು ತೋರಿತು.

ಇಲ್ಲ–ಗೌರವಕ್ಕೆ ತಕ್ಕಂತೆ ಕೊಡುತ್ತೇನೆಂದು ಅಬ್ಬರದ ಮಾತುಗಳನ್ನು ಹೇಳಿದರೂ ಐನೂರು, ಸಾವಿರ ಕೊಟ್ಟಾನೆಂದು ತಿಳಿಯುವುದಕ್ಕೆ ಸಾಧ್ಯವೆ? ಅಷ್ಟು ದುಡ್ಡು ಯಾರಿಗೆ ಹೆಚ್ಚಾಗಿದೆ? ಗುಲಾಬಿಗೆ ದುಡ್ಡು ಕೊಟ್ಟಿರಬಹುದು. ಅದು ಅವಳ ಕೆಲಸಕ್ಕೆಂದು ಕೊಟ್ಟುದಕ್ಕಿಂತ ಹೆಚ್ಚಾಗಿ ಹೆಣ್ಣುತನ ನೋಡಿ ಕೊಟ್ಟಿರಬೇಕು. ಹೀಗೆ ಯಾವ್ಯಾವ ಬಗೆಯಲ್ಲಿ ಮನಸ್ಸು ಹರಿದರೂ ಶಿವಪ್ಪನವರು ತಾಳಿದ ವಿಶ್ವಾಸ, ಅವಳ ಮನಸ್ಸಿನಲ್ಲಿ ಮೂಡಲಿಲ್ಲ.

ಅನಂತರ ಶಿವಪ್ಪನವರಲ್ಲೂ ಗಂಪುವಿನಲ್ಲೂ ಬೆಳೆದು ಬಂದ ಮಿತ್ರತ್ವ ಗಾಢವಾದದ್ದೇ ಎನ್ನಬೇಕು. ಅವರ ಗದ್ದೆ, ಓಣಿಗಳನ್ನು ದಾಟಿ, ಮನೆಗೆ ಬಂದು ಮಾತನಾಡಿಸುವಷ್ಟು ತಾಳ್ಮೆ ಗಂಪುವಿನಲ್ಲಿಲ್ಲವಾದರೂ, ಕಾರಿನಲ್ಲಿ ಹೋಗುವಾಗ ಅವರ ದವಾಖಾನೆಯ ಮುಂದೆ ನಿಂತು, ನಾಲ್ಕು ನಿಮಿಷ ಕಾಲ ಮಾತನಾಡದೆ ಎಂದೂ ಹೋಗುತ್ತಿರಲಿಲ್ಲ. ದೂರದ ಪಯಣವಿದ್ದರೆ ಬಂದು, ನಿಂತು "ನಮಸ್ಕಾರ ಡಾಕ್ಟರರೇ, ನಾನೀಗ ಕೊಲ್ಲಾಪುರಕ್ಕೆ ಹೊರಟೆ. ಏನಾದರೂ ಮದ್ದು ಗಿದ್ದು ಬೇಕಾದರೆ ಹೇಳಿ" ಎಂದು ಅವರನ್ನು ಒತ್ತಾಯದಿಂದ ಕೇಳಿ, ಔಷಧಗಳ ಹೆಸರನ್ನು ಬರೆದುಕೊಂಡು ಅದನ್ನು ಖಂಡಿತವಾಗಿಯೂ ತಂದುಕೊಡುತ್ತಾನೆ. ಬೆಲೆಯನ್ನು ಅವರಾಗಿ ಕೇಳಿ ಕೊಟ್ಟರೆ ಕೊಳ್ಳುತ್ತಾನೆ. ಅಂಥ ವ್ಯವಹಾರಗಳಲ್ಲಿ ಕಿಂಚಿತ್ತು ಲಾಭ ಪಡೆಯುವುದು ಸಾಧ್ಯವಿದ್ದರೂ ಅದನ್ನೆಂದಿಗೂ ಮಾಡಿದವನಲ್ಲ. "ಇಂಥ ಔಷಧವಿಲ್ಲದೆ ಕಳೆಯದು" ಎಂದು ಅವರೆಂದರೆ, ತನಗೆಷ್ಟು ಶ್ರಮವಾದರೂ ಎಣಿಸದೆ ಅದನ್ನು ಒದಗಿಸಿಕೊಡುತ್ತಾನೆ. ಔಷಧಗಳ ಅಭಾವದ ಕಾಲದಲ್ಲಿ ಶಿವಪ್ಪನವರಿಗೆ ಇಂಥ ಮಿತ್ರದೊರಕಿದ್ದು ಹೆಚ್ಚಿನ ಸಹಾಯವಾಯಿತು.

* * * * *

ಕೆಲವು ತಿಂಗಳು ಹೀಗೆಯೇ ಸರಿದುವು. ಕಿಟ್ಟಪ್ಪ ಮಾಸ್ತರರು ಮನೆಗೆ ಬಂದು ಹೋಗುವುದು ತೀರ ಅಪೂರ್ವವಾಯಿತು. ಅವರ ಮನಸ್ಸಿಗೆ 'ಇವರೆಲ್ಲ ತಿಳಿಯುತ್ತಿರಬೇಕು–ನಾನು ಒಬ್ಬ ಬೆಪ್ಪು ಮಾಸ್ತರ. ಊರಿನ ಪ್ರತಿಯೊಬ್ಬರೂ ಹಣ ಮಾಡುತ್ತಿರುವ ಈ ಗಳಿಗೆಯಲ್ಲಿ ನಾನು ಮಾತ್ರ ವಾಸಪ್ಪ ಸಾಹುಕಾರರು ಎಸೆಯುತ್ತಿರುವ ಹತ್ತು, ಎಂಟು ರೂಪಾಯಿಗಳ ರೊಟ್ಟಿ ಚೂರುಗಳನ್ನು ತಿಂದು, ನಾಯಿಯಂತೆ ಬಾಲ ಅಲ್ಲಾಡಿಸುತಿದ್ದೇನೆ-ಎಂದು. ನಾನೂ ಕಾಲಕ್ಕೆ ತಕ್ಕ ಹಾಗೆ ನಡೆಯಬಲ್ಲೆ; ದುಡಿಯಬಲ್ಲೆ, ಹೊಸ ಮನೆ ಕಟ್ಟುವ

ಪ್ರತಿಜ್ಞೆಯನ್ನು ಸಾಧಿಸ ಬಲ್ಲೆ'- ಎಂಬ ಹೆಮ್ಮೆ ಅವರದ್ದು.

ಯುದ್ಧದಿಂದುಂಟಾದ ಹಣದ ಉಬ್ಬರದ ನೆರೆನೀರು ಊರು ಕೇರಿಗಳೆನ್ನೆಲ್ಲ ತೊಳೆಯುವಾಗ, ಅದು ತಂದು ಕೊಡುವ ಸಾರ, ಸಂಪತ್ತು ಬರಿಯ ವಾಸಪ್ಪ ಸಾಹುಕಾರರ ಇಲ್ಲವೆ ಇನ್ನಿತರ ಅಂಗಡಿಕಾರರ ಹೊಲಗದ್ದೆಗಳನ್ನು ಫಲವತ್ತಾಗಿ ಮಾಡುವುದಷ್ಟೇ ಅಲ್ಲ; ಅದರ ಪ್ರಯೋಜನ ತನಗೂ ಬಂದೀತೆಂದು ಕಿಟ್ಟಪ್ಪ ಮಾಸ್ತರರ ಆಸೆ. ತಾವೆಷ್ಟು ಜೇನುಮಾತುಗಳನ್ನಾಡಿದರೂ, ಗಳಿಸುತ್ತಿರುವ ದಾರಿ ನೇರಾದ ಮಾರ್ಗವಲ್ಲ. ಅದರ ಗುಟ್ಟು ಅಂಗಡಿ ಗುಮಾಸ್ತರಾದ ಕಿಟ್ಟಪ್ಪ ಮಾಸ್ತರರಿಗೆ ತಿಳಿದೇ ಇದೆ--ಎಂದು ಬಲ್ಲ ಅವರು "ಮಾಸ್ತರರೆ, ನಿಮ್ಮ ಶ್ರಮ ಬರಿದೆ ಎಂದು ತಿಳಿಯಬೇಡಿ. ನಾನು ದುಡಿಯುವುದರಲ್ಲಿ ಸ್ವಲ್ಪವಲ್ಲ ಸ್ವಲ್ಪ ದಾಮಾಶಯ ನಿಮಗೆ ಕೊಟ್ಟೇ ಕೊಡುತ್ತೇನೆ. ನನ್ನ ಮಾತಿನಲ್ಲಿ ನಂಬಿಕೆ ಇದೆಯಲ್ಲ. ನೀವು ಕೇಳಿಯೇ ಕೊಡಬೇಕೆಂದಿಲ್ಲ. ನಾನಾಗಿ ಕೊಡುವವನು" ಎಂದಿದ್ದಾರೆ. ಆ ದಾಮಾಶಯ ಎಷ್ಟು-ರೂಪಾಯಿಗೆ ಆಣೆಯೋ, ಕಾಲಾಣೆಯೋ, ಕಾಸೇ ಎಂದು ಅವರು ಹೇಳಿಲ್ಲ; 'ಇವರು ಕೇಳಿಲ್ಲ. ಏನಿಲ್ಲದೆ ಹೋದರೆ, ರೂಪಾಯಿಗೆ ಆಣೆಯಷ್ಟು ದೊರಕೀತೆಂದು ಆಸೆ ಮಾಡಿ ಕುಳಿತಿದ್ದರು ಕಿಟ್ಟಪ್ಪನವರು. ಹೀಗೆ ಹೇಳಿ ಎರಡು ವರ್ಷಗಳಾಗಿದ್ದರೂ ಅವರು ಕೊಟ್ಟದ್ದೆಂಬುದೂ ಇಲ್ಲ, ಇವರು ಕೇಳಿದ್ದೆಂಬುದೂ ಇಲ್ಲ.

ಮನೆಯ ಹುಚ್ಚು ಹಂಬಲ ತೊಡಗಿದಾಗ, ಅದಕ್ಕೆ ಬೇಕಾಗುವ ಹಣವನ್ನು ಎಣಿಸಿದಾಗ "ಈಗ ಕೇಳುವ ಕಾಲ ಬಂದಿದೆ. ಅವರಿಗೆ ಆ ದಿನ ಹೇಳಿದ್ದು ಮರವೆಯಾಗಿರಬಹುದು. ನಾನೂ ಉಪ್ಪು ಹುಳಿ ತಿನ್ನುವ ಸಂಸಾರಿ. ಧರ್ಮರಾಯನ ಮಗನ ಹಾಗೆ ಅವರಾಗಿ ಕೊಡಲಿ ಎಂದು ಕಾದು ಕುಳಿತರೆ ಪ್ರಯೋಜನವಿಲ್ಲ" ಎಂಬ ವಿಚಾರ ಸರಣಿ, ಮಾಸ್ತರರ ತಲೆಯಲ್ಲಿ ಬರತೊಡಗಿತು. ಅವರು ತಮ್ಮ ಹೆಚ್ಚಿನ ಸಮಯವನ್ನು ಕರೀಮ್ ಸಾಹೇಬರೂ, ವಾಸಪ್ಪ ಸಾಹುಕಾರರೂ ಕೂಡಿ ನಡೆಸುತ್ತಿರುವ ಮರದ ಗಿರಣಿಯಲ್ಲಿ ಕಳೆಯುತ್ತಿದ್ದಾರೆ. ಅದೇನು ಚಿಲ್ಲರೆಯ ಕೆಲಸವಲ್ಲ. ಬಂದ ಮರಗಳ ಉದ್ದಳತೆ ನೋಡುವುದು, ಕೊಟ್ಟಮರಗಳ ಹರ, ದಪ್ಪ, ಉದ್ದ-ಎಣಿಕೆ ಹಾಕುವುದು ಅವರ ಕೆಲಸ. ದಿನಕ್ಕೆ ಸಾವಿರಾರು ಘನ ಅಡಿ ನಾಟಗಳು, ಸಿಗಿದ ಮರಗಳು ಬಂದು ಹೋಗುವಾಗ, ಅಳತೆ, ಲೆಕ್ಕ ತಪ್ಪಿದರೆ, ತಕ್ಕಡಿ ಏರು ಪೇರಾದಷ್ಟೇ ಹಾನಿಯಿದೆ. ಅದಕ್ಕೆಲ್ಲ ಮಾಸ್ತರರು ನಿಸ್ಸೀಮರು. ವೃತ್ತಿಯ ರಹಸ್ಯವನ್ನು

ಕಲಿತಿದ್ದಾರೆ. ಅದರಿಂದಲೇ ಹಲವು ಸ್ನೇಹಿತರಾದ ಗಿರಾಕಿಗಳನ್ನು ಸಂಪಾದಿಸಿದ್ದಾರೆ. ಮರದ ತುಂಡುಗಳನ್ನು ಅಳೆಯುವಾಗ-ಉದ್ದದಲ್ಲಿ ಕಾಲಿಂಚು ಬಿಟ್ಟುಕೊಡುವುದಕ್ಕೆ ಜಗಳ ಹೂಡುತ್ತಾರೆ. ಅನೇಕರು ತಮ್ಮ ಮರ ಅಳೆಯುವುದಕ್ಕೆ ಕಿಟ್ಟಪ್ಪ ಮಾಸ್ತರರೇ ಬೇಕೆಂದು ವಿಶ್ವಾಸದಿಂದ ಅವರನ್ನು ಹಾರೈಸುತ್ತಾರೆ. ಅದರ ಗುಟ್ಟು ಹೀಗೆ–ನಾಟಗಳ ಉದ್ದವನ್ನು ಅಳೆಯುವಾಗ ಉದಾರಿಗಳಾಗುತ್ತಾರೆ; ಅಗಲದಲ್ಲಿ ಜಿಪುಣರಾಗುತ್ತಾರೆ. ಹಿತವಂದಿಗರಿಗೆ ಹನ್ನೆರಡಂಗುಲದ ಮರವನ್ನು ಹತ್ತು ಅಂಗುಲವಾಗಿ ಬರೆದರೂ ಬರೆದರೇ. ಕೊಳ್ಳುವಾಗ ಹತ್ತನ್ನು ಹನ್ನೆರಡು ಮಾಡಿದರೂ ಮಾಡಿದರೇ. ಕಣ್ಣೆಚ್ಚರವಿಲ್ಲದೆ ಮಾರಾಟಗಾರನ ಮರವನ್ನು ಹದಿನೆರಡಕ್ಕೆ ಹತ್ತೂ ಮಾಡಬಹುದು. ಜಗಳ ತೆಗೆದರೆ— ಅವರ ಅಳೆಯುವ ಲಾಡಿ ಎರಡೆರಡು. ಒಂದು ಯಥಾರ್ಥದ್ದು, ಇನ್ನೊಂದು ನೀರಲ್ಲಿ ಮುಳುಗಿಸಿ, ಎಳೆದು ಜಗ್ಗಿ, ಹಿಗ್ಗಿಸಿದ್ದು. ಈ ಅಳೆಯುವಿಕೆಯಿಂದ ಗಿರಾಕಿಗೂ ಅವರಿಗೂ, ಧನಿಗೆ ತಿಳಿಯದಂತೆ "ನನಗರ್ಧ, ನಿನಗರ್ಧ"ದ ವ್ಯವಹಾರವಿದೆ. ಒಟ್ಟಿನಿಂದ ಹೇಳುವಲ್ಲಿ ಮರದ ವ್ಯಾಪಾರದಲ್ಲಿ, ದೇವರು ಗಿಡ ಸೃಜಿಸಿ, ಬೆಳೆಯಿಸುವಾಗ ಮೋಸಮಾಡಿರದಿದ್ದರೂ, ಅದನ್ನು ಕಡಿದು ಗಿರಣಿಗೆ ಸಾಗಿಸುವಾಗಲೂ, ಗಿರಣಿಯಿಂದ ಮನೆಗೆ ಸಾಗಿಸುವಾಗಲೂ ವಂಚನೆಮಾಡದೆ ಹೋದರೆ, ನೀರು ಸೇರಿಸದೆ ಹಾಲು ಮಾರಿದಷ್ಟು ಪಾಪವಿದೆ ಎಂಬ ವ್ಯಾಪಾರಿ ಮನೋಧರ್ಮ ಬಂದುಬಿಟ್ಟಿದೆ. ಅಂಥ ವಿಷಯಗಳು ಸಕ್ಕು, ಹಿಗ್ಗಿ ಹೇಳುವಂತಹ ಚಮತ್ಕಾರಗಳು, ಕೈಚಳಕಗಳೇ ಹೊರತು, ನಾಚಿಕೆಯಿಂದ ತಲೆ ತಗ್ಗಿಸತಕ್ಕ ನಡತೆಯೆಂದು ಯಾರೂ ತಿಳಿಯುವುದಿಲ್ಲ. "ನಾನೇನು ಧರ್ಮರಾಯನ ಮಗನಲ್ಲ" ಎಂಬ ಕಿಟ್ಟಪ್ಪ ಮಾಸ್ತರರ ಮಾತು ವಾಸ್ತವವಾದದ್ದೇ. ಅನ್ಯರ ಮರಗಳನ್ನೆಣಿಸುವಾಗ ಅವರಾದರೂ ಈ ಧಾರ್ಮಿಕತೆ ತೋರಬೇಕಾಗಿಲ್ಲ. ಈ ಒಳ ವ್ಯಾಪಾರವನ್ನು ಅವರು ಕಲಿತು ಬಹು ದಿನಗಳಾಗಿದ್ದುವು. ಸಾಕಷ್ಟು ಸಂಪಾದನೆಯೂ ಆಗಿದೆ. ಆದರೆ ಹಾಗೆ ಗಳಿಸಿದ ಹಣದಲ್ಲಿ ಒಂದು ಕಾಸನ್ನೂ ಮಗನ ಮನೆಗೆ ಒಯ್ದವರಲ್ಲ. ಪವನುಗಳನ್ನು ಕೊಂಡು ಒಬ್ಬೊಬ್ಬಳೇ ಹೆಣ್ಣು ಮಕ್ಕಳ ಮನೆಗೆ ಒಯ್ದು, ಕೊಟ್ಟು ಬರುತಿದ್ದರು. ಮಗನ ಮೇಲಿನ ಸಿಟ್ಟು ಈ ಬಗೆಯ ವಾತ್ಸಲ್ಯವಾಗಿ ಪರಿಣಮಿಸಿತು. ಅವರ ಮಕ್ಕಳ ಮನಸ್ಸಿನಲ್ಲಿ 'ತಂದೆಗೆ ಮರದ ವ್ಯವಹಾರದಲ್ಲಿ ರೂಪಾಯಿಗೆ ಒಂದಾಣೆಯ ಪಾಲು ಇರಬೇಕು' ಎಂಬ ತಿಳುವಳಿಕೆ

ಬಂದಿತು. ಅವರ ಮೇಲಿನ ಪ್ರೀತಿ ಹೆಚ್ಚಿತು–"ನಮ್ಮ ಅಣ್ಣ ಮಾತ್ರ ಇಷ್ಟೆಲ್ಲ ದುಡಿದರೂ ಒಂದು ಮನೆ ಕಟ್ಟಿಸಿಲ್ಲ. ಹೆಂಡತಿಗೆ ಇಷ್ಟು ಚಿನ್ನ ಮಾಡಿಸಿಲ್ಲ" ಎಂಬ ತಿರಸ್ಕಾರ ಮೂಡಿತ್ತು. ಮಾಸ್ತರರ ಅಳಿಯಂದಿರು, ಇಂಥ ಸಂದರ್ಭ ಗಳಲ್ಲಿ ಶಿವಪ್ಪನವರನ್ನು ಹಳಿದು, ಮಾವನ ಮನಸ್ಸನ್ನು ಮತ್ತಷ್ಟು ಕೆಡಿಸಿ, ಸ್ವಲಾಭಕ್ಕೆ ತಿರುಗಿಸಿಕೊಳ್ಳುತ್ತಿದ್ದರು.

ಕಿಟ್ಟಪ್ಪನವರು ಒಂದು ದಿನ ತಮ್ಮ ಕಿರಿಯ ಅಳಿಯ ಸುಬ್ರಾಯನಲ್ಲಿಗೆ ಹೋದಾಗ, ತಮಗೂ ಮಗನಿಗೂ ಉಂಟಾದ ಮನಸ್ತಾಪವನ್ನು ಕುರಿತು, ಇದ್ದುದಕ್ಕಿಂತಲೂ ಹೆಚ್ಚು ಬೆಳೆಸಿ, ತೋಡಿಕೊಂಡರು. "ನೀವೆಲ್ಲ ಬಂದರೆ ಎರಡು ದಿನ ಇರುವುದಕ್ಕಾದರೂ ಸಮನಾದ ಮನೆ ಬೇಡವೆ ಪೇಟೆಯಲ್ಲಿ? ನನ್ನ ಮಗನಿಗೆ ಆ ಗೊಡವೆಯೇ ಇಲ್ಲ. ನಾನು ಹಾಗಿರಲು ಬಂದೀತೆ? ಈಗ ಕಟ್ಟಿಸದೆ ಇನ್ನೆಂದು ಕಟ್ಟಿಸಬೇಕು? ಸಾಯುವುದರೊಳಗೆ ಒಂದು ಮನೆ ಕಟ್ಟಿ ಸಾಯಬೇಕೆಂದಿದೆ" ಎಂದಂದರು. ಅಳಿಯ ಸುಬ್ರಾಯನಿಗೆ, ಆ ಯೋಚನೆ ಅಷ್ಟೊಂದು ಪ್ರಶಸ್ತವಾಗಿ ಕಾಣಿಸಲಿಲ್ಲ. ಮನೆ ಕಟ್ಟಿಸುವುದೆಂದರೆ, ಆರೆಂಟು ಸಾವಿರ ರೂಪಾಯಿಗಳ ಖರ್ಚು. ಕಟ್ಟಿಸಿದರೆ–ಅದರ ಪ್ರಯೋಜನ, ಲಾಭ ಭಾವನಿಗಾಗುತ್ತದೆಯೆ ಹೊರತು ತನಗೇನೂ ಅಲ್ಲವಷ್ಟೆ. ಈಗಿನ ಸ್ಥಿತಿಯಲ್ಲಿ ಮಾವ ದುಡಿದು ಗಳಿಸುತ್ತಿದ್ದ ಸಂಪಾದನೆಯಲ್ಲಿ ಒಂದು ಅಂಶವಾದರೂ ತನ್ನ ಮನೆಗೆ ಬರುತ್ತಿದೆ. ಮನೆ ಕಟ್ಟತೊಡಗಿದರೆ ಅದು ಬರುವುದು ನಿಂತೀತೆಂದು ತನ್ನ ಸ್ವಾರ್ಥವನ್ನೇ ಎಣಿಸಿ "ಮಾವ, ನೀವೇಕೆ ಅದಕ್ಕೆ ಕೈ ಹಾಕಬೇಕು? ನೀವು ಅಷ್ಟೆಲ್ಲ ಕಷ್ಟಪಟ್ಟು ಮನೆ ಕಟ್ಟಿದ್ದಾದರೆ ನಾಳೆ ಶಿವಪ್ಪ, ತನ್ನ ಹೆಂಡ ತಿಯ ಚಿನ್ನ ಮಾರಿ ಯಾರಾರಿಗೆ ಕೊಟ್ಟ ಹಾಗೆ, ಇದನ್ನೂ ಮಾರಿ ತಿಂದರೆ? ಅಲ್ಲದೆ ಅವನ ಸಂಸಾರ ದೊಡ್ಡದಾಗಿದೆ–ಎನ್ನುತ್ತಾರೆ. ಇನ್ನೊಬ್ಬಳನ್ನು ಕಟ್ಟಿ ಕೊಂಡಿದ್ದಾನೆ–ಎನ್ನುತ್ತಾರೆ. ಅವಳ ಹೆಸರಿಗೆ ಬರೆದರೂ ಆಯಿತು" ಎಂದು ಬೇಡದ ಅಧಿಕ ಪ್ರಸಂಗ ತೊಡಗಿದ.

"ನಾನಷ್ಟು ಹೆಡ್ಡನೆ? ಮನೆ ಕಟ್ಟಿ ನನ್ನ ಮೊಮ್ಮಗನ ಹೆಸರಿಗೆ ಉಯಿಲು ಬರೆದು ಹಾಕಿಯೇನೇ ಹೊರತು ಈ ಮರುಳನಿಗೆ ಕೊಡುತ್ತೇನೆಯೆ?" ಎಂದು ಜಂಭವನ್ನು ಕೊಚ್ಚಿ ಹೊರಟುಹೋದರು. ಅವರನ್ನು ಪ್ರತಿಜ್ಞೆಯಿಂದ ಪರಾ ವೃತ್ತರನ್ನಾಗಿ ಮಾಡಲು ಅವರ ಅಳಿಯನಿಂದ ಸಾಧ್ಯವಾಗಲಿಲ್ಲ. ಅವರ ಮಾನಸ್ಸಿನ ಮುಂದೆ ಹೊಸ ಮನೆಯ ಆಯ, ಪಾಯ, ಕಿಟಿಕಿ ಬಾಗಿಲು

ಗಳು ಕುಣಿದಾಡತೊಡಗಿದವು. ಕಲ್ಲಿನ ಲೆಕ್ಕಹಾಕಿದರು, ಮರದ ಲೆಕ್ಕ ಹಾಕಿದರು, ಆಣಿಯ ವರೆಗೂ ಲೆಕ್ಕ ಹಿಡಿದರು. ಮರ ಮುಟ್ಟುಗಳ ಮಟ್ಟಿಗೆ ಸಾಹುಕಾರರ ಗಿರಣಿಯಿದೆ-ಎಂದುಕೊಂಡರು. ಉಳಿದ ವೆಚ್ಚಗಳು, ಕೂಲಿ, ಸಾರಣೆಗಳ ಮೊತ್ತ ಸೇರಿ ಸಾಕಷ್ಟು ಹೆಚ್ಚಾಗಿಯೇ ಕಂಡಿತು. ಅದಕ್ಕೆ ತಮ್ಮ ಗಳಿಕೆ ಸಾಲದೆನಿಸಿತು. ಈ ಆಸೆ ಹೆಚ್ಚಿದಂತೆ ಅವರ ದಾರಿಯೂ ತಪ್ಪುತ್ತ ಬಂದಿತು. ನಿತ್ಯೋದ್ಯೋಗದಲ್ಲಿ ಹೆಚ್ಚು ಹೆಚ್ಚಿನ ವಂಚನೆ ತೊಡಗಿತು. ಅಳತೆ ತಪ್ಪುತ್ತ ಬಂದ ಹಾಗೆ, ಅಂಕೆ ತಪ್ಪುತ್ತ ಬಂದಿತು. ಮಾರುವಾಗ ಆರು ಘನ ಅಡಿ ಮೂರು ಅಂಗುಲ ಇದ್ದ ಮರ, ಬರೆಯುವಾಗ ಮೂರು ಘನ ಅಡಿ ಆರು ಅಂಗುಲವಾಯಿತು; ಸಂಖ್ಯೆಯ ಅಂತರದಿಂದ ಲಾಭವನ್ನು ಚೀಲಕ್ಕೆ ತುಂಬಿಸುವ ಪ್ರಯತ್ನಮಾಡಿದರು. ಕರೀಮ್ ಸಾಹೇಬರು, ಅನೇಕರಿಂದ ಅವರ ಅಪ್ರಾಮಾಣಿಕತೆಯ ದೂರನ್ನು ಕೇಳಿ, ಹೊಂಚು ಹಾಕಿ, ಪ್ರತ್ಯಕ್ಷ ನಿದರ್ಶನಗಳನ್ನು ಕಾಯ್ದುಕೊಂಡು, ಅಲ್ಲಿಯೇ ಹಿಡಿದು, "ನಮಸ್ಕಾರ!" ಎಂದರು.

ಆಗ ಮುಖ ತಗ್ಗಿಸಿಕೊಂಡು ಗಿರಣಿಯಿಂದ ಹೊರಟವರು, ದುಃಖವನ್ನು ಸಿಟ್ಟನ್ನಾಗಿ ಮಾಡಿಕೊಂಡು, ವಾಸಪ್ಪಯ್ಯನವರ ಮನೆಗೆ ಹೋದರು. ವಾಸಪ್ಪಯ್ಯನವರ ಮುಂದೆ ಕಣ್ಣೀರಿಟ್ಟರು. "ನಾನೂ ಮನುಷ್ಯ. ಎಲ್ಲಾದರೂ ಒಂದೆರಡು ಸಾರಿ ಅಳತೆಯಲ್ಲಿ ತಪ್ಪಿರಬಹುದೇ ಹೊರತು ಉದ್ದೇಶಪೂರ್ವಕವಾಗಿ ಉಂಡಮನೆಗೆ ಎರಡು ಎಣಿಸಿಯೇನೆ?" ಎಂದು ನುಡಿದರು. ಆ ಮಾತನ್ನು ಅವರು ನಂಬಿದರೋ, ಇಲ್ಲವೋ. ನಂಬಿದರೂ ತಮ್ಮ ಪಾಲುಗಾರರೊಡನೆ ಅದಕ್ಕಾಗಿ ಜಗಳವೆಬ್ಬಿಸಲಾರರು. ಅವರೆಂದರು "ನಿಮಗೇನಾಗಬೇಕು-ಅಲ್ಲಿಗೆ ಹೋಗಿ? ಮೊದಲಿನ ಹಾಗೆ ಇಲ್ಲಿಯೇ ಕುಳಿತು ಅಂಗಡಿ ಲೆಕ್ಕ ಬರೆಯಬಹುದಲ್ಲ?" ಎಂದು. ಅದಕ್ಕೆ ಒಡಂಬಟ್ಟು, ನಾಲ್ಕು ದಿನ ನೂಕಿದರು. ಅನಂತರ ಅದರಿಂದ ತನ್ನ ಮನೆಯ ಕನಸು ನೆನಸಾಗುವುದು ಸಾಧ್ಯವೆಂದು ತೋರಲಿಲ್ಲ. ಕೊನೆಗೊಂದು ದಿನ ತಡೆಯದ ಅಭಿಲಾಷೆಯಿಂದ ವಾಸಪ್ಪಯ್ಯನವರೊಡನೆ ಹೇಳಿದರು: "ಎಷ್ಟೋ ವರ್ಷವಾಯಿತು ನಾನು ನಿಮ್ಮ ಚಾಕರಿ ಮಾಡತೊಡಗಿ. ಅಂದಿನಿಂದ ಇಂದಿನ ತನಕ, ನಿಮ್ಮ ವ್ಯಾಪಾರದ ಗುಟ್ಟೇನಿದೆಯೋ ಅದನ್ನು ನಿಮ್ಮ ತಮ್ಮಂದಿರಿಗೂ ರಟ್ಟುಮಾಡದೆ ಇರಿಸಿದ್ದೆ. ನೀವು ಪಾಲಾದ ಮೇಲೂ ಅಷ್ಟು ವಿಶ್ವಾಸದಿಂದ ನಡೆದುಕೊಂಡು ಬಂದಿದ್ದೇನೆ. ನೀವು ಒಂದೆರಡುಸಾರಿ ಬಾಯಿಬಿಟ್ಟು ಹೇಳಿದಿರಿ--ಲಾಭದ ದಾಮಾಶಯದಲ್ಲಿ ಏನಾದರೂ ಕೊಡು

ತ್ತೇನೆಂದು. ನಾನದನ್ನು ಬೇಡುವಕಾಲ ಬಂದಿದೆ" ಎಂದು ವಿಸ್ತರಿಸಿ ತಮಗೆ-ಹಣ ಬೇಕಾದ ಕಾರಣವನ್ನು ಹೇಳಿದರು;ಜತೆಗೆ ತಮ್ಮ ಮಗನನ್ನುದೂರಿದರು.

'ಒಂದು ಪೆಟ್ಟು ಎರಡು ತುಂಡು' ಎಂಬ ನ್ಯಾಯ ವಾಸಪ್ಪಯ್ಯನವರದ್ದಲ್ಲ. ಬದಲು "ನೋಡುವ, ನಾಲ್ಕು ದಿನ ತಡೆಯಲಿ" ಎಂದರು. ದಿನ ನಾಲ್ಕು ಸರಿಯಿತು; ಎಂಟೂ ಹೋಯಿತು; ತಿಂಗಳೂ ಕಳೆಯಿತು. ಕೇಳಿದಾಗಲೆಲ್ಲ "ಬಿಡುವಿಲ್ಲ. ಅಡಚಣೆ ಬಹಳ" ಎಂದು ದಿನ ಕಳೆದರು. ತಮಗೆ ರೂಪಾಯಿಯಲ್ಲಿ ಆಣೆಯಲ್ಲ, ಆಣೆಯ ಬದಲು ಚಿಕ್ಕಾಸೂ ಸಿಗಲಾರದು-ಎಂಬ ಸಂಗತಿ ಮಾಸ್ತರರಿಗೂ ಖಚಿತವಾಯಿತು. ಆಗ ಅವರಲ್ಲಿ ಕಟುವಾದ ದ್ವೇಷವೇ ಉತ್ಪನ್ನವಾಯಿತು. ಆ ಮತ್ಸರವನ್ನಿಟ್ಟುಕೊಳ್ಳಲಾರದೆ 'ವಾಸಪ್ಪಯ್ಯ ಎಂಡ್ ಸನ್ಸ್' ಇವರ ವ್ಯವಹಾರದಲ್ಲಿ ಎಷ್ಟೆಷ್ಟು ಕಾಳಸಂತೆಯ ವ್ಯವಹಾರಗಳಾಗಿವೆಯೊ, ಸುಳ್ಳು ಲೆಕ್ಕಾಚಾರಗಳಾಗಿವೆಯೊ, ಅಷ್ಟನ್ನೂ ಕುರಿತು ಅಂಕೆಸಂಖ್ಯೆಸಹಿತವಾಗಿಬರೆದು,ಬಿನಾಮೆ ಅರ್ಜಿಯನ್ನುಸರಕಾರಕ್ಕೆ ಕಳುಹಿಸಿದರು. ಅಷ್ಟೊಂದು ವಿವರ ಪೂರ್ಣವಾದ ಅರ್ಜಿಯನ್ನು ಕಂಡಾಗ, ಆದಾಯ ತೆರಿಗೆಯ ಆಫೀಸಿನವರೂ ಕಣ್ಣು ತೆರೆದರು; ಕಲೆಕ್ಟರರೂ ಕಣ್ಣು ತೆರೆದರು. ಅವರ ನಾಲ್ಕಾರು ಮಳಿಗೆಗಳನ್ನು ಪೊಲೀಸರು ಮುತ್ತಿ, ಲೆಕ್ಕಪತ್ರ ಹಿಡಿದುಕೊಂಡು ಹೋದರು. ಕುಮಟೆಯಲ್ಲಿರುವ ಒಂದು ಗುಪ್ತ ಗೋದಾಮಿಗೂ ಮುತ್ತಿಗೆಯಾಗಿ, ಅಲ್ಲಿ ಹುದುಗಿಸಿಟ್ಟ ಕಬ್ಬಿಣ ಮೊದಲಾದ ಸಾಮಗ್ರಿಗಳೂ ಬೆಳಕಿಗೆ ಬಂದುವು. ಊರವರ ದೃಷ್ಟಿಯಲ್ಲಿ—ಅವರ ಮರ್ಯಾದೆ ಕರಗಿ ನೀರುನೀರಾಯಿತು. ವಾಸಪ್ಪಯ್ಯನವರೂ ಅವರ ಹಿರಿಯ ಮಗನೂ ಒಂದೆರಡು ದಿನಗಳ ಕಾಲ ನಿರ್ಬಂಧದಲ್ಲಿರಬೇಕಾಯಿತು. "ಮರ್ಯಾದೆಗೆ ಸಾಕಲ್ಲ, ಜೈಲೇನು ವರ್ಷಕಾಲ ಆಗಬೇಕೆ?" ಎಂದರು ಜನ. ಆ ಸುದ್ದಿ, ಅವರ ಪ್ರತಿ ಸ್ಪರ್ಧಿಗಳಾದವರೆಲ್ಲರಿಗೂ ಸಂತೋಷವನ್ನುಂಟು ಮಾಡಿತು. ಹೆಚ್ಚು ಕಡಿಮೆ ಅದೇ ದಾರಿಯನ್ನು ತುಳಿಯುತ್ತಿರುವ ಹಲವರು, ತಮ್ಮ ಸಂಭಾವಿತತನ ತೋರಿಸುವುದಕ್ಕೆ "ಅಲ್ಲಿಇಲ್ಲಿನೂರು,ಇನ್ನೂರುತಿನ್ನಬಹುದು. ವ್ಯಾಪಾರವದು, ಧರ್ಮ ನಡೆಸುವುದಲ್ಲ. ಆದರೆ ಊರಿಂದೂರನ್ನೇ ನುಂಗಬೇಕೆಂದು ಇವರು ಹೊರಟರೆ ಹೇಗೆ? ನೂರಾರು ಟನ್ ಕಬ್ಬಿಣ ಸಿಕ್ಕಿತಂತೆ, ಸಿಮೆಂಟು ಸಿಕ್ಕಿತಂತೆ. ಮಚ್ವೆಗಳಲ್ಲಿ ತುಂಬಿಸಿ ಮುಂಬಯಿಗೆ ಕಳುಹಿಸಿ ಕಳ್ಳ ವ್ಯಾಪಾರ ಮಾಡುತ್ತಿದ್ದರಂತೆ. ಗೋವೆಯಿಂದ ಕದ್ದು ತರುವಂಥ ನಿತ್ಯ ವ್ಯವ

ಹಾರ ಹೇಗೂ ಇದೆಯಲ್ಲ" ಎಂದು, ತಾವು ಕೇಳಿದ ಅಂಕೆ ಸಂಖ್ಯೆಗಳಿಗೆ ತಮ್ಮ ಕೈಯಿಂದಲೂ ಒಂದೊಂದು ಸೊನ್ನೆ ಸೇರಿಸಿ, ಆಡತೊಡಗಿದರು.

ಮುದಿ ಸಾಹುಕಾರರು, ಮಗ ವೈಕುಂಠ ಮೊದಲನೆಯ ಮೂರು ದಿನ ಕಾಲ ಸೆರೆಮನೆಯಲ್ಲಿರಬೇಕಾದುದು ಅನಿವಾರ್ಯವಾಯಿತು. ಆದರೆ ಅವರ ಬಂಧುಗಳು ಎಲ್ಲಿಗೋ ಓಡಿ,ಜಾಮೀನು ಕೊಟ್ಟು ಬಿಡಿಸಿ ತಂದರು. ಇತ್ತ ಅವ ರಲ್ಲಿ ದೊರೆತ ಮಾಲುಗಳನ್ನು ಪಂಚನಾಮೆ ಮಾಡಿ ಹಿಡಿದುದೂ ನಿಜವಂತೆ. ಇಷ್ಟೆಲ್ಲ ನಡೆದು ಮೂರು ತಿಂಗಳು, ಆರು ತಿಂಗಳುಗಳು ಕಳೆದ ಮೇಲೆ ಆ ಸುದ್ದಿಯನ್ನು ಲೋಕ ಮರೆತೇಬಿಟ್ಟಿತು. ಅನಂತರವೂ ಸಿಮೆಂಟು, ಕಬ್ಬಿಣ ಮೊದಲಾದುವುಗಳ ವ್ಯಾಪಾರ ನಡೆದು ಬಂದಿದೆ. ಪ್ರಾಯಶಃ—ಅವರು ನಿರ್ದೋಷಿಗಳೆಂದು ತೀರ್ಮಾನವಾಯಿತೋ ಏನೋ.

ತಮ್ಮ ವರ್ಚಸ್ಸಿನಿಂದ ಈ ಒಂದು ಕುತ್ತಿನಿಂದ ವಾಸಪ್ಪಯ್ಯನವರು ಹೇಗೋ ಹೇಗೋ ಪಾರಾದರೂ, ಇನ್ನೊಂದು ಆಪತ್ತು ಅವರನ್ನು ಬಿಡಲೇ ಇಲ್ಲ. ಆದಾಯ ಕರದ ಇಲಾಖೆಯವರು ತನಿಖೆಗೆ ಬಂದರು. ಬರುವಾಗಲೇ ಎಲ್ಲೆಲ್ಲಿಂದಲೋ ಇವರು ಪಡೆದ ಮಾಲುಗಳ ಅಂಕೆ ಸಂಖ್ಯೆಗಳ ವಿವರ ಹಿಡಿದುಕೊಂಡು ಬಂದಿದ್ದರು. ಇವರ ಲೆಕ್ಕಕ್ಕೂ, ಅವರ ಲೆಕ್ಕಕ್ಕೂ ತಾಳೆ ಬೀಳುವ ಪ್ರಸಂಗವೇ ಇಲ್ಲ. ಅವರು ಅಂದಾಜಿನ ಮೇಲೆ, ಈ ಮೂರು ವರ್ಷಗಳಿಂದ ತಪ್ಪಿಸಿಕೊಂಡ ತೆರಿಗೆಯೆಂದು--ಎರಡು ಲಕ್ಷ ರೂಪಾಯಿ ಗಳ ಕರ ಹೊರಿಸಿದಾಗ, ವಾಸಪ್ಪಯ್ಯನವರ ಹೃದಯ ಸ್ತಂಭನವಾಗದಿದ್ದುದು ದೊಡ್ಡದು. ಇನ್ನು 'ತನ್ನ ದಿನಗಳು ಬಹಳ ಉಳಿದಿಲ್ಲ' ಎಂದು ಅನಿಸಿ, ಅವರು ಸಪತ್ನೀಕರಾಗಿ ಕಾಶಿ ಯಾತ್ರೆಗೆ ಹೋದರು. ಆದರೆ ವೈಕುಂಠನ ಮನಸ್ಸಿಗೆ ಅದೊಂದು ನುಸಿಯ ಕಡಿತವೆಂದು ಕಂಡಿತು. ತೆರಿಗೆಯನ್ನು ತುಂಬಿಸುವ ದಿನ ಗಳಲ್ಲಷ್ಟೆ ಆತುರ ತೋರಿದ್ದ. "ಆ ತೆರಿಗೆಯನ್ನು ಕೊಟ್ಟು ಇವರ ಮನೆ ಉಳಿ ಯಲಿಕ್ಕಿದೆಯೆ?" ಎಂದು ಆಶ್ಚರ್ಯಪಟ್ಟ ಅವರ ಇಷ್ಟಮಿತ್ರರು ಸಹ, ಆ ಮೇಲೆಯೂ ಅವರು ಬದುಕಿ, ಸುಖವಾಗಿ ವ್ಯಾಪಾರ ನಡೆಯಿಸುತ್ತಿರುವು ದನ್ನು ಕಂಡು, ಆಶ್ಚರ್ಯಪಡುತ್ತಾರೆ.

ಈ ಕಾಲದಲ್ಲಿ ತುಂಬ ಸಂತೋಷದಿಂದ, ಹಿಗ್ಗಿನಿಂದ ಅಲೆದಾಡಿದ ವರು ಕಿಟ್ಟಪ್ಪ ಮಾಸ್ತರರು. "ಏನಿಲ್ಲ ನನಗೊಂದು ಐದು ಸಾವಿರವನ್ನೋ, ಹತ್ತು ಸಾವಿರವನ್ನೋ ಕೊಟ್ಟಿದ್ದರೆ ಈ ಗತಿ ಬರುತಿತ್ತೇ? ಧರ್ಮಕ್ಕೆ ಕೊಡು

ತ್ತಾರೆಯೋ? ನ್ಯಾಯವಾಗಿ ದುಡಿದದ್ದಕ್ಕಲ್ಲವೆ? ಕೊಟ್ಟಿದ್ದರೆ ಅವರ ಹೆಸರನ್ನು ಹೇಳಿ ನಾನು ಸುಖವಾಗಿ ಬದುಕುತ್ತಿರಲಿಲ್ಲವೆ? ಈಗ ದಾರಿಯ ಮೇಲೆ ಹೋಗುವವರಿಗೆಲ್ಲ ಲಕ್ಷಾಂತರ ತಿನಿಸಿದರು. ಅನ್ಯಾಯದ ದುಡ್ಡು ಹೋಗಬೇಕಾದದ್ದೇ ಹಾಗೆ" ಎಂದು ತಮ್ಮಷ್ಟಕ್ಕೆ ಅಂದುಕೊಂಡರು. ಆದರೆ ಈ ವಿಚಾರವನ್ನು ಒಬ್ಬರೊಡನೆಯೂ ಹೇಳಿದವರಲ್ಲ. ಹೇಳಿ, ತಾನು ಎಲ್ಲರ ಕಣ್ಣಿಗೂ ಬೆರ್ಚಪ್ಪನಾಗುವುದು ಅವರ ಇಷ್ಟವಲ್ಲ. ಮಾತ್ರವಲ್ಲ, ತಳ್ಳಿ ಅರ್ಜಿಯನ್ನು ಹಾಕಿದ ದಿನದಿಂದಲೇ ಪೇಟೆಯಲ್ಲಿ ಧೈರ್ಯವಾಗಿ ಅಲೆದಾಡುವುದಕ್ಕೂ ಮನಸ್ಸಾಗದೆ ಅಳಿಯಂದಿರ ಮನೆಗಳಲ್ಲಿ ಕಾಲ ಕಳೆಯತೊಡಗಿದರು.

ಈ ದಿನಗಳಲ್ಲಿ ದಂಡ ಕೊಟ್ಟು, ದುಡ್ಡು ಉಳಿಸಿಕೊಂಡವರುಂಟು. ಬರುವ ಲಾಭವನ್ನು ದಕ್ಕಿಸಿಕೊಳ್ಳಲಾರದೆ ಇದ್ದುದನ್ನೆಲ್ಲ ಕಳೆದುಕೊಂಡವರು ಶ್ರೀಪತಿರಾಯರು, ಅವರ ಮಕ್ಕಳು. ರಾಯರ ತಮ್ಮಂದಿರುಗಳು, ಅಣ್ಣನ ಮಕ್ಕಳು ಹಿಸೆಗಳನ್ನು ಕೊಂಡು ದೂರ ತೊಲಗಿದರು. ಉಳಿದವರು ಹಾಸುಗೆಗಿಂತ ಮೀರಿ ಕಾಲುಚಾಚಲಿಲ್ಲ; ತಮಗೆ ತಿಳಿಯದ ಉದ್ಯೋಗಕ್ಕೆ ಧುಮುಕಲಿಲ್ಲ. ರಾಯರ ಮಗ ಚಲಪತಿಯು ಕಲಿತ ಉದ್ಯೋಗ ಒಂದಾದರೆ, ತೊಡಗಿದ ಉದ್ಯೋಗ ಮತ್ತೊಂದು. ತಂದೆಗೆ ಮಗನ ಯೋಗ್ಯತೆಯಲ್ಲಿ ಅಚಲ ವಿಶ್ವಾಸ. ಯುದ್ಧ ತೊಡಗಿದ ಸ್ವಲ್ಪ ಸಮಯದಲ್ಲಿ ಕಾವು,ಹಿಡಿಗಳ ಕಾರ್ಖಾನೆಯನ್ನು ಕುಮಟೆಯಲ್ಲಿ ತೊಡಗಿ, ನಷ್ಟಗೊಂಡರು. ಅನಂತರ ಚಲಪತಿಗೆ ಮರದ ವ್ಯಾಪಾರದ ಹುಚ್ಚು ಹಿಡಿಯಿತು. ಸಾಹೇಬರು ಹಣ ಗಳಿಸುವುದನ್ನು ಕಂಡು–ಅರಣ್ಯ ಸಂಪತ್ತಿನಿಂದ ಅರಸನಾಗುತ್ತೇನೆ–ಎಂದು ಯೋಚಿಸಿದ. ಚಲಪತಿ ಮತ್ತು ವೈದ್ಯನಾಗಿ ಬಂದ ತಮ್ಮ, ಇಬ್ಬರೂ ತಮ್ಮ ಉದ್ಯೋಗಗಳನ್ನು ಬಿಟ್ಟು ಹೊಸ ಉದ್ಯೋಗಕ್ಕೆ ತೊಡಗಿದರು.ಬಂಧುಗಳನ್ನು ನಂಬಿಸಿ, ಸಾಲದ ಹಣಕ್ಕೆ ಪಾಲಿನ ಹಣ ಸೇರಿಸಿ,ಕಾಡಿನ ವ್ಯವಹಾರಕ್ಕೆ ತೊಡಗಿದರು. "ಆರಂಭದಲ್ಲಿ ಕೆಲವು ಸಾವಿರ ರೂಪಾಯಿಗಳನ್ನು ನೀರಿನಂತೆ ಚೆಲ್ಲುವುದಕ್ಕೆ ಬಂದರೆ ಅನಂತರ ಮಾರಿಬಲೆ ಎಳೆಯುವಂತೆ ದುಡ್ಡಿನ ರಾಶಿ ದಡಕ್ಕೆ ಬರುತ್ತದೆ" ಎಂದು ನಂಬಿದರು. ನಂಬಿಕೆ ಏಕೆ? ಆಚೀಚೆ ಕೆಲವರು ಹಾಗೆ ಗಳಿಸುತ್ತಿರುವುದನ್ನು ಕಾಣುತಿದ್ದಾರೆ. ಅದಕ್ಕಾಗಿ ಉಳಿದವರ ಕಾರ್ಯಕ್ಷೇತ್ರದಲ್ಲಿ ತಾವು ಸ್ಪರ್ಧೆಗೆ ನಿಲ್ಲುವುದು ಬೇಡವೆಂದು, ಅರಣ್ಯ ಇಲಾಖೆಯವರಿಂದ ಭಟ್ಕಳದ ಮೂಡಣದ ಹೊಸಾಡಿ ಎಂಬಲ್ಲಿ ಕಾಡಿನ ಗುತ್ತಿಗೆ ಹಿಡಿದರು.

ಅಲ್ಲೇನೋ ಕಾಡು ಧಾರಾಳವಾಗಿದೆ. ಆರು ಹರದಾರಿ ದೂರದಲ್ಲಿ ಭಟ್ಕಳದ ಉತ್ಕೃಷ್ಟ ಬಂದರಿದೆ. ಅಲ್ಲಿನ ಮುಖ್ಯ ಕೊರತೆಯೆಂದರೆ ದುಡಿಯುವ ಜನಗಳದ್ದು. ಅವರನ್ನು ಕಡಲ ಕರಾವಳಿಯಿಂದ ಕರೆದು ತರಬೇಕು. ಉತ್ತರ ಕನ್ನಡ ಜಿಲ್ಲೆಯಲ್ಲಿ—ಮತ್ತಿ ಗುಂಡಿಯವರ, ಕುಂಬಾರ ಗುಂಡಿಯವರ ಪೈಪೋಟಿಯನ್ನು ತಪ್ಪಿಸಿಕೊಳ್ಳುವುದಕ್ಕೆಂದು, ದಕ್ಷಿಣ ಕನ್ನಡದ ಶಿರೂರು, ಬೈಂದೂರುಗಳಿಗೆ ಹೋದರು. 'ನಮ್ಮಲ್ಲಿನ ಜನಕ್ಕಿಂತ ಅಲ್ಲಿನವರು ಎಷ್ಟೋ ಚುರುಕು' ಎಂಬ ವಿಶ್ವಾಸದಿಂದ ಚಲಪತಿ, ಅವನ ತಮ್ಮ ಡಾಕ್ಟರ್ ನಾರಾಯಣ ಇಬ್ಬರೂ ಓಡಾಡ ತೊಡಗಿದರು. ಕೂಲಿಗಳ ಮೇಲೆ ಮುಂಗಡದ ಹಣವನ್ನು ಚೆಲ್ಲಿದರು. ಮರ ಸಿಗಿಯುವವರಿಗೆ ಬೇಕೆನ್ನುವಷ್ಟು ಮುಂಗಡ ಕೊಟ್ಟರು. ಕೆಲಸವೇನೋ ಪ್ರಾರಂಭವಾಯಿತು. ವರ್ಷದ ಕೊನೆಗೆ ಒಬ್ಬೊಬ್ಬರ ಪಾಲಿಗೆ ಐದು ಸಾವಿರವಾದರೂ ಲಾಭ ಸಿಕ್ಕೀತೆಂಬ ಆಸೆಯಾಯಿತು.

ಅವರಿಗೆ ಆದಮ್ ಸಾಹೇಬರ ಕೆಚ್ಚೂ ಇಲ್ಲ, ಚಲಾಕಿಯೂ ಇಲ್ಲ. ಗುರುತು ಪರಿಚಯವಿಲ್ಲದ ಗರಗಸದವರು, ಆಳುಗಳು, ಚಲಪತಿಯನ್ನೂ, ಅವನ ನಾಜೂಕಿನ ತಮ್ಮ ನಾರಾಯಣನನ್ನೂ ಕಂಡು, ಹೆದರಿ ಕೆಲಸ ಮಾಡಿಯಾರೇ? ಇವರಿದ್ದ ಗಳಿಗೆಯಲ್ಲಿ ಕೆಲಸ; ಉಳಿದ ವೇಳೆಯಲ್ಲಿ ಆಲಸ. ನೆಪಕ್ಕೆ ಮೂಡು ಪ್ರಾಂತ್ಯದ ಚಳಿಜ್ವರವೂ ಸೇರಿತು. ಮುಂಗಡ ಕೊಂಡ ಗರಗಸದವರು ಇವರು ಕೊಟ್ಟ ಗರಗಸಗಳನ್ನೂ ಹೊತ್ತು ಊರನ್ನು ಸೇರಿದರು. ಇತರ ಜನಗಳೂ ಕಣ್ಣು ತಪ್ಪಿಸಿಕೊಳ್ಳತೊಡಗಿದರು. ಎತ್ತಿನ ಗಾಡಿಯವರು ಮೋಸ ಕೊಟ್ಟರು; ಲಾರಿಯವರು ದಗೆ ಕೊಟ್ಟರು. ಹೀಗೆ ಒಂದಕ್ಕೊಂದು ಹೊಂದಿಕೆಯಿಲ್ಲದೆ ಹೋಗಿ, ಅವರು ಕೊಟ್ಟ ಲಂಚ, ಸುರಿದ ಹಣ, ಪಟ್ಟ ಪಾಡು-ಯಾವುದೂ ಪ್ರಯೋಜನಕ್ಕೆ ಬಾರದೆ ಹೋಯಿತು. ಒಟ್ಟು ಮೂರು ವರ್ಷಗಳ ವ್ಯವಹಾರವೂ ಸಾಗಲಿಲ್ಲ. ಕಾಳೂರಿನ ಪ್ರತಿಯೊಬ್ಬರೂ ಬಾಯಿಬಿಟ್ಟು ಆಡುವಂತಾಯಿತು-'ಅವರಿಗೆ ನಿಜಕ್ಕೂ ಶನಿ ದೆಸೆ. ಅಲ್ಲವಾದರೆ ಕಾಡನ್ನು ಹೊಕ್ಕವರೆಲ್ಲರೂ ದುಡ್ಡು ಮಾಡಿಯೇ ಹೊರಟಿದ್ದಾರೆ. ಇವರು ಮಾತ್ರ ಮನೆ, ಮಾರು, ಭೂಮಿ, ಕಾಣಿಕೆ ಎಲ್ಲವನ್ನೂ ಸಂಪೂರ್ಣ ಕ್ರಯ ಮಾಡುವ ಸ್ಥಿತಿಗೆ ಬರಬೇಕೆ?' ಎಂದು ಅನುಕಂಪಗೊಳ್ಳುವ ಹಾಗಾಯಿತು.

ಇದ್ದುದನ್ನೆಲ್ಲ ಚೊಕ್ಕಟ ಮಾಡಿಕೊಂಡು, ಬಹುದಿನಗಳ ಬಳಿಕ ಚಲಪತಿಯು ತನ್ನ ಪೂರ್ವ ಮಿತ್ರನಾದ ಶಿವಪ್ಪನವರನ್ನು ಕಾಣುವುದಕ್ಕೆ ಅವರ

ದವಾಖಾನೆಗೆ ಬಂದಿದ್ದ. ನೋಡುವುದಕ್ಕೇನೆ ಆಗದ ರೂಪ; ಹರಕು ಧೋತ್ರ, ಕೊಳೆಯ ಕೋಟು, ಮುಗ್ಗಿದ ಟೋಪಿ, ಬಾಡಿ ಕಂಗಾಲಾದ ಮುಖ! ಪಕ್ಕನೆ ಬಂದು ದವಾಖಾನೆಯನ್ನು ಹೊಕ್ಕ. ಚಲಪತಿಯನ್ನು ಕಂಡು ಶಿವಪ್ಪನವರಿಗೆ ಗುರುತೂ ಸಿಕ್ಕಲಿಲ್ಲ. ಗುರುತು ಹೊಳೆದ ಮೇಲೆ "ಯಾರು ಚಲಪತಿಯೇ!" ಎಂದು ವಿಸ್ಮಯಪೂರ್ವಕವಾಗಿ ನುಡಿದರು. ಗುರುತು ಸಿಕ್ಕಿದ್ದು ಅವನ ರೂಪ ದಿಂದಲ್ಲ; ಧ್ವನಿಯಿಂದ. ಬಂದ ಚಲಪತಿಯು ತನ್ನ ಕಿಸೆಯಿಂದ ಬೀಡಿಯನ್ನು ತೆಗೆದು "ನೀನು ಎಳೆಯುವುದಿಲ್ಲವಲ್ಲ, ಶಿವು" ಎಂದು ತಾನು ಎಳೆದಾಗ, ಆ ಧ್ವನಿಯೇ ವಿಚಿತ್ರವಾಗಿತ್ತು. "ಯಾಕಪ್ಪಾ, ಮೈ ಚೆನ್ನಾಗಿಲ್ಲವೆ? ನಿನ್ನ ಸುದ್ದಿ ಯನ್ನು ಕೇಳದೆ ತುಂಬ ಸಮಯವಾಯಿತು. ಹೊಸಃಡಿಯಲ್ಲಿ ಏನೋ ಭಾರಿ ಬಿಸ್‌ನೆಸ್ ಮಾಡುತ್ತಿದ್ದೀಯಂತೆ; ಚೆನ್ನಾಗಿ ನಡೆದಿದೆಯಲ್ಲ" ಎಂಮ ಶಿವಪ್ಪ ನವರು ತಮ್ಮ ಅಜ್ಞಾನವನ್ನು ಪ್ರಕಟಿಸಿದರು. ಅದಕ್ಕೆ ಉತ್ತರ–

"ಶಿವೂ, ನಿನ್ನ ಹತ್ತಿರ ಒಂದಿಷ್ಟು ಮಾತನಾಡಬೇಕೆಂದಿದೆ. ಎಂದು ಸಿಗಲಿ. ನಾನೂ ಅವಸರದಲ್ಲಿದ್ದೇನೆ."

"ಅವಸರವೇ? ಏನು? ಬರುತ್ತೀಯ ಮನೆಗೆ? ವಿರಾಮವಾಗಿ ಮಾತ ನಾಡುವ; ನಾನಂತು ಮೊದಲಿನ ಗುಡಿಸಲಿನಲ್ಲೇ ಇದ್ದೇನೆ."

"ನೀನೇ ಬುದ್ಧಿವಂತ. ನನಗಿಂತ ಎಷ್ಟೋ ವಾಸಿ. ಹಾಸುಗೆಯಷ್ಟೇ ಕಾಲು ನೀಡಿ, ಬೇಕಾದ್ದಕ್ಕಷ್ಟೇ ಖರ್ಚು ಮಾಡಿ, ನಾಲ್ಕು ಕಾಸು ಸಂಪಾದಿಸಿ ದ್ದೀಯ!"

ಆ ಮಾತು ಮಾತ್ರ ಶಿವಪ್ಪನವರನ್ನು ಚುಚ್ಚಿತು. ಅವರಿಗೆ ಈ ಹಣದ ಲೆಕ್ಕಾಚಾರ, ಲಾಭ, ಸಂಬಳ, ಸಂಪಾದನೆ ಇವನ್ನೇ ಕೇಳುತ್ತಿರುವ ಜನ ಗಳನ್ನು ಕಂಡರೆ ಮನಸ್ಸಿಗೆ ಬೇಸರ. ಗೆಳೆಯ ಗೆಳೆಯನನ್ನು ಅಳೆಯುವು ದಕ್ಕೆ, ಮನುಷ್ಯ ಮನುಷ್ಯನನ್ನು ಅಳೆಯುವುದಕ್ಕೆ, ಬೇರೆ ಅಳತೆಯ ಕೋಲೇ ಇಲ್ಲವೆ? 'ನಿನಗೆ ಸಂಪಾದನೆಯೆಷ್ಟು? ಸಂಬಳವೆಷ್ಟು? ಲಾಭ ಎಷ್ಟು ಸಿಕ್ಕೀತು' ಎನ್ನುವ ಕುತೂಹಲ, ಮಾನವಲೋಕದ ಸುಳ್ಳು ಅಳತೆಯ ಕೋಲನ್ನಷ್ಟೆ ಹೇಳುತ್ತದೆ. ಚಲಪತಿಯಂಥ ಮಿತ್ರನು, ನಾಲ್ಕು ಜನರಿಂದ ಕೇಳಿಯಾ ದರೂ ತನ್ನ ವಿಷಯದಲ್ಲಿ ತಿಳಿಯಬಹುದಾದವನು, ಹೀಗೆ ಪ್ರಶ್ನಿಸಬಹುದು ಎಂದು ಅವರು ಎಣಿಸಿರಲಿಲ್ಲ. ಅದಲ್ಲದೆ–ಅವನ ಮಾತಿನಲ್ಲಿ ಯಶಸ್ವಿಯಾದ ವರ ಸಲುವಾಗಿ ನಂಜೂ ಕೂಡಿತ್ತು. "ಯಾಕೆ ಅನ್ಯರ ಸಿರಿವಂತಿಕೆಗಾಗಿ

ನಾವು ಹೊಟ್ಟೆ ಸಂಕಟಪಡಬೇಕು? ಅದರಿಂದ ನಮ್ಮ ಸುಖ ಹೆಚ್ಚೀತೆ?" ಹೀಗೆಂದು ತಿಳಿದುಕೊಂಡ ಅವರಿಗೆ "ದುಡ್ಡು ಮಾಡಿದವರ ಸಾಲಿನಲ್ಲಿ ತನ್ನನ್ನೂ ಸೇರಿಸಿದ್ದಾನಲ್ಲ' ಎಂಬ ವಿಸ್ಮಯ ಉಂಟಾಯಿತು.

ಆ ದಿನ ಬಹು ಹೊತ್ತಿನ ತನಕವೂ 'ನಮ್ಮ ಚಲಪತಿ ಹೀಗೇಕಾದ? ಏನಾಗಿದೆ ಅವನಿಗೆ?" ಎನ್ನುವ ಚಿಂತೆ ತುಂಬಿತ್ತು. ರಾತ್ರಿ ಊಟಕ್ಕೆ ಗೆಳೆಯ ಬರುವನೆಂದು ಮನೆಗೆ ಮೊದಲೇ ಹೇಳಿ ಕಳುಹಿಸಿದ್ದರು. ತಾವು ಮನೆಗೆ ಹೋಗಿ ಅವನ ಬರವನ್ನು ನಿರೀಕ್ಷಿಸುತ್ತ ಕುಳಿತರು. ಇಂದುಮತಿಯೊಡನೆಯೂ "ಚಲಪತಿ ಬರುತ್ತಾನೆ" ಎಂದು ಅವನ ಪೂರ್ವೇತಿಹಾಸವನ್ನು ಹೇಳಿದ್ದರು. ಬಹು ಹೊತ್ತು ಕಾದರೂ, ಚಲಪತಿ ಊಟಕ್ಕೆ ಬರಲಿಲ್ಲ. ಊರಿನ ಅಂಗಡಿಗಳ ಕದ ಮುಚ್ಚಿದ ಮೇಲೆ ಎಂಬಂತೆ, ದವಾಖಾನೆಯಿಂದ ಕಣ್ಮರೆಯಾದ ಆತ, ತಿರುಗಿ ಕಾಣಿಸಿಕೊಂಡ. ಬಂದವನೇ "ಏನು, ಬಹಳ ಕಾದೆಯ?... ಇದು ಮೊದಲಿನದೇ ಮನೆ!" ಎಂದ.

"ಹೂಂ, ಕಾಲು ತೊಳೆ; ಮೊದಲು ಊಟಮಾಡುವ."

"ಹೌದಪ್ಪ, ನೀನು ನನಗಾಗಿ ತುಂಬ ಕಾದಿರಬೇಕು" ಎಂದ ಚಲಪತಿಯನ್ನು ಕಾಲು ತೊಳೆಯುವುದಕ್ಕೆ ಕರೆದುಕೊಂಡು ಹೋದರು. ಊಟಕ್ಕೆ ಬಡಿಸಿದ್ದರು. ಇಬ್ಬರೂ ಎಲೆಯ ಮುಂದಕ್ಕೆ ಹೋಗಿ ಕುಳಿತರು. ಅಪೂರ್ವದ ಸ್ನೇಹಿತರೊಬ್ಬರು ಮನೆಗೆ ಬಂದಿದ್ದಾರೆಂದು ಆಕೆ ವಿಶೇಷ ಅಡುಗೆಯನ್ನೂ ಮಾಡಿದ್ದಳು. ವೇಳೆ ಕಳೆದು ಹೋದುದರಿಂದ ಅನ್ನ ತಣಿದಿತ್ತು. ಊಟಕ್ಕೆ ಕುಳಿತರೆ-ಚಲಪತಿ ಚಳಿಜ್ವರದಿಂದ ನಾಲಗೆಯ ರುಚಿಗೆಟ್ಟವನಂತೆ, ಬೇಕೋ ಬೇಡವೋ ಎನ್ನುವ ಔದಾಸೀನ್ಯದಿಂದ ಅನ್ನ ಕೆದಕಿದ; ಆಚೀಚೆ ನೋಡಿದ. ನಾಲ್ಕು ಬೆರಳುಗಳ ಬದಲು ಎರಡನ್ನೇ ಬಳಸಿ ಉಣ್ಣತೊಡಗಿದ. ಊಟದ ನಡುವೆ "ಮಾತನಾಡುವುದಕ್ಕುಂಟಲ್ಲ; ಯಾವಾಗ?" ಎಂಬ ಆತುರ ಪ್ರಕಟಿಸಿದ. ಊಟ ಮುಗಿಸಿ, ವಿರಾಮವಾಗಿ ಗೆಳೆಯನೊಡನೆ ಚರ್ಚಿಸುವುದಕ್ಕೂ ಆತನಿಗೆ ಧೈರ್ಯವಿದ್ದಂತೆ ಕಾಣಲಿಲ್ಲ. ಊಟದ ಶಾಸ್ತ್ರ ಮುಗಿಯಿತು. ಕೈ ತೊಳೆಯುವುದಕ್ಕೆ ಹೋಗುತ್ತಿರುವಾಗಲೇ "ಶಿವು, ನಾನು ಈ ತನಕ ನಿನ್ನಲ್ಲಿ ಒಂದು ಫೇವರ್ ಕೇಳಿಲ್ಲ; ಈಗ ಕೇಳುವ ಕಾಲ ಬಂದಿದೆ – ಏನು ಮಾಡುತ್ತೀಯ?" ಎಂದು ಪ್ರಶ್ನಿಸಿದ.

ಚಲಪತಿಯ ಉಡುಗೆ ತೊಡುಗೆಗಳನ್ನೂ, ಕಳೆಗುಂದಿದ ಮುಖವನ್ನೂ

ಮಾತಿನ ಹಿಂದೆ ಹುದುಗಿದ್ದ ನಂಜನ್ನೂ ನೋಡಿದ ಶಿವಪ್ಪನವರಿಗೆ, ಸಂಭಾಷಣೆಯ ವಿಷಯುವಲ್ಲಿ ಪೂರ್ವಸೂಚನೆಯಾಗಿತ್ತು. ಆಚೀಚಿನ ಜನರು ಅವರ ವಿಚಾರದಲ್ಲಿ ಅನ್ನುತ್ತಿದ್ದ ಮಾತುಗಳು ಸತ್ಯವಾಗಿರಬೇಕು-ಎಂಬ ಅನುಮಾನ ಚಲಪತಿಯ ಮುಖದಿಂದ ಸೂಸುತ್ತಿತ್ತು. ನಡುವೆ ತಮ್ಮಿಬ್ಬರಲ್ಲಿ ಸ್ವಲ್ಪದಿನ ಉಂಟಾದ ನಿಷ್ಠುರವನ್ನೂ ಬಲ್ಲರು. ಅನಂತರ, ದವಾಖಾನೆಯ ವಿಚಾರದಲ್ಲಿ ತನ್ನನ್ನು ಸೆಳೆಯಬೇಕೆಂದು ಮಾಡಿದ ಪ್ರಯತ್ನವನ್ನೂ ಬಲ್ಲರು. ಅವೆಲ್ಲ ಏನೇ ಇದ್ದರೂ, ತಾನು ಧಾರವಾಡದಲ್ಲಿ ಕಲಿಯುವಾಗ ಪ್ರತಿ ತಿಂಗಳೂ ಐದು, ಹತ್ತು ರೂಪಾಯಿಗಳನ್ನು ಕೊಟ್ಟು ತಮ್ಮನ್ನು ಕಾಪಾಡಿದ ಗೆಳೆಯನು ಅವನು–ಎಂಬ ನೆನಹು ಮಾತ್ರ ಅವರಿಗೆ ಮರವೆಯಾಗಿರಲಿಲ್ಲ. ಅದಕ್ಕೇನೆ "ಏನಪ್ಪಾ?" ಎಂದು ಕೇಳಿದರು.

"ನೋಡು, ನನ್ನ ಮರ್ಯಾದೆ ಉಳಿಸುವವರು ಯಾರೂ ಇಲ್ಲ. ಮನೆ ಮಾರುಗಳೆಲ್ಲ ಕೊಂಡ ಸಾಲಕ್ಕಾಯಿತು. ನಿನಗೆ ಗೊತ್ತಿರಬಹುದು- ನಾಲ್ಕು ಹೆಣ್ಣು ಮಕ್ಕಳಿದ್ದಾವೆ. ಒಂದು ಗಂಡು, ಮೂರು ಹೆಣ್ಣು; ಹೆಂಡತಿ ಹೇಗೂ ಇದ್ದಾಳಲ್ಲ. ಅವರನ್ನು ಕಟ್ಟಿಕೊಂಡು ಬಾಳುವ ಹಾಗಿಲ್ಲ, ಬಿಟ್ಟು ಕಳೆಯುವ ಹಾಗಿಲ್ಲ. ನನ್ನ ನಂಟರಿಷ್ಟರೆನ್ನುವವರಿಗೆ, ನನ್ನನ್ನು ನಂಬಿಯೇ ಹಾನಿಯುಂಟಾದ್ದರಿಂದ, ಒಬ್ಬರ ಮುಖವನ್ನೂ ನಾನು ನೋಡುವಹಾಗಿಲ್ಲ."

"ಏನು ಮಾಡಬೇಕೆನ್ನುತ್ತೀಯಾ?"

"ಮುಂಬಯಿಗೆ ಹೋಗುತ್ತೇನೆ."

"ಅವರನ್ನೆಲ್ಲ ಕಟ್ಟಿಕೊಂಡು"

"ಮತ್ತೇನು ಮಾಡಲಿ? ಬಿಡುವುದಕ್ಕೆ ಬರುತ್ತದೆಯೇ? ಅಲ್ಲಿಗೆ ಹೋಗಿ ಸೇರಬೇಕಾದರೆ, ಕೆಲಸ ಸಿಗುವ ತನಕ ತಿಂಗಳು, ಮೂರು ತಿಂಗಳು ತಳ್ಳಬೇಕಾದರೆ, ಹಣವಿಲ್ಲದೆ ಆಗುತ್ತದೆಯೆ? ಅಲ್ಲಿಯ ವರೆಗೆ ನನಗೊಂದು ಇನ್ನೂರು ರೂಪಾಯಿ, ಇನ್ನೂರು ಸಾಲದು, ಮುನ್ನೂರು ರೂಪಾಯಿಗಳನ್ನು ಕೊಡಬೇಕು ನೀನು. ಇನ್ನೂರನ್ನು ಮುನ್ನೂರು ಮಾಡಿದೆ ಎಂದು ಸಿಟ್ಟಾದರೂ ಆಗು. ಈವತ್ತೇ ಬೇಕು; ತಪ್ಪಿದರೆ ನಾಳೆ. ಏನು ಮಾಡುತ್ತೀ? ಉಳಿಸುತ್ತೀಯಾ, ಕೊಲ್ಲುತ್ತೀಯಾ?" ಎಂದು ಕೇಳಿದ.

ಈ ಪ್ರಶ್ನೆಗೆ ಎಂಥ ಉತ್ತರವನ್ನು ಹೇಳಬೇಕು? ಇಪ್ಪತ್ತನಾಲ್ಕು ತಾಸಿನಲ್ಲಿ ಮುನ್ನೂರು ರೂಪಾಯಿಗಳನ್ನು ಚೆಲ್ಲುವಷ್ಟು ನಗದು ಇರಲಿ, ಇಲ್ಲದಿ

ರಲಿ, ತಮ್ಮಗೆಳೆಯನ ಸ್ಥಿತಿಯನ್ನು ಕಂಡಾಗ 'ಈ ಜೀವ ಬದುಕುವುದಾದರೆ ಬದುಕಲಿ. ನನ್ನ ಸಹಾಯವಿಲ್ಲದೆ ಆತ ಆತ್ಮಹತ್ಯೆಯನ್ನಂತು ಮಾಡಿಕೊಳ್ಳದಿರಲಿ' ಎಂದೆನಿಸಿತು ಅವರಿಗೆ.

"ಕೊಡುತ್ತೀಯಲ್ಲ?" ಎಂದು ಆತ ಅತಿ ದೈನ್ಯದಿಂದ ಇನ್ನೊಮ್ಮೆ ಕೇಳಿದಾಗ ಆತನ ಮುಖ ಹೇಗಿತ್ತೋ! ಜಗುಲಿಯ ಕತ್ತಲಲ್ಲಿ ಅದು ಕಾಣಿಸಲಿಲ್ಲ. ಕಾಣಿಸದಿದ್ದುದೇ ವಾಸಿ. ಆ ಜೀವ ಇಷ್ಟು ದಿನ ಪಟ್ಟ ದುಃಖವನ್ನೆಲ್ಲ ಅವನು ಆಡಿದ ನಾಲ್ಕೇ ಮಾತುಗಳು ಸಂಪೂರ್ಣವಾಗಿ ಹೇಳಿದುವು.

"ಆಗಲಿ, ನೋಡುವ. ಈಗ ನನ್ನಲ್ಲಿ ಹಣವಿಲ್ಲ; ರಾತ್ರಿ ಎಲ್ಲಿಂದ ತರುವುದು? ಎಲ್ಲಿಂದಲಾದರೂ ಕಡ ತೆಗೆದುಕೊಂಡು ಕೊಡಬೇಕು. ನಾನು ದುಡಿದ ನಾಲ್ಕು ಕಾಸುಗಳು ಔಷಧದ ಮೇಲೆ ಬಿದ್ದಿದೆ".

"ದವಾಖಾನೆಯಲ್ಲಿ ಅಷ್ಟು ಹೆಚ್ಚಿಗೆ ಮದ್ದೂ ಕಾಣಿಸುವುದಿಲ್ಲ!"

"ಹದಿನೈದು, ಇಪ್ಪತ್ತು ರೂಪಾಯಿಯ ಕ್ವಿನೀನಿಗೆ ನಾನ್ನೂರೋ, ಐನೂರೋ ಬೆಲೆ ಹೇಳುವಾಗ ಎಷ್ಟು ಕಾಣಿಸಬೇಕು ಅನ್ನುತ್ತೀಯಾ" ಎಂದು ನುಡಿದರು. ಆ ರಾತ್ರಿ ಚಲಪತಿ ಅಲ್ಲಿಯೇ ಉಳಿದುಕೊಂಡ. ಮಲಗಿಕೊಂಡಾತ ಏರುತಗ್ಗಿಲ್ಲದ ಧ್ವನಿಯಿಂದ, ತನ್ನ ಯಾವತ್ತು ದುಡುಕಿನ ಜೀವನದ ಕಥೆಯನ್ನೂ, ಸಾಲಗಳನ್ನೂ, ಸೋಲುಗಳನ್ನೂ, ಸಂಸಾರದ ನೋವನ್ನೂ ತೋಡಿಕೊಂಡ. ಅದನ್ನು ಕೇಳಿದ ಶಿವಪ್ಪನವರಿಗೆ ತಾವು ಅವನಂತಾಗಲಿಲ್ಲ. ತಮ್ಮ ತೂಕ ಹೆಚ್ಚಿಲ್ಲದಿದ್ದರೂ, ತಗ್ಗಿಲ್ಲ ಎಂಬ-ಸಮಾಧಾನವಾಯಿತು. ಅಂಥ ಹಲವರ ಜೀವನವನ್ನು ಕಂಡಿದ್ದಾರೆ. ಅದಕ್ಕಾಗಿ ಮರುಗುವಷ್ಟು ಅನುಕಂಪ ಅವರಲ್ಲಿ ಇದ್ದೇ ಇದೆ.

ಮರುದಿನ ಚಲಪತಿ ಮನೆಯಿಂದ ಹೊರ ಬೀಳಲೇ ಇಲ್ಲ. ಶಿವಪ್ಪನವರು ಹಣವನ್ನು ಕೈಗಡವಾಗಿ ತಂದು ಚಲಪತಿಯ ಕೈಯ್ಯ ಮೇಲಿರಿಸುವಾಗ "ನಿನ್ನ ಹೆಂಡತಿ ಮಕ್ಕಳೆಲ್ಲಾ ಎಲ್ಲಿದ್ದಾರೆ?" ಎಂದು ಕೇಳಿದಾಗ, ಅವನ ಕಣ್ಣಲ್ಲಿ ಕಂಬನಿ ಉದುರಿತು. "ಇದ್ದಾರೆ-ಈ ಊರಲ್ಲಿಯೆ. ನನ್ನ ಮೆರವಣಿಗೆ ಯಾದುದೂ ಸಾಲದೆ ಅವರ ಮೆರವಣಿಗೆಯೂ ಆಗಬೇಕೆ? ಅಲ್ಲೆಲ್ಲೋ ಬಿಟ್ಟು ಬಂದಿದ್ದೇನೆ. ಈವತ್ತು ಟಿಕೇಟು ಮಾಡಿಕೊಂಡು ನಾಳೆ ಮೊದಲನೆಯ ಬಸ್ಸಿಗೇ ಹೊರಡುತ್ತೇನೆ" ಎಂದಾಗ, ಅವರ ಮನಸ್ಸೂ, ಅದನ್ನು ಕೇಳಿದ ಇಂದುಮತಿಯ ಮನಸ್ಸೂ ತುಂಬ ನೋವಿಗೀಡಾಯಿತು. 'ಬಿಟ್ಟದ್ದೆಲ್ಲಿ' ಎಂದು

ಇನ್ನಿನ್ನು ಕೇಳಿದಾಗ, ಸ್ಥಳವನ್ನು ಹೇಳಿದ. ಮುರುಕು ದೈವದ ಗುಡಿಯೊಂದ ರಲ್ಲಿ—ಎಂದು.

"ಏಕೆ, ಹಾಗೆ ಮಾಡಿದೆ? ಇದು ನಿನ್ನ ಊರಲ್ಲವೆ! ಚಿಕ್ಕಪ್ಪಂದಿರು, ಅವರ ಮಕ್ಕಳು—ಒಬ್ಬರೂ ಇಲ್ಲವೆ?"

"ಹಿಸೆ ಪಡೆದು ಬೇರೆಯಾದ ಅವರ ಅನ್ನದ ಋಣಕ್ಕೆ ಬೀಳಬೇಕಿತ್ತು—ಎನ್ನುತ್ತೀಯಾ?"

ಆಗ ಇಂದುಮತಿಯು; ಮನಸ್ಸು ತಡೆಯದೆ, ಹೇಳಿದಳು:

"ನಾವೇನು ಮನುಷ್ಯರಲ್ಲವೆ? ಹೆಂಡತಿ, ಮಕ್ಕಳನ್ನು ಅಲ್ಲಿ ಬಿಟ್ಟು ಬರಬೇಕಿತ್ತೆ? ನಮ್ಮಲ್ಲಿಗೆ ಬರಬಾರದಿತ್ತೇ? ನಮ್ಮ ಗುರುತಿದ್ದು" ಎಂದು ಒತ್ತಾಯಿಸಿದಾಗ, ಆತ ನಿಶ್ಚಲ ಕಣ್ಣುಗಳಿಂದ ಅಲ್ಲಿಂದ ಹೊರಟು, ಆ ಸಂಜೆ ಮಗಳಿ ಬಂದ. ತನ್ನನ್ನು ನೆಚ್ಚಿ, ತನ್ನೊಂದಿಗೇ ಕಂಗಾಲಾದ, ಸಮನಾದ ಅರಿವೆ ಅಂಚಡಿಗಳಿಲ್ಲದೆ ಭಿಕಾರಿಗಳಂತೆ ತೋರುತಿದ್ದ ಮಕ್ಕಳು, ಮರಿ ಗಳನ್ನೂ, ಹೆಂಡತಿಯನ್ನೂ ಕರೆದುಕೊಂಡು ಬಂದ. ಸಾವಾದ ಮನೆ ಯೊಂದರಿಂದ ಹೊರಬಿದ್ದವರಂತಿತ್ತು—ಆ ಹೆಣ್ಣು ಮಗಳ ಮುಖ! ಇಂದು ಆ ದಿನ ಅವರನ್ನು ಹರ್ಷವಾಗಿರಿಸಲು ತನ್ನಿಂದ ಕೂಡಿದ ಉಪಚಾರವನ್ನು ಮಾಡಿದಳು. ಅಡುಗೆ ಅಟ್ಟು ಆದರದಿಂದ ಬಡಿಸಿದಳು. ಸಂಸಾರದಲ್ಲಿ ಹಿಗ್ಗು ಬಂದರೆ ಎಷ್ಟು ಏರಬಹುದೋ, ಕುಗ್ಗು ಬಂದಾಗ ಅಷ್ಟೇ ಇಳಿಯಬಹುದು —ಎಂಬುದನ್ನು ಮನಗಂಡಳು. ಗಂಡನೊಡನೆ "ಆ ಗಂಡಸಿನ ಮೂರ್ಖತನ ದಿಂದ ಈ ಹೆಂಗಸು ಮಕ್ಕಳೆಲ್ಲ ನರಳಬೇಕಾಯಿತಲ್ಲ" ಎಂದು ಇಂದುಮತಿ ಕನಿಕರಪೂರಿತ ವಿಸ್ಮಯವನ್ನು ಸೂಚಿಸಿದಾಗ, ಶಿವಪ್ಪನವರು ಹೇಳಿದ್ದಿಷ್ಟೆ "ಗಂಡನ ಸುಖದ ಪಾಲನ್ನು ಬಯಸುವವರು ದುಃಖದ ಪಾಲನ್ನು ಬೇಡ ವೆನ್ನಲು ಬರುತ್ತದೆಯೇ?" ಎಂದು.

— — — — — —

# ಅಧ್ಯಾಯ ೧೦.

ಮನೆ ಕಟ್ಟುವ ಹಂಬಲ ಮೆಲ್ಲ ಮೆಲ್ಲಗೆ ಶಿವಪ್ಪನವರನ್ನು ಕಾಡತೊಡಗಿತು. ತಂದೆ ಹಂಗಿಸುತ್ತಿರುವುದೂ ಸರಿಯೆ; ತಾವು ಇಕ್ಕಟ್ಟನ್ನು ಅನುಭವಿಸುತ್ತಿರುವುದೂ ಸರಿಯೆ; ಏನಿಲ್ಲ,ಎಲ್ಲವನ್ನು ಕಳೆದುಕೊಂಡ ಚಲಪತಿಯಂಥವರು ಕೂಡ "ಏನು ಶಿವು, ಇನ್ನೂ ಇದೇ ಮನೆಯಲ್ಲೇ ಇದ್ದೀಯ" ಎನ್ನುತ್ತಿರುವಾಗ, ಸಂಸಾರ ಜೀವನಕ್ಕೆಷ್ಟು ಭೂಷಣವೋ, ತನ್ನದೆಂಬ ಮನೆ–ಅದು ಗೂಡಿರಲಿ,ಗುಡಿಸಲಿರಲಿ-ತನಗೆ ಭೂಷಣ. ಅದೊಂದು ಕೊರತೆ ಇರಬೇಕಿಲ್ಲ. ಬಂದವರು ಅದನ್ನೇ ಅದನ್ನೇ ಒತ್ತಿ ಹೇಳಬೇಕಿಲ್ಲ—ಎಂದು ತೋರಿತು.

ಹೀಗೆ ಶಿವಪ್ಪನವರಿಗೆ ಮನೆಯ ಯೋಚನೆ ಆಗಾಗ ಬರುತ್ತಿರುವುದಂತು ಸರಿಯೆ; 'ಈ ವರ್ಷವೇ ಆ ಕೆಲಸ ತೊಡಗಬೇಕು' ಎಂದು ಮನಸ್ಸಿನಲ್ಲಿ ಆಸೆ ನಲಿಯುವುದೂ ಸರಿಯೆ; ಹೀಗೆ ಆಸೆಗಳೂ, ಯೋಚನೆಗಳೂ ಹೊಳೆದು ಅಳಿದು, ತಿರುಗಿ ಹುಟ್ಟಿ, ತಿರುಗಿ ಸತ್ತು, ಮೇಲಿಂದ ಮೇಲೆ ಪುನರಪಿ ಜನನಂ,ಪುನರಪಿ ಮರಣಂ-ಆಗುತ್ತ ನಡೆಯುತ್ತಿರುವಾಗ ಕಾಲವೂ ಅಷ್ಟೇ ವೇಗದಲ್ಲಿ ಸರಿಯುವುದಿಲ್ಲವೇ? ಹಾಗೆ ಹೇಳತೊಡಗಿ ಎಷ್ಟು ವರ್ಷಗಳಾದುವು? ಧಾರವಾಡದಿಂದ ಮರಳಿಬಂದ ಇಂದುಮತಿಯನ್ನು .ಕಿಟ್ಟಪ್ಪ ಮಾಸ್ತರರು ಕೆಣಕಿಯೆ ವರ್ಷದ ಮೇಲಾಯಿತು; ಯುರೋಪಿನಲ್ಲಿ ತೊಡಗಿದ ಯುದ್ಧ ಪ್ರಪಂಚದಲ್ಲೆಲ್ಲ ವಿಸ್ತರಿಸಿ, ಹಣದ ಉಬ್ಬರವನ್ನು ಹೆಚ್ಚಿಸಿ, ಈಗಾಗಲೇ ಐದು ವರ್ಷಗಳು ಕಳೆದಿವೆ. ಇಂದುಮತಿಯ ಎರಡನೆಯ ಬಾಣಂತಿ ತನವೂ ಆ ಇಕ್ಕಟ್ಟಿನ ಗುಡಿಸಲಿನಲ್ಲೇ ಕಳೆದಿದೆ. ಆದರೆ ಮನೆಯ ಆಸೆ ಇನ್ನೂ ಕಾರ್ಯಕ್ಕೆ ಬಾರದೆ ನಿಂತಿದೆ.

ಇಂದುಮತಿ ಇನ್ನೊಂದು ಗಂಡು ಶಿಶುವನ್ನು ಹಡೆದಿದ್ದಾಳೆ. ಮಕ್ಕಳೊಡನೆ, ಪರಿಚಿತರೊಡನೆ ನಲಿದಾಡಿ, ಆತಿಥ್ಯ ನಡೆಯಿಸಿ, ಬದುಕು ಕಳೆಯುವುದಕ್ಕೆ ಒಂದಿಷ್ಟು ವಿಶಾಲವಾದ ಜಾಗವಾದರೂ ಇರಲಿ ಎಂದು ಯೋಚಿಸುತ್ತಾಳೆ. "ಸ್ವಲ್ಪರೂಪಾಯಿ ಇದೆ ಎನ್ನುತ್ತೀರಲ್ಲ.ಎಷ್ಟಿದೆಯೊ ಅಷ್ಟರಿಂದಲೇ ಒಂದು ಮನೆಯನ್ನು ಮಾಡಿಸುವ; ಇದನ್ನೇ ದೊಡ್ಡದು ಮಾಡಿದರೂ ಸಾಕು" ಎಂದು ಇಂದುಮತಿ ಹೇಳುವಾಗ "ಇದರ ತಂಟೆ ಬೇಡ; ಅಪ್ಪ ಕಟ್ಟಿದ್ದು; ಅದನ್ನು ಮುಟ್ಟಿದರೂ ಸಿಟ್ಟುಮಾಡಿಯಾರು. ಹೇಗೂ ಕಟ್ಟಿಸುವುದೆಂದಾದ

ಮೇಲೆ, ರಸ್ತೆಯ ಸಮೀಪಕ್ಕೆ, ಒಂದು ತುಂಡು ಜಾಗ ತೆಗೆದುಕೊಂಡು ಕಟ್ಟಿಸುವ.ಗಂಪುವಿನಂಥ ಮೋಟರುಳ್ಳ ಮಂದಿ,ಮನೆ ರಸ್ತೆಯಿಂದ ದೂರವಾಗಿದೆ, ಎನ್ನುವುದು ಬೇಡ" ಎಂದು ಅವನ ಸುದ್ದಿ ಹೇಳುತ್ತಲೆ ಮಾತುಗಳು ಅವನ ಕಡೆಗೆ ಹರಿದುವು.

"ಈಗ ಗಂಪು ಸರದಾರರ ಸುದ್ದಿ ಏನಾಯಿತು? ಏನಾದರೂ ಕೊಡಬಹುದು-ಎನ್ನುತಿದ್ದಿರಿ ನೀವು. ಕೊಟ್ಟರೆ ಸಣ್ಣದೊಂದು ಮನೆಗೆ ಬೇಕಾಗುವ ಮರಮುಟ್ಟನ್ನು ಕೊಟ್ಟರೂ ಸಾಕು. ಕೊಡಲಾರನೇ?"

"ಗಂಪುವೇ? ಅವನು ಒಂದು ದಿವಸ ಊರಲ್ಲಿದ್ದರೆ ಎಂಟು ದಿವಸ ಊರ ಹೊರಗೆ. ನಾನು ಆದಮ್ ಸಾಹೇಬರನ್ನು ಆ ಬಗ್ಗೆ ಮಾತನಾಡಿಸಿ ನೋಡಿದೆ. ಅಂದರೆ—ನಾನಾಗಿ ಕೇಳಲಿಲ್ಲ; ಬೇರೆಯವರಿಂದ ಕೇಳಿಸಿದೆ. ಆದರೆ ಅವರು ಏನೂ ಮನಸ್ಸಿನಲ್ಲಿ ಹಾಕಿಕೊಳ್ಳಲಿಲ್ಲ. ಹಾಗೆ ಗಂಪುವನ್ನೊ ಕೇಳುವುದು; ಅವನೂ ಉದಾಸೀನನಾಗುವುದು-ಯಾಕೆ ಅದೆಲ್ಲ? ನನಗಂತು ಒಂದು ಹಟವಾಗಿದೆ. ಸ್ವಲ್ಪ ಸಾಲವಾದರೂ ಚಿಂತೆಯಿಲ್ಲ-ಮನೆಯನ್ನಂತು ಕಟ್ಟುವುದೇ"

"ಹೂಂ, ಹಾಗೆಯೇ ಹೇಳುತ್ತ ಹೇಳುತ್ತ ಮೂರು ವರ್ಷಗಳಾದುವು. ಅಥವಾ ಹೆಚ್ಚೇಯೋ" ಎಂದಾಗ"ಎಲ್ಲದಕ್ಕೂ ಸಮಯ ಕೂಡಿ ಬರಬೇಡವೇ" ಎಂದು ಅವರು ನುಡಿಯ ಬೇಕಾಯಿತು.

ಈ ಮನೆಯ ಕನಸನ್ನು ಕಾಣುವಾಗ, ಕನಸು ದೊಡ್ಡದಾಗಿಯೆ ಕಾಣತೊಡಗಿತು. ಜಾಗ ಸಾಕಷ್ಟು ವಿಶಾಲವಾಗಿರಬೇಕು, ಅದರ ಒಂದು ಮಗ್ಗುಲಲ್ಲಿ ಮನೆಯನ್ನು ಕಟ್ಟಿಕೊಂಡರೆ, ಇನ್ನೊಂದು ಮಗ್ಗುಲಲ್ಲಿ ಆಸ್ಪತ್ರೆಯನ್ನು ಕಟ್ಟುವಂತೆ ಅನುಕೂಲವಾಗಿರಬೇಕು—ಎಂಬ ಯೋಚನೆಯಿಂದ 'ಎಲ್ಲಾದರೂ ಮಾರುವಂಥ ಹಿತ್ತಿಲುಗಳಿವೆಯೆ?' ಎಂದು ವಿಚಾರಿಸತೊಡಗಿದರು. ಅಮ್ಮನವರ ಗುಡಿಯ ದಾರಿಯಲ್ಲಿ, ರಸ್ತೆಗೆ ತಗಲಿದ್ದು, ಮುಖ್ಯ ಬೀದಿಗೂ ದೂರವಿಲ್ಲದ ಹಿತ್ತಿಲೊಂದು ಮಾರಾಟಕ್ಕಿದೆಯೆಂದು ಕೇಳಿದರು. ಎರಡು ಮೂರುಸಾರಿ ಆ ದಾರಿಯಾಗಿ ಅಲೆದಾಡಿದರು. "ಸ್ಥಳ ಚಿಂತೆಯಿಲ್ಲ; ಚೆನ್ನಾಗಿದೆ" ಎಂದುಕೊಂಡರು. ಜಾಗ ವಿಶಾಲವಾಗಿತ್ತು; ಅದರಲ್ಲಿ ಇದ್ದುದೆಂದರೆ ಫಲಕೊಡುವಂತಹ ಹತ್ತೆಂಟು ತೆಂಗಿನ ಮರಗಳು; ಮತ್ತೊಂದು ಮುರುಕಲು ಗುಡಿಸಲು. ಹಿಂದೆ ಅದು ಶ್ರೀಪತಿರಾಯರ ಕುಟುಂಬಕ್ಕೆ ಸೇರಿತ್ತು.

'ಈಗ ಯಾರ ಹೆಸರಿಗೆ ಹೋಗಿದೆಯೋ' ಎಂದು ವಿಚಾರಿಸಿ, ಸಂಪೂರ್ಣ ತನಿಖಿಮಾಡುವಾಗ "ಅದು ಇನ್ನು ಸಿಗುವ ಹಾಗಿಲ್ಲ, ಎರಡು ಸಾವಿರಕ್ಕೋ, ಮೂರು ಸಾವಿರಕ್ಕೋ ಅದನ್ನು ಗಂಪು ಸರದಾರರು ತಕ್ಕೊಂಡರಂತೆ. ಅಲ್ಲಿ ಎರಡುಮೂರು ಬಾಡಿಗೆಗೆ ಕೊಡುವ ಮನೆಗಳನ್ನು ಕಟ್ಟುತ್ತಾರೆಂಬ ಸುದ್ದಿ ಯಿದೆ" ಎಂಬ ವಾರ್ತೆಯು ಶಿವಪ್ಪನವರ ಕಿವಿಗೆ ಬಿದ್ದಿತು.

ಅದರಿಂದ ಮನಸ್ಸಿಗೆ ಇನ್ನೊಂದೇ ಯೋಚನೆ ಹೊಳೆಯಿತು. ತಾನಾಗಿ ಇನ್ನೊಂದು ಮನೆಯನ್ನು ಕಟ್ಟಿಸುವ ಬದಲು, ಗಂಪುವಿಗೆ ಹೇಳಿ ನಿವಾಸಕ್ಕೆ ತಕ್ಕುದಾದ ಮನೆಯನ್ನು, ಆಸ್ಪತ್ರೆಗೆ ಯೋಗ್ಯವಾದ ಕಟ್ಟಡವನ್ನು ಕಟ್ಟಿಸಿ ಕೊಂಡಲ್ಲಿ ಬಾಡಿಗೆ ಕೊಟ್ಟು ಇರುವುದಾದರೂ ಏನು ತಪ್ಪು-ಎಂಬ ಯೋಚನೆ ಹೊಳೆಯಿತು. ಮರುಕ್ಷಣ "ಹಾಗಿದ್ದರೆ ಸ್ವಂತ ಮನೆಯೆಂಬ ತೃಪ್ತಿ ಇಂದು ಮತಿಗೆ ಬರುವುದು ಹೇಗೆ? ಇಲ್ಲ, 'ಗಂಪು ನಿನಗೆ ಆ ಜಾಗ ಖಾಯಿಸು ಇಲ್ಲ ವಾದರೆ, ನೀನು ಕೊಂಡ ಬೆಲೆಗೆ ನನಗೆ ಕೊಡು' ಎಂದು ಕೇಳುತ್ತೇನಾ"ಗಿ ಎಣಿಸಿಕೊಂಡರು. ಆತ ತನ್ನ ಈ ಸಣ್ಣ ಬೇಡಿಕೆಯನ್ನು ಎಂದೂ ನಿರಾಕ ರಿಸಲಾರನಾಗಿ ಕಂಡಿತು. ಇಷ್ಟಕ್ಕೆ ತಿಂಗಳು ಸರಿಯಿತು; ಗಂಪು ಊರಲ್ಲಿಯೇ ಇರಲಿಲ್ಲ.

ಗಂಪು ಊರಲ್ಲಿಲ್ಲದಿದ್ದರೂ ಆತ ಕೊಂಡ ಹಿತ್ತಿಲಿಗೆ, ಮನೆಕಟ್ಟಲು ಬೇಕಾದಂಥ ಕಲ್ಲುಗಳು ಬಂದು ಬೀಳತೊಡಗಿದವು. ಆತ ಊರಿಗೆ ಎಂದು ಬಂದಾನು ಎಂದು ವಿಚಾರಿಸುವುದೇ ಶಿವಪ್ಪನವರ ಕೆಲಸವಾಯಿತು. ಅವನ ಮನೆಯವರು ಒಂದು ನೆಗಡಿಯಾದರೆ, ಶೀತವಾದರೆ ಅವರಲ್ಲಿಗೆ ಬಂದೇ ಬರು ತ್ತಾರೆ. "ಅವನೇನು ಮನೆಯಲ್ಲಿಲ್ಲವೆ?" ಎಂದು ಕೇಳಿದರೆ "ಏನೋ, ಮೊನ್ನೆ ರಾತ್ರೆ ಬಂದು ಬೆಳಗಾಗುವುದರೊಳಗೆ ಹೊರಟುಹೋಗಿಯೂ ಆಯಿತು" ಎಂಬಂಥ ಸುದ್ದಿ ಸಿಗುತ್ತದೆ. ಶಿವಪ್ಪನವರ ಮನಸ್ಸಿನಲ್ಲಿ ಇದ್ದ ನಂಬಿಕೆ ಎಲ್ಲಾ ಹೊರಟುಹೋಯಿತು. "ನಾನು ಅಷ್ಟೆಲ್ಲ ವಿಚಾರಿಸುತ್ತೇನೆಂದು ತಿಳಿದ ಮೇಲೂ, ಊರಿಗೆ ಬಂದು ಹೋಗುತ್ತಿದ್ದ ಅವನು ಭೇಟಿಯಾಗದೆ ಹೋಗು ತ್ತಾನೆಂದರೆ-ಬೇಕೆಂದೇ ಕಣ್ಣುತಪ್ಪಿಸುತಿದ್ದಾನೆ. ಹೋಗಲಿ, ಅಂಥವನನ್ನು ಯಾಕೆ ನಂಬಿರಬೇಕು" ಎಂದು ಯೋಚಿಸಿದರು. 'ಕೊಡುವ ಜಾಗಗಳಿವೆಯೆ' ಎಂದು ಇನ್ನೊಮ್ಮೆ ವಿಚಾರಿಸತೊಡಗಿದರು. ನಿಜಕ್ಕೂ ಅದು ಕೊಡುವ ಕಾಲ ವಾಗಿರಲಿಲ್ಲ. ಕೊಳ್ಳುವವರ ಸಂಖ್ಯೆ ಹೆಚ್ಚಿತ್ತು. "ಹಾಗೆ ಸಮನಾದ ಜಾಗವೇ

ಸಿಗದೆಂದಾದರೆ ಇದ್ದ ಮನೆಯನ್ನೇ ದುರಸ್ತಿಮಾಡುವುದು. ಅಪ್ಪ ಹೇಗೂ ಅಳಿಯಂದಿರ ಮನೆಯನ್ನು ಗಟ್ಟಿಮಾಡಿದ್ದಾರೆ. ಇಲ್ಲಿಗೆ ಬರುವುದಿಲ್ಲ. ಈಗ ಬಾರದೆ ವರ್ಷವೇ ಕಳೆಯಿತು. ಅವರಂತೂ ಕಟ್ಟಿಸುವುದಿಲ್ಲ. ನಾನಾದರೂ ಕೆಲಸ ತೊಡಗಬಹುದಲ್ಲ" ಎಂಬ ನಿರ್ಧಾರಕ್ಕೆ ಬಂದರು.

ಇನ್ನೊಂದಷ್ಟು ದಿನ ಬಿಟ್ಟು, ಅವರು ಗಂಪು ತೆಗೆದುಕೊಂಡ ಜಾಗದ ಬಳಿಯಲ್ಲಿ ಹೋಗುತ್ತಿದ್ದಾಗ, ಅಲ್ಲಿ ಕಲ್ಲು ಕೆತ್ತುವ ಕೆಲಸ ನಡೆದಿತ್ತು. ಮರ ಮೋಪುಗಳು ಬಂದು ಬಿದ್ದಿದ್ದುವು; ಬಡಗಿಯರು ಕೆಲಸ ನಡೆಯಿಸುತ್ತಿದ್ದರು. ಕುತೂಹಲ ಹೆಚ್ಚಿ ಜತೆಯಲ್ಲಿದ್ದಂಥ ಒಬ್ಬಿಬ್ಬರು ಸ್ನೇಹಿತರೊಡನೆ ಅದನ್ನು ಕಾಣುವುದಕ್ಕೆಂದು ಹೋದರು. "ನಮ್ಮ ಗಂಪುವಿನ ಕೆಲಸ! ತಾನು ಊರ ಲ್ಲಿಲ್ಲ. ಯಾರ್ಯಾರಿಂದಲೋ ಕೆಲಸ ಮಾಡಿಸುತ್ತಿದ್ದಾನೆ" ಎನ್ನುತ್ತ, ಆಚೀಚೆ ನೋಡುವಾಗ, ನೆರೆದ ಕೆಲಸದವರು ವಿರಾಮವಾಗಿ ಕೆಲಸ ತೊಡಗುತ್ತಿರು ವುದು ಕಂಡಿತು. ಬೆಳಗಿನ ಒಂಬತ್ತು ಗಂಟೆ ಸರಿದಿತ್ತು. ಒಬ್ಬಾತ, ಉಳಿಗೆ ನೋವಾಗಬಾರದೆಂಬಷ್ಟು ನಾಜೂಕಿನಿಂದ ಅದನ್ನು ಮಸೆಯುತ್ತಿದ್ದ. ಅವನ ಬಳಿಗೆ ಕಲ್ಲು ಹೊರುವವನೊಬ್ಬ ಬಂದ. "ಏನಾಚಾರ್ರಿ, ಕವಳ, ಗಿವಳ ನೀವೇ ತಿಂದು ಮುಗಿಸುತ್ತೀರಾ? ನನಗೇನಾದರೂ ಉಂಟೇ?" ಎಂದು ಕೇಳಿದ. ಎಲೆಯಡಿಕೆಯ ಸೂಡಿ ಹೊರಗೆ ಬಂದಿತು. ಇಬ್ಬರೂ ಜತೆಗೆ ಕುಳಿತು ಅದನ್ನು ಮೆಲ್ಲುವ ಸಮಾರಂಭಕ್ಕೆ ತೊಡಗಿದರು. ಡಾಕ್ಟರರಿಗೆ ಸೋಜಿಗವೆನಿಸಿತು. 'ಬೆಳಗಿನ ಇಷ್ಟು ಪ್ರಾರಂಭಕ್ಕೇನೆ ಈ ಮಹಾನುಭಾವರು ಹೀಗೆ ಕೆಲಸದ ಚುರುಕು ತೋರಿಸಿದರೆ, ಗಂಪು ಸಾಹುಕಾರನ ಮನೆಯನ್ನು ಕಟ್ಟಿ ಮುಗಿಸು ವಾಗ ಎಷ್ಟು ಹಣ ಮುಗಿಯುತ್ತದೋ" ಎಂದು ಸೋಜಿಗವಾಯಿತು.

ಕುತೂಹಲದಿಂದ "ನಿಮಗೆ ದಿನ ಮಜೂರಿಯೆ? ಅಥವಾ ಗುತ್ತಿಗೆಯೆ" ಎಂದು ಕೇಳಿದರು. ಆ ಬಡಗಿ ಕಾಳೂರಿನವನಲ್ಲ. ಯಃಕಶ್ಚಿತ ವ್ಯಕ್ತಿಯೊಬ್ಬರು ಈ ಪ್ರಶ್ನೆ ಕೇಳಿದ್ದನ್ನು ನೋಡಿ ಅವನ ಪ್ರತಿಷ್ಠೆಗೆ ಚುಚ್ಚಿದಂತಾಯಿತು. ಅವನೆಂದ "ಏನಾದರೆ ನಿಮಗೇನು? ಸಂಬಳ ಕೊಡುವವರು ಬೇರೆಯೇ ಇದ್ದಾರೆ."

ಕೆಲಸದವನ ದಾರ್ಷ್ಟ್ಯ ನೋಡಿ ಅವರಿಗೆ ಬೆರಗಾಯಿತು. ಮನಸ್ಸು ತಡೆಯಲಿಲ್ಲ: "ಅದು ತಿಳಿದೇ ಕೇಳಿದೆ. ಕೆಲಸ ಮಾಡಿಸುವವರು ಸಮೀಪ ವಿಲ್ಲದಿದ್ದರೆ ಕೆಲಸ ಹೇಗೆ ನಡೆಯುತ್ತದೆ ಎಂದು ನೋಡಿಯೇ ಹೇಳಿದೆ"

ಎಂದರು.

ಆ ಬಡಗಿ ಮುಖ ತಿರುಗಿಸಿದ. ಬೇಕೋ ಬೇಡವೋ ಎಂಬ ಮನಸ್ಸಿನಿಂದ ಉಳಿಯನ್ನು ಹಿಡಿದು ತನ್ನಷ್ಟಕ್ಕೆ "ನಮಗೆ ಒಬ್ಬರೇ ಧನಿಗಳಲ್ಲ. ಇಲ್ಲಿಗೆ ಬಂದು ಹೋಗುವವರೆಲ್ಲ ಧನಿಗಳೆಂದಾಯಿತು" ಎಂದು ಗುರುಗುರಿಸಿ, ಉಳಿಯನ್ನು ಅಲ್ಲಿಯೇ ಇರಿಸಿ, ತಾಂಬೂಲವನ್ನು ಉಗಿಯುವುದಕ್ಕೆ ಹೋಗಿ ಬಂದ. ಮನಸ್ಸಿನಲ್ಲಿ ಸಿಟ್ಟು ಕುದಿಯುತ್ತಿತ್ತು. ಡಾಕ್ಟರರ ಜತೆಯಲ್ಲಿ ಬಂದವರು ಇನ್ನೂ ಜುಳು ಜುಳು ನೋಡುತ್ತಿರುವುದನ್ನು ಕಂಡು "ಹೋಯ್, ರಾಯರೇ, ನಮ್ಮ ಕೆಲಸ ಮಾಡುವುದು ಹೇಗೆಂದು ನಮಗೆ ಗೊತ್ತು. ನಿಮ್ಮಂಥ ಕಚ್ಚೆ ರಾವುತರು ಬಂದು ನಮಗೆ ಅದನ್ನು ಕಲಿಸಿಕೊಡುವುದು ಬೇಡ" ಎಂದು ಮಾತಿನ ಬಾಣವನ್ನು ಎಸೆದೇಬಿಟ್ಟ.

ಆ ಬಡಗಿಯರ ಗುಂಪು ಊರಿಗೆ ಹೊಸತು. ಊರವರಾಗಿದ್ದಲ್ಲಿ ಅವರು ಶಿವಪ್ಪ ಡಾಕ್ಟರರು ಎಂಬುದರಿಂದಲಾದರೂ ಬಾಯಿಮುಚ್ಚಿಕೊಳ್ಳುತಿದ್ದರು. ಈತ ಅಷ್ಟು ನಾಜೂಕನ್ನು ತೋರಿಸಲಿಲ್ಲ. ಡಾಕ್ಟರರು ಬೇಸರಿಸಿ ಹೊರಟರು. ಅವರು ಹೊರಡುವಾಗ, ಅಲ್ಲಿದ್ದ ಒಬ್ಬ ಗುರುತಿನ ಕೂಲಿಯವನು ಬಡಗಿಯೊಡನೆ "ಏ ಮಹಾರಾಯಾ, ಅವರು ಯಾರೆಂದು ತಿಳಿದೆ? ಶಿವಪ್ಪ ಡಾಕ್ಟರರಲ್ಲವೆ? ನಮ್ಮ ಸಾಹುಕಾರರಿಗೆ ಬೇಕಾದವರು" ಎಂದ. ಹೆಮ್ಮೆಗೆ ಕಡಿಮೆಯಿಲ್ಲದ ಆ ಬಡಗಿ "ಡಾಕ್ಟರರಾದರೆ ಊರಿಗೆ.. ನನಗೇನಂತೆ" ಎಂದು ಬಿಟ್ಟ.

ಅಲ್ಲಿಂದ ಹೊರಬಿದ್ದ ಶಿವಪ್ಪನವರ ಮನಸ್ಸಿನಲ್ಲಿ, ಮನೆ ಕಟ್ಟಿಸುವವನ ಸುಖ, ದುಃಖ ದೊಡ್ಡದಾಗಿಯೇ ಕಾಣಿಸಿತು. 'ಬರಿಯ ಕೂಲಿಗಳಿಗೆ ದಿನಕ್ಕೆ ಎರಡು, ಎರಡೂವರೆ ರೂಪಾಯಿ ಸಂಬಳವಿರಬೇಕು. ಆ ಬಡಗಿಗೆ ಮೂರು, ನಾಲ್ಕು ರೂಪಾಯಿಗಳ ದಿನ ಕೂಲಿ ಇರಬಹುದು. ಅಷ್ಟು ವೇತನ ಕೊಟ್ಟರೂ ಕಳ್ಳತನ ನಡೆಸದೆ ಕೆಲಸ ಮಾಡಬೇಕೆಂಬ ಬುದ್ಧಿ ಜನಕ್ಕೆ ಬರಬೇಡವೆ? ಇವರೆಲ್ಲ ಪ್ರಾಮಾಣಿಕರಾಗುವ ಕಾಲ ಉಂಟೇ?' ಎಂದು ತೋರಿತು. ಜತೆಗೆ-ತಾನು ಮನೆ ಕಟ್ಟಿಸಿದರೂ ತನಗೂ ಅಂಥವರೇ ಸಿಗುವವರು. ಅಂಥವರ ಮೇಲೆ ಪೊಲೀಸ್ ಗಸ್ತನ್ನು ಇರಿಸುವುದಕ್ಕೆ ಸಾಧ್ಯವೇ? ಅದಕ್ಕಿಂತ, ಮನೆ ಕಟ್ಟಿಸುವುದಾದರೆ, ಒಂದು ನಕ್ಷೆ ತಯಾರಿಸಿ, ಅಂದಾಜು ಮಾಡಿಸಿ, ಯಾರಿಗಾದರೂ ಗುತ್ತಿಗೆಗೆ ಕೊಡುವುದು ವಾಸಿ–ಎಂಬ ಯೋಚನೆಯಾಯಿತು.

ಆ ಸಂಜೆ ಡಾಕ್ಟರರು ನಿತ್ಯಗಟ್ಟಲೆಯಂತೆ ದವಾಖಾನೆಗೆ ಹೋಗಿದ್ದರು.

ಉದ್ಯೋಗವಿಲ್ಲದ ಕೆಲವು ಸ್ನೇಹಿತರೂ ಅಲ್ಲಿ ಸೇರಿದ್ದರು. ವಿರಾಮಶೀಲರಿಗೆ ಏನಿಲ್ಲದಿದ್ದರೆ ಯುದ್ಧದ ವಾರ್ತೆಯನ್ನು ಚರ್ಚಿಸುವುದಕ್ಕಾಗುತ್ತದೆ. ಜರ್ಮನಿ ಯುರೋಪನ್ನು ಆಕ್ರಮಿಸಿದ್ದು, ಜಾಪಾನು ಇಂಡೋನೇಸ್ಯವನ್ನು ನುಂಗಿದ್ದು, ಬರ್ಮಾವನ್ನು ಆಕ್ರಮಿಸಿದ್ದು, ಒಂದೊಂದಾಗಿ ಚರ್ಚೆಗೆ ಬರುತ್ತಿದ್ದುವು. ಇಂದೂ ಅಂಥ ಚರ್ಚೆ ಸಾಗಿದೆ. ಎಷ್ಟು ಮಾತನಾಡಿದರೂ, ಮುಗಿಸದಂಥ ಚರ್ಚೆಯದು. ವರ್ಷಗಳು ಸಂದರೂ ಯುದ್ಧ ಮುಗಿಯದು. ಐದು ವರ್ಷಗಳೇ ಸಲುತ್ತ ಬಂದಿವೆ. ಕೆಲವರಿಗೆ ಪಕ್ಷಗಳನ್ನು ವಹಿಸಿಕೊಂಡು ಮಾತನಾಡುವ ಆಸಕ್ತಿ. ಇನ್ನು ಕೆಲವರಿಗೆ 'ಯಾರು ಏನಾದರೇನು, ನಮಗೆ ರಾಗಿ ಬೀಸುವ ಯೋಗ ತಪ್ಪಿದ್ದಲ್ಲ' ಎಂಬ ತತ್ವಜ್ಞಾನ. ಬಡಬಗ್ಗರಿಗೆ, ವಿಷವೇರುವಂತೆ ಏರುತ್ತಿರುವ ಬೆಲೆಗಳ ಭಯ! ಒಬ್ಬರೆಂದರು: "ಏನು, ಕಡೆಗೂ ಯುದ್ಧ ನಿಂತೀತೆ, ಇಲ್ಲವೇ?" ಎಂದು.

"ಯುರೋಪಿನಲ್ಲಿ ನಿಂತರೂ ಜಪಾನಿಯರು ಬಿಡಲಿಕ್ಕಿಲ್ಲ".

"ರಸ್ಯಾವೂ ತಿರುಗಿ ಬಿದ್ದೀತು ಜಪಾನಿನ ಮೇಲೆ ಅನ್ನುತ್ತಾರೆ."

"ಹೇಗೆ ತಿರುಗಿ ಬೀಳುವುದು? ಅವರಿವರಲ್ಲಿ ಸಂಧಾನವಾಗಿರುವಾಗ?"

"ಒಳ್ಳೆಯ ಸಂಧಾನ! ಎಲ್ಲರೂ ಕಾಲಕ್ಕೆ ತಕ್ಕ ಕೋಲ ಕಟ್ಟುವವರು."

"ಇಲ್ಲಯ್ಯ, ಇನ್ನು ಹೆಚ್ಚು ಸಮಯ ಮುಂದೆ ಹೋಗಲಾರದು. ಹಿಟ್ಲರನ ದೋಸ್ತಿಯೊಬ್ಬ ಲಾಗ ಹಾಕಿದನಲ್ಲ. ಮಿತ್ರ ರಾಷ್ಟ್ರಗಳ ಕೆಲಸ ಅರ್ಧಕ್ಕರ್ಧ ಸುಲಭವಾಯಿತು."

"ಏನೆನ್ನುತ್ತೀರಿ, ಸ್ವಾಮಿ? ರಸ್ಯದಂತಹ ದೇಶವೇ ಜರ್ಮನಿಯೊಡನೆ ಕಾದಾಡಿ ಕಂಗಾಲಾಗುತ್ತಿರುವುದನ್ನು ಕಂಡರೆ, ಇವರೆಲ್ಲ ಮೇಲೆ ಬೀಳುವುದಕ್ಕುಂಟೆ? ಬಾಯಲ್ಲಿ ಹೇಳಬಹುದು–ಇನ್ನೊಮ್ಮೆ ಯುರೋಪನ್ನು ಆಕ್ರಮಿಸುತ್ತೇವೆಂದು."

"ಆಕ್ರಮಿಸಲಾರರು ಅನ್ನುತ್ತೀರಾ? ಈಗಾಗಲೇ ತುಂಬ ತಯಾರಿ ನಡೆದಿದೆ ಅನ್ನುತ್ತಾರೆ."

"ಏನಿಲ್ಲ ನೋಡಿ, ಇವರೆಲ್ಲರು ಇನ್ನಾರು ತಿಂಗಳಲ್ಲಿ ದಿವಾಳಿಯೆದ್ದು ಹೋಗುತ್ತಾರೆ."

"ಯಾವುದೂ ಅರ್ಥವಾಗದ ಸಂಗತಿ. ಅಮೇರಿಕ, ಬ್ರಿಟನು, ರಸ್ಯ ಇವುಗಳು ಕೂಡಿ ಇನ್ನು ಗೆಲ್ಲುವುದುಂಟೇ, ಉಳಿಯುವುದುಂಟೆ? ಈ ಒಂದು

ಯುದ್ಧ ಮುಗಿಯುವಾಗ ಪ್ರಪಂಚ ಒಂದು ಮಹಾಚ್ಮತ್ಕಾರ-ಹಲವರು. ಆಶ್ಚರ್ಯ."

ಯುದ್ಧ ನಿಲ್ಲ

ಶಿವಪ್ಪನವರ ಮೇಜಿನ ಮುಂದೆ ಕುಳಿತಂತಹ ಈ ಗೃಹಸ್ಥರದೆ ನಿಜ: ತ್ತಿರುವಂಥ ಸಂಭಾಷಣೆಗೆ ಕಿವಿಯನ್ನು ಕೊಡದಿರುವುದೇ ಹೆಚ್ಚು. ಅವರ ನಿತ್ಯದ ಕೆಲಸ ಸಾಗಬೇಕಲ್ಲ. "ನಿನಗೇನು, ನಿನಗೇನು" ಎಂದು ಬಂದ ರೋಗಿಗಳನ್ನು ವಿಚಾರಿಸುತ್ತಾರೆ—ಚೀಟಿ ಬರೆದುಕೊಡುತ್ತಾರೆ. ಅವಶ್ಯ ವಾದರೆ ತಾವೇನೆ ಒಳಗೆ ಹೋಗಿಬರುತ್ತಾರೆ. ಅಲ್ಲೊಂದು ಇಲ್ಲೊಂದು ಚರ್ಚೆಯ ಮಾತುಗಳು ಅವರ ಉದಾಸೀನ ಕಿವಿಗೆ ಬೀಳುತ್ತಲೇ ಇರುತ್ತವೆ. ತಾನು ಸರಿದರೂ, ಮೇಜಿನ ಮುಂಗಡೆ ವಾಗ್ಯುದ್ಧ ನಡೆಯುತ್ತಲೇ ಇರುತ್ತದೆ.

"ಈಗ ಯುದ್ಧ ಒಂದು ಡಮ್ಮಿಗೆ ನಿಂತುಬಿಟ್ಟರೆ, ಅಲ್ಲಲ್ಲಿ ಈ ಸಾಹುಕಾರರ ಬಗೆಯವರು ಅಡಗಿಸಿಟ್ಟ ಕಳ್ಳ ಮಾಲುಗಳೆಲ್ಲ ಹೊರಗೆ ಬಂದು, ದರಗಳು ಒಂದು ಪೆಟ್ಟಿಗೆ ಇಳಿಯುವುದಿಲ್ಲವೆ? ಈ ಯುದ್ಧದಿಂದ ಎಷ್ಟುಜನರು ಲಾಭ ಸಂಪಾದಿಸಿ ಉದ್ಧಾರವಾದರು ಅನ್ನುತ್ತೀರಾ? ಅದು ನಿಂತರೆ ಅಷ್ಟೇ ಜನರು ತಿಂದದ್ದನ್ನೆಲ್ಲ ಕಕ್ಕಿ ಸಾಯುವುದಕ್ಕುಂಟು."

"ನಿಜ, ಅಡಗಿಸಿಟ್ಟ ಮಾಲುಗಳು, ಗಾಬರಿಯಿಂದ, ಒಂದು ಸಾರಿಗೆ ಹೊರಕ್ಕೆ ಬರಬಹುದು. ಆದರೆ ಬೆಲೆ ಕಡಿಮೆಯಾದೀತೆ? ಇಡೀ ಯುರೋಪೇ ಧ್ವಂಸವಾಗಿದೆ–ಎನ್ನುತ್ತಾರೆ. ಹೊಸ ಮಾಲುಗಳು ತಯಾರಾಗುವುದಕ್ಕೆ ಎಷ್ಟು ವರ್ಷಗಳು ಬೇಕೋ? ಯುದ್ಧ ನಿಂತರೂ ಈ ಕಂಟ್ರೋಲೆನ್ನುವುದು ಫಕ್ಕನೆ ಹೋಗಲಾರದು."

"ಅದು ಹೋಗಲಿಕ್ಕೆ ದೊಡ್ಡ ದೊಡ್ಡವರು ಬಿಡಬೇಕಲ್ಲ."

"ಸಾಹುಕಾರರು ಬಾಯಲ್ಲಿ 'ಹೋಗಲಿ' ಎನ್ನುತ್ತಿದ್ದರೂ, ಅಂತರಂಗದಲ್ಲಿ 'ಇರಲಿ' ಎಂದು ಬೇಡುವವರೇ. ಆಫೀಸರರಿಗೂ ಅದು ಬೇಕಾಗಿದೆ. ಈ ಲೈಸನ್ಸು, ಪರ್ಮಿಟು-ಇದ್ದದ್ದರಿಂದ ಅವರಿಗೂ ಒಂದು ದರ್ಪ ಬಂದಿದೆ; ಲಾಭಕ್ಕೂ ದಾರಿಯುಂಟು. ಅವರ ಅಧಿಕಾರ, ದರ್ಪ;ಮತ್ತೊಂದು ಕಂಡರೆ ದಿಕ್ಕಿಲ್ಲ."

ಶಿವಪ್ಪನವರು ಕೊನೆಯ ಮಾತಿನಲ್ಲಿ ಸೇರಿಕೊಂಡರು: "ಏನು ಮಾಡಿದಿರಿ ಈಗ? ಯುದ್ಧನಿಲ್ಲಬೇಕೆಂದು ಮಾಡಿದಿರೋ ಬೇಡವೆಂದೋ" ಎನ್ನುತ್ತಲೆ ಇನ್ನೊಬ್ಬರು "ಯುದ್ಧ ಹೇಗೂ ಒಂದು ವರ್ಷದಲ್ಲಿ ನಿಂತೀತು. ಸಾಯುವು

ದನ್ನು ತೆಗೆದು ತೋರಿಸಿದ. ತೋರಿಸುತ್ತ "ಡಾಕ್ಟರರೇ, ನಿಮ್ಮನ್ನು ನಾನು ಕೇಳಲಿಲ್ಲ, ಮಾಡಲಿಲ್ಲ. ಹಾಗೆ ಕೇಳುವುದಕ್ಕೆ ಧೈರ್ಯವೂ ಆಗಲಿಲ್ಲ. ಈ ನಕ್ಷೆ ಒಬ್ಬ ಗುರುತಿನ ಓವರ್ಸಿಯರಿಂದ ಹೇಳಿ, ತಯಾರಿಸಿದ್ದು. ಅದರಲ್ಲಿ ಬೇಕಾದರೆ, ಸ್ವಲ್ಪ ಹೆಚ್ಚು ಕಡಿಮೆ ಮಾಡಬಹುದು. ಮನೆಯನ್ನು ಹಿತ್ತಿಲಿನ ಹಿಂದಕ್ಕೆ ಹಾಕಿದರೆ, ಒಳ್ಳೆಯ ಕಾಲ ಬಂದಾಗ ದವಾಖಾನೆಯನ್ನು ಮುಂಭಾಗ ದಲ್ಲಿ ಕಟ್ಟಿಸಬಹುದು" ಎಂದ.

ಅಷ್ಟರಲ್ಲಿ ಬೆಳಗ್ಗೆ ಕೆಲಸ ಮಾಡುತಿದ್ದ ಆಳುಗಳಲ್ಲಿ ಕಲ್ಲು ಹೊರು ತಿದ್ದವನೊಬ್ಬನು ಬಂದು, ಗಂಪುವನ್ನು ಕಂಡು ವಿನಯವಾಗಿ ನಮಸ್ಕರಿಸಿದ.

"ಮೇಸ್ತ್ರಿಯರು ಬರಲಿಲ್ಲವೇನೂ ಈವತ್ತು?" ಎಂದು ಕೇಳಿದ ಗಂಪು.

"ಅವರು ಊರಲ್ಲಿಲ್ಲ ಇವತ್ತು; ಮರಕ್ಕೆ ಹೋಗುತ್ತೇನೆ ಎಂದಿದ್ದರು."

"ಹೀಗಾಗಿ ನಿಮ್ಮದು ಇಷ್ಟೆಲ್ಲ ನಾಟಕವಾದದ್ದೇ" ಎಂದ. ಅಲ್ಲಿಂದ ಗಂಪುವಿನ ಅವತಾರವೇ ಬೇರೆಯಾಯಿತು. ಹುಲಿಯಂತೆ ಕಣ್ಣು ಕೆರಳಿತು. "ಆಚಾರಿ ಯಾರವ? ಇಲ್ಲಿ ಬರಲಿ" ಎಂದು ಕರೆದ.

ಬೆಳಗ್ಗೆ ಕೆಲಸ ಮಾಡುತ್ತಿದ್ದವರು ಬಂದರು. ಅದರಲ್ಲಿ ದುಡುಕಿ ಮಾತನಾಡಿದ ಬಡಗಿಗೆ, ಧನಿಗಳೊಂದಿಗೆ ಬಂದ ಶಿವಪ್ಪನವರನ್ನು ಕಂಡು ಎಲ್ಲಿಲ್ಲದ ಆಶ್ಚರ್ಯವಾಯಿತು. ಆತ ಬೇರೇನೊ ಅಡ್ಡ ಮಾತಿಗೆ ತೊಡಗ ಬೇಕೆಂದು ಯೋಚಿಸುವುದರೊಳಗಾಗಿ ಗಂಪು "ಅದಿರಲಿ, ಯಾರದು ಆಚಾರ್ರಿ, ಬೆಳಗ್ಗೆ ನಮ್ಮ ಈ ಡಾಕ್ಟರರು ಬಂದಾಗ ಯದ್ವಾತದ್ವಾ ಮಾತನಾಡಿ ದವರು? ಸಂಬಳ ಕೊಡುವವರು ನಮಗೆ ಬೇರೆಯೇ ಇದ್ದಾರೆ-ಎಂದವರು? ದಿನಕ್ಕೆ ನಾಲ್ಕು ರೂಪಾಯಿ ತಿನ್ನುತ್ತ, ಹೊತ್ತುಮೂಡಿ ಜಾವ ಹೊತ್ತಿಗೆ ಕೆಲಸ ತೊಡಗಿ, ಉಳಿ, ಬಾಚಿ ಮಸೆಯುತ್ತ ಕುಳಿತು, ಎಲೆಯಡಿಕೆ ಜಗಿಯುತ್ತ ಕುಳಿತಿರುವುದನ್ನು ಕಂಡು, ಅವರಂಥವರು ಒಂದು ಮಾತು ಹೇಳಿದರೆ ನಿಮ್ಮ ಹುಳಿಯನ್ನೆಲ್ಲ ತೋರಿಸುತ್ತೀರಾ?" ಎಂದು ಕೇಳಿದ.

ಬಡಗಿಗಳಾಗಲಿ, ಕೂಲಿಗಳಾಗಲಿ ಯಾರೂ ಮಾತನಾಡಲಿಲ್ಲ.

ಗಂಪುವಿನ ಮುಖ ಊದಿಕೊಂಡಿತು. "ಆವಾಗ ಯಾರು ಹಾಗೆ ಅಂದರೋ, ಈಗ ಅವರ ಕಾಲಿಗೆ ಬಿದ್ದು 'ನನ್ನಿಂದ ತೀರ ತಪ್ಪಾಯಿತು' ಎಂದು ಹೇಳಿಕೊಳ್ಳಬೇಕು" ಎಂದ. ಹುಲಿಯ ಮುಂದಿನ ಹುಲ್ಲೆಯ ಕರುವಿನಂತೆ ಆ ಬಡಗಿಯ ಕಣ್ಣಲ್ಲಿ ನೀರು ಹರಿಯತೊಡಗಿತು; ಕೈಕಾಲು ನಡುಗತೊಡ

ಗಿತು. ಸರದಾರರಿಗೆ ಸಿಟ್ಟು ಬಂದಾಗ ಏನಾದೀತೆಂದು ಗೊತ್ತಿದ್ದ ಅವನು, ನೆಟ್ಟಗೆ ಹೋಗಿ ಗಂಪುವಿನ ಕಾಲಿಗೇ ಅಡ್ಡಬಿದ್ದ.

"ನನಗಲ್ಲ; ಅವರಿಗೆ! ಯಾರು ಎಂದು ತಿಳಿದುಕೊಂಡಿದ್ದೀಯಾ ಅವರು?" ಎಂದ ಗಂಪು.

"ಹೋಗಲಿ, ಬಿಡು ಗಂಪು. ಅವರವರ ಹಣೆಯ ಬರಹ. ಅದನ್ನೆಲ್ಲ ನಾನು ಮನಸ್ಸಿಗೆ ತೆಗೆದುಕೊಳ್ಳುವವನಲ್ಲ. ಏನೋ ಮನಸ್ಸಿಗೆ ಅನಿಸಿತು–ಅಂದೆ. ನನಗೆ ಬೇಡದ ಸುದ್ದಿಯಿತ್ತು. ಆದರೂ ಬೇಸರವಾಗಿ ಹೇಳಿದೆ. ಅಷ್ಟ ರೊಳಗೆ ಆ ಸುದ್ದಿಯು ನಿನ್ನ ಕಿವಿಗೂ ಮುಟ್ಟಿ, ನೀನು ಹೀಗೆಲ್ಲ ಮಾಡಿದರೆ ಹೇಗೆ?" ಎಂದು ಶಿವಪ್ಪನವರು ಗಂಪುವಿಗೆ ಸಮಾಧಾನ ಹೇಳಿದರು.

ಬಡಗಿ ಇನ್ನೊಮ್ಮೆ ಡಾಕ್ಟರರೆದುರಿಗೆ ಮಂಡಿಯೂರಿದ; ತನ್ನಿಂದ ಶತಾ ಪರಾಧವಾಯಿತೆಂದ. ಗಂಪು ಸರದಾರನ ಜನಗಳು–ಅವನ ವಿಚಾರದಲ್ಲಿ ಎಂಥ ಭಯ ಮಿಶ್ರಿತವಾದ ಭಕ್ತಿಯನ್ನು ಇರಿಸಿಕೊಂಡಿದ್ದಾರೆಂದು ಅದರಿಂದ ಸ್ಪಷ್ಟವಾಯಿತು. ಆ ದೃಶ್ಯವನ್ನು ನೋಡಿ ಉಳಿದ ಕೂಲಿಗಳು ಹಿಂದೆಗೆದು, ತಂತಮ್ಮ ಕೆಲಸಗಳನ್ನು ಅವಸರದಲ್ಲಿ ತೊಡಗಿಯೂ ಆಯಿತು. ಗಂಪುವಿಗೆ ಒತ್ತಿಬಂದಿದ್ದ ಸಿಟ್ಟು ಇನ್ನೂ ಇಳಿಯಲಿಲ್ಲ; "ಇಲ್ಲ, ಡಾಕ್ಟರರೆ-ನಾನು ಒಂದು ಕಂಡುಕೊಂಡಿದ್ದೇನೆ. ನೀವು ಅವರಿಗೆ ಸಂಬಳ ಐದು ರೂಪಾಯಿ ಕೊಡಿ, ಹತ್ತು ರೂಪಾಯಿ ಕೊಡಿ. ವ್ಯವಹಾರ ಬಡವರೊಡನೆ ಮಾಡಿ, ಇಲ್ಲವೆ ದೊಡ್ಡ ವರೊಡನೆ ಮಾಡಿ-ನ್ಯಾಯವಾಗಿ ಇರಬೇಕು; ನ್ಯಾಯವಾಗಿ ದುಡಿಯಬೇಕು. ಪರರನ್ನು ಹೊಂಡಕ್ಕಿಳಿಸಬಾರದು–ಎಂಬ ಬುದ್ಧಿ ಈ ದಿನಗಳಲ್ಲಿ ಹೊರಟೇ ಹೋಗಿದೆ. ಇನ್ನೊಬ್ಬನನ್ನು ಮೋಸಮಾಡಿ ಸಂಪಾದಿಸಿದ ಹಣಕ್ಕಿರುವ ರುಚಿ, ಬೆವರಿಳಿಸಿ ಗಳಿಸಿದ ದುಡ್ಡಿಗಿಲ್ಲ-ಎಂದು ತಿಳಿಯುವ ಕಾಲ ಇದು."

ಗಂಪು ಮೊದಲು ಪ್ರಾರಂಭಿಸಿದ ವಿಷಯಕ್ಕೂ, ಈಗ ಹೇಳುತ್ತಿರುವ ಮಾತಿಗೂ ಯಾವ ಹೊಂದಿಕೆಯನ್ನೂ ಡಾಕ್ಟರರು ಕಾಣಲಾರದೆ, ಮೂಕ ರಾಗಿಯೇ ನಿಂತಿದ್ದರು. ಆತ ತನಗಾಗಿ ಒಂದು ಮನೆಯನ್ನು ಅಲ್ಲಿ ಕಟ್ಟಿಸು ತಿದ್ದಾನೆ ಎಂಬ ಜ್ಞಾನ ಅವರಿಗಂತು ಆಗಲಿಲ್ಲ. ಅವನ ಮಾತಿನಿಂದಲೂ ಅದು ಸ್ಪಷ್ಟಗೊಳ್ಳಲಿಲ್ಲ.

ಗಂಪು ತಿರುಗಿ ವಿಷಯವನ್ನು ಬದಲಿಸಿದ: "ಏನಿಲ್ಲ; ಇನ್ನು ಒಂದು ತಿಂಗಳ ಕಾಲ ನನಗೆ ಅಷ್ಟು ದೂರದ ಸರ್ಕೀಟಿಲ್ಲ. ಆ ಒಂದೇ ಒಂದು ತಿಂಗ

ಳಲ್ಲಿ ಮನೆಯ ಕೆಲಸ ಮುಗಿಸಿಕೊಡುತ್ತೇನೆ" ಎಂದ.

'ಮುಗಿಸಿಕೊಡುತ್ತೇನೆ' ಎಂಬ ಮಾತು ಅವರ ಕಿವಿಗೆ 'ಮುಗಿಸಿಬಿಡುತ್ತೇನೆ' ಎಂದ ಹಾಗೆಯೇ ಕೇಳಿಸಿತು. ಆ ಬೆಳಗ್ಗೆ ಕೆಲಸದ ಮಾದರಿಯನ್ನು ನೋಡಿದ ಶಿವಪ್ಪನವರು "ಒಂದು ತಿಂಗಳಲ್ಲಿ ಮನೆಯೇ!" ಎಂಬ ವಿಸ್ಮಯ ತಾಳಿದರು.

"ಏನೆನ್ನುತ್ತೀರಿ ನೀವು? ನಾನು ಮಿಲಿಟರಿ ಜನ. ಇಲ್ಲವಾದರೆ ಈ ಮಿಲಿಟರಿ ಗುತ್ತಿಗೆ ಪೂರೈಸಲು ಬರುತಿತ್ತು ಅನ್ನುತ್ತೀರಾ!" ಎಂದು ಬಡಾಯಿ ಕೊಚ್ಚಿಕೊಳ್ಳುತ್ತ "ನಿಮಗೆ ಅವಸರವಿಲ್ಲವಲ್ಲ. ನಮ್ಮ ಮಗುವಿಗೊಂದಿಷ್ಟು ಜ್ವರ ಎಂದಿದ್ದಳು ತಿಮ್ಮಿ. ಮನೆಗೆ ಹೋಗಿ ಬರಬಹುದಲ್ಲ" ಎಂದು ಉತ್ತರ ನಿರೀಕ್ಷಣೆಯಿಲ್ಲದೆ,ಕಾರನ್ನು ಹೊರಡಿಸಿಕೊಂಡು ಕಡಲ ತೀರದ ತಮ್ಮ ಮನೆಗೆ ಹೋಗಿಯೂ ಆಯಿತು. ಡಾಕ್ಟರರು ಮನೆಗೆ ಬಂದರೆಂದಾದರೆ-ಕೆಮ್ಮು, ನೆಗಡಿ ಶೀತ, ಊಹಿಸಬಲ್ಲ ಏನೇನು ಕಾಯಿಲೆಗಳಿವೆಯೊ ಅವನ್ನು ವಿಚಾರಿಸುವ ಕೆಲಸ ತೊಡಗಿತು. ಅದು ನಡೆಯುತ್ತಿರುವಾಗಲೇ, ಗಂಪು ಮನೆಯೊಳಕ್ಕೆ ಹೋಗಿ, ಒಂದು ರಿಕಾರ್ಡನ್ನು ತಂದು "ಇಗೊಳ್ಳಿ, ಇದು ರಿಜಿಸ್ಟ್ರನಿಸಿ ಕಾಗದ. ಆ ಜಾಗ ನಿಮಗೆ ಗೊತ್ತಿರಬಹುದು...ಶ್ರೀಪತಿರಾಯರ ಕುಟುಂಬದ್ದು. ಒಂದು ಎಕ್ರೆ ಸುಮಾರಿದೆ. ಮೂರು ಸಾವಿರ ಕ್ರಯ ಎಂದರು. ಹೆಚ್ಚಲ್ಲ ಎಂದು ಕೊಂಡುಕೊಂಡೆ. ರಿಜಿಸ್ಟ್ರಿಯನ್ನು ನಿಮ್ಮ ಹೆಸರಿನಲ್ಲೇ ಮಾಡಿದ್ದೇನೆ. ಇನ್ನು ತಿಂಗಳೆರಡು ತಿಂಗಳಲ್ಲಿ ಮನೆಯ ಕೆಲಸ ಮುಗಿಸಿಬಿಟ್ಟೆನೆಂದರೆ, ನಾನಾಡಿದ ಒಂದು ಮಾತನ್ನು ನಡೆಸಿಕೊಟ್ಟ ಹಾಗಾಯಿತು. 'ಎಷ್ಟೆಂದರೂ ಈ ಗಂಪು ಬಾಯಿ ಪಟಾಕಿಯ ಸರದಾರ, ಹೇಳಿದ ಮಾತನ್ನು ಮರೆತೇ ಬಿಟ್ಟಿದ್ದಾನೆ' ಎಂದು ನೀವು ತಿಳಿಯಬಾರದಲ್ಲ" ಎಂದು ಹೇಳಿದ.

ವಿಸ್ಮಯ ಕುತೂಹಲಗಳಿಂದ ಆ ಕಾಗದವನ್ನು ಬಿಡಿಸಿ ನೋಡಿದರು. ಆ ಭೂಮಿಯ ಕ್ರಯವನ್ನು ಅವರ ಹೆಸರಿಗೇನೆ ಮಾಡಿದ್ದ. ಅಷ್ಟು ತೆತ್ತುದೂ ಅಲ್ಲದೆ, ಮನೆ ಕಟ್ಟಿಸಿಕೊಡುವಾಗ ಆರೇಳು ಸಾವಿರ ರೂಪಾಯಿಗಳಾದರೂ ಮುಗಿದೀತು. ಹೀಗೆ ಹತ್ತುಸಾವಿರ ರೂಪಾಯಿಗಳ ಉಚಿತವನ್ನು ತಾನು ಸ್ವೀಕರಿಸುವುದಕ್ಕೆ ಮಾಡಿದಂಥ ಪ್ರತ್ಯುಪಕಾರವೇನು? ಅಂಥ ಹೊರೆಯನ್ನು ಯಾರಿಗೂ ಹೊರಿಸಬಾರದು. ತಾವು ಗಂಪುವಿನಿಂದ ನಿರೀಕ್ಷಿಸಿದ ಸಹಾಯ ಅಷ್ಟೊಂದು ಅಲ್ಲ. ಇದು ಇನ್ನೊಂದು ಋಣ ಭಾರವನ್ನೇ ಹೊರಿಸುವಷ್ಟು

ವಿಶೇಷ ಕಾಣಿಕೆ. ಶಿವಪ್ಪನವರ ಮನಸ್ಸು ಅದಕ್ಕೆ ಒಪ್ಪದಾಯಿತು. "ಗಂಪು, ಇದು ಮಾತ್ರ ತುಂಬ ಹೆಚ್ಚಿನ ಹೊರೆ. ನೀನು ಜಾಗ, ಮನೆ ಪ್ರತಿಯೊಂದನ್ನೂ ದಾನ ಮಾಡುವುದಕ್ಕೆ ಹೋದರೆ, ನಾನು ತೆಗೆದುಕೊಳ್ಳುವುದಾದರು ಹೇಗೆ? ನಿನಗೂ ಸಂಸಾರವಿದೆ,ಜವಾಬ್ದಾರಿಯಿದೆ. ನೀನು ಕೊಡುತ್ತೀಯೆಂದು ನಾನು ಕೈಯೊಡ್ಡಿದರೆ ಊರವರ ಬಾಯಲ್ಲಿ ನನಗೆ ಒಳ್ಳೆಯ ಮಾತು ಸಿಗಲಾರದು. 'ಪಾಪದ ಗಂಪುವೊಬ್ಬ ಸಿಕ್ಕಿದ. ಅವನಿಗೆ ಡಾಕ್ಟರರು ಟೊಪ್ಪಿಹಾಕಿದರು' ಎಂದಂದಾರು. ಮನೆಯ ಖರ್ಚು, ವೆಚ್ಚವನ್ನು ನಾನು ಸಹಿಸುತ್ತೇನೆ. ನಿನಗೆ ಅನುಕೂಲವಾದರೆ ಒಂದಿಷ್ಟು ಮರಕೊಡಿಸು" ಎಂದು ಅವರು ಹೇಳ ಬೇಕಾಯಿತು.

"ಯಾಕೆ? ನೀವು ಮನೆ ಕಟ್ಟಿದರೆ ಅಗ್ಗವಲ್ಲಾಗುತ್ತದೆಯೇನು? ನನಗೆ ಹತ್ತಾರು ಕಂಟ್ರ್ಯಾಕ್ಟುಗಳಿಗೆ ಹಂಚು, ಕಬ್ಬಿಣ, ಸಿಮೆಂಟು ಪ್ರತಿಯೊಂದೂ ಬೇಕಾಗುತ್ತದೆ; ತರಿಸಿಕೊಳ್ಳುತಿದ್ದೇನೆ. ನಾನು ನಿಮಗೆ ಹೇಳಿ ಎಷ್ಟು ಸಮ ಯವಾಯಿತು? ತಿಮ್ಮಿಗೆ ಗುಣವಾಗಿ, ಅವಳು ಅದರ ಮೇಲೆ ಎರಡು ಮಕ್ಕ ಳನ್ನು ಹಡೆದೂ ಆಯಿತು. ಡಾಕ್ಟರರಿಗೆ ಕೊಟ್ಟ ಮಾತು ಸುಳ್ಳಾಯಿತಲ್ಲ- ಎಂದು ನನಗೆ ಮುಖ ತೋರಿಸಲು ನಾಚಿಕೆಯಾಗುತಿತ್ತು. ದೇವರು ನಡೆಸಿ ದ್ದಾನೆ. ಈ ಚಿಲ್ಲರೆ ಕೆಲಸ ನನಗೊಂದು ಶ್ರಮವೂ ಅಲ್ಲ, ಹೊರೆಯೂ ಅಲ್ಲ. ಊರವರು ಏನಾದರೂ ಹೇಳಿಯಾರೆಂದು ನಿಮಗೆ ಹೆದರಿಕೆಯೆ? ಈ ನಮ್ಮ ಕಾಳೂರವರು— ಒಳ್ಳೆಯದನ್ನು ಒಳ್ಳೆಯದೆಂದು, ಕೆಟ್ಟುದನ್ನು ಕೆಟ್ಟದ್ದೆಂದು ಹೇಳಿದ ದಿನವಿದೆಯೇ?" ಎಂದು ಅವನಿಂದ ಉತ್ತರ ಬಂದಿತು.

ತನ್ನ ಸ್ವಾಭಾವಿಕವಾದ ರಾಪಿನಲ್ಲೇ ಮಾತು ಮುಗಿಸಿದ. ಶಿವಪ್ಪ ನವರ ದಾಕ್ಷಿಣ್ಯಪರ ಮಾತುಗಳಿಗೆ ಗಂಪು ಬೆಲೆ ಕೊಡಲಿಲ್ಲ. ಅವನು ತನ್ನ ಒರಟು ಮಾತಿನಲ್ಲಿ "ಆಗುವುದಾದರೆ ನನ್ನಿಂದ ಪೂರ್ಣ ಕೆಲಸವಾಗಬೇಕು; ಇಲ್ಲವಾದರೆ ಬೇಡವೇ ಬೇಡ. ಜಾಗದ ಬೆಲೆಯನ್ನೂ ಕೊಟ್ಟು ಬಿಡಿ. ಆ ಮೇಲೆ ನನ್ನ ನಿಮ್ಮ ಋಣ ಹರಿದ ಹಾಗೆಯೇ" ಎಂದು ಒರಟಾಗಿ ಉತ್ತರಿಸಿದ. ಇಂಥ ಒಬ್ಬ ವ್ಯಕ್ತಿ ಇರುವುದು ಸಾಧ್ಯವೇ— ಎಂದೆನಿಸಿತು ಶಿವಪ್ಪನವರಿಗೆ. 'ತಥಾಸ್ತು' ಅನ್ನಬೇಕಾಯಿತು ಅವರು. ಮನಸ್ಸು ತುಂಬ ಸಂಕೋಚಕ್ಕೊಳ ಗಾದರೂ, ಬೇರೆ ದಾರಿ ಅವರಿಗೆ ಕಾಣಿಸಲಿಲ್ಲ. ಗಂಪು ಅವರನ್ನು ಕಾರಿನಲ್ಲಿ ಕರೆದುಕೊಂಡು ಬಂದು, ರಾತ್ರೆ ಎಂಟು ಗಂಟೆಯ ಹೊತ್ತಿಗೆ ದವಾಖಾನೆಗೆ

ತಂದು ಬಿಟ್ಟ. ಬಂದ ನಾಲ್ಕೆಂಟು ರೋಗಿಗಳು ಕಾದು ಕಾದು ಬೇಸತ್ತು ನಿಂತಿದ್ದರು. ಗುಲಾಬಿ ಗಂಪು ಸರದಾರರ ಜತೆಗೆ ಡಾಕ್ಟರರು ಹೋದದ್ದನ್ನು ಕಂಡಿದ್ದಳು. ಅವಳೂ ಮನಸ್ಸಿನಲ್ಲಿ "ಇಷ್ಟು ಸಮಯದ ಬಳಿಕವಾದರೂ ಗಂಪುವಿಗೆ ದೇವರು ಉದಾರ ಬುದ್ಧಿಯನ್ನು ಕೊಟ್ಟಾನೆಯೆ? ಡಾಕ್ಟರರು ಬಾಯಿಬಿಟ್ಟು ತಾವಾಗಿಯೇ ಅವನನ್ನು ಕೇಳಿಯಾರೆ?" ಎಂದು ಯೋಚನೆ ಹೂಡಿಕೊಂಡಿದ್ದಳು. ಅಷ್ಟರಲ್ಲಿ ಡಾಕ್ಟರರೇ ಬಂದರು. "ಯಾರ್‍ಯಾರು ಇದ್ದೀರಿ" ಎಂದು ವಿಚಾರಿಸಿ, ಮದ್ದು ಕೊಡತೊಡಗಿದರು. ದುಡಿತ ಮುಗಿಯುವಾಗ ಒಂಬತ್ತು ಗಂಟೆಯಾಯಿತು. ಅಲ್ಲಿಂದ ಲಾಟಾನು ಹಿಡಿಸಿಕೊಂಡು ಹೊರ ಬಿದ್ದರು. ಗುಲಾಬಿ ಅವರ ಬೆಂಗಡೆಯಲ್ಲೇ ಹೊರಟಳು. ಆದರೆ ಅವಳನ್ನು ಕಂಡ ನೆನಪೇ ಅವರಿಗೆ ಆಗಿರಲಿಲ್ಲ. ಮನಸ್ಸೆಲ್ಲ ಗಂಪುವಿನ ನಡತೆಯನ್ನು ಕುರಿತಾದ ಆಶ್ಚರ್ಯದಲ್ಲಿ ತೇಲುತಿತ್ತು. ಲಾಟಾನು ಹಿಡಿದ ಕಂಪೌಂಡರನ ಹತ್ತಿರ "ಗುಲಾಬಿ ಮನೆಗೆ ಹೊರಟು ಹೋದಳಲ್ಲವೆ?" ಎಂದು ಕೇಳಿದರು.

"ಇದ್ದಾಳಲ್ಲ, ಇಲ್ಲಿಯೆ."

ತಿರುಗಿ ನೋಡಿದರು. ಹಿಂದಕ್ಕೇ ಇದ್ದಾಳೆ! ತಮ್ಮ ಮೂರ್ಖತೆಗೆ ತಾವೇ ನಕ್ಕರು. "ನೀನ್ಯಾಕೆ ಕುಳಿತು ಬಿಟ್ಟೆ ಇಷ್ಟು ಹೊತ್ತಿನ ತನಕ? ನಿನ್ನ ಪ್ರಭಾಕರನ ಮೈ ಚೆನ್ನಾಗಿಲ್ಲ ಎನ್ನುತ್ತಿದ್ದೆ" ಎಂದು ಕೇಳಿದರು.

"ಗಂಪು ಸರದಾರರ ಒಟ್ಟಿಗೆ ಹೋದದ್ದನ್ನು ನೋಡಿ, ಬಹು ಹೊತ್ತಿನ ತನಕ ಬಾರದ್ದನ್ನು ನೋಡಿ, ಇವತ್ತಾದರೂ ಮಾತಾಡುತ್ತೀರಿ, ಏನು ಹೇಳುತ್ತಾರೆ–ಕೇಳುವಾ ಎಂದು ಕಾದು ಕುಳಿತೆ."

"ಗಂಪು ಸರದಾರರೊ! ಸರದಾರ ಭೂಪತಿಯೇ ಅವನು. ನಾನು ಈ ಎರಡು ವರ್ಷಗಳಿಂದ ಸಾಹೇಬರ ಹತ್ತಿರ ಕೇಳಿ, ಅವರು ತಣ್ಣಗಾದ ಮೇಲೆ, ಇವನ ಹತ್ತಿರ ಕೇಳಬೇಕೆಂದು ಯೋಚಿಸಿ, ಯೋಚಿಸಿ, ಮಾತನಾಡುವುದಕ್ಕೇನೆ ಅಂಜಿ ಕುಳಿತಿದ್ದೆ. ಆದರೆ ಅವನು ಮಾತ್ರ ಮರೆತಿರಲಿಲ್ಲ. ಮೊನ್ನೆ ನಿನಗೆ ಆ ಜಾಗ ತೋರಿಸಲಿಲ್ಲವೆ? ಶ್ರೀಪತಿರಾಯರ ಕುಟುಂಬಕ್ಕೆ ಸೇರಿದ್ದು ಎಂದೆ; ಅದನ್ನೇ ನನಗೆ ಕೊಡುತ್ತಾನಂತೆ."

"ಅಲ್ಲಿ ಮನೆಯನ್ನು ಕಟ್ಟಿಸತೊಡಗಿದ್ದಾರೆ.....ಸ್ವಂತಕ್ಕೆನ್ನುತ್ತಾರೆ.... ಬಾಡಿಗೆಗೆನ್ನುತ್ತಾರೆ."

"ಅದನ್ನು ಕಟ್ಟಿಸುವುದೂ ನನಗಾಗಿ."

"ಹೌದೇ!" ಎಂದಳು ಅವಳು. ಶಿವಪ್ಪನವರು "ಹೇಗೂ ಹೊತ್ತಾಯಿತು. ಮನೆಯ ತನಕ ಬಾ, ಎಲ್ಲಾ ಕತೆ ಹೇಳುತ್ತೇನೆ" ಎಂದು ತಮ್ಮ ಮನೆಗೆ ಹೋಗಿ ಕುಳಿತುಕೊಂಡರು. "ಇಂದೂ ಇಂದೂ" ಎಂದು ದೊಡ್ಡ ಬಾಯಿಯಿಂದ ಕರೆದರು. "ಇವತ್ತಾದರೆ ಬಹಳ ಒಳ್ಳೆಯ ದಿನ" ಎಂದು ಸಾರಿದರು.

ಅಲ್ಲಿಂದ ಮಾತಿಗೆ ಪ್ರಾರಂಭವಾಯಿತು. ಮಗುವಿನಷ್ಟು ನಿಷ್ಕಳಂಕ ಮನಸ್ಸಿನಿಂದ, ಆ ದಿನ ನಡೆದ ಕಥಾನಕವನ್ನೆಲ್ಲ ಹಿಗ್ಗಿಂದ ಹೇಳತೊಡಗಿದರು. ಮುಂದೆ ಮುಂದೆ ಹೇಳುತ್ತ ಹೋದ ಹಾಗೆ ಮನಸ್ಸು ಕುಗ್ಗಿ ಹೋಯಿತು. "ಒಳ್ಳೆಯ ಋಣ ಭಾರವನ್ನು ಹೊರಿಸಿಬಿಟ್ಟ, ಗಂಪು, ಚಿನ್ನದಂಥ ಮನುಷ್ಯ. ಇನ್ನೊಬ್ಬರ ಮುಂದೆ ಹೇಳಿದರೆ ನಂಬಲಾರರು. ಇದೋ ನೋಡು–ರಿಜಿಸ್ಟ್ರಿ ನಿಸಿ ಮಾಡಿಸಿದ ಕ್ರಯ ದಸ್ತಾವೇಜು. ಮಾಡಿಸುವಾಗಲೇ ನನ್ನ ಹೆಸರಿನಲ್ಲಿಯೇ ಮಾಡಿಸಿದ್ದ" ಎಂದಂದರು. ಇಂದುವಿನ ಮುಖವು ಕೇಳ ಕೇಳುತ್ತ ಅರಳಿ ಬೆರಗು ಗೊಂಡಿತು. ಗುಲಾಬಿಯೂ ಅಷ್ಟೇ ಹಿಗ್ಗಿನಿಂದ ಕೇಳಿದಳು. "ಕೊಟ್ಟವರಿಗೆ ಅದರ ಹತ್ತರಷ್ಟು ಫಲವಿದೆ. ನೀವಷ್ಟು ಸಂಕೋಚ ಮಾಡುವುದು ಮಾತ್ರ ನನಗೆ ಅರ್ಥವಾಗುವುದಿಲ್ಲ. ಸಾಲ ಕೊಡುವುದಕ್ಕೆ ಬಂದರೆ, ಆಯಿತೆಂದು ಮಾತಿನಲ್ಲೇ ದಿನ ಕಳೆದಿರಿ. ಅವರು ಕೊಟ್ಟಾಗ ಹೀಗೆನ್ನುತ್ತೀರಿ; ಅದರಲ್ಲಿ ಋಣವೇನು ಬಂತು? ನಿಮ್ಮ, ಅವರ ಸ್ನೇಹಾಚಾರದಲ್ಲಿ ಮಾಡಿದ ಕೆಲಸಕ್ಕೆ, ದುಡ್ಡಿನ ಲೆಕ್ಕಾಚಾರ ಹಿಡಿದರೆ ಆಗುತ್ತದೆಯೇ?" ಎಂದು ಸಮಾಧಾನ ಹೇಳಿದಳು. ಹೊತ್ತಾಯಿತೆಂದು ಅವರು ಕಂದೀಲಿನೊಡನೆ ಅವಳನ್ನು ಮನೆಗೆ ಕಳುಹಿಸಿಕೊಟ್ಟರು. ನಿಜಕ್ಕೂ ಆ ರಾತ್ರಿ, ಗಂಡ ಹೆಂಡಿರಿಬ್ಬರೂ ಎರಡು ತಾಸು ನಿದ್ರೆಮಾಡಿದ್ದರೋ ಇಲ್ಲವೋ. ಕನಸು, ಎಚ್ಚರಗಳೆರಡರಲ್ಲೂ ಗಂಪುವಿನ ವಿಚಿತ್ರ ವರ್ತನೆಯೇ, ಅವರ ಮುಂದೆ ಕುಣಿಯುತಿತ್ತು. ಆತನ ಗೆಳೆತನಕ್ಕೆ ದೊರಕಿದ ಪೀಠಿಕೆ; ಅವನ ದಾನಕ್ಕೆ ಕಾರಣ, ಎಲ್ಲವೂ ನೆನಪಾಯಿತು. 'ಅಂಥ ಕೇಸುಗಳು ಎಷ್ಟು ಬಂದಿಲ್ಲ, ಎಷ್ಟು ಗುಣವಾಗಿಲ್ಲ? ದುಡ್ಡು ಕೊಟ್ಟವರುಂಟು. ಮದ್ದಿನ ಖರ್ಚನ್ನೂ ಕೊಡದೆ, ಗುರುತು ಮರೆಸಿ, ಅಲೆದಾಡಿದವರುಂಟು. ಒಂದು ಬಿಟ್ಟಿ ಚಿಕಿತ್ಸೆಯಾದನಂತರ ಇನ್ನೊಂದಕ್ಕೆ ಆಸ್ಪತ್ರೆಯ ಡಾಕ್ಟರರನ್ನು ಕರೆಯಿಸಿದವರೂ ಉಂಟು. ಈತ ಮಾತ್ರ ಬರಿಯ ಬಡಾಯಿಗಾರನಾಗಿ ತೋರಿಸಿಕೊಂಡ. ಆದರೆ ತಾನು ಕೊಟ್ಟ ಮಾತನ್ನು ಮುರಿಯದೆ, ನಾನು ಸಲ್ಲಿಸಿದ ಸೇವೆಗಿಂತ ಹತ್ತು ಪಾಲಿನ ಕಾಣಿಕೆಯನ್ನು

ನನ್ನ ಮೇಲೆ ಹೊರಿಸಿಬಿಟ್ಟ" ಇಂತಹ ಹಲವಾರು ನೆನಹುಗಳಿಂದ ಅವರ ನಿದ್ದೆ ಕವಿದು ಹೋಗಿತ್ತು. ಉದಾರ ಸ್ಮರಣೆಗಳಿಂದ ತುಂಬಿತ್ತು.

ಬೆಳಕು ಹರಿದು, ಅವರು ಉಪಾಹಾರ ಮುಗಿಸಿ ಹೊರಡುವ ವೇಳೆಗೆ ಗಂಪುವಿನ ಮೋಟರ್ ಹಾರ್ನಿನ ಸದ್ದು ಕೇಳಿಸಿತು. ಕೆಲವು ಕ್ಷಣಗಳಲ್ಲಿ ಅವನೂ ಬಂದ. ಬಂದವನು "ಅಮ್ಮ, ಪುರುಸೊತ್ತಿಲ್ಲವೆ ನಿಮಗೆ? ಮನೆ ಕಟ್ಟುವ ಜಾಗಕ್ಕೆ ಹೋಗಿ ಬರುವ. ನಾನು ಹಾಕಿಕೊಂಡಿರುವ ಆಯಕ್ಕೂ, ನಿಮ್ಮ ಖಾಯಿಸಿಗೂ ವ್ಯತ್ಯಾಸವಿದ್ದರೆ, ಅದನ್ನು ಈಗಲೇ ಸರಿಪಡಿಸಬಹುದಲ್ಲ" ಎಂದ. ಇಂದುಮತಿಯು ಅವನಿಗೆ ಉಪಹಾರಕೊಟ್ಟು ಕಾರಿನಲ್ಲಿ ಕುಳಿತು ಹೊರಟಳು. ಹೋಗುವುದಕ್ಕೇನು ದೂರವಿರಲಿಲ್ಲ. ದಾರಿಯಲ್ಲಿ ಗಂಪು "ಆ ಮನೆಯಾದರೆ ಹಿತ್ತಿಲೊಳಕ್ಕೆ ಕಾರು ಹೋಗಬಹುದು. ನಿಮ್ಮ ಈಗಿನ ಮನೆಯಂತೆ ರಸ್ತೆಯಲ್ಲಿ ನಿಂತು, ಗದ್ದೆಯ ಅಂಚು, ಓಣಿಗಳನ್ನಿಳಿದು ಬರಬೇಕಾಗಿಲ್ಲ" ಎಂದ. ಎಲ್ಲರೂ ಆ ಸ್ಥಳವನ್ನು ಸೇರಿದ ಬಳಿಕ ಗಂಪು ನಕ್ಷೆಯನ್ನು ಬಿಡಿಸಿ ತೋರಿಸಿದ. ಮನೆಯ ಉದ್ದಗಲ, ಕೊಠಡಿಗಳ ವಿವರ, ಎಲ್ಲವನ್ನು ವಿವರಿಸಿದಾಗ "ಇಷ್ಟು ದೊಡ್ಡ ಮನೆಯೋ? ಯಾತಕ್ಕೆ" ಎಂದಳು ಇಂದುಮತಿ.

"ಉಪ್ಪರಿಗೆ ಹಾಕುವುದಿಲ್ಲ ಅಮ್ಮ; ಬೇಕಾದ್ದಕ್ಕಿಂತ ಎರಡು ಕೋಣೆ ಹೆಚ್ಚಿಗೆಯೇ ಇರಬೇಕು. ಯಾರಾದರೂ ಸ್ನೇಹಿತರು ಬಂದರೆ ಇರುವುದಕ್ಕಾಗುವುದಿಲ್ಲವೆ? ಅವರನ್ನು ಹೊರ ಜಗುಲಿಯಲ್ಲಿ ಮಲಗಿ ಎನ್ನುತ್ತೀರಾ?"

"ಇಷ್ಟು ದೊಡ್ಡ ಮನೆ ಬರಿದೆ ಆಗುತ್ತದೆಯೋ? ನೀನು ಬೆಲೆಯನ್ನು ತೆಗೆದುಕೊಳ್ಳುವುದಿಲ್ಲ ಅನ್ನುತ್ತೀಯಾ."

"ದುಡ್ಡು ಕೊಟ್ಟರೇನೆ ಬೆಲೆ ಕೊಟ್ಟ ಹಾಗೆ, ಇಲ್ಲವಾದರೆ ಇಲ್ಲ– ಅನ್ನುತ್ತೀರಾ" ಎಂದು ಗಂಪು ನಕ್ಕು ಕೇಳಿದ.

* * * * *

ಒಂದು ತಿಂಗಳೊಳಗಲ್ಲದಿದ್ದರೂ,ಮೂರು ತಿಂಗಳುಗಳ ಅವಧಿಯೊಳಗಾಗಿ ಅವರ ಮನೆ, ಬಚ್ಚಲು ಪ್ರತಿಯೊಂದೂ ನಿರ್ಮಾಣವಾಯಿತು. ಸಾರಣೆ ಮುಗಿಯಿತು. ಅದು ನಿವಾಸಕ್ಕೆ ತಕ್ಕುದಾಯಿತು. ಶಿವಪ್ಪ ಡಾಕ್ಟರರು ಅಲ್ಲಿಗೆ ಬಿಡಾರ ಸಾಗಿಸುವ ನಿಶ್ಚಯ ಮಾಡಿದರು. ಮನೆಯ ಕನಸು ನಿಜವಾಗುತ್ತ ಬಂದಂತೆ, ಇಂದುಮತಿಯ ಹೃದಯ ಆನಂದದಿಂದ ತುಂಬುತ್ತ ಬಂದಿತೆನ್ನ

ಬೇಕಿಲ್ಲ. 'ಮಾವನವರ ಕೋಪ ಇನ್ನಾದರೂ ಇಳಿದೀತಲ್ಲ' ಎಂದು ಆಕೆ ಪ್ರಾರ್ಥಿಸುತ್ತಿದ್ದಳು. "ಹೊಸ ಮನೆಗೆ ಒಕ್ಕಲಾಗುವ ದಿನ ನಂಟರಿಷ್ಟರನ್ನು ಬರಹೇಳಬೇಕು; ಆಪ್ತರನ್ನು ಕರೆದು ಊಟ ಹಾಕಬೇಕು. ತಾವು ಮೊದಲ ಬಾರಿಗೆ ನಡೆಸುತ್ತಿರುವ ಸಂತರ್ಪಣೆಯಿದು" ಎಂಬ ಉತ್ಸಾಹದ ಮಾತು ಗಳು ಅವಳ ಬಾಯಿಂದ ಬರುತ್ತಿದ್ದುವು. ಶಿವಪ್ಪನವರ ಪಾಲಿಗೆ ಅದೊಂದು ಹೆಚ್ಚಿನ ಸಂಗತಿಯಾಗಿ ಕಾಣಿಸಲಿಲ್ಲ. 'ಊಟ ಹಾಕುವುದೊಂದು ದೊಡ್ಡ ಸಂಗತಿಯೆ? ಆದರೆ ಆಪ್ತರಿಷ್ಟರನ್ನು ಕರೆಯಿಸುವ ಕೆಲಸ ಕಷ್ಟದ್ದು. ಅಕ್ಕ ತಂಗಿಯರು, ಭಾವಂದಿರು, ತಂದೆ, ಮಾವ ಎಲ್ಲರನ್ನೂ ಆಮಂತ್ರಿಸಬಹುದು; ಆದರೆ ಆ ನಂಟರಿಷ್ಟರು ಬಂದಾರು, ತಂದೆ ಬಂದು ಸಂತೋಷದಲ್ಲಿ ಭಾಗಿ ಗಳಾದಾರು, ಎಂಬ ವಿಶ್ವಾಸವಿಲ್ಲ. ತಾಯಿಯ ಮೃತ್ಯುವಿನೊಡನೆ ಸೋದರಿ ಯರು, ಭಾವಂದಿರೂ ಸಂಬಂಧ ಕಡಿದುಕೊಂಡಂತಿತ್ತು. ಅನಂತರ ಅವರು ಬಂದುದೆಂಬುದಿಲ್ಲ. ಒಬ್ಬರಲ್ಲ ಒಬ್ಬರೊಡನೆ ತಂದೆಯು ಹೇಳುತ್ತಿದ್ದ ನಂಜಿನ ಮಾತುಗಳನ್ನು ಅವರು ಕೇಳದೆ ಇಲ್ಲ. ತಂದೆ ಸಿಟ್ಟುಗೊಂಡು ಮನೆಯ ಮುಖವನ್ನೇ ಕಾಣದೆ ಎರಡು ವರ್ಷಗಳಾದುವೋ ಏನೋ. ಹೇಳಿ ಕಳು ಹಿಸುವುದಂತೂ ಸರಿಯೆ. ಬಂದರೆ ಬಂದರು; ಇಲ್ಲವಾದರೆ ಇಲ್ಲ. ಅಲ್ಲದೆ ಇನ್ನೂ ಒಂದು ನೋವು ಮನಸ್ಸಿನಲ್ಲಿದೆ. ತಮ್ಮ ದುಡಿತದಿಂದ ಕಟ್ಟಿಸಿದ ಮನೆ ಯಾಗಿದ್ದರೆ ಜಂಭಕ್ಕೊಂದು ಅವಕಾಶವಿದೆ. ಗಂಪು ಮಾಡಿದ ದಾನಕ್ಕಾಗಿ ತಾವು ಒಂದು ನಾಟಕ ಹೂಡುವುದೇಕೆ?" ಎಂದು; ಅವನ್ನು ತಮ್ಮ ಹೆಂಡತಿ ಯೊಡನೆ ಮನಸ್ಸು ಬಿಚ್ಚಿ ಹೇಳಿದರು.

"ನಿಮಗೆ ಹಾಗೇ ಅನಿಸುತ್ತದೆಯೆ" ಎಂದು ಇಂದುಮತಿ ಪ್ರಶ್ನಿಸಿದಳು.

"ಯಾರಿಗೂ ಅನಿಸುವುದೇ? ನಾನು ಅವನ ಸಲುವಾಗಿ ಮಾಡಿದ ಬಿಟ್ಟಿಗೆ, ಸೇವೆಗೆ–ಹೆಚ್ಚೆಂದರೆ ಸಾವಿರ ರೂಪಾಯಿ ಬೆಲೆಯನ್ನು ಹಿಡಿಯ ಬಹುದು. ಅದಕ್ಕೂ ಇದಕ್ಕೂ ಸಾಟಿಯೆ? ಇದೊಂದು ದಾನವೇ ಹೊರತು ಪುರಸ್ಕಾರ ಎನ್ನುವ ಹಾಗೆಯೇ ಇಲ್ಲ."

"ಅಂದರೆ ಅಷ್ಟೆಲ್ಲ ವೆಚ್ಚವನ್ನು ಹಿಂದಕ್ಕೆ ಕೊಡಬೇಕಾದೀತು ಅನ್ನು ತ್ತೀರಾ?" ಇಂದುಮತಿಗೆ ತನ್ನ ತಂದೆಯ ವಿಚಾರದಲ್ಲಿ ಯಜಮಾನರು ಹಚ್ಚಿ ಕೊಂಡ ವ್ಯಾಕುಲ, ಋಣದ ನೆನಪು ಎಷ್ಟಿತ್ತು, ಹೇಗೆ ಬೇಡದ ಚಿಂತೆ ವಹಿ ಸಿದ್ದರು–ಎಂಬುದು ನೆನಪಾಗಿ ಅವಳು ಈ ಮಾತನ್ನು ಹೇಳಿದಳು.

"ನಾನು ಕೊಟ್ಟರೂ ಗಂಪು ತೆಗೆದುಕೊಳ್ಳುವವನೆ? ಆದರೂ ಋಣ ಋಣವೇ. ಅವನು ನನಗೆ ಉಪಕಾರ ಮಾಡಿದ ರೀತಿಯಲ್ಲಿ, ನಾನು ಅವನಿಗಲ್ಲದಿದ್ದರೂ ಇನ್ನೊಬ್ಬರಿಗೆ ಕಷ್ಟದಲ್ಲಿ ಒದಗಿ, ಅದನ್ನು ಮರಳಿ ಸಲ್ಲಿಸುವ ತನಕ ನನ್ನ ಮನಸ್ಸಿಗೆ ಸಮಾಧಾನ ಬರಲಾರದು".

"ನೀವು ಈಗಲೂ ಹಾಗೆಮಾಡುತ್ತಲಿಲ್ಲವೆ? ನಿಮ್ಮ ಡಾಕ್ಟರಿಕೆಯಿಂದ ಎಷ್ಟು ಜನ ಪ್ರಯೋಜನ ಹೊಂದಿಲ್ಲ, ಎಷ್ಟು ಜನರ ನೋವು ಕಳೆದಿಲ್ಲ. ದೊಡ್ಡ ಔತಣ ಬೇಡ ಅನ್ನುತ್ತೀರಾ. ಅದು ಬೇಡವಾದರೆ ಬೇಡ. ನಾಲ್ಕು ಜನ ಹತ್ತಿರದ ಸ್ನೇಹಿತರಿಗಾದರೂ ಬರಹೇಳಿ. ಗಂಪುವೇ ಈ ತನಕ ನಮ್ಮ ಮನೆಯಲ್ಲಿ ಉಂಡವನಲ್ಲ. ಮನೆಯ ಒಕ್ಕಲಿನ ದಿವಸ ಒಂದು ಗಣಹೋಮವನ್ನಾದರೂ ಮಾಡಿ ನಾಲ್ಕೇ ನಾಲ್ಕುಮಂದಿಗೆ ಊಟ ಹಾಕಬೇಡವೆ?"

ಆ ಮಾತನ್ನವರು ತೆಗೆದು ಹಾಕುವಂತಿಲ್ಲ. ಯಾರಿಲ್ಲದೆ ಹೋದರೂ ಗಂಪುವಿನಂತಹ ಸಹಾಯಕನೊಡನೆ ಕುಳಿತು ಉಣ್ಣುವ ಸಂತೋಷ ಕಳೆದುಕೊಳ್ಳಬಾರದು. ಆದರೆ ಗೃಹ ಪ್ರವೇಶದ ದಿನ ನಿಶ್ಚಯಮಾಡಿ, ಆ ದಿನವೇ ಸರದಾರ ಊರಲ್ಲಿರದೆ ಹೋಗಬಾರದಲ್ಲ--ಎಂಬುದರಿಂದ ದಿನವನ್ನು ಅವನೊಡನೆಯೆ ಕೇಳಿ ನಿಶ್ಚೈಸುವುದು ಒಳಿತು ಎಂದು ಯೋಚಿಸಿದರು. ದವಾಖಾನೆಗೆ ಬಂದಿದ್ದ ಗಂಪುವೇ ಒಂದು ದಿನ "ಯಾವಾಗ ಡಾಕ್ಟರರೇ, ಹೊಸ ಮನೆಯ ಒಕ್ಕಲು? ದಿನ ಹೇಳಿದರೆ ಸಾಮಾನುಗಳನ್ನು ಸಾಗಿಸುವುದಕ್ಕೆ ಲಾರಿಯನ್ನು ಕಳುಹಿಸುತ್ತೇನೆ" ಎಂದ.

"ನಿನಗೆ ಯಾವ ದಿವಸ ಪುರುಸೊತ್ತೆಂದು ಹೇಳಪ್ಪ. ನಮ್ಮ ಇಂದುಮತಿಯ ಹುಕುಮ್ ಆಗಿದೆ–ಮನೆಯೊಕ್ಕಲಿನ ದಿವಸ ನಾಲ್ಕು ಜನ ನಿನ್ನಂಥ ಸ್ನೇಹಿತರನ್ನು ಕರೆಯಿಸ ಬೇಕು; ನೀನಂತೂ ಬಂದೇ ಬರಬೇಕು. ಒಂದು ಊಟವನ್ನಾದರೂ ಮಾಡಿ ಹೋಗಬೇಕು" ಎಂದು.

"ಅದಕ್ಕೇನು? ನೀವು ಹೇಳಿದ ದಿವಸ ಆಗಲಿ. ರಾಮಾ ಜೋಯಿಸರನ್ನು ಕೇಳಿದರೆ ವಾರ, ತಿಥಿ ಪ್ರತಿಯೊಂದನ್ನೂ ಹೇಳುತ್ತಾರಲ್ಲ."

ಹಾಗೆ ದಿನ ನಿಶ್ಚಯವಾಯಿತು. ವಾರ, ತಿಥಿಗಳನ್ನು ಹೊಂದಿಸಿಕೊಳ್ಳುವುದು ಕಷ್ಟ. ಅವರಿಗೆ ಆದಿತ್ಯವಾರವೇ ವಿರಾಮ. ತಿಥಿ ಆ ವಾರಕ್ಕೆ ಹೊಂದಿ ಬರಬೇಕು. ಅಂಥ ದಿನವನ್ನು ನಿಶ್ಚೈಸಿದರು. ತಮ್ಮ ಸಂಬಂಧಿಕರಿಗೂ ಹೇಳಿ ಕಳುಹಿಸಿದರು. ತಂದೆ ಎಲ್ಲಿದ್ದಾರೆಂದು ಹುಡುಕಿ ತಿಳಿಸುವುದಕ್ಕೆ ಏರ್ಪಾಟು

ಮಾಡಿದರು. ನಿಶ್ಚಿತ ದಿನದ ಮುಂಚಿನ ಸಂಜೆಯ ತನಕವೂ ಬಂಧುಗಳಾರೂ ತಲೆಹಾಕಲಿಲ್ಲ. ತಂದೆಯಿಂದಲೂ ಆದರದ ಪ್ರತ್ಯುತ್ತರ ಬರಲಿಲ್ಲ. "ಬಾರದಿದ್ದರೆ ಇಲ್ಲ"ಎಂಬ ಸಮಾಧಾನವನ್ನು ಶಿವಪ್ಪನವರು ಪಡೆಯಬೇಕಾಯಿತು. ಇಂದುಮತಿಗೆ, ಬರಬಹುದಾದ ಆರೆಂಟು ಮಂದಿ ಸ್ನೇಹಿತರನ್ನು ಚೆನ್ನಾದ ಅಡುಗೆ ಊಟಗಳಿಂದ ಉಪಚರಿಸಬೇಕೆಂಬ ಚಪಲ. ಅದಕ್ಕಾಗಿ ಅಡುಗೆಯವನನ್ನು ಗೊತ್ತುಮಾಡಿದಳು. ಮುಂಚಿನ ದಿನವೇ ಎಲ್ಲ ಸಾಮಗ್ರಿಗಳನ್ನು ಅಲ್ಲಿ ಸಾಗಿಸಿಯಾಗಿತ್ತು.ಆ ದಿನದ ಬೆಳಗ್ಗೆ ಇಂದುಮತಿ ಪತಿಯೊಡನೆ ಔತಣದ ವಿವರಗಳನ್ನು ಚರ್ಚಿಸಿ, ತನ್ನ ಕೆಲಸಕ್ಕೆ ಹೋದಳು. ಡಾಕ್ಟರರು ಬೆಳಗಿನ ಸರದಿ ಮುಗಿಸಿ ಬರುತ್ತೇನೆಂದು, ಮಾತಿಗೆ ವಿರಾಮವಿಲ್ಲದೆ ದವಾಖಾನೆಗೆ ಹೋದರು. ಹೊರಟಾಗಲೇ ಒಂಬತ್ತೂವರೆ ಗಂಟೆಯಾಗಿತ್ತು. ಮೊದಲಿನ ಎರಡು ದಿನಗಳಲ್ಲಿ ಬಂದವರಿಗೆ 'ಆದಿತ್ಯವಾರ ಬಿಡುವು ಕೊಡುತ್ತೀರಲ್ಲ-' ಎಂದು ಕೇಳಿದ್ದರೂ ನಾಲ್ಕೆಂಟು ಮಂದಿ ಬರುವಂತೆ ಬಂದಿದ್ದರು. "ಇವತ್ತಾದರೂ ರಜೆ ಕೊಡುತ್ತೀರಿ ಎಂದು ಯೋಚನೆ ಮಾಡಿದ್ದೆ. ಆದರೂ ಬಿಡಲಿಲ್ಲ" ಎಂದು ನಗುತ್ತ, ಅವರಿಗೆ ಚೀಟಿ ಬರೆದುಕೊಟ್ಟು ಮುಗಿಸಿದ ಗಳಿಗೆಯಲ್ಲಿ, ಇನ್ನೊಬ್ಬ ಕಂಗಾಲ ವ್ಯಕ್ತಿ ಅವಸರದಿಂದ ಅಲ್ಲಿಗೆ ಬಂದು "ಅಯ್ಯಾ ಡಾಕ್ಟರರಿಲ್ಲವೆ?" ಎಂದು ಅವರನ್ನೇ ಕೇಳಿದ.

"ಇದ್ದೇನಲ್ಲ, ಏನು ಸಂಗತಿ?"

"ಅವರೇ ಬೇಕು ನನಗೆ."

"ಇಲ್ಲಿರುವುದು ಒಬ್ಬರು ಡಾಕ್ಟರರು. ಅದು ನಾನು, ಏನು ಹೇಳು"

"ನೀವೇಯೊ . . . ." ಎಂದು ನುಡಿದ ಬಳಿಕ, ತುಸು ಹೊತ್ತು ಉಸಿರನ್ನುಶಾಂತಪಡಿಸಿಕೊಂಡು ಮಾತಾಡತೊಡಗಿದ.ಅವನ ಮಾತು ಬಡಬಡಿಸುತಿತ್ತು. ಮಾತಿಗಿಂತ ದುಃಖ ಮಿಕ್ಕಿತ್ತು. ಅವನ ತುಂಡು, ತುಣುಕು ಮಾತುಗಳಿಂದ,ಹೇಳುವುದನ್ನು ಜೋಡಿಸಿ ಅರ್ಥ ತಿಳಿಯಬೇಕಾಗಿತ್ತು.ವಿಶೇಷವಾದ ಭೀತಿ ಅವನನ್ನು ಕಾಡುತಿತ್ತು. ಅವನ ಒಬ್ಬಳೇ ಒಬ್ಬಳು ಮಗಳು ಮನೆಗೆ ಹೆರಿಗೆಗೆ ಬಂದಿದ್ದಾಳಂತೆ. ಬಂದಾಗಲೇನೋ ಚೆನ್ನಾಗಿದ್ದಳು. ಹೆರುವುದಕೆ ತಿಂಗಳಿರಬೇಕು. ಅಷ್ಟರಲ್ಲಿಯೆ ಜ್ವರ ಬಲವಾಗಿ ಕಾಯತೊಡಗಿತು. ಈಗ ಜೀವಸಂಕಟ ಅನ್ನುತ್ತಾಳೆ. ಜ್ವರ ಕುದಿದು, ಮೈ ಬೆವರಿತೆಂದರೆ ಈಗಲೋ, ಇನ್ನೊಂದು ಗಳಿಗೆಗೋ ಎನ್ನುವಷ್ಟು ಕಂಗಾಲಾಗುತ್ತಿದ್ದಾಳೆ. ಡಾಕ್ಟರರು

ಒಮ್ಮೆ ಬಂದು ಬಚಾಯಿಸಬೇಕು–ಎಂಬುದೇ ಅದರ ಸಾರಾಂಶ.

"ಎಲ್ಲಿ ನಿನ್ನ ಮನೆ, ಎಷ್ಟು ದೂರ?" ಎಂದು ಕೇಳಿದರು ಶಿವಪ್ಪನವರು. ಆತ ಯಾವುದೋ ಹಳ್ಳಿಯ ಹೆಸರನ್ನು ಹೇಳಿದ. ಗುಲಾಬಿಯನ್ನು ಕರೆದರು, ಕಂಪೌಂಡರನನ್ನು ಬರಹೇಳಿದರು, ಇಂಥಿಂಥ ಔಷಧಗಳನ್ನು ಚೀಲದಲ್ಲಿ ತುಂಬಿಸು— ಎಂದರು.

ಗುಲಾಬಿ ಆಗ "ಈಗ ಹೊರಡುತ್ತೀರಾ? ಗೃಹ ಪ್ರವೇಶದ ದಿನವಲ್ಲವೆ .....ಯಾರ್ಯಾರಿಗೋ ಬರಲಿಕ್ಕೆ ಹೇಳಿದ್ದೀರಿ" ಎಂದು ಎಚ್ಚರಿಸಿದಳು.

"ಬೇಗ ಹೋಗಿ ಬರುವುದು ಒಳಿತಲ್ಲವೆ? ನೀನೂ ಬಾ. ಮನೆಗೆ ಬರುವವರು ಮತ್ಯಾರಲ್ಲ – ಗಂಪು ಮತ್ತು ನಾಲ್ಕಾರು ಸ್ನೇಹಿತರು. ವಿಶೇಷ ದೂರವಿಲ್ಲ. ಹೋಗಿ ಬಂದು ಬಿಡುವ. ಅವನು ಹೇಳುತ್ತಿರುವುದನ್ನು ಕೇಳುವಾಗ ಸ್ವಲ್ಪ ಕಠಿಣ ಸಂಗತಿ ಎಂದೇ ತೋರುತ್ತದೆ"ಂದು ಔಷಧದ ಚೀಲವನ್ನು ಅವನ ಕೈಗೆ ಕೊಟ್ಟು, ಹೊರಟೇ ಬಿಟ್ಟರು. ಆತ ಓಡುತ್ತಿದ್ದಾನೆ; ಇವರು ಅವನ ಹಿಂದೆ ಬೀಸುಗಾಲು ಹಾಕುತಿದ್ದಾರೆ; ಗುಲಾಬಿ ಧಾವಿಸುತಿದ್ದಾಳೆ. ನಡೆದು, ನಡೆದು ಹಾದಿ ಸರಿದಂತೆ "ಓ ಅಲ್ಲೇ ಇದೆ,ಇನ್ನು ಸ್ವಲ್ಪವೇ ದೂರ"ಎಂದು ಆತ ಹೋಗುತ್ತಲೇ ಇದ್ದಾನೆ. ಆತನಿಗಂತೂ ಬುದ್ಧಿ ಸ್ವಾಧೀನವಿರಲಿಲ್ಲ. ಅಷ್ಟು ವೇಗದಿಂದ ಹೋಗಿಯೂ ರೋಗಿಯಿರುವ ಮನೆಯನ್ನು ಸೇರುವುದಕ್ಕೆ ಅವರಿಗೆ ಒಂದು ತಾಸಾದರೂ ಹಿಡಿದಿರಬೇಕು.ಆತ ಒಳಗೆ ಓಡಿದ. ತಿರುಗಿ ಹೊರಕ್ಕೆ ಬಂದು "ಬದುಕಿದ್ದಾಳೆ, ಉಸಿರಾಡುತ್ತದೆ" ಎಂಬ ಶುಭ ಸೂಚನೆಯನ್ನು ಕೊಟ್ಟ. ಡಾಕ್ಟರರೂ ಗುಲಾಬಿಯೂ ಒಳಕ್ಕೆ ಹೋದರು. ಚಾಪೆಯೊಂದರಲ್ಲಿ ಹರೆಯದ ಹೆಂಗುಸೊಬ್ಬಳು ಮಲಗಿಕೊಂಡಿದ್ದಳು. ತಿಂಗಳು ತುಂಬಿದ ಗರ್ಭಿಣಿ. ಆಕೆಯ ಹೆರಿಗೆಯ ಕಾಲ ಅವನೆಂದಂತೆ ತಿಂಗಳ ದೂರ ಕಾಣಿಸಲಿಲ್ಲ.ತೀಕ್ಷ್ಣ ಮಲೇರಿಯ ಬಾಧೆಯಿಂದ,ಪೌಷ್ಟಿಕ ಆಹಾರದ ಅಭಾವದಿಂದ, ಸೊರಗಿ ಬೆಂಡಾಗಿದ್ದಳು. ಇವರು ಪರಿಶೀಲಿಸುವಾಗ ಆಕೆಗೆ ಮೈಯ್ಯ ಎಚ್ಚರವಿರಲಿಲ್ಲ. ಒಂದಾವೃತ್ತಿ ಜ್ವರ ಬಂದು ಇಳಿದು, ಶರೀರ ಬೆವತು, ಮೈ ತಣ್ಣಗಾಗಿತ್ತು. ಆಕೆಯ ತಾಯಿ, ಹೊದೆಸಿದ ಕಂಬಳಿಯನ್ನು ತೆಗೆದು ಮೈ ಉಜ್ಜುತಿದ್ದಳು. ಡಾಕ್ಟರರಿಗೆ ಆಕೆಯ ಅತಿ ಹೆಚ್ಚಿನ ನಿತ್ರಾಣ, ತುಂಬಿದ ಬಸಿರು, ಜತೆಗೆ ಜ್ವರ ಗಡ್ಡೆ–ಎಲ್ಲವನ್ನೂ ಕಂಡು ಕನಿಕರವಾಯಿತು. ಒಮ್ಮೆ ಬೆವತು, ನಡುಗಿ, ಸ್ತಬ್ಧಳಾಗಿದ್ದ ಆಕೆ ಫಕ್ಕನೆ ನೋವಿಂದ ಕಿರುಚುವುದಕ್ಕೂ ತೊಡ

ಗಿದಳು. ಅವಳ ತಂದೆ "ನೀನೇನು ಹೆದರಬೇಡ, ಮಗು; ಡಾಕ್ಟರರು ಬಂದಿದ್ದಾರೆ; ಇನ್ನೇನೂ ಆಗಲಾರದು" ಎಂದು ಸಮಾಧಾನ ಹೇಳುತಿದ್ದ. ಬಂದವರಿಗೆ ಸಾಕಷ್ಟು ಹೊತ್ತಿನ ತನಕ ಅಲ್ಲಿಂದ ಹೊರಡುವುದು ಅಸಾಧ್ಯವೆನಿಸಿತು. ಬಂದ ಹುಚ್ಚ, 'ಹೆರಿಗೆಗೆ ತಿಂಗಳಿದೆ' ಎಂದಿದ್ದರೂ ಹೆರಿಗೆಯ ನೋವು, ಆ ಜ್ವರದ ಬಾಧೆಯಿಂದ ಆಗಲೇ ತೊಡಗಿಯಾಗಿತ್ತು. ಆಕೆ ತೀರ ನಿತ್ರಾಣಿಯಾದುದರಿಂದ ಅಕಾಲಿಕ ಹೆರಿಗೆಯಾದಲ್ಲಿ ವಿಸ್ಮೃತಿಯುಂಟಾದರೂ ಆಗಬಹುದು. ಆದುದರಿಂದ ಬಂದ ಕೆಲಸವನ್ನು ಮುಗಿಸಿಹೋಗುವ ನಿರ್ಧಾರ ಮಾಡಿದರು. ಮನೆಯ ಯಜಮಾನನು "ಎಳನೀರು ತರಿಸಲೇ" ಎಂದು ಕೇಳಿದನು. "ಸಮೀಪದಲ್ಲಿ ಬ್ರಾಹ್ಮಣರ ಮನೆಯಿದೆ. ನಿಮಗೆ ಊಟಕ್ಕೆ ಹೇಳಲೇ" ಎಂದ. ಇವರು "ಈಗ ಅದೊಂದೂ ಬೇಡ"ವೆಂದರು. ಊಟದ ನೆನಪು ಬಂದಾಗ ಗೃಹ ಪ್ರವೇಶದ ನೆನಪೂ ಹೊಳೆದು 'ಊಟ, ಗಂಪು ಎಲ್ಲರೂ ಕಾದಿರುತ್ತಾರೆ' ಎಂದು ನಕ್ಕರು.

ಅವರ ಮನೆಯಲ್ಲಿ ಎಲ್ಲರೂ ಕಾದೇ ಇದ್ದರು. ಗಂಟೆ ಹದಿನೆರಡಾದರೂ ಶಿವಪ್ಪನವರ ಸವಾರಿ ಮನೆಗೆ ಬಂದಿಲ್ಲವೆಂದು ಇಂದುಮತಿ ತುಂಬ ಬೇಸರಕ್ಕೊಳಗಾಗಿದ್ದಳು. ಹದಿನೊಂದು ಗಂಟೆಗೆ ಎಲ್ಲ ಮಿತ್ರರೂ ಬಂದಿದ್ದರು. ಗಂಪು ಮಾತ್ರ ಬಂದಿರಲಿಲ್ಲ. ಗಂಪು ಹದಿನೊಂದು ಗಂಟೆಯ ಹೊತ್ತಿಗೆ ದವಾಖಾನೆಗೆ ಬಂದ. ಡಾಕ್ಟರರು ಸರ್ಕಿಟಿಗೆ ಹೋದದ್ದು ತಿಳಿಯಿತು. "ನಮ್ಮ ಜನರಿಗೆ ಹೊತ್ತು ಗೊತ್ತಿಲ್ಲದೆ ಕರೆಯುತ್ತಾರೆ" ಎಂದು ಕಾದು ಕುಳಿತ. ಗಂಟೆ ಹದಿನೆರಡೇನೆ ಆಯಿತು. ಅವರು ಬಾರದ್ದನ್ನು ಕಂಡು "ಏನು ಮಾಡಲಿ" ಎಂದು ಚಿಂತಿಸತೊಡಗಿದ. ಆಗ ಕಂಪೌಂಡರ್ "ಡಾಕ್ಟರರು ನೀವು ಬಂದರೆ ಮನೆಗೆ ಕರೆದುಕೊಂಡು ಹೋಗು ಎಂದಿದ್ದಾರೆ. ಅವರು ಬರುವ ತನಕ ನೀವೇಕೆ ಕಾಯಬೇಕು?" ಎಂದು ಹೇಳಿದ.

"ಕರೆದುಕೊಂಡು ಹೋಗುವುದಕ್ಕೆ ನನಗೆ ಮನೆಯ ದಾರಿ ಗೊತ್ತಿಲ್ಲವೆ? ಹೋಗಲಿ; ನೀನೂ ಬಂದುಬಿಡು. ನೀನು ಕರೆದುಕೊಂಡು ಹೋದದ್ದೊಂದೇ ಆಗಲಿ. ಡಾಕ್ಟರರ ಹಣೆಯ ಬರಹವಂತು ಇದ್ದೇ ಇದೆ. ಅವರ ಕೆಲಸಕ್ಕೆ ಹೊತ್ತು ಗೊತ್ತಿಲ್ಲ. ನಮ್ಮ ಮಿಲಿಟರಿ ಕೆಲಸದ ಹಾಗೆ! ಮನೆಯಲ್ಲಿ ಇಂದುಮತಿಯಮ್ಮ ಸಿಟ್ಟಾಗಬಾರದಲ್ಲ" ಎಂದುಕೊಂಡು, ಕಂಪೌಂಡರನೊಡನೆ ಅವರ ಮನೆಗೆ ಹೋದನು. ಅವನನ್ನು ಕಂಡ ಇಂದು "ಬರುವವರೆಲ್ಲ

ಬಂದ ಹಾಗಾಯಿತು; ಯಜಮಾನರೇ ಇಲ್ಲ" ಎಂದು ನಿರುತ್ಸಾಹದಿಂದ ನುಡಿದಳು. "ಅಡುಗೆಯಾಗಿದೆ. ಗಂಟೆ ಹದಿನೆರಡೂ ಆಯಿತು" ಎಂದಳು.

"ಡಾಕ್ಟರರು ಬರಲಿ, ಈಗ ಬಂದಾರು; ಅಂಥ ದೂರವೇನೂ ಹೋಗಿರಲಾರರು" ಎಂದು ನೆರೆದ ಗೆಳೆಯರೆಲ್ಲರು ಹರಟೆಗೆ ಕುಳಿತರು. ಇಂದುಮತಿ ಎಂಟು ಹತ್ತು ಬಾರಿ ಚಡಪಡಿಸುತ್ತ, ಮನೆಯಿಂದ ಹಿತ್ತಿಲ ಬಾಗಿಲ ತನಕವೂ ಹೋಗಿ, ನಿಂತು, ಕಾದು ಬೇಸರಿಸಿ ಮರಳಿದಳು. ಒಳಗೆ ಊಟದ ಮನೆಯಲ್ಲಿ ಎಲೆಗಳನ್ನು, ಮಣೆಗಳನ್ನೂ ಹಾಕಿದಳು. ಅತಿಥಿಗಳಿದ್ದಲ್ಲಿಗೆ ಬಂದು "ಒಂದು ಗಂಟೆಯೇ ಆಯಿತಲ್ಲ. ಇನ್ನು ಅವರನ್ನು ಕಾದರೆ ಉಪಯೋಗವಿಲ್ಲ. ಅವರದು ಯಾವಾಗಲೂ ಇದೇ ಕ್ರಮ. ಅವರಿಗೆ ಯಾವುದಕ್ಕೂ ಹೊತ್ತು ಗೊತ್ತಿಲ್ಲ. ನೀವು ಹಸಿದಿದ್ದೀರಿ, ಅಲ್ಲದೆ ಮಾಡಿದ ಅಡುಗೆಯನ್ನು ತಣಿದ ಮೇಲೆ ಉಣ್ಣುವುದೇ" ಎಂದಳು. ಒಬ್ಬರು ಇನ್ನೊಬ್ಬರ ಮುಖವನ್ನು ನೋಡಿದರು. ಗಂಪುವಿಗೆ ಡಾಕ್ಟರರನ್ನು ಬಿಟ್ಟು ಊಟ ಮಾಡುವುದಕ್ಕೆ ಏನೇನೂ ಇಷ್ಟವಾಗಲಿಲ್ಲ. ಆತ 'ನಾನೊಬ್ಬ ಕಾದಿರುತ್ತೇನೆ' ಎನ್ನುವ ಹಾಗೆಯೂ ಇಲ್ಲ. ಆತ ಯೋಚಿಸಿ, ಯೋಚಿಸಿ, ಉಳಿದ ಗೃಹಸ್ಥರು ಕಾದಿರಬಾರದೆಂದು "ಅದೇ ಒಳ್ಳೆಯದಮ್ಮ, ಈಗ ಒಂದು ಊಟವಾಗಲಿ; ಇನ್ನು ಡಾಕ್ಟರರು ಬಂದ ಮೇಲೆ ಇನ್ನೊಂದು ಊಟ ಮಾಡಿದರಾಯಿತು" ಎಂದು ಪರಿಹಾಸ್ಯಮಾಡುತ್ತ ಊಟಕ್ಕೆ ಕುಳಿತ.

ಬಂದ ಸ್ನೇಹಿತರುಗಳು ಊಟ, ಹರಟೆಗಳನ್ನು ಲಘು ಮನಸ್ಸಿನಿಂದ ನಡೆಯಿಸಿದರು. ಭೋಜನವು ಸಾಕಷ್ಟು ದೀರ್ಘವಾಗಿತ್ತು. ಬಂದಿದ್ದ ಮಿತ್ರರ ಮನಸ್ಸು ಉಲ್ಲಾಸವಾಗಿತ್ತು. ಇಂದುಮತಿ ಬಾಯಿಯ ಉಪಚಾರಕ್ಕೂ ಕಡಿಮೆ ಮಾಡಲಿಲ್ಲ. ಆದರೆ ಆಕೆಯ ಮನಸ್ಸಿನಲ್ಲಿ "ಎಂಥ ಕೆಲಸವಪ್ಪ ಇವರದ್ದು!" ಎಂಬ ಬೇಸರ ಮಾತ್ರ ಕಾಡುತಿತ್ತು. ಊಟ ಮುಗಿಸಿದ ಬಳಿಕ, ಸಭೆ ಸಪ್ಪೆಯಾಗಬಾರದೆಂದು ಗಂಪು ಇಸ್ಪೀಟ್ ಪಿಡಿಯೊಂದನ್ನು ಹೊರಕ್ಕೆ ತೆಗೆದ. ಎಲ್ಲರೂ ಸೇರಿ ಆಟವಾಡತೊಡಗಿದರು. ಆಟ ಮುಗಿದು, ಕಾಫಿಯ ಹೊತ್ತಾಗುವ ವೇಳೆಗೆ, ಹುಡುಗ ರತ್ನಾಕರ "ಅಪ್ಪ ಬಂದರು" ಎಂಬ ಶುಭ ಸಮಾಚಾರವನ್ನು ಸಾರಿದ. ಶಿವಪ್ಪನವರು, ಹಿಂದೆ ಗುಲಾಬಿಯೂ ಬಿಸಿಲಿನಲ್ಲಿ ನಡೆದು ಕೆಂಪಾಗಿ ಬರುತ್ತಿದ್ದರು. ಬಂದವರೇ ಅಭ್ಯಾಗತರಲ್ಲಿ ಕ್ಷಮಾಪಣೆಯನ್ನು ಕೇಳಿ, ಸ್ನಾನಮಾಡಿಕೊಂಡು ಬಂದು ವಿರಮಿಸಿದರು. "ಊಟ

ಆಯಿತಲ್ಲವೆ? ಹೇಗಿತ್ತು–ಸಾಧಾರಣವಾದರೂ ಆಯಿತೇ?"

"ನಿಮ್ಮದು?" ಎಂದ ಗಂಪು.

"ಈಗಾಗುತ್ತದೆ."

"ಕಾಫಿಯಾದರೂ ಆಗಿತ್ತೆ?"

"ಆಗಿತ್ತು ನೆಪಕ್ಕೆ. ಕುಡಿಯುವುದಕ್ಕೆ ಕಾಫಿಯೆಂದು ಏನನ್ನೋ ತಂದುಕೊಟ್ಟರು. ಕುಡಿದರೆ ಗಂಟಲಿನಿಂದ ಇಳಿಯಲಿಲ್ಲ. ಏನು ಮಾಡುವುದು ಹೇಳಿ. ಒಳ್ಳೆಯ ಸಮಯಕ್ಕೆ ನಾನೇ ಚಕ್ಕರ್ ಕೊಡುವಂತಾಯಿತಲ್ಲ. ಅವನಿಗೆ ಸಕಾಲದಲ್ಲಿ ಕರೆಯುವ ಬುದ್ಧಿಯೂ ಬಂತು, ನನಗೆ ಹೋಗುವ ಬುದ್ಧಿಯೂ ಬಂತು. ಹೋದದ್ದಂತು ಒಳಿತಾಯಿತು. ಕಠಿಣ ಮಲೇರಿಯ. ಅದರಿಂದ ಅವಧಿಗೆ ಮುಂಚೆಯೇ ಹೆರಿಗೆಯಾಯಿತು. ನಾವು ಹೋಗುವುದಕ್ಕೂ ವೇದನೆ ತೊಡಗುವುದಕ್ಕೂ ಸಮನಾಯಿತು. ಗ್ರಹಚಾರಕ್ಕೆ ಸಮನಾಗಿ ಗುಲಾಬಿಯೂ ಬಂದಿದ್ದಳು. ಮಗು ಉಳಿಯಲಿಲ್ಲ. ಅವಳಾದರೂ ಉಳಿದಳು. ಅಷ್ಟೇ ದೊಡ್ಡದು" ಎಂದು ಅದನ್ನೆಲ್ಲ ಬಣ್ಣಿಸುವುದಕ್ಕೆ ಕುಳಿತರು. ಅಷ್ಟಕ್ಕೆ ಇಂದುಮತಿ ಬಂದು "ನಿಮಗೆ ಮಾತನಾಡಿದರೇ ಹೊಟ್ಟೆ ತುಂಬುತ್ತೆ. ಪಾಪ! ಗುಲಾಬಿಯೂ ಉಪವಾಸವೇ. ಎಲೆ ಹಾಕಿದೆ–ಬನ್ನಿ ಬನ್ನಿ" ಎಂದು ಕರೆದಳು.

"ಇಷ್ಟು ಹೊತ್ತಿಗೆ ಏನು ಊಟ? ಒಂದಿಷ್ಟು ಕಾಫಿ, ತಿಂಡಿ ಕೊಡು. ಇವರ ಜತೆಯಲ್ಲಿ ಕುಳಿತು ತಿನ್ನುತ್ತೇನೆ. ಗುಲಾಬಿಯ ಸ್ನಾನವಾಗಿದ್ದರೆ ಅವಳಿಗೂ ಊಟ ಹಾಕು. ಅವಳ ಪ್ರಭಾಕರ ಬಂದಿದ್ದಾನಲ್ಲ"

"ಬಂದಿದ್ದಾನೆ. ಏನು ಕತೆ ನಿಮ್ಮದು? ನಾನು ಊಟ ಮಾಡುವುದೂ ಬೇಡ ಅನ್ನುತ್ತೀರಾ" ಎಂದು ಕೇಳಿದಳು.

ಇಂದುಮತಿ ತಮ್ಮನ್ನು ಬಿಟ್ಟು ಊಟಮಾಡಲು ಇಷ್ಟಪಡದೆ ಕಾದು ಕುಳಿತಿದ್ದಳೆಂಬ ಜ್ಞಾನವುಂಟಾಗಿ, ಅವರು ಊಟಕ್ಕೆ ಹೊರಡಬೇಕಾಯಿತು. ಹೊರಗೆ ಸ್ನೇಹಿತರು ಕುಳಿತಿದ್ದಾಗ ಅವರನ್ನು ಬಿಡಲಾರದೆ ಅವಸರದಿಂದ ಊಟವನ್ನು ಮುಗಿಸಿ, ಹೊರಕ್ಕೆ ಬಂದು, ಹರಟೆಗೆ ಕುಳಿತರು. ಸಂಜೆಯ ತನಕ ಆ ಸ್ನೇಹಿತರೆಲ್ಲ ಇದ್ದು, ಅನಂತರ ಒಬ್ಬೊಬ್ಬರಾಗಿ ತಮ್ಮ ಜಡ ಶರೀರಗಳನ್ನು ಕಿತ್ತುಕೊಂಡು ಹೋದರು. ಅವರೆಲ್ಲ ಹೊರಟು ಹೋದ ಮೇಲೆ ಇಂದುಮತಿ ಮಾತಿನ ಸೇಡನ್ನು ಸಲ್ಲಿಸಿಯೇ ಬಿಟ್ಟಳು: "ಅಲ್ಲ, ಅವರನ್ನೆಲ್ಲ

ಊಟಕ್ಕೆ ಕರೆಯುವುದು ಯಾಕೆ? ನೀವು ಹೀಗೆ ಎದ್ದು ಹೊರಡುವುದೇ?" ಎಂದಳು. "ಈವತ್ತು ಒಂದು ದಿನ ಕರೆದವರಿಗೆ ಮರ್ಯಾದೆ ಕೊಡುವುದಕ್ಕಾದರೂ ಮನೆಯಲ್ಲಿ ಹಟ ಹಿಡಿದು ಕುಳಿತಿದ್ದರೇನಾಗುತಿತ್ತು? ನೀವಿಲ್ಲದ್ದಕ್ಕೆ ಅವರಿಗೆಲ್ಲ ಮನಸ್ಸಿಗೆ ಹೇಗೆ ಎನಿಸಿತೋ! ಗಂಪು ಬರುವ ತನಕವಂತು ಹಾಂ, ಹೂಂ ಎಂದವರಿಲ್ಲ. ಒಂದು ಒಂದೂವರೆ ಗಂಟೆಯ ತನಕ ನಿಮಗಾಗಿ ಕಾದು ಕುಳಿತರು."

"ನಾನು ಮನೆಯಲ್ಲಿ ಕುಳಿತಿದ್ದರೆ ಏನಾಗುತಿತ್ತು ಅನ್ನುತ್ತೀಯಾ? ಒಂದು ಹೆಣ ಹೆಚ್ಚಿಗೇ ಹೋಗುತಿತ್ತು."

"ನಿಮ್ಮ ತಮಾಷೆ ಸಾಕು" ಎಂದಾಗ, ಇಂದುವಿನ ಮುಂದೆ ಡಾಕ್ಟರರು ಇನ್ನೊಮ್ಮೆ ಕಥಾ ಪ್ರವಚನ ತೊಡಗಬೇಕಾಯಿತು. ಗುಲಾಬಿಯೂ ಅದನ್ನು ಬಣ್ಣಿಸಬೇಕಾಯಿತು. ಡಾಕ್ಟರರು "ಇಂದು-ನೀನು ಸಿಟ್ಟಾಗುವುದು ನ್ಯಾಯ; ನಾನು ಕರೆದಲ್ಲಿ ಹೋಗುವುದೂ ನ್ಯಾಯ. ಊಟ, ಆತಿಥ್ಯವೂ ಮುಖ್ಯವೇ. ಆದರೆ ಇದು ತಪ್ಪಿದರೆ ಇನ್ನೊಂದು ದಿನ ಮಾಡಬಹುದು. ಆದರೆ ಅಂಥಲ್ಲಿಗೆ ಸಮಯಕ್ಕೆ ಸರಿಯಾಗಿ ಹೋಗದಿದ್ದರೆ, ಆ ಮೇಲೆ ಹೋಗಬೇಕಾದದ್ದು ಉತ್ತರ ಕ್ರಿಯೆಗೆ. ನೀನೇ ಯೋಚಿಸು. ಗೃಹ ಪ್ರವೇಶದ ಒಳ್ಳೆಯ ದಿವಸ ಒಂದು ಜೀವವಾದರೂ ಉಳಿಯುವ ಪುಣ್ಯದ ಕೆಲಸವಾಯಿತಲ್ಲ. ಅವಳಾಗಿ ಹೆರುವಂಥ ಸ್ಥಿತಿಯಲ್ಲೇ ಇದ್ದಿರಲಿಲ್ಲ; ಮಗುವೂ ಹೋಗಿತ್ತು" ಎಂದಾಗ "ಅದು ನಿಜವೇ" ಎಂಬ ಒತ್ತಾಯದ ಸಾಕ್ಷಿಯನ್ನು, ಅವರ ಮಾತಿಗೆ ಇಂದು ಮತಿ ಹಾಕಬೇಕಾಯಿತು.

ಡಾಕ್ಟರರು ಒಂದಿಷ್ಟು ತಿರುಗಾಡಿಕೊಂಡು ಬರುತ್ತೇನೆಂದು ಒಬ್ಬರೇ ಹೊರಟರು. ಹೊರಡುತ್ತ ಗುಲಾಬಿ, ನೀನೂ ನಿನ್ನ ಮಗನೂ ರಾತ್ರಿ ಊಟ ಮಾಡಿಯೇ ಹೋಗಬಹುದು" ಎಂದುದರಿಂದ, ಆಕೆ ತನ್ನ ಮಗುವಿನೊಡನೆ ರಾತ್ರಿಯ ಒಂಬತ್ತು ಗಂಟೆಯ ತನಕವೂ ಅಲ್ಲಿ ಹರಟೆಹೊಡೆಯುತಿದ್ದು ಅನಂತರ ಮನೆಗೆ ಹೊರಟಳು. ಡಾಕ್ಟರರು ತಮ್ಮ ಮನೆಗೆ ಬಂದಾಗಲಷ್ಟೆ ಅವಳು ತನ್ನ ಮನೆಯ ದಾರಿಯನ್ನು ಹಿಡಿದಿದ್ದಳು. ಹೋಗಿ ಮನೆಯನ್ನು ಸೇರುವಾಗ, ವಿಚಿತ್ರ ವ್ಯಕ್ತಿಗಳಿಬ್ಬರು ಅವಳ ಮನೆಯ ಜಗುಲಿಯ ಮೇಲೆ ಕುಳಿತು ಮಾತನಾಡುತಿದ್ದರು. ಇಬ್ಬರೂ ವಿದೇಶೀಯ ಪೋಷಾಕಿನಲ್ಲಿದ್ದರು. ಕಾಳಿ, ಮನೆಗೆಲಸದವಳು, ಒಂದು ಚಿಕ್ಕ ದೀಪವನ್ನು ತಂದು, ಅವರ ಸಮೀಪದಲ್ಲಿ

ರಿಸಿ, ತಾನು ಒಳಕ್ಕೆ ಹೋಗಿ ಕುಳಿತಿದ್ದಳು. ಗುಲಾಬಿಗೆ, ತನ್ನ ಮನೆಯಲ್ಲಿ ಹಾಗೆ ದಾರಿ ಕಾಯುತ್ತಿರುವವರಾರು ಎಂಬ ಯೋಚನೆಯೇ ಹೊಳೆಯಲಿಲ್ಲ. ಅನುಮಾನಿಸಿ, ಮನೆಯ ಅಂಗಳವನ್ನು ಸಮೀಪಿಸುವಾಗ ಅವಳ ಹುಡುಗ ಪ್ರಭಾಕರ "ಯಾರಮ್ಮ ಅದು?" ಎಂದು ವಿಸ್ಮಯದಿಂದ ಕೇಳಿದನು. ಆಕೆ ಆ ಕ್ಷೀಣ ಬೆಳಕಿನಲ್ಲಿ ಬಂದವರನ್ನು ಗುರುತಿಸಲಾರದೆ "ಯಾರು ನೀವು?" ಎಂದು ಪ್ರಶ್ನಿಸಿದಳು.

"ಏನು ಗುಲಾಬಿ, ಗುರುತು ಮರತೇ ಬಿಟ್ಟೆ" ಎಂದ ಅವರಲ್ಲೊಬ್ಬ.

ಗುಲಾಬಿಗೆ ಆಶ್ಚರ್ಯವಾಯಿತು. ಅದು ಪರಿಚಿತ ಸ್ವರವೆಂಬುದು ತಿಳಿಯಿತು. ಎವೆಯಿಕ್ಕದೆ ಅವರ ಮುಖವನ್ನು ನೋಡಿದಳು. ಒಬ್ಬರ ಗುರುತಂತು ತೀರ ಸ್ಪಷ್ಟವಾಗಿತ್ತು. ಒಂದು ಕಾಲದಲ್ಲಿ ಅವಳ ಮನಸ್ಸಿನಲ್ಲಿ ತುಂಬಿ ಮಾಯವಾದ ಮಾಧುವೇ ಬಂದಿದ್ದಾನೆ. ಈ ಪ್ರಭಾಕರನಿಗೆ ಎಷ್ಟು ವರ್ಷಗಳು ಸಂದಿವೆಯೋ, ಅವನನ್ನು ಕಾಣದೆ ಹೆಚ್ಚು ಕಡಿಮೆ ಅಷ್ಟೇ ವರ್ಷಗಳು ಸಂದಿರಬೇಕು. ಆತನ ಪೂರ್ವ ದರ್ಶನವಾಗಿ ಆರು ವರ್ಷಗಳಿಗೂ ಮಿಕ್ಕಿ ಕಳೆದಿವೆ.

"ಎಂದು ಬಂದಿರಿ?" ಎಂದು ವಿಚಾರಿಸಿದಳು.

"ಈವತ್ತೇ. ಬಂದು ಇನ್ನೂ ಒಂದು, ಒಂದೂವರೆ ಗಂಟೆಯಾಗಿಲ್ಲ."

ಆತ ಊರಿಗೆ ಬಂದ ಮರುಗಳಿಗೆಯಲ್ಲೇ ತಮ್ಮ ಮನೆಗೆ ಹೋಗದೆ, ತನ್ನಲ್ಲಿಗೆ ಬಂದಿದ್ದಾನೆಂಬ ಆಶ್ಚರ್ಯವಾಯಿತು ಗುಲಾಬಿಗೆ. ಏಕೆ ಬಂದಿರಬಹುದೆಂದು ಊಹಿಸುವುದಕ್ಕೆ ಧೈರ್ಯವಾಗಲಿಲ್ಲ. ಅವನನ್ನು ಕುರಿತಾಗಿ ಅವಳಲ್ಲಿ ಒಂದು ಕಾಲದಲ್ಲಿದ್ದ ಪ್ರೇಮವೆಲ್ಲ ಅಳಿದಿತ್ತು; ಬದಲು ಅಂಥ ಜನಗಳೇ ಲೋಕದಲ್ಲಿ ತುಂಬಿರುವವರು-ಎಂಬ ಅನಾದರ ಮೂಡಿತ್ತು. "ಬಂದೆ, ಅವಸರವಿಲ್ಲವಲ್ಲ" ಎಂದು ಆಕೆ ಮನೆಯ ಕದ ತಟ್ಟಿದಳು. ಕಾಳಿ ಬಾಗಿಲು ತೆರೆದ ಮೇಲೆ, ತನ್ನ ಕೊಠಡಿಯನ್ನು ಹೊಕ್ಕಳು. ಪ್ರಭಾಕರನು "ಯಾರಮ್ಮ ಅದು? ಗುರುತಿನವರ ಹಾಗೆ ಮಾತಾಡುತ್ತಾರೆ" ಎಂದು ಕೇಳಿದರೆ "ಯಾರೋ, ಯಾವ ಸುಟ್ಟವರೋ" ಎಂದು ಆಕೆ ಉದಾಸೀನಳಾಗಿ ಉತ್ತರಿಸಿದಳು. ಮನಸ್ಸಿನಲ್ಲಿ ಒಮ್ಮೆಗೆ ನೋವು, ದುಃಖ, ಉದ್ವೇಗಗಳೆಲ್ಲ ಮೂಡಿಬಂದುವು.

ಪ್ರಭಾಕರ ಅಷ್ಟಕ್ಕೇ ಬಿಡಲಿಲ್ಲ "ನಿನಗೆ ಗೊತ್ತುಂಟು. ಯಾರೆಂದು, ಹೇಳುವುದಿಲ್ಲ ನೀನು" ಎಂದ.

"ಹೌದು. ಗೊತ್ತುಂಟು, ನಿನ್ನ ಅಪ್ಪ ಹಾಗಾದರೆ" ಎಂದಳು ಸಿಟ್ಟಿನಿಂದ. ಆ ಮರುಕ್ಷಣದಲ್ಲಿ ತನ್ನ ಮಾತಿಗೆ ನಾಲಿಗೆ ಕಚ್ಚಬೇಕು ಎನಿಸಿತು. ಅಪ್ಪನನ್ನು ಹಂಬಲಿಸಿದ, ಹುಟ್ಟಿದ ಮೇಲೆಯೆ ಕಂಡಿರದ ಆ ಹುಡುಗ, ಎಲ್ಲಿಲ್ಲದ ಪ್ರಶ್ನೆಗಳನ್ನು ತೊಡಗಿದ್ದುದರಿಂದ ಅವನನ್ನು ಕಾಳಿಯ ಬಳಿಯಲ್ಲಿ ಮಾತನಾಡಲು ಬಿಟ್ಟು, ಮನೆಗೆ ಬಂದವರನ್ನು ಮಾತನಾಡಿಸದಿದ್ದರೆ ತಪ್ಪಾದೀತೆಂದು ಎಣಿಸಿ "ಕಾಳಿ, ನೀನು ಇವನಿಗೊಂದು ಕಥೆ ಹೇಳು. ನಾನು ಅದು ಯಾರು, ಏನೆಂದು ನೋಡಿ ಬರುತ್ತೇನೆ" ಎಂದು ಹೊರಕ್ಕೆ ಬಂದಳು. "ಏನು ಬಂದಿರಿ" ಎಂದು ಪ್ರಶ್ನಿಸಿದಳು.

"ಪುರುಸೊತ್ತಿದೆಯಲ್ಲ?"

"ಪುರುಸೊತ್ತೇನು? ಮಲಗುವ ಹೊತ್ತಾಯಿತು."

ಬಂದ ಮಾಧವನಿಗೆ ಅವಳ ಮಾತಿನಿಂದ, ತನ್ನ ವಿಷಯದಲ್ಲಿ ಯಾವೊಂದು ಆತುರ ಉಳಿದಿರಲಿಲ್ಲ ಎಂಬುದು ಗೊತ್ತಾದರೂ ತಾನೊಂದು ಮುಖ್ಯಕೆಲಸದ ಸಲುವಾಗಿ ಬಂದುದರಿಂದ ವಿಶ್ವಾಸದಿಂದ ಮಾತನಾಡತೊಡಗಿದ. "ನಾನು ಇವರನ್ನು ಕರೆದುಕೊಂಡು ಒಂದು ವಿಶೇಷ ಕೆಲಸಕ್ಕಾಗಿ ಈ ಊರಿಗೆ ಬಂದಿದ್ದೆ. ನಿನ್ನ ಹತ್ತಿರ ಸುಳ್ಳೇನು! – ನಿನ್ನನ್ನು ಕಾಣುವುದಕ್ಕೇ ಬಂದದ್ದು. ಇವರು ಮುಂಬಯಿಯವರು. ಅವರ ಹೆಸರನ್ನು ನೀನು ಕೇಳಿರಬಹುದು. ಕಾಳೂರಿಗೆ ಟೂರಿಂಗ್ ಟಾಕೀಸುಗಳು ಬರುತ್ತವೆಯಲ್ಲ. ಮುಂಬಯಿಯಲ್ಲಿ ದೇವೇಂದ್ರ ಫಿಲ್ಮ್ಸ್ ಅಂತ ದೊಡ್ಡ ಸಿನೆಮ ಕಂಪೆನಿಯಿದೆ.ಇವರು ಅದರ ಡೈರೆಕ್ಟರರು, ಪಾಲುಗಾರರು. ನಾನೀಗ ನಾಲ್ಕಾರು ವರ್ಷಗಳಿಂದ ಫಿಲ್ಮ್ ಲೈನ್ ಹಿಡಿದುಬಿಟ್ಟಿದ್ದೇನೆ. ಅದರಲ್ಲಿರುವ ಫಾಯಿದೆ ಯಾವುದರಲ್ಲಿಯೂ ಇಲ್ಲ" ಎಂದಾಗ ಆಕೆ:

"ಹಾಗಾದರೆ ಈ ಸಾರಿ ಸುಂದರಿಯಮ್ಮನನ್ನು ಕರೆದುಕೊಂಡು ಹೋಗುತ್ತೀರಾ ಮುಂಬಯಿಗೆ?" ಎಂದು ಕೇಳಿದಳು.

ಮಾಧವ ಅಂಥ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ. ಆತ ಒಮ್ಮೆಗೆ ತಬ್ಬಿಬ್ಬಾದ; ಅನಂತರ "ನಿನ್ನ ಚೇಷ್ಟೆ ಸಾಕೇ, ಅದಕ್ಕಾದರೆ ಇಲ್ಲಿಗೆ ಬರುತಿದ್ದೇನೆಟ್ಟಗೆ? ನಾನು ಮನೆಗೆ ಹೋಗಲೂ ಇಲ್ಲ; ಹೋಗುವುದೂ ಇಲ್ಲ."

ಗುಲಾಬಿಗೆ ಆ ಗಳಿಗೆಯಲ್ಲಿ ಅನಿಸಿತು–ಈ ಪುಣ್ಯಾತ್ಮನನ್ನು ನಂಬಿದ ಒಂದು ಸಂಸಾರವು ಎಲ್ಲ ಭಾಗ್ಯಗಳನ್ನೂ ಕಳೆದುಕೊಂಡಿತು. ತಾನು ಎಲ್ಲಾ

ದರೂ ಮೂರ್ಖತೆಯಿಂದ ತನ್ನ ಮನಸ್ಸಿನ ಆಸೆಯನ್ನು ಹಿಂಬಾಲಿಸಿದ್ದಾಗಿದ್ದರೆ ತನಗೂ ಅದೇ ಗತಿ ಪ್ರಾಪ್ತವಾಗುತಿತ್ತಲ್ಲ–ಎಂದು.

ಅಲ್ಲಿಂದ ಮಾಧವನ ಮಾತು ಸಿನೆಮಾ ಲೋಕವನ್ನು ಕುರಿತು ಹರಿಯಿತು. ಅವಳ ರೂಪ ಸಿನೆಮಾ ನಟಿಯಾಗುವುದಕ್ಕೆ ತಕ್ಕುದೆಂದೂ ಅವಳು ರಜತಪರದೆಯನ್ನು ಹಿಂಬಾಲಿಸಿದ್ದಾದರೆ ನಾಲ್ಕು ದಿನಗಳಲ್ಲಿ ಹೆಸರಾದ ತಾರೆಯಾಗುವುದು ನಿಜವೆಂದೂ ಹೇಳಿದ್ದಲ್ಲದೆ ಹಾಗೆ ತಾರಾ ಲೋಕದಲ್ಲಿ ಮೆರೆದು, ಕೀರ್ತಿಯನ್ನು ಗಳಿಸಿದ ಹಲವಾರು ಮಹಾ ನಾರಿಯರ ಅದೃಷ್ಟವನ್ನು ಬಣ್ಣಿಸಿದ. ಮಾತು ಕಿವಿಯ ಮೇಲೆ ಬೀಳುತ್ತಿದೆಯಲ್ಲ-ಎಂದಷ್ಟೆ ಗುಲಾಬಿ ಕೇಳುತಿದ್ದಳು, ಹೊರತು ಒಂದಕ್ಷರ ಮಾತನಾಡಲಿಲ್ಲ. ಅದರಿಂದಾಗಿ ಮಾಧವನು ಒಂದಕ್ಷರ ಹೇಳುವುದನ್ನೂ ನಿಲ್ಲಿಸಲಿಲ್ಲ. "ಇಲ್ಲಿದ್ದು ಏನು ಮಾಡುತ್ತೀಯ? ಆ ಡಾಕ್ಟರರ ದಾದಿಯಾಗಿ ಇಪ್ಪತ್ತು ಮೂವತ್ತು ರೂಪಾಯಿ ಸಂಪಾದಿಸುವುದಕ್ಕೆ ಈ ಗೋಳಾಟವೆ? ಬೂದಿಮುಚ್ಚಿದ ಕೆಂಡದ ಹಾಗೆ ಆಗಬಾರದು ನಿನ್ನ ಯೋಗ್ಯತೆ. ಚಿತ್ರಕ್ಕೆ ಇಂತಿಷ್ಟು ಎಂದು ಗುತ್ತಿಗೆ ಮಾಡಬಹುದು. ತಿಂಗಳ ಸಂಬಳ ಮಾಡಬಹುದು. ಸ್ವಲ್ಪ ಅನುಭವ ದೊರಿತ ಮೇಲೆ, ನೀನು ಹೇಳಿದ ಬೆಲೆ- ನಿನ್ನ ಯೋಗ್ಯತೆಗೆ, ರೂಪಕ್ಕೆ, ಯೌವನಕ್ಕೆ ಬಂದೇ ಬರುತ್ತದೆ" ಎಂದು ಉತ್ಸಾಹ ಹುಟ್ಟಿಸುವ ಮಾತುಗಳನ್ನು ಆಡಿದ.

ಗುಲಾಬಿಯ ಬಾಯಿಂದ ಯಾವೊಂದು ಮಾತೂ ಬಾರದ್ದನ್ನು ಕಂಡು ಮಾಧವನ ಬಳಿಯಿದ್ದ ಡೈರೆಕ್ಟರ್ ದೊರೆಯು "ಈಕೆಯ ಪರ್ಸನಾಲಿಟಿ ಬಹು ಸೊಗಸಾಗಿದೆ. ಅವಳಿಗೆ ಫಿಲ್ಮಿಗೆ ಬೇಕಾದ ರೂಪವಿದೆ. ವಯಸ್ಸಾದಂತೆಯೇ ಕಾಣುವುದಿಲ್ಲ. ಸಾಮಾನ್ಯ ಹಾಡುಗಾರಿಕೆ, ಒಂದಿಷ್ಟು ಕುಣಿತ ಬಂದದ್ದಾದರೆ ತಿಂಗಳಿಗೆ ಎರಡು ಸಾವಿರದ ತನಕ ಕೊಡಬಹುದು" ಎಂದಾಗ, ಮಾಧು "ಇವಳ ಮಾವ ನಮ್ಮೂರಿನ ಹೆಸರಾದ ವಾಯಿಲಿನಿಸ್ಟ್ ಆಗಿದ್ದ. ಇವಳು ಕುಣಿತವನ್ನೂ ಕಲಿತಿದ್ದಾಳೆ; ಅಲ್ಲದೆ ಅವಳು ಹಿಂದುಸ್ಥಾನಿ ಹಾಡುಗಾರಿಕೆಯನ್ನೂ ಕಲಿತಿದ್ದಾಳೆ . . . ಕೇಳಿದೆಯ ಗುಲಾಬಿ, ಎರಡು ಸಾವಿರದ ತನಕ ಕೊಡುವುದಕ್ಕೆ ಅವರು ತಯಾರು; ಅವರು ಕಾಳಿದಾಸನ ಶಾಕುಂತಲಾ ಚಿತ್ರ ತೆಗೆಯುವುದರಲ್ಲಿದ್ದಾರೆ. ಅದಕ್ಕೆ ತಕ್ಕ ನಟಿಯರನ್ನು ಹುಡುಕಿ ಸಾಕಾಯಿತು, ನಮ್ಮಲ್ಲಿರುವವರೆಲ್ಲರೂ ಈಗ ಕೊಬ್ಬಿ ಹೆವ್ವಿವೈಟ್ಸ್ ಆಗಿದ್ದಾರೆ. ಅದಕ್ಕೆ ಸೂಟ್ ಆಗುವುದಾದರೆ ನೀನು ಒಬ್ಬಳೇ ಒಬ್ಬಳು—ಎಂದು ಯೋಚಿಸಿ

ಕರೆದುತಂದಿದ್ದೇನೆ. ಏನನ್ನುತ್ತೀ ಹೇಳು" ಎಂದು ಕೇಳಿದ. ಮಾಧವನ ಮನಸ್ಸಿನಲ್ಲಿ, ಅವಳನ್ನು ಕಂಡ ಬಳಿಕ ಸುಪ್ತ ಆಸೆಗಳೆಲ್ಲ ಚೇತನಗೊಂಡಿದ್ದವು; ವೇಶ್ಯೆಯ ಕುಲದಲ್ಲಿ ಹುಟ್ಟಿದ ಅವಳನ್ನು ಇಷ್ಟು ಹೊಗಳುವಾಗಲೂ ಅವಳು ಔದಾಸೀನ್ಯ ತೋರುವುದನ್ನು ಕಂಡು ವಿಸ್ಮಯವಾಯಿತು. ಆಕೆ ಪ್ರಾಯಶಃ ಇನ್ನೊಬ್ಬರ ಬಲೆಗೆ ಬಿದ್ದಿದ್ದಾಳೆ-ಎಂದು ಅನಿಸಿತು. ಮುಂಬಯಿಯಲ್ಲಿ ಅವನಿಗೆ ಭೇಟಿಯಾದ ಚಲಪತಿ, ಗುಲಾಬಿಯ ಮಾತು ಬಂದಾಗ 'ಆಕೆ ಶಿವಪ್ಪನವರಲ್ಲಿ ನರ್ಸ್ ಆಗಿದ್ದಾಳೆ' ಎಂದಿದ್ದ. ಅದರಿಂದ ಇಂಥ ಒಂದು ಸ್ವರ್ಣ ಸಂಧಿಯನ್ನು ಕರೆದುಕೊಳ್ಳಲಾರಳು ಎಂದೆಣಿಸಿ ತನ್ನ ಗೆಳೆಯನನ್ನು ನಂಬಿಸಿ ಕರೆದು ತಂದಿದ್ದ.

ಗುಲಾಬಿ ಮಾತನಾಡಲಿಲ್ಲ. ಮಾಧವ ತನ್ನ ಆಸೆಯನ್ನು ಬಿಡಲಿಲ್ಲ. "ನೀನು ಇಲ್ಲ ಅನ್ನಬೇಡ, ತಿಂಗಳಿಗೆ ಮೂರು ಸಾವಿರ ಕೇಳು, ನಾಲ್ಕು ಸಾವಿರ ಕೇಳು; ಅಥವಾ ಚಿತ್ರಕ್ಕೆ ಹತ್ತುಸಾವಿರ ಕೇಳು. ಇಂಥ ಅವಕಾಶ ನಿನಗೆ ಜನ್ಮಕ್ಕೂ ಸಿಗಲಾರದು. ಯೋಚನೆಮಾಡು" ಎಂದಾಗ ಅವಳು-

"ಆಗಲಿ,ಯೋಚನೆಮಾಡಿ ಹೇಳುತ್ತೇನೆ.ನೀವು ನಾಳೆ ಬನ್ನಿ"ಎಂದಳು. ಬಂದ ಅನಿಷ್ಟ ತೊಲಗಲಿ ಎಂದು ಯೋಚಿಸಿದಳು.

"ನಾವೆಲ್ಲಿಗೂ ಹೋಗುವ ಹಾಗಿಲ್ಲ; ಇಲ್ಲಿಯೇ ಮಲಗುತ್ತೇವೆ–ಆಗಬಹುದಲ್ಲ" ಎಂದುದಕ್ಕೆ ಕಾಳಿಯನ್ನು ಕರೆದು,ಹೊರಚಾವಡಿಯನ್ನು ಗುಡಿಸಲು ಹೇಳಿದಳು. ಅವರು ತಾವು ತಂದ ಬೆಡ್ಡಿಂಗುಗಳನ್ನು ಬಿಡಿಸಿ ಮಲಗಿಕೊಳ್ಳುವುದರ ಮೊದಲು "ನಾನು ಮಲಗುವುದಕ್ಕೆ ಹೋಗುತ್ತೇನೆ" ಎಂದು ಒಳಕ್ಕೆ ಹೇಳಿ ಹೊರಟಾಗ, ಮಾಧು ಹಳೆಯ ನೆನಪುಗಳಿಂದ "ನನ್ನ ಮಾತನ್ನು ಮೂಲೆಗೆ ಹಾಕಬೇಡ. ತೀರ ಒಳ್ಳೆಯ ಸಂದರ್ಭವಿದು" ಎಂದು ಇನ್ನೊಮ್ಮೆ ಹೇಳಿದ. ತೀರ ಸಲುಗೆಯಿಂದ ಮುಂದುವರಿದು ಅವಳ ಭುಜದ ಮೇಲೂ ಕೈಯಿರಿಸಿದ. ಆಕೆ "ನಾನು ವಿಚಾರಮಾಡುತ್ತೇನಪ್ಪ" ಎಂದು ತುಸು ಕೋಪದಿಂದಲೇ ಹೇಳಿದಳು.

"ನೀನು ಖಂಡಿತಕ್ಕೂ ಈ ಸಂದರ್ಭ ಬಿಡಬಾರದು. ಅವನಿಗೇನು? ನಾಲ್ಕು ಸಾವಿರದ ತನಕ ಕೊಡಬಹುದು–ಎಂದಿದ್ದಾನೆ ನನ್ನೊಡನೆ. ನೀನು ಬೆಳಿಗ್ಗೆ ಐದು ಸಾವಿರವಾದರೆ ಆದೀತೆಂದು ಹೇಳು. ಆದರೆ ಅವರು ಹಾಡುವುದಕ್ಕೆ ಹೇಳಿಯಾರು; ಕಂಠ ಮೊದಲಿನಂತೆಯೆ ಉಳಿದಿದೆಯಲ್ಲ" ಎಂದು

ಹೇಳಿದ.

"ಆಯಿತು, ನೀವು ಹೋಗಿ ಮಲಗಿಕೊಳ್ಳಿ" ಎಂದು ತಕ್ಷಣ ಸರಿದು ಅವಳು ಒಳಕ್ಕೆ ಹೋದಳು. ಕಾಳಿಯು ಕದವನ್ನಿಕ್ಕಿದಳು. ಗುಲಾಬಿಯ ಮೈಯ್ಯು ಉದ್ವೇಗದಿಂದ ಬಿಸಿಗೊಂಡಿತ್ತು. ಆಕೆ ಹಾಸುಗೆಯನ್ನು ಸೇರುವಾಗ ಪ್ರಭಾಕರ ನಿದ್ದೆಮಾಡದೆ ಕಾದಿದ್ದ. "ಯಾರಮ್ಮ ಅದು? ನಿನಗೆ ಗೊತ್ತೇ ಇಲ್ಲವೆ? ಗೊತ್ತಿಲ್ಲದವರಾದರೆ ಇಷ್ಟು ಹೊತ್ತು ಮಾತನಾಡುತ್ತೀಯ" ಎಂದು ಕಾಡತೊಡಗಿದ.

"ಮಲಗು ಮಗು. ಸಾಕು ನಿನ್ನ ಅಧಿಕಪ್ರಸಂಗ" ಎಂದು ಗದರಿಸ ಬೇಕಾಯಿತು ಆಕೆ. ತಾನೂ ಮಲಗಿಕೊಂಡಳು. ಅವಳ ಮನಸ್ಸು ವಿಚಿತ್ರವಾದ ಯೋಚನಾ ಪ್ರವಾಹವಾಗಿ ಹರಿಯತೊಡಗಿತು. ಮಾಧು ತೋರಿಸಿದ ಹಣದ ಆಸೆ ಅವಳನ್ನು ಕಾಡಲಿಲ್ಲ. ಅವನಾಡಿದ ಮಾತುಗಳು ಸುಳ್ಳಿರಬಹುದೆಂದೂ ಅವಳಿಗೆ ಅನಿಸಲಿಲ್ಲ. ನೆರೆಯೂರಾದ ಅಂಕೋಲೆಯಿಂದ ಹೋದ ಜಾನಕಿ ಮುಂಬಯಿಯಲ್ಲಿ ಮಧುಬಾಲೆ ಎನಿಸಿ, ತಿಂಗಳಿಗೆ ನಾಲ್ಕೈದು ಸಾವಿರ ಗಳಿಸುತ್ತಿದ್ದಾಳೆಂದು ಅವಳು ಕೇಳುತಿದ್ದಾಳೆ. ಹಣದ ಹೊಂಗನಸು ಅವಳನ್ನೆಂದೂ ಮರುಳುಮಾಡಿಲ್ಲ. ಅವಳ ತಲೆಯಲ್ಲಿ ಒಮ್ಮೆಗೆ ಚೇತನಗೊಂಡ ಭಾವನೆಯೆಂದರೆ–"ನನ್ನ ಬಾಳಿನಲ್ಲಿ ಇಲ್ಲದ ಒಂದು ಆಸೆ ಹುಟ್ಟಿಸಿ, ಸಲ್ಲದ ಒಂದು ಬಂಧನ ಬೆಳೆಸಿ, ಯಾವುದರ ಗೊಡವೆಯೂ ಇಲ್ಲದೆ ಓಡಿಹೋದ ಈ ವ್ಯಕ್ತಿಯು, ತಿರುಗಿ ತನ್ನನ್ನು ಹುಚ್ಚು ಕಟ್ಟಿಸುವುದಕ್ಕೆ ಬಂದಿದ್ದಾನೆಲ್ಲ" ಎಂಬುದಾಗಿತ್ತು. ಒಂದಿಷ್ಟು ಹೊತ್ತು, ಮನಸ್ಸು ಅವನನ್ನು ನೆನೆಯುತ್ತ ಹೋದ ಹಾಗೆ ಅಷ್ಟಷ್ಟು ತೀವ್ರವಾಯಿತು; ಒರಟಾಯಿತು. ಆದರೆ ಅವಳ ಅಂತರಂಗದಲ್ಲಿ ಹುದುಗಿದ ದೌರ್ಬಲ್ಯ, ಹಸಿದ ಕಾಂಕ್ಷೆ, ಮೆಲ್ಲಗೆ ಅರಳತೊಡಗಿತು: "ಎಂದೂ ಬಾರದವರು ಇಂದು ಬಂದಿದ್ದಾರೆ. ತನ್ನನ್ನು ಮುಂಬಯಿಗೆ ಕರೆದೊಯ್ದಾರು. ರಸಹೀನವಾದ ತನ್ನ ಬಾಳು ಅವರ ಸ್ನೇಹದಿಂದಲಾದರೂ ಸವಿಗೊಂಡೀತು" ಎಂದು ಗಂಡಿನ ಬಯಕೆ ಆ ಹೆಣ್ಣು ಹೃದಯವಲ್ಲಿ ಮೂಡತೊಡಗಿತು. ಅದನ್ನೆಣಿಸಿದಂತೆ-ಹೊರಗಿನ ಕದ ತಟ್ಟುತ್ತಿದ್ದಂತೆ, ಮೆಲು ಧ್ವನಿಯಲ್ಲಿ 'ಗುಲಾಬಿ' ಎಂದು ಸಂಭೋದಿಸುವಂತೆ-ಅನಿಸತೊಡಗಿತು. ಎದ್ದು ಕುಳಿತಳು. ಕದವನ್ನು ತೆರೆಯಲೇ ಎಂದು ಅನಿಸಿತು; ರೋಮಾಂಚವಾಯಿತು. ಮಗು ಕೇಳಿದ ಪ್ರಶ್ನೆ ಅವಳನ್ನು ಚುಚ್ಚಿತು. 'ನಿನ್ನ ತಂದೆ' ಎಂದು ಸಂತೋಷ

ದಿಂದ ನುಡಿಯಬೇಕಾದ ಮಾತನ್ನು ಸಿಟ್ಟಿಂದ ಹೇಳಬೇಕಾಗಿಬಂದ ದುರ್ವಿಧಿಯನ್ನು ನೆನೆದಳು. ಇಷ್ಟುದಿನ ಅಂಥ ಸಂಕೋಚ, ಚಿಂತೆ, ನೋವುಗಳನ್ನು ತಾನೂ,ತನ್ನ ಮಗುವೂ ಅನುಭವಿಸಿರುವುದು ಸಾಲದೆ? ಇನ್ನೂ ಒಮ್ಮೆ ಅಂಥ ಪ್ರಸಂಗವನ್ನು ತಂದು ಕೊಳ್ಳಬೇಕೆ? ಅವನ ಹೃದಯದಲ್ಲಿರುವ ಕರುಣೆಯು ಎಷ್ಟೆಂದು ಅಳೆಯುವುದಕ್ಕೆ, ತನಗೆ ಪರಿಚಿತಳಾದ ಸುಂದರಿಯ ಮಕ್ಕಳನ್ನು ನೋಡಿದರೆ ಸಾಲದೆ?" ಎಂದೆಲ್ಲ ತೋರಿತು. ಆದರೂ ಭ್ರಮೆಗೊಂಡ ಅವಳ ಮನಸ್ಸಿಗೆ–ಮಾಧು ಇನ್ನೂ ಇನ್ನೂ ಕದ ತಟ್ಟುತಿದ್ದಂತೆ, ತನ್ನನ್ನು ಕರೆಯುತಿದ್ದಂತೆ ಅನಿಸತೊಡಗಿತು. ಅಲ್ಲಿಯೇ ಕುಳಿತಿರಲಾರದೆ, ತನ್ನ ಮನಸ್ಸನ್ನು ತನ್ನ ಹದ್ದಿನಲ್ಲಿರಿಸಿಕೊಳ್ಳಲಾರದೆ, ಇದಿರಾಗುವ ಆಪತ್ತನ್ನು ತಡೆಯಲಾರದೆ ಅಲ್ಲಿಂದೆದ್ದಳು. ಹಿಂದಣ ಬಾಗಿಲಿನ ಕದ ತೆರೆದು ನೆಟ್ಟಗೆ ಹೊರಕ್ಕೆ ಬಂದಳು. ಪಿಶಾಚಿಯ ನಡಿಗೆಯಿಂದ, ಅದೇ ಬೀದಿಯಲ್ಲಿ ನೂರು ಗಜ ದೂರವಿರುವ ಶಿವಪ್ಪನವರ ಮನೆಗೆ ಹೋಗಿ ಕದತಟ್ಟಿ "ಇಂದಮ್ಮ, ಇಂದಮ್ಮ" ಎಂದು ಕೂಗಿ ಕರೆದಳು. ಇಂದುವಿಗೆ ಎಚ್ಚರವಾಯಿತು; ಶಿವಪ್ಪನವರಿಗೂ ಎಚ್ಚರವಾಯಿತು. ಗುಲಾಬಿಯ ಕಾತರ ಧ್ವನಿಯನ್ನು ಕೇಳಿ "ಯಾರು, ಗುಲಾಬಿಯೇ, ಏನಾಯಿತು, ಏನಾಯಿತು?" ಎಂದು ಕೇಳುತ್ತ ಹೊರಗೆ ಬಂದರು. ದೀಪ ಹಚ್ಚಿದರು.ಏನಾಯಿತೆಂದು ಹೇಳುವುದಕ್ಕೂ ಭೀತಳಾಗಿದ್ದಳು ಆಕೆ. ಕೊನೆಗೆ "ಮಾಧವ ರಾಯರು ಬಂದಿದ್ದಾರೆ. ನನಗೆ ಒಳಗಿರುವುದಕ್ಕೆ ಹೆದರಿಕೆಯಾಯಿತು. ಓಡಿ ಬಂದೆ" ಎಂದಳು. ಅವಳ ಮೈ, ಮುಖಗಳಿಂದ ಬೆವರಿಳಿಯುತಿತ್ತು. ಬಂದೊದಗಿದ ಈ ಹೊಸ ವಿಪತ್ತನ್ನು ಬಣ್ಣಿಸಿ, ಮನಸ್ಸಿಗೆ ಸಮಾಧಾನ ತಂದುಕೊಳ್ಳುವ ತನಕ, ಅವಳು ಅವಳವಳಾಗಿರಲಿಲ್ಲ.

------

# ಅಧ್ಯಾಯ ೧೧.

ಕಾಳೂರಿನ ಭವಿಷ್ಯ ಭರತಖಂಡದ ಇತರ ಊರುಗಳಂತೆಯೆ ಮಹಾ ಯುದ್ಧದ ಪರಿಣಾಮದಿಂದ ಬದಲಿಸಿತೆನ್ನಬೇಕು. ಅನೇಕರಿಗೆ ಯುದ್ಧವು ಮುಗಿದು ಶಾಂತಿಯು ಬಂದರೆ ಸಂತೋಷ. ಬೆಲೆಗಳು ಇಳಿದಾವು, ತಿರುಗಿ ಮೊದಲಿನ ದಿನಗಳು ಬಂದಾವು ಎಂದು ಮಿತ ವರಮಾನಗಳುಳ್ಳ ಜನ ಗಳು ಯೋಚಿಸಿದರೆ, ವಿಕ್ರಯಗಾರರು, ಉತ್ಪನ್ನಕಾರರು ಆ ಪರಿಸ್ಥಿತಿಗೆ ಬೆದರುತ್ತಿದ್ದಾರೆ. ಒಮ್ಮೆಗೆ ಧಾರಣೆಗಳು ತಲೆಕೆಳಗಾಗಿ ತಮ್ಮ ಆರ್ಥಿಕ ಜೀವನ ಹೊಂಡಕ್ಕಿಳಿದೀತು ಎಂದು ಬೆದರಿಕೊಂಡಿದ್ದಾರೆ. ಆದರೆ ಅಂಥ ಭೀರುಗಳು ಸಹ, ಬಂದ ಶಾಂತಿಗಾಗಿ ಹೆದರಬೇಕಿಲ್ಲವಾಯಿತು. ಆ ಶಾಂತಿ ನಿಜವಾದ ಶಾಂತಿಯಾಗಿರಲಿಲ್ಲ. ಜನಜೀವನದ ವಾತಾವರಣ ಅಶಾಂತವಾಗಿಯೇ ಇತ್ತು. ಯುದ್ಧ ನಿಂತ ಮೇಲೆಯೆ ಜೀವನದ ಅವಶ್ಯಕತೆಗಳ ಬೆಲೆ ಏರುತ್ತ ಹೋಗುವು ದನ್ನು ಕಂಡು ಅನೇಕರಿಗೆ ಅದರ ಅರ್ಥವೇ ಗೋಚರಿಸಲಿಲ್ಲ. ಏನೇ ಆಗಲಿ- ಕೆಲವೊಂದು ಬಗೆಯ ಜನಗಳಿಗೆ ಅದು ಸಂಪತ್ತಿನ ದಾರಿತೋರಿಸಿಕೊಟ್ಟಿದೆ. ಅದಕ್ಕೂ ಹೆಚ್ಚಿನ ಜನಸಂಖ್ಯೆಯನ್ನು ಅಧೋಗತಿಗಿಳಿಸಿದೆ. ಆರ್ಥಿಕ ವಿಪ ತ್ತಿನಿಂದ ಅಳುವವರ ಸಂಖ್ಯೆ ಊರಲ್ಲಿ ಹೆಚ್ಚಾಗ ತೊಡಗಿದ್ದು ನಿಜ. ಆದರೆ ಆಹಾರ ವಸ್ತುಗಳಿಗೆ ಒಳ್ಳೆಯ ಬೆಲೆ ಬರತೊಡಗಿದಾಗ ಬೇಸಾಯಗಾರರಿಗೂ ಹಣದ ಸುಗ್ಗಿಯ ಕಾಲ ಬಂದಂತೆ ಅಲ್ಲವೆ? ಅದರಿಂದ ಕಾಳೂರಿನ ಸುತ್ತು ಮುತ್ತಲಿನ ಹಳ್ಳಿಯ ಜನ ಪೇಟೆಗೆ ಬಂದರೆ ಮೊದಲಿನಂತಿಲ್ಲ. ರೂಪಾಯಿ, ವರಹ ತೆಗೆಯಲು ಹಿಂದು ಮುಂದೆ ನೋಡುತ್ತಿದ್ದವರು, ನೂರರ ನೋಟು ಗಳನ್ನೇ ಈಗ ಹೊರಕ್ಕೆ ತೆಗೆಯುತ್ತಾರೆ. ತಾಮ್ರದ ಪಾತ್ರೆಗಳ ಅಂಗಡಿಯನ್ನು ಹೊಕ್ಕರೆ ಖಂಡಿಗಟ್ಟಲೆ ಪಾತ್ರೆ, ಪರಡಿಗಳನ್ನು ಖರೀದಿ ಮಾಡುತ್ತಾರೆ. ಅರಿ ವೆಯ ಬೆಲೆ ಒಂದಕ್ಕೆ ನಾಲ್ಕು ಎಂದು ಗೊಣಗುತ್ತಿದ್ದರೂ, ಒಂದಕ್ಕೆ ಆರು ಬೆಲೆ ಕೊಟ್ಟು, ಕೊಳ್ಳಲು ತೊಡಗಿದ್ದಾರೆ.

ಯುದ್ಧದ ಕಾಲದಲ್ಲಿ ಅಂಗಡಿಕಾರರು ಧನ್ಯರೆನಿಸಿದಂತೆ ಇಂದು ಹೊಲ ಮನೆಗಳುಳ್ಳವರು ಧನ್ಯರೆನಿಸತೊಡಗಿದರು. 'ಈ ಧಾರಣೆ, ಈ ಬೆಲೆಗಳನ್ನು ಕೊಟ್ಟು ಬಡ ಶ್ರಮಗಾರರು ಬದುಕುವುದುಂಟೆ' ಎಂದು ಕಣ್ಣೀರಿಡುವವರು ಕೂಡ ಇಂದು ಅಷ್ಟು ಮರುಗುತ್ತಿಲ್ಲ. ಅವರವರ ಉತ್ಪನ್ನಗಳಿಗೆ, ಸೇವೆ

ಗಳಿಗೆ, ಅವರವರು ಮನಸ್ಸಿಗೆ ಬಂದ ಬೆಲೆ ಹೇಳುವ ಸ್ವಾತಂತ್ರ್ಯಗಳಿಸಿದ್ದಾರೆ. ಇನ್ನೊಂದು ಜನ ವರ್ಗವುಂಟು. ಮಿತವಾದ ಸಂಬಳದಿಂದ ಜೀವನ ಹಿಡಿಯುತ್ತಿದ್ದ ನೌಕರ ವರ್ಗವದು. ಕನಿಕರವಿದ್ದವರು ಅವರಿಗಾಗಿ ಮರುಗುವುದುಂಟು.

ಕಾಳೂರಿನ ಮಟ್ಟಿಗೆ ಹೇಳುವಲ್ಲಿ, ಅವರ ಸಂಭ್ರಮಕ್ಕೂ ತೊಂದರೆ ಯಾವಂತೆ ಕಾಣುವುದಿಲ್ಲ. ಗ್ರಾಮದ ಉಗ್ರಾಣಿ ಹೊಸ ಮನೆ ಕಟ್ಟುವುದಕ್ಕೆ ಇದೇ ಕಾಲ ಎಂದು ತಿಳಿದಿದ್ದಾನೆ. ಊರ ಶ್ಯಾನುಭಾಗರು ಕಷ್ಟಕಾಲವೆಂದು ಹೇಳ ಹೇಳುತ್ತ, ತಮ್ಮ ಮನೆಯ ಹುಲ್ಲಿನ ಛಾವಣಿ ಕಿತ್ತು, ಹಂಚು ಹೊದೆಸಿದ್ದಾರೆ. ಹಾಗೆ ಮನೆ ಕಟ್ಟಿಸುವ ಗಲಭೆಗೆ ಹೋಗದವರೆಂದರೆ "ಈ ಊರು ನಮಗೆ ಶಾಶ್ವತವೇ?'ಎಂದು ತಿಳಿದ ನೌಕರವರ್ಗ. ಅವರು "ಏನಿದು ಸಂಬಳ, ಏನಿದು ತುಟ್ಟಿ ಭತ್ತೆ!" ಎಂದು ಗುರುಗುರಿಸುತಿದ್ದಾರೆ. ಆದರೆ ನಿಜಕ್ಕೂ ಅವರು ಈ ಎರಡನ್ನೇ ಹೊಂದಿ ಬಾಳುವುದಾಗಿದ್ದರೆ ಕಾಳೂರಿನ ಶ್ಮಶಾನದ ಗಡಿಯನ್ನು ಎಂದೇ ದಾಟುತಿದ್ದರು. ಎಷ್ಟೋ ಬಡ ನೌಕರರು, ಗುಮಾಸ್ತರು, ಕಿರಿಯ ಉದ್ಯೋಗಸ್ಥರು, ತಮ್ಮ ಬಡತನದ ಜೀವನ ನಡೆಯಿಸಿಯೂ, ದಿನಕ್ಕೆ ಒಂದೆರಡು ರೂಪಾಯಿಗಳನ್ನು ಕಾಫಿಗೂ, ಸಿಗರೇಟಿಗೂ ವೆಚ್ಚ ಮಾಡುತ್ತಿದ್ದಾರೆ. ಅಂತೂ ಬಹುಜನ, ತಮ್ಮನ್ನು ಬಿಟ್ಟು 'ಉಳಿದ ಜನ ವರ್ಗವೆಲ್ಲ ಯುದ್ಧದಿಂದ ಉದ್ಧಾರವಾಯಿತು' ಎನ್ನುವ ಮಾತುಕತೆ ಕೇಳಿಸ ತೊಡಗಿದೆ.

ಇಂದುಮತಿ, ತನ್ನ ಚಿಕ್ಕ ಸಂಸಾರದಲ್ಲಿಯೂ, ಅರ್ಥವಾಗದಂತಹ ವಿಚಿತ್ರ ನಡತೆಯನ್ನು ಜನರಲ್ಲಿ ಕಾಣುತಿದ್ದಾಳೆ. ಗಂಡನು ಮೊದಲಿಗಿಂತಲೂ ಹೆಚ್ಚಾಗಿ ದುಡಿದು ತಂದು ಅವಳ ಕೈಗೆ ಹಣ ಕೊಡುತಿದ್ದಾನೆ. ಇಬ್ಬರು ಮಕ್ಕಳು, ತಾನು, ತನ್ನ ಪತಿ, ಇನ್ನೊಬ್ಬ ಪರಿಚಾರಕ-ಐದು ಮಂದಿ ಕೂಡಿದ ಸಂಸಾರಕ್ಕೆ ವೆಚ್ಚಮಾಡಿದಷ್ಟು ಸಾಕಾಗುವುದಿಲ್ಲವಲ್ಲ ಎಂದುಕೊಳ್ಳುತ್ತಾಳೆ. ಕೈಗೆ ಬಂದ ಹಣ ಕರಗುವುದು ಕಾಣಿಸುತ್ತದೆ. ತಂದುದು ಕಾಣುವುದಿಲ್ಲ, ಕೊಟ್ಟುದೂ ಕಾಣುವುದಿಲ್ಲ. ಮನೆಗೇನೆ ಮುನ್ನೂರು ರೂಪಾಯಿ ವೆಚ್ಚವಾಗುತ್ತಿರುವಾಗ, ಅದರಿಂದ ಸುಖ ಕಾಣಿಸದಿರುವಾಗ, ಅದಕ್ಕೂ ಕಡಿಮೆ ಆದಾಯವುಳ್ಳವರ ಸಲುವಾಗಿ ಆಕೆ ಮರುಗುವುದುಂಟು. ಮನೆಗೆ ಬರುವ ತರಕಾರಿ ಮಾರುವವಳೋ, ಹಾಲು ಮಾರುವವಳೋ, ಇನ್ನಾರೋ ತಂತಮ್ಮ

ಸುಖದುಃಖ ಅವಳಲ್ಲಿ ಹೇಳಿಕೊಳ್ಳುವುದುಂಟು. "ಅಮ್ಮ, ಈಗಿನ ದಿವಸದಲ್ಲಿ ಬಡವರಾಗಿ ಹುಟ್ಟುವುದು ಒಂದು ಪಾಪ ಮಾಡಿದ ಹಾಗೆ; ಏನು ಕಷ್ಟ ಅನ್ನುತ್ತೀರಿ. ಅವರು ಕೊಡುವ ರೇಷನ್ ಸಾಕಾಗುವುದಿಲ್ಲ. ಹೊರಗಿನ ಅಕ್ಕಿ ತಂದರೆ ರೂಪಾಯಿಗೆ ಸೇರು. ಬದುಕಬೇಕು ಎಂದರೆ ಹ್ಯಾಗೆ?" ಎಂದು ಕಾವೇರಿ ಹೇಳುತ್ತಾಳೆ. ಇಂದುಮತಿ ಹೊತ್ತಾಯಿತೆಂಬು "ಅದಿರಲಿ ಕಾವೇರಿ, ನಿನ್ನ ಹತ್ತಿರ ಮಾತನಾಡುತ್ತ ಕುಳಿತರೆ ಅಡುಗೆಯಾಗಬೇಡವೆ? ಮೆಣಸಿನ ಕಾಯಿ ದರ ಹೇಗೆ? ಬೆಂಡೆಕಾಯಿಗೆ ಹೇಗೆ?" ಎಂದು ಕೇಳಿದರೆ "ಇದೇನು ಈವತ್ತು ಹೊಸತು? ನೀವು ಇವತ್ತಿನ ಗಿರಾಕಿಯೆ! ನಿಮಗೊಂದು ಹೆಚ್ಚಿನ ಕ್ರಯ ಹೇಳುತ್ತೇನೆಯೋ? ಬೆಂಡೆಕಾಯಿ ಒಂದಕ್ಕೆ ಪಾವಾಣೆ, ಹಸಿಮೆಣಸು ನೂರಕ್ಕೆ ನಾಲ್ಕಾಣೆ. ನಿಮಗೆಷ್ಟು ಬೇಕು? ಇಲ್ಲಿ ಹಾಕಲೆ" ಎಂದು ಎಣಿಸಿಹಾಕಿ, ಹಣ ಕೊಂಡುಹೋಗುವುದುಂಟು. ಅದನ್ನು ಕೊಂಡ ಇಂದುಮತಿಗೆ ಒಮ್ಮೊಮ್ಮೆ ಹೊಳೆಯುತ್ತದೆ-"ಈ ಕಾವೇರಿ ಎರಡಾಣೆ ಬೆಲೆಯ ಅಕ್ಕಿ ಸೇರಿಗೆ ರೂಪಾಯಿಯಾದುದಕ್ಕೆ, ಅಕ್ಕಿ ಬೆಳೆಯುವವರಿಗೆಲ್ಲಾ ಶಾಪ ಕೊಡುತ್ತಿದ್ದಾಳೆ. ಇವಳ ತರಕಾರಿಯ ದರ! ನೂರಕ್ಕೆ ಅರ್ಧಾಣೆಯಿದ್ದ ಹಸಿಮೆಣಸಿಗೆ ಈಗ ನಾಲ್ಕಾಣೆ. ಕಟ್ಟಿಗೆ ಕಾಲಾಣೆಯಿದ್ದ ಬೆಂಡೆಕಾಯಿಗೆ ಒಂದಕ್ಕೆ ಕಾಲಾಣೆ." ಅವಳು ಧಾರವಾಡದಿಂದ ಆ ಊರಿಗೆ ಬಂದಾಗ, ಕಾಲಾಣೆ ಕೊಟ್ಟು ಹದಿನೆರಡು ಬೆಂಡೆಕಾಯಿಗಳನ್ನು ಕೊಂಡ ದಿವಸಗಳು ನೆನಪಿಗೆ ಬರುತ್ತವೆ. "ಕಾವೇರಿ ತರಕಾರಿ ಕೊಳ್ಳುವವಳಲ್ಲ; ಅಕ್ಕಿಯನ್ನು ಮಾತ್ರ ಕೊಳ್ಳುವವಳು. ನಾವು ಅಕ್ಕಿಯನ್ನೂ ಕೊಳ್ಳಬೇಕು; ತರಕಾರಿ, ಕಟ್ಟಿಗೆ, ಹಾಲು ಎಲ್ಲವನ್ನೂ ಕೊಳ್ಳಬೇಕಲ್ಲವೆ?" ಎಂದು ಅವಳು ತನ್ನಷ್ಟಕ್ಕೆ ಎಣಿಸುವುದುಂಟು.

ಕಾದಾಡುವ ಯುದ್ಧ ಭೂಮಿಗಿಂತ ರೇಶನ್ ಎಂಬುದು ಬಂದ ಮೇಲೆ ಜನಗಳ ಗೋಳು ಇನ್ನಷ್ಟು ಹೆಚ್ಚಾಯಿತು. ಊರಿನ ಒಳ್ಳೆಯ ಅಕ್ಕಿ ಪರವೂರಿಗೆ ಹೋಗಿ 'ನಾಯಿ ಮೂಸಲಾರದ ಅಕ್ಕಿ ತಮ್ಮೂರಲ್ಲಿ ಹಂಚುತಿದ್ದಾರೆ' ಎಂಬ ಕೂಗು ಕೇಳಿಸತೊಡಗಿತು. ಆ ರೇಶನ್ ಅಕ್ಕಿಯ ವಿಚಾರದಲ್ಲಿ ಜನರ ನಾಲಿಗೆಯೇ ತಡೆಯುವುದಿಲ್ಲ; ಅದನ್ನು ಬಯ್ದರೆ ಸಾಕೆನಿಸುವುದಿಲ್ಲ. ತಾವೇ ಕುಟ್ಟಿ, ಅಕ್ಕಿಮಾಡಿ ತಿಂದವರು, ಕೊಂಡ ಅಕ್ಕಿ ತೊಳಸಿ ತಿಂದವರು, ಇದ್ದುದರಲ್ಲಿ ಉತ್ಕೃಷ್ಟ ಅಕ್ಕಿ ಆಯ್ದು ತಿಂದವರು— ಎಲ್ಲರ ನಾಲಗೆಯೂ ಬಯ್ಗುಳಿಗೆ ತಿದ್ದಿ ಹರಿತವಾಗಿದೆ. ಅವರು ರೇಶನ್ ಅಕ್ಕಿ

ಯನ್ನು ಕುರಿತು ಶಾಪ ಕೊಡುತ್ತಲೇ ಇದ್ದಾರೆ.

ಇಂದುಮತಿಯ ಮನೆಗೆ ಬರುವ ಮಾಚಿ ಆ ವಿಚಾರದಲ್ಲಿ ಅಗ್ರಗಣ್ಯೆ. ಅವಳ ಮಾತನ್ನು ಕೇಳಿದರೆ ಸಣ್ಣಕ್ಕಿಯನ್ನು ತಿಂದೇ ಬೆಳೆದವಳ ಹಾಗೆ ಕಾಣುತ್ತದೆ.

"ಅಮ್ಮ, ಏನು ಮಾಡುತ್ತಿದ್ದೀರಿ?"

"ನಿನ್ನ ರೇಶನ್ ಅಕ್ಕಿಯಲ್ಲಿರುವ ಬತ್ತ ಹೆಕ್ಕುತ್ತಾ ಇದ್ದೇನೆ. ಹೆಕ್ಕಿ, ಹೆಕ್ಕಿ ಸಾಕಾಯಿತು" ಎಂದು ಹೇಳುತ್ತಾಳೆ ಇಂದು.

"ಅಯ್ಯೋ, ಈ ರೇಶನ್ ಅಕ್ಕಿ ನಾಯಿಗೆ ಕೊಟ್ಟರೂ ಬೇಡ. ಅದರಲ್ಲಿ ಕಲ್ಲೆಷ್ಟು, ಬತ್ತವೆಷ್ಟು? ಸಾಲದುದಕ್ಕೆ ನಾಲ್ಕು ಜಾತಿಯ ಅಕ್ಕಿಗಳು ಬೆರೆತಿರುತ್ತವೆ. ನಮ್ಮ ಗವರ್ಮೆಂಟ್ ಸರಕಾರಕ್ಕೆ ಸಿಗುವ ಅಕ್ಕಿಯೇ ಇಂಥದೇನು? ಇಷ್ಟೆಲ್ಲ ಸಂಬಳ ತಿನ್ನುವ ನೌಕರರಿದ್ದಾರಲ್ಲ. ಒಂದಿಷ್ಟು ಚೆನ್ನಾದ ಅಕ್ಕಿ, ಕಲ್ಲು ಮಣ್ಣು ಬೆರಸದೆ ಇದ್ದದ್ದು, ಯಾವುದೆಂದು ಹುಡುಕಿಕೊಳ್ಳುವುದಕ್ಕೆ ಆಗುವುದಿಲ್ಲವೆ?"

"ಹಾಗಲ್ಲ ಮಾಚಿ, ನಮ್ಮವರು ಅನ್ನುತ್ತಾರೆ–ಸರಕಾರಕ್ಕೆ ಲೇವಿ ಅಕ್ಕಿಯನ್ನು ಕೊಡುವುದಕ್ಕೆ ಜನರಿಗೆ ಇಷ್ಟವಿಲ್ಲ. ಊರಲ್ಲಿಯೇ ಕದ್ದು ಮಾರಿದರೆ ಸೇರಿಗೆ ರೂಪಾಯಿ ಸಿಗುವಾಗ, ರೂಪಾಯಿಗೆ ಮೂರು ಸೇರಿನ ಹಾಗೆ ಸರಕಾರಕ್ಕೆ ಕೊಡುವುದಕ್ಕೆ ಮನಸ್ಸು ಬಂದೀತೆ? ಅದಕ್ಕೇನೆ ಕಲ್ಲು, ಮಣ್ಣು, ಬತ್ತ ಸೇರಿಸಿ ಲೆಕ್ಕಕ್ಕೆ ಭರ್ತಿಮಾಡುವುದು. ಗಾದೆಯೇ ಇದೆಯಲ್ಲ–ಕರಕರೆ ದೇವರಿಗೆ ಮರದ ಜಾಗಟೆ ಎಂದು".

"ಹಾಗಲ್ಲಮ್ಮ. ಎಲ್ಲೆಲ್ಲೂ ಈಗಿನ ದಿನಗಳಲ್ಲಿ ಅನ್ಯಾಯ ಹೆಚ್ಚಿದೆ; ನ್ಯಾಯವೆಂಬುದೇ ಇಲ್ಲ. ಮೊನ್ನೆ ನಮ್ಮ ತಿಮ್ಮಯ್ಯ ಸಾಹುಕಾರರ ಅಂಗಡಿಯಿಂದ, ಅಳಿಯ ಬಂದಿದ್ದಾನೆ, ಎಂದು ಒಂದು ರೂಪಾಯಿ ಕೊಟ್ಟು, ಕಡಿಮೆಯಲ್ಲ ಏನಲ್ಲ, ಸೇರು ಬೇಳೆ ತೆಗೆದುಕೊಂಡು ಹೋದೆ. ಅದನ್ನು ಕೊಡುವಾಗ ಹೇಳಿದರು 'ಕಾನುಪುರಿ ಬೇಳೆ, ಅವ್ವಲ್. ಯುದ್ಧದ ಸಮಯದಲ್ಲಿ ಕಾಣುವುದಕ್ಕಿರಲಿಲ್ಲ. . . . . . ಹಾಗೆ ಹೀಗೆ' ಎಂದು. ಹೌದೆಂದು ನಂಬಿ ಮನೆಗೆ ತೆಗೆದುಕೊಂಡು ಹೋದೆ. ನೀರಲ್ಲಿ ಹಾಕುತ್ತಲೇ ಒಂದಿಷ್ಟು ಅರಸಿನ ರಂಗು ಬಿಟ್ಟಿತು. ಬೇಯಿಸಲಿಕ್ಕೆ ಇಟ್ಟರೆ, ಒಂದು ಗಾಡಿ ಕಟ್ಟಿಗೆ ಸುಟ್ಟರೂ ಬೇಯಲಾರದು. ಬಾಯಿಗೆ ಹಾಕಿ ಜಗಿದರೆ ಅದು ತೊಗರಿಬೇಳೆಯ ಕುಲ

ದಲ್ಲೇ ಹುಟ್ಟಿದ್ದಲ್ಲ."

"ಹೌದಪ್ಪ, ಏನು ತಂದರೂ ಈಗಿನ ದಿವಸದಲ್ಲಿ ಸಿಕ್ಕು ಸಿಕ್ಕಿದ್ದನ್ನು ಬೆರೆಸುತ್ತಾರೆ. ಕೊಳ್ಳದೆ ಬೇರೆ ಗತಿಯಿಲ್ಲ" ಎಂದು ಇಂದುಮತಿ ನುಡಿದಳು. ಮಾಚಿ ಇನ್ನಷ್ಟು ಹೊತ್ತು ಕುಳಿತು, ಲೋಕದ ಅನ್ಯಾಯಕ್ಕೆ ಸಾವಿರ ನಿದರ್ಶನಗಳನ್ನು ಕೊಟ್ಟುಹೋದಳು. ಹೊರಡುವಾಗ ಇಂದಮ್ಮ "ಮಾಚಿ, ಮಾತಿನಲ್ಲಿ ತುಪ್ಪ ಬೇಕೆನ್ನುವುದಕ್ಕೆ ಮರೆತು ಬಿಟ್ಟೆ. ಇದೆಯೇ ಮನೆಯಲ್ಲಿ? ಮನೆಯಲ್ಲೆ ಕಾಯಿಸಿದ್ದಾಗಿರಬೇಕು. ದರ ಹೇಗೆ? ಇದ್ದಷ್ಟು ಸಾಕು. ನೀನು ಆಚೀಚಿನಿಂದ ಭರ್ತಿಮಾಡುವುದಕ್ಕೆ ತಂಪು ಹಾಕುವುದು ಬೇಡ" ಎಂದುದಕ್ಕೆ, ಮಾಚಿ ತಮ್ಮ ಮನೆಯ ತುಪ್ಪವನ್ನಿಷ್ಟು ಬಣ್ಣಿಸಿದಳು. ಅರ್ಧ ಬೇಳೆ ತುಪ್ಪ ತರುತ್ತೇನೆಂದು ವಾಗ್ದಾನ ಮಾಡಿಹೋದಳು. ಮರುದಿನ ಮಾತಿನಂತೆ ತುಪ್ಪ ತಂದಳು; ಇಂದಮ್ಮನ ಕೈಗೆ ಸವರಿದಳು, 'ಫರಮಾಶಿ ತುಪ್ಪ' ಎಂದು ಹೊಗಳಿದಳು. ಇಂದಮ್ಮನ ಗ್ರಹಗತಿಗೆ ಸರಿಯಾಗಿ ಮಾಚಿ ಕೊಟ್ಟುಹೋದ ಫರಮಾಶಿ ತುಪ್ಪವು, ಕಾವು ಇಳಿದ ಮೇಲೆ ಹೆರೆಗಟ್ಟಲೇ ಇಲ್ಲ. ಅದು ಅರ್ಧಕ್ಕರ್ಧ ಎಣ್ಣೆ ಬೆರಸಿದ ನಾತ ಕೊಡುವ ಗಾಂವಟಿ ತುಪ್ಪವಾಗಿತ್ತು.

ಮಾಚಿಯೇ ಇಂದಮ್ಮನ ಮನೆಗೆ ಹಾಲು ತಂದುಕೊಡುವುದುಂಟು. ಅಷ್ಟೆಲ್ಲ ಸತ್ಯವಂತೆಯಾದ ಅವಳು ಹಾಲಿಗೆ ಕ್ರಮಪ್ರಕಾರದ ನೀರು ಸೇರಿಸದೆ ಮಾರುವುದೆಂಬುದೇ ಇಲ್ಲ. ಅಂಥ ತೆರತೆರನ ಜನಗಳಿಂದ ಕೂಡಿದ ಕಾಳೂರು ದಿನ ದಿನ ಅಭಿವೃದ್ಧಿ ಹೊಂದುತ್ತಲಿದ್ದು, ಅದು ಇಂದೋ ನಾಳೆಯೋ ಪೂರ್ವಯುಗದ ಹೆಸರನ್ನು ಗಳಿಸಿದರೆ ಆಶ್ಚರ್ಯವಿಲ್ಲ.

ಊರಲ್ಲಿ ಹಲವಾರು ಹೊಸಮನೆಗಳಾಗಿವೆ. ಪೇಟೆಯ ಮುಖ್ಯ ಬೀದಿಯು ಲಕ್ಷಣವಾದ ಅಂಗಡಿಗಳಿಂದ ಕೂಡಿದೆ. ಮೊದಲಿಗಿಂತ ಎಷ್ಟೋ ಪಾಲು ಜನನಿಬಿಡವಾಗಿದೆ. ಹಳೆಯ ಪೇಟೆಯು ಬೆಳೆದು, ಬೆಳೆದು, ಉತ್ತರ ದಕ್ಷಿಣದಲ್ಲಿ ಅರ್ಧ ಮೈಲು ದೂರದಷ್ಟು ವಿಸ್ತರಿಸಿದೆ. ಅಲ್ಲಿ ಹೊಸತಾಗಿ ಆಗುತ್ತಿರುವ ಮನೆಗಳು, ಅಂಗಡಿಗಳು, ಹೊಟೇಲುಗಳಿವೆ. ವಿಶೇಷ ಧೂಳೆಬ್ಬಿಸಿಕೊಂಡು ಓಡಾಡುವ ಮೋಟರ ವಾಹನಗಳಿಗೂ ಮಿತಿಯಿಲ್ಲ. ಊರಿನ ರೇವು ಹೆಚ್ಚಿನ ಚಟುವಟಿಕೆಯಿಂದ ಕೂಡಿದೆ. ಹೊಸ ಭಂಡಸಾಲೆಗಳು ಎದ್ದಿವೆ. ಮಚ್ವೆ, ಮಂಜಿಗಳ ಬಂದು ಹೋಗುವಿಕೆ ಬೆಳೆದು, ಸಾಮಾನಿನ ಸಾಗಾಟಕ್ಕೆ ಉಗಿ ಹಡಗುಗಳ ಸೌಕರ್ಯ ಕಡಿಮೆಯಾಗಿದ್ದುದರಿಂದ, ಮಚ್ವೆಗಳನ್ನು ಕಟ್ಟುವ

ಉದ್ಯಮವೂ ಪ್ರಾರಂಭವಾಗಿದೆ. ಊರಿನ ನಾಲ್ಕು ಮೂಲೆಗಳಲ್ಲಿ ಹೊಸ ಕಾರ್ಖಾನೆಗಳು ಹುಟ್ಟಿಕೊಂಡಿವೆ. ಕರೀಮ್ ಸಾಹೇಬರೂ, ಅವರ ಸ್ನೇಹಿತರೂ ಕೂಡಿ ನಡೆಸುತ್ತಿರುವ ಮರದ ಗಿರಣಿಯು ಇಂದು ಸುಮಾರು ಮೂರು ಲಕ್ಷ ರೂಪಾಯಿಗಳ ಭಂಡವಳ ತೊಡಕಿಸಿದ 'ಕಾಮಾಕ್ಷಿ ಪ್ಲ್ಯಾಯ್‌ವುಡ್ಸ್' ಕಾರ್ಖಾನೆಯಾಗಿದೆ. ಕುಂಬಾರ ಗುಂಡಿಯಲ್ಲಿದ್ದ ಆದಮ್ ಸಾಹೇಬರ ಕಾರ್ಯಕಲಾಪ, ನಿಂತು ಅವರು ಕಾಳೂರಿನಲ್ಲಿ ಕಾರ್ಖಾನೆ ತೆರೆಯುವವರಿದ್ದಾರೆ. ಯುದ್ಧವು ಕೊಟ್ಟ ಪ್ರೋತ್ಸಾಹದಿಂದ ಕಾಳೂರಿನಲ್ಲಿ ಮೂರು ಹಂಚಿನ ಕಾರ್ಖಾನೆಗಳು ಎದ್ದಿವೆ. ಆ ಪ್ರದೇಶಕ್ಕೇನೆ ಹೊಸದಾಗಿ ತೊಡಗಿದ ಈ ಉದ್ಯಮ, ಆವೆಮಣ್ಣು ಕಟ್ಟಿಗೆಗಳ ಸೌಕರ್ಯದಿಂದಾಗಿ, ತುಂಬ ಲಾಭದಾಯಕವಾದ ಉದ್ಯೋಗವಾಗಿದೆ. ಯುದ್ಧಪೂರ್ವದ ಕಾಳೂರಿನ ಜಡ ಜೀವನಕ್ಕೂ, ಇಂದಿನ ಜನ ಸಂದಣಿ, ನಿತ್ಯ ಚಟುವಟಿಕೆಗಳಿಗೂ ಏನೇನೂ ಸಂಬಂಧವಿಲ್ಲ.

ಒಮ್ಮೆ ಯುದ್ಧವು ನಿಂತು ವಿಶ್ರಾಮ ಬಂದಿತು-ಎಂದೊಡನೆಯೆ ಗಂಪು ಸರದಾರನ ಸವಾರಿ ನಾಲ್ಕು ದಿನಗಳ ಕಾಲ ತಟಸ್ಥವಾಗಿ ಕುಳಿತುಬಿಟ್ಟಿತು. ಹಾಗೆಂದು ಸಾಹಸವಿಲ್ಲದೆ, ಉದ್ಯೋಗವಿಲ್ಲದೆ ಕುಳಿತಿರುವ ಶೀಲ ಅವನದ್ದಲ್ಲ. ಯುದ್ಧದ ಗುತ್ತಿಗೆಗಳು ಮುಗಿದುವೆಂದ ಮಾತ್ರಕ್ಕೆ ಆತ ಸುಮ್ಮನೆ ಕುಳಿತಿರಲಾರ. ಪುನೆಯಲ್ಲಿ, ದೇವಲಾಲಿಯಲ್ಲಿ ಮಿಲಿಟರಿ ವಾಹನಗಳು ಹರಾಜಾಗುತ್ತವೆ ಎಂದು ಕೇಳಿ ಅಲ್ಲಿಗೆ ಧಾವಿಸಿದ. ಒಂದೆರಡು ಲಕ್ಷ ರೂಪಾಯಿಗಳನ್ನು ಚೆಲ್ಲಿದ. "ಕಣ್ಣುಮುಚ್ಚಿ ಚೆಲ್ಲಿದೆ" ಎನ್ನುತ್ತಾನೆ ಅವನೇ. ಹಾಗೆ ಕಣ್ಣುಮುಚ್ಚಿ ಹಣ ಚೆಲ್ಲಿ, ಕಣ್ಣು ಮುಚ್ಚಿ ಕೊಂಡುದನ್ನು ಅಲ್ಲಿಯೇ ಕುಳಿತು, ವಿಭಾಗಿಸಿ, ಚಿಕ್ಕ ಪುಟ್ಟ ರಾಶಿಗಳಾಗಿ ಒಡೆದು, ಮುಕ್ಕಾಲಂಶವನ್ನು ಅಲ್ಲಿಯೇ ವಿಕ್ರಯಿಸಿದ್ದೂ ಆಯಿತು. ಮಾರಿದುದರಲ್ಲೂ ಲಾಭ ಬಂದಿತು. ಉಳಿದುದೆಲ್ಲ ಲಾಭವೇ. ಸರಾಸರಿ ಎರಡು ಸಾವಿರಕ್ಕೆ ಕೊಂಡ ಜೀಪು, ಮೋಟರುಗಳನ್ನು ಅದರ ಇಮ್ಮಡಿ ಬೆಲೆಗೆ ಕಾಳೂರವರಿಗೆ ಮಾರಿದ್ದಾನೆ. ಒಂದಲ್ಲ ಎಂಟು ಜೀಪುಗಳನ್ನು. ದಾರಿಯುದ್ದಕ್ಕೂ ಕೊಲ್ಲಾಪುರ, ಬೆಳಗಾಂವ್ ಎಂದು ನಾಲ್ವತ್ತು, ಐವತ್ತು ಮಿಲಿಟರಿ ವಾಹನಗಳನ್ನು ಮಾರಿದ. ಆ ಎರಡು ವರ್ಷಗಳ ಕಾಲ ಗಂಪುವಿನ ಸವಾರಿ ಊರಲ್ಲಿಯೇ ಕಾಣೆ! ಹುಬ್ಬಳ್ಳಿಯಿಂದ ಮುಂಬಯಿ ತನಕ, ಮುಂಬಯಿಯಿಂದ ಕಲಕತ್ತಾದ ತನಕ—

ಎಲ್ಲೆಲ್ಲಿ ಮಿಲಿಟರಿ ಸಾಮಾನುಗಳು ಹರಾಜಾಗುತ್ತಿವೆಯೋ ಅಲ್ಲಿಗೆಲ್ಲ ಅವನ ಸಂಚಾರ. ಎಂಥ ಸಾಮಾನನ್ನೂ ಕೊಳ್ಳುತ್ತಾನೆ, ಎಂಥದನ್ನೂ ಮಾರುತ್ತಾನೆ. ಅದು ಲೋಹದ ವಸ್ತುವಾದರೆ ಸರಿ. ಕೊಳ್ಳುವ ಧೈರ್ಯ ಬರುತ್ತದೆ.

ಈ ನಡುವೆ ಅವನ ತಂದೆ ವಯಸ್ಸಾಗಿ ತೀರಿಕೊಂಡುದರಿಂದ ಒಮ್ಮೆ ಊರಿಗೆ ಬಂದಿದ್ದ. ಮನೆಗೆ ಬಂದಾಗ ಅವನ ತಾಯಿ, ದುಃಖದಿಂದ, "ನೀನು ಹೀಗೆ ಮಾಡಿದರೆ ಹೇಗೆ? ಅವರ ದಿನ ಮುಗಿಯಿತು. ನೀನು ಮನೆಯಲ್ಲಿ ಒಂದು ಕ್ಷಣವೂ ಇರುವುದಿಲ್ಲ. ಸಾಲದೇನು ನೀನು ಗಳಿಸಿದ್ದು? ಹಾಗೆ ಉದ್ಯೋಗಮಾಡುವ ಮನಸ್ಸಿದ್ದರೆ ಊರಲ್ಲಿ ಮಾಡುವ ಉದ್ಯೋಗವಿಲ್ಲವೆ?" ಎಂದುದಕ್ಕೆ, ಬರಿಯ ನಾಲ್ಕು ದಿನ ಕುಳಿತಿದ್ದ. ಹಾಗೆ ಕುಳಿತಿರುವುದೆಂದರೆ ಮುಳ್ಳಿನ ಮಂಚದ ಮೇಲೆ ಕುಳಿತಷ್ಟು ಅಸಮಾಧಾನ. "ಇಲ್ಲೇ ಕುಳಿತಿರಲು ಆಗುತ್ತದೆಯೆ? ಅಲ್ಲಿ ಇಲ್ಲಿ ಕೊಂಡದ್ದನ್ನು ಕೊಟ್ಟು ಮುಗಿಸುವುದಕ್ಕೆ ಇನ್ನು ಒಂದು ವರ್ಷವೇ ಬೇಕು. ಹಾಕಿದ ಹಣ ಕೈಗೆ ಬರಬೇಕಲ್ಲ? ಲಾಭವಿಲ್ಲದಿದ್ದರೆ ಹೋಗಲಿ" ಎಂದು ಊರನ್ನು ಆಗಾಗ ಬಿಡುಬೇಕಾಗುತಿತ್ತು. ಊರಿಗೆ ಅಪೂರ್ವಕ್ಕೆ ಬರುತಿದ್ದ. ಬಂದಾಗ ಡಾಕ್ಟರರಲ್ಲಿಗೆ ಬಂದು ಮಾತನಾಡದೆ ಹೋಗುವುದೆಂಬುದಿಲ್ಲ! "ಏನು ಡಾಕ್ಟರರೆ, ಏನು ಮಾಡುತಿದ್ದೀರಿ?" ಎಂದು ಕೇಳುತ್ತಾನೆ.

"ಏನು ಗಂಪು, ಯುದ್ಧ ಮುಗಿದರೂ ನಿನ್ನ ಗ್ರಹಗತಿ ತಿರುಗುತ್ತಾ ಇದೆಯಲ್ಲ?" ಎನ್ನುತ್ತಾರೆ ಅವರು.

"ಪಷ್ಟ ಆಯಿತು. ನನ್ನ ಅಮ್ಮನ ಹಾಗೆ, ತಿಮ್ಮಿಯ ಹಾಗೆ, ನೀವೂ ಹೇಳುತ್ತೀರಲ್ಲ?"

"ಇಲ್ಲಿ ಕುಳಿತೇನು ಮಾಡುವುದಂತೆ? ಆಚೆ ಈಚೆ ಓಡಾಡುತ್ತಿದ್ದು, ಸಾವಿರಾರು ರೂಪಾಯಿ ಗಳಿಸಬಹುದಾದ ಸಮಯದಲ್ಲಿ ಊರಲ್ಲಿ ಕುಳಿತಿರುವುದೇ? ಅಪ್ಪ ತೀರಿಕೊಂಡ ಮೇಲೆ, ನಾನು ಮನೆ ಬಿಟ್ಟು ಏಳುವುದೂ ನಮ್ಮಮ್ಮನಿಗೆ ಇಷ್ಟವಿಲ್ಲ. ನನ್ನನ್ನು ಕಂಡ ಕೂಡಲೆ ಕಣ್ಣೀರಿಡುತ್ತಾಳೆ. ನನ್ನ ಹೆಂಡತಿಯೂ ಹಾಗೆಯೇ. ಬೇಕಾದಷ್ಟು ದುಡಿದು ತಂದು ಹಾಕುತ್ತಿದ್ದೇನೆ. ತಿಂದು ಕುಳಿತಿರುವ ಬದಲು, ನನ್ನನ್ನು ಗೂಟಕ್ಕೆ ಕಟ್ಟಿಹಾಕಬೇಕು ಎಂದು ಯೋಚನೆಮಾಡುತ್ತಾರೆ. ನಿಮ್ಮ ಉಪದೇಶವೂ ಅಷ್ಟೆಯೇ?"

"ನೀನೇ ಅನ್ನುತ್ತೀ, ತಾಯಿಗೆ ಏನೂ ಸಮಾಧಾನವಿಲ್ಲವೆಂದು. ತಂದೆ

ಯು ತೀರಿಕೊಂಡದ್ದರಿಂದ ನೀನಾದರೂ ಮನೆಯಲ್ಲಿದ್ದರೆ ಅವಳ ಮನಸ್ಸಿಗಿಷ್ಟು ಸಮಾಧಾನವಾಗುವುದಿಲ್ಲವೇ!"

"ಆ ವಿಚಾರದಲ್ಲಿ ನನ್ನ ಹೆಂಡತಿಯೂ ಅಷ್ಟೇ. 'ಊರಲ್ಲಿಯೆ ಇದ್ದು ಏನನ್ನಾದರೂ ಮಾಡಬಾರದೇ' ಎಂದು ಹೇಳುತ್ತಿದ್ದಾಳೆ. ಇಲ್ಲಿದ್ದು ಏನು ಮಾಡ ಬಹುದು? ನಮ್ಮ ಸಾಹುಕಾರರ ಬಗೆಯವರ ಹಾಗೆ ಮಾಡಬೇಕು. ಮಾಡಿದವರನ್ನು ನೋಡಿಯಾಯಿತು; ನಿಮಗೆ ಗೊತ್ತಿಲ್ಲವೆಂದು ಕಾಣುತ್ತದೆ. ನಮ್ಮಪ್ಪ ಕಾಮಾಕ್ಷಿ ಪ್ಲ್ಯೈವುಡ್ಸ್ ಕಂಪೆನಿಗೆ ಐದುಸಾವಿರ ಹಾಕಿದ್ದ. ಅವನೇ ಹೇಳಿದನೆಂದು ನಾನು ಹತ್ತುಸಾವಿರ ಹಾಕಿದ್ದೆ. ಅದೀಗ ಹೋದ ಹಾಗೆಯೇ. ನಮ್ಮ ಊರಿನ ವ್ಯಾಪಾರವೆಲ್ಲ ಅಂಥದೇ."

"ಯಾವುದು ಗಂಪು, ಹೋದ ಹಾಗೆ!"

"ಕಾಮಾಕ್ಷಿ ಪ್ಲ್ಯೈವುಡ್ಸ್ ಶೇರುದಾರರಿಗೆಲ್ಲ ಟೊಪ್ಪಿ. ನಮಗೆ ನಷ್ಟವಾದರೂ ಚಿಂತೆಯಿಲ್ಲ. ತಡೆಯುವ ತ್ರಾಣವಿದೆ. ಪಾಪದವರು ಎಷ್ಟುಮಂದಿ, ದುಡಿದದ್ದನ್ನೆಲ್ಲ ಅದಕ್ಕೆ ಹಾಕಿ ಮುಳುಗುತ್ತಾರೆ, ನೋಡಿ. ನನಗೆ ಅದರ ರೀತಿ, ನೀತಿ ನೋಡಿ ಹಾಕಿದ ಹಣ ಹೋಗುತ್ತದೆಂದು ಎಂದೋ ಗೊತ್ತಾಗಿತ್ತು. ಗೊತ್ತಿದ್ದರೂ ನಮ್ಮ ಅಪ್ಪನಿಗೆ ಸಂಕಟವಾದೀತೆಂದು ನಾನು ಹೇಳದೆ ಕುಳಿತಿದ್ದೆ."

"ಕಾಮಾಕ್ಷಿ ಪ್ಲ್ಯೈವುಡ್ಸ್ ಹಾಗೆ ಅನ್ನುತ್ತೀಯಾ? ಪ್ಲ್ಯೈವುಡ್‌ಗೆ ಭಾರಿ ಆರ್ಡರುಗಳಿವೆಯಂತೆ. ಆಸ್ಟ್ರೇಲಿಯಾ, ಸಿಲೋನ್ ಎಲ್ಲೆಲ್ಲಿಂದಲೋ ಆರ್ಡರು ಬರುತ್ತಿದೆಯಂತೆ. ಸರಕಾರದವರು ಕಾಡುಗಳನ್ನು ಕೊಡುವಾಗಲೂ ರಿಯಾಯಿತಿ ಮಾಡಿದ್ದಾರಂತೆ. ಮರ ಸಾಗಿಸುವುದಕ್ಕೆ ಮಿಲಿಟರಿ ಲಾರಿಗಳು ಸಹ ಅಗ್ಗಕ್ಕೆ ಸಿಗುತ್ತವೆ. ಅದರಿಂದ ದುಡ್ಡಿನ ಸುರಿಮಳೆ—ಎನ್ನುತ್ತಾರೆ ಊರವರು."

"ಹಾಗೆಂದೇ ನಾನು ಅದಕ್ಕೆ ಹಣ ಹಾಕಿದ್ದು. ನನ್ನನ್ನು ಡೈರಕ್ಟರ್ ಆಗು ಎಂದು ಒತ್ತಾಯಿಸಿದ್ದರು. ಪುಣ್ಯಕ್ಕೆ ನಾನು ಆಗಲಿಲ್ಲ. ಐದು ಸಾವಿರಕೆ ಡೈರಕ್ಟರ್ ಪಟ್ಟ ಬರುತಿತ್ತು. ಆಗದಿದ್ದುದು ಒಳ್ಳೆಯದಾಯಿತು. ಈಗ ಹಣ ಮಾತ್ರ ಹೋಯಿತು. ಡೈರಕ್ಟರ್ ಆಗಿದ್ದರೆ ಮರ್ಯಾದೆಯೂ ಹೋಗತಿತ್ತು. ನಿಮಗೆ ಗೊತ್ತಿಲ್ಲ ಡಾಕ್ಟರರೆ, ನಮ್ಮೂರಿನ ಕಂಪೆನಿಯಾದ ಮಾತ್ರಕ್ಕೆ ಸೇರಿದವರೆಲ್ಲ ಸಂಭಾವಿತರೆಂದು ಭಾವಿಸುತ್ತೀರೊ? ಪಾಲುದಾರರಿಗೆ ದಿಗಿಲ

ಹಾರಬೇಕು. ತಲೆಯಿಂದ ತಲೆಯ ತನಕ ಅಲ್ಲಿ ಠಕ್ಕೇ ನಡೆಯುವುದು. ಒಂದು ಸಮನಾದ ಲೆಕ್ಕ ಉಂಟೆ? ಬಂದ ಮಾಲಿಗೆ, ಬಂದ ಮರಕ್ಕೆ, ಆದ ಉತ್ಪನ್ನಕ್ಕೆ, ಕೊಟ್ಟ ಕೂಲಿಗೆ, ಏನಾದರೂ ತಾಳೆಯುಂಟೆ? ಪ್ರತಿಯೊಂದರಲ್ಲಿಯೂ ತಿನ್ನುವವರೇ. ಮರ ಕೊಳ್ಳುವುದು ಒಬ್ಬರು ಡೈರಕ್ಟರರಿಂದ; ಮಾರುವುದು ಇನ್ನೊಬ್ಬರು ಡೈರಕ್ಟರಿಗೆ. ಲಾಭ ಬರುವ ಎಲ್ಲ ವ್ಯವಹಾರಕ್ಕೆ ಡೈರಕ್ಟರುಗಳ ಸ್ವಂತ ಕಂಪೆನಿಗಳಿವೆ. ನಷ್ಟವಾಗುವ ಸಂದರ್ಭಗಳೆಲ್ಲಾ ಕಾಮಾಕ್ಷಿಯಮ್ಮನ ಲೆಕ್ಕಕ್ಕೆ. ಕದ್ದು ಮಾರಿದ ಪೆಟ್ರೋಲಿನಿಂದಲೇ ಸಾವಿರಾರು ರೂಪಾಯಿ ಸಂಪಾದನೆ. ಗುಟ್ಟು ಬಿಟ್ಟರೆ ನಮ್ಮೂರಿನ ನಾಲ್ಕು ಮಂದಿ ದೊಡ್ಡವರನ್ನು ಸುಖವಾಗಿ ಜೈಲಿಗೆ ಕಳುಹಿಸಬಹುದು" ಎಂದು ಒಂದು ತಾಸಿನ ತನಕ ಆ ಹೊಲಸುಗಳನ್ನೆಲ್ಲ ಡಾಕ್ಟರರ ಮುಂದೆ ಜಾಡಿಸತೊಡಗಿದ. ಶಿವಪ್ಪನವರು ತಮ್ಮ ನಿತ್ಯೋದ್ಯೋಗದಲ್ಲಿ ಇಂಥ ಮಾತುಗಳಿಗೆ ಕಿವಿಗೊಡುವುದು ಕಡಿಮೆ; ನಂಬುವುದೂ ಕಡಿಮೆ. 'ಏನೊ! ಎಷ್ಟು ಸತ್ಯವೊ, ಎಷ್ಟು ಸುಳ್ಳೊ–ಎಂದು ಔದಾಸೀನ್ಯವನ್ನು ತಾಳುವುದೇ ಹೆಚ್ಚು. ಕಾಮಾಕ್ಷಿ ಪ್ಲೈವುಡ್ಸ್ ಕಂಪೆನಿಯು ತೊಡಗಿದಾಗ ಅವರ ಸ್ನೇಹಿತರು ಬಂದು "ನೀವು ಡಾಕ್ಟರರೇ-ಸಾವಿರ ಶೇರು ತಕ್ಕೊಳ್ಳಬೇಕು, ಶೇರಿಗೆ ಐದೇ ರೂಪಾಯಿ" ಎಂದು ಒತ್ತಾಯಿಸಿದಾಗ "ನನ್ನ ಶೇರು, ಪಾವು ಏನಿದ್ದರೂ ದವಾಖಾನೆಗೆ" ಎಂದಿದ್ದರು. ಗಂಪು ಇಷ್ಟೆಲ್ಲ ವಿವರಿಸಿ ಹೇಳಿದಾಗ, ತಮ್ಮ ಊರಿನ ಪ್ರತಿಷ್ಠಿತ ಹಿರಿಯರು ಸಾಲಾಸಾಲು ಒಂದೇ ಮಾದರಿಯ ಪ್ರಭೃತಿಗಳೆಂದು ತೋರಿ, ವಿಸ್ಮಯವಾಯಿತು. ಗಂಪುವಿನ ಮಾತನ್ನು ಅವರು ನಂಬುತ್ತಾರೆ.

"ಹೌದೋ, ಗಂಪು. ಅಷ್ಟೆಲ್ಲ ನಡೆದಿದೆಯೆ? ಯುದ್ಧ ಬಂದು ಇನ್ನೇನು ಉಪಕಾರ ಮಾಡದಿದ್ದರೂ ನಮ್ಮ ಜನಕ್ಕೆ ಇಂಥ ಒಳ್ಳೆಯ ಬುದ್ಧಿ ಕಲಿಸಿತಲ್ಲ. 'ಸಾವಿರ ರೂಪಾಯಿ ಕೊಡುತ್ತೇನೆ, ಯಾರೂ ಕಾಣದಿದ್ದಾಗ ತುಸು ಸೆಗಣಿ ತಿನ್ನುವವರಿಗೆ'–ಎಂದು ಡಂಗುರ ಸಾರಿದ್ದಾದರೆ, ನಿಜಕ್ಕೂ ಊರಿನಲ್ಲಿ ಮನೆಯೊಳಗೆ ಕುಳಿತಿರುವವರ ಸಂಖ್ಯೆ ಸಿಗುತ್ತದೋ ಇಲ್ಲವೊ" ಎಂದರು. ಮರುಗಳಿಗೆಯಲ್ಲಿ ಎಲ್ಲರೂ ಮೋಸಗಾರರು ಎಂದು ತೀರ್ಮಾನಿಸಲು ಮನಸ್ಸು ಒಪ್ಪಲಿಲ್ಲ. "ಹಾಗಿರುವಾಗ ಗಂಪು ನ್ಯಾಯವಾದ ದಾರಿಯಿಂದ ಹಣಗಳಿಸುವುದಕ್ಕೇ ಬರುವುದಿಲ್ಲವೆನ್ನುತ್ತೀಯಾ? ಶ್ರೀಮಂತರಾಗುವುದಕ್ಕೆ ಮೋಸವೊಂದೇ ದಾರಿಯೇ" ಎಂದರು; ಥಟ್ಟನೆ ಮಾತು ನಿಲ್ಲಿಸಿ, ಒಳಕ್ಕೆ ಹೋದರು.

ಅಲ್ಲಿ ಕುಳಿತಿದ್ದ ರೋಗಿಗಳನ್ನು ಪರಿಶೀಲಿಸಿ ಇಂಜಕ್ಷನ್ ಕೊಟ್ಟರು. ಮದ್ದು, ಪಥ್ಯಗಳನ್ನು ಹೇಳಿದರು. ತಿರುಗಿ ಅವರಿಗೆ ವ್ಯವಧಾನ ದೊರೆಯಲಿಲ್ಲ. ಗಂಪು ಅಲ್ಲಿಯೇ ಕಾದಿದ್ದ. ಮನೆಗೆ ಹೊರಡುವಾಗ 'ಬರುತ್ತೀಯಾ ಮನೆಗೆ' ಎಂದು ಕೇಳಿದರು. ಅವನ ಜೀಪಿನಲ್ಲೇ ಹೋದರು. ಡಾಕ್ಟರರ ಎರಡನೆಯ ಮಗು ಸುಧಾಕರ ಬಂದು, ಬಂಡಿಯನ್ನೇರಿದ. ಶಾಲೆಯಿಂದ ಮರಳಿದ ರತ್ನಾಕರನೂ ರಥಾರೋಹಿಯಾದ. ಅದನ್ನು ಕಂಡು ಗಂಪುವು "ಡಾಕ್ಟರರೇ ನಿಮಗಿನ್ನು ಸ್ನಾನವಾಗಬೇಕಷ್ಟೆ. ಅಷ್ಟರೊಳಗೆ ಇವರನ್ನು ಒಂದು ರೌಂಡ್ ತಿರುಗಿಸಿ ಬರುತ್ತೇನೆ" ಎಂದು ಹೇಳಿ ಹೊರಟುಬಿಟ್ಟ.

ಅವರ ಸ್ನಾನ ಮುಗಿಯಿತು. ಊಟದ ಮನೆಯಲ್ಲಿ ಅವರು ನಾಲ್ವರಿಗೂ ಎಲೆ ಬಡಿಸಿದ್ದರು. ಜೀಪ್ ಬಂದಿತು. ಮಕ್ಕಳು ಒಳಕ್ಕೆ ಓಡಿ ಬಂದರು. ಶಿವಪ್ಪನವರು ಗಂಪುವಿಗೆ ಕಾಲು ತೊಳೆಯಲು ನೀರು ಕೊಟ್ಟರು. ಆತ ಕಾಲು ತೊಳೆಯುತ್ತ "ಡಾಕ್ಟರರೇ, ನಿಮಗೂ ಇಂಥದೊಂದು ಜೀಪು ಇದ್ದರೆ ಒಳ್ಳೆಯದಲ್ಲವೆ? ಯಾರಾದರೂ ಅರ್ಜೆಂಟಾಗಿ ಕರೆದರೆ ಹೋಗಿ ಬರುವುದ ಕ್ಕಾಗುತ್ತದೆ" ಎಂದ.

"ನನಗೆ ಗಂಪು, ನಡೆದು ಹೋದರೆ ಸಾಕು. ಹೋದರೆ ಸರಿ–ಆದಷ್ಟು ಬೇಗ. ನನ್ನದೇನಿದ್ದರೂ ಈ ಆಸ್ಪತ್ರೆಯ ಚಿಂತೆಯಲ್ಲದೆ ಇನ್ನೊಂದಿಲ್ಲ. ರೋಗಿಗಳಿಗೆ ಮಲಗುವ ಮನೆಯೊಂದನ್ನು ಕಟ್ಟಿಸತೊಡಗಿದ್ದೇನೆ. ಅದನ್ನು ಚೆನ್ನಾಗಿ ಮಾಡಿ ಮುಗಿಸಿ, ಒಂದ ಮೆಟರ್ನಿಟಿ ವಾರ್ಡಿಗೆ ಕೈಹಾಕಬೇಕು. ಅನಂತರ ಎರಡು ಕೋಣೆಗಳಿಗೆ ಒಂದು ಜಗುಲಿ ಸೇರಿಸಿ ಡಿಸ್ಪೆನ್ಸರಿ ಮಾಡಿ ದೆನೆಂದರೆ ಮುಗಿಯಿತು. ಅದಕ್ಕಿಂತ ಹೆಚ್ಚಿನ ಅಭಿಲಾಷೆ ನನಗಿಲ್ಲ."

"ಹೌದು ಡಾಕ್ಟರರೆ, ಏನು ಮಾಡುವುದಿದ್ದರೂ ಈಗ ಮಾಡಿ ಮುಗಿಸಿ ಬಿಡಿ. ಯಾವುದರ ಬೆಲೆಯೂ ತಗ್ಗುವ ಹಾಗಿಲ್ಲ. ಆ ಆಸೆಯಿಂದ ಕೆಲಸ ಮುಂದುವರಿಸಿದರೆ ಪ್ರಯೋಜನವಿಲ್ಲ. ನಾನು ಜೀಪಿನ ಸುದ್ದಿ ಹೇಳಿದ್ದೇಕೆಂದರೆ— ನನ್ನ ಹತ್ತಿರವೇ ನಾಲ್ಕಾರಿವೆ. ಒಂದನ್ನು ಬರಿದೆ ಕೊಟ್ಟೇನು. ಮಿಲಿಟರಿ ಸಾಮಾನು ತಕ್ಕೊಳ್ಳುವಾಗ ನಾನು ಕೊಂಡದ್ದೆಷ್ಟೋ! ಲಾಟಿಗೆ ಲಾಟ್ ಕೊಳ್ಳುವಾಗ ಸಾವಿರಕ್ಕಿಂತ ಕಡಿಮೆ ಬೆಲೆಗೂ ಕೊಂಡದ್ದುಂಟು. ಬೇಕಾದಂತಹ ಸ್ಪೇರ್ ಪಾರ್ಟುಗಳೂ ಇವೆ."

"ಅದೆಲ್ಲ ಬೇಡ ಮಹಾರಾಯಾ. ಒಂದು ಮೋಟರು, ಅದರ ಬೆನ್ನಿಗೆ

ಡ್ರೈವರು–ಇದನ್ನೆಲ್ಲ ಕಟ್ಟಿಕೊಳ್ಳುವವರ್ಯಾರು? ಇಲ್ಲಿ ವಾರ್ಡ್ ಕಟ್ಟಿಸಿ ಬಿಟ್ಟ ದ್ದಾದರೆ ಕಾಯಿಲೆಯವರು ಇಲ್ಲೇ ಬಂದಿರುತ್ತಾರೆ. ಈ ಕಾಳೂರು ಅದೆಷ್ಟು ಬೆಳೆದರೂ, ನಡೆಯಲು ನನ್ನ ಕಾಲು ಸಾಕು" ಎಂದು ಅವನನ್ನು ಊಟದ ಮನೆಗೆ ಕರೆದೊಯ್ದರು.

ಊಟಕ್ಕೆ ಪ್ರಾರಂಭವಾಯಿತು. ಗಂಪು ಬರುತ್ತಾನೆಂದು ಇಂದುವಿಗೆ ಗೊತ್ತೂ ಇರಲಿಲ್ಲ. ಬಂದುದೂ ಅಪೂರ್ವಕ್ಕೆ. ಆದರೆ ಇಂದುಮತಿಗೆ ಅವನಂ ಥವರು ಮನೆಗೆ ಬರುವುದರಲ್ಲಿ ತುಂಬ ಸಂತೋಷ. ಅವನು ಆಡುತಿದ್ದ ಮಾತು ಗಳಲ್ಲಿ ಎಷ್ಟೋ ಸಾರಿ ತಲೆಬುಡವಿಲ್ಲದ ವಾದಸರಣಿ ಹೆಚ್ಚು. ಹೆಗ್ಗಳಿಕೆಯ ನುಡಿಗಳಿಗೂ ಬರಗಾಲವಿಲ್ಲ. ಅದೇನೇ ಇದ್ದರೂ, ಆತ ಬರುತ್ತಾನೆಂದು ಗೊತ್ತಿದ್ದರೆ, ಇನ್ನಷ್ಟು ಚೆನ್ನಾಗಿ ಅಡುಗೆ ಅಟ್ಟಾಳು. ಅದಿಲ್ಲದೆ ಹೋದರೆ ಬಾಯಿತುಂಬ ಮಾತಿನ ಉಪಚಾರ ಮಾಡಿಯಾಳು. ಶಿವಪ್ಪನವರಿಗೆ ಈಗ ಗಂಪುವಿನ ಸಂಪೂರ್ಣಸ್ವಭಾವ ತಿಳಿದಿದೆ. 'ಆತನಲ್ಲಿ ಸಾಕಷ್ಟು ಜಂಭವಿದೆ. ಆದರೆ ಕಪಟವಿಲ್ಲ' ಎಂಬುದರಿಂದ, ಮನಸ್ಸು ಬಿಚ್ಚಿ ಅವನೊಡನೆ ಎಲ್ಲ ವನ್ನು ಕುರಿತು ಮಾತನಾಡುತ್ತಾರೆ. ಊಟಮಾಡುತ್ತಿರುವಾಗ ಗಂಪು ಅವರ ಡಾಕ್ಟರಿ ವೃತ್ತಿಯನ್ನೇ ಕುರಿತು ಪ್ರಶ್ನೆ ಕೇಳತೊಡಗಿದ. "ಡಾಕ್ಟರರೇ ಎಂದಿನಿಂದಲೂ ನಿಮ್ಮನ್ನು ಕೇಳಬೇಕು, ಕೇಳಬೇಕು ಎಂದಿತ್ತು. ಕೇಳು ವುದಕ್ಕೆ ಆಗಲಿಲ್ಲ-ಸತ್ಯಕ್ಕೂ ನಿಮ್ಮದಂಥ ಹ್ಯಾಗಿದೆ? ಮತ್ತೇತಕ್ಕೂ ಕೇಳಿದ್ದಲ್ಲ- ವಾರ್ಡು, ಇನ್ನೊಂದು ಅನ್ನುತ್ತೀರಿ. ಈ ಯುದ್ಧ ಬಂದ ಮೇಲೆ ಊರಿಗೆ ಇನ್ನೂ ಮೂರು ಮಂದಿ ಹೊಸ ಡಾಕ್ಟರರು ಬಂದಿದ್ದಾರಲ್ಲವೆ? ಅದರಿಂದ ಕಾಂಪಿಟೇಷನ್ ಬಂದು ನಿಮ್ಮ ಉದ್ಯೋಗಕ್ಕೆ ಧಕ್ಕೆ ಬರಲಿಲ್ಲವೆ?" ಎಂದು ಪ್ರಶ್ನಿಸಿದ. ಅವರು ನಕ್ಕರು. "ಬರಲಿಲ್ಲ ಎನ್ನುವುದಕ್ಕಿಲ್ಲ. ಬರಬೇಕಾದಷ್ಟು ಬಂದಿಲ್ಲ. ನನ್ನ ಅದೃಷ್ಟದಲ್ಲಿದ್ದುದು ನನಗೆ, ಅವರದ್ದು ಅವರಿಗೆ. ನಮ್ಮ ಊರವರು ಹೇಳುವ ಹಾಗೆ–ಅವರ ಕೈಯಲ್ಲಿ ಸಾಯುವ ಯೋಗವಿದ್ದವರು ಅಲ್ಲಿ ಸಾಯುತ್ತಾರೆ; ನನ್ನ ಕೈಯಲ್ಲೇ ಸಾಯಬೇಕೆನ್ನುವವರು ಇಲ್ಲಿ ಬಂದು ಸಾಯುತ್ತಾರೆ."

"ನೀವು ಉತ್ತರ ಹೇಳುವ ಬದಲು ಚೇಷ್ಟೆ ಮಾಡುತ್ತೀರಲ್ಲ."

"ಹಾಗೇನು ನನಗೆ ತೊಂದರೆಯಾಗಿಲ್ಲ ಗಂಪು. ನ್ಯಾಯವಾಗಿ ನಮ್ಮ ದೇಶದ ಸ್ಥಿತಿಯಲ್ಲಿ, ಈಗಿನ ಡಾಕ್ಟರರ ಸಂಖ್ಯೆ ಇದಕ್ಕಿಂತ ಹತ್ತು ಪಾಲು

ಹೆಚ್ಚಿಗಿದ್ದರೂ ನಷ್ಟವಿಲ್ಲ. ಆದರೆ ಎಲ್ಲರೂ ಒಂದೇ ಕಡೆಯಲ್ಲಿ ಬಂದು ಸೇರಿದರೆ, ಕೆಲವರು ಉಪವಾಸವಿರಬೇಕಾದೀತು."

"ಡಾಕ್ಟರರಿಗೆ ಬೇಕಷ್ಟು ಕೆಲಸವಿರುತ್ತದೆ ಖಂಡಿತ. ಅದನ್ನಲ್ಲ ನಾನು ಕೇಳುವುದು–ಕೆಲಸಕ್ಕೆ ತಕ್ಕ ದುಡ್ಡು ಕೊಡುವ ಬುದ್ಧಿ ಬಂದಿದೆಯೆ ಜನಕ್ಕೆ? ಎಂದು".

"ದುಡ್ಡಿನ ಮಾತೂ ಅಷ್ಟೇ; ಅವರವರ ಅದೃಷ್ಟವಿದ್ದಷ್ಟು ಸಿಗುತ್ತದೆ. ನ್ಯಾಯವಾಗಿ ದುಡಿಯುವವರಿಗೆ ಹೊಟ್ಟೆಗೊಂದು ಮೋಸವಾಗಲಾರದು. ಕೂಡಿಡುವುದಕ್ಕೆ ಸಿಗಲಿ, ಸಿಗದಿರಲಿ-ಆ ಮಾತು ಬೇರೆ. ಇವತ್ತು ಅನೇಕರಿಗೆ ನನ್ನಲ್ಲಿ ನಂಬಿಕೆಯಿದೆ. ನಾನೇ ಬರಬೇಕೆಂದು ಒತ್ತಾಯಿಸುತಿದ್ದಾರೆ. 'ಹೊರಗೆ ಕಾಲಿರಿಸ ಬೇಕಾದರೆ ಇಷ್ಟು ಹಣ ತೆಗೆದಿಡಬೇಕು' ಎಂದು ಹೇಳಿದರೂ ನಡೆದೀತು. ಆದರೆ ಹಾಗೆ ಗಳಿಸಿದ ದುಡ್ಡು ಜೀರ್ಣಕ್ಕೆ ಬರಲಾರದು"

ಹೀಗೆ ಮಾತು, ಊಟಗಳು ಜತೆ ಜತೆಗೆ ನಡೆದು, ಅಲ್ಲಿಂದೆದ್ದರು. ಕೈ ತೊಳೆದುಕೊಂಡು ಬಂದು ವಿರಾಮ ಕುರ್ಚಿಯಲ್ಲಿ ಕುಳಿತು, ತಿರುಗಿ ಸಂಭಾಷಣೆ ತೊಡಗಿದರು. ಶಿವಪ್ಪನವರೇ ಮಾತಿಗೆ ಮುಂದಾದರು. "ನನಗೆ ಏನೋ ಅನಿಸಿತು; ಇವತ್ತು ಬೇಕೆಂದೇ ನಿನ್ನನ್ನು ಊಟಕ್ಕೆ ಕರೆದೆ. ಆಗ ಮರೆತು ಹೋಗಿತ್ತು, ಈಗ ಹೇಳುತ್ತೇನೆ. ನಿನ್ನಂಥವನು ಊರಲ್ಲಿಯೇ ಇದ್ದು ಏನಾದರೊಂದು ಉದ್ಯೋಗ ನಡೆಯಿಸಲು ಬರಲಾರದೇ?"

"ಇಲ್ಲಿದ್ದು ಏನು ಮಾಡುವುದು? ಇನ್ನೊಂದು ಪ್ಲ್ಯೈವುಡ್ ಕಂಪೆನಿಯನ್ನೇ?" ಎಂದು ಹೇಳಿ ಗಂಪು ನಕ್ಕನು.

"ಅದೇ ಆಗಬೇಕೆಂದಿದೆಯೆ? ನಾನೇನು ಹೆಚ್ಚಿಗೆ ಗೊತ್ತಿದ್ದು ಹೇಳುವುದಲ್ಲ. ಅಲ್ಲಿ, ಇಲ್ಲಿ ಓದಿದ ಸಂಗತಿ ಹೇಳುತ್ತಿದ್ದೇನೆ. ಕಂಡದ್ದಲ್ಲ, ಏನಲ್ಲ; ಜಾಪಾನಿನಲ್ಲಿ,ಅಮೇರಿಕದಲ್ಲಿ ನಿಮ್ಮ ಮೀನಿನ ವ್ಯವಸಾಯದಲ್ಲೇ ಲಕ್ಷಾಂತರ ರೂಪಾಯಿ ಗಳಿಸುವವರಿದ್ದಾರೆ. ನಿನಗೇನನಿಸುತ್ತದೆಯೊ–'ಕಾರ್ವಿಯರ ಹುಡುಗ; ಮೀನು ಹಿಡಿಯಲಿಕ್ಕೆ ಯೋಗ್ಯ' ಎಂದು ಡಾಕ್ಟರರೂ ತಿಳಿದಿದ್ದಾರೆ ಎಂದು ತೋರಲಿಕ್ಕೂ ಸಾಕು. ಹಾಗಲ್ಲ; ನನ್ನ ಈ ಕೆಲಸವನ್ನು ಮೊದಲಿಂದಲೂ 'ಹೆಣ ಸಿಗಿಯುವ ಚಾಕರಿ' ಎಂದು ನಮ್ಮ ಸೋದರಮಾವ ಅಂದದ್ದುಂಟು. ಮೀನು ಸಿಗಿಯುವ ಕೆಲಸ ಅದಕ್ಕಿಂತ ಕಡಿಮೆ ಎಂದು ನಾನು ತಿಳಿದಿಲ್ಲ. ನನಗನಿಸುವ ಸಂಗತಿ ಹೀಗೆ: ನಿಮ್ಮವರು ಇಷ್ಟೆಲ್ಲ ಇದ್ದಾರೆ. ಇಷ್ಟು

ದೊಡ್ಡ ಸಮುದ್ರವಿದೆ. ಅವರು ಮಾರಿ ಬಲೆಯ ಉದ್ಯೋಗವನ್ನೇನೋ ಮಾಡುತ್ತಾರೆ. ಅದೆಷ್ಟು ತಿಂಗಳು? ವರ್ಷಕ್ಕೆ ಒಂದು ಆರು ತಿಂಗಳ ಕಾಲ. ಪರದೇಶಗಳಲ್ಲಿ ಹಾಗಿಲ್ಲವಂತೆ. ಸ್ಟೀಮರುಗಳನ್ನೇ ಹಿಡಿದುಕೊಂಡು, ಸಾಗರ ಗಳಿಗೆ ಹೋಗಿ, ಅಲ್ಲಿಯೇ ಮೀನು ಹಿಡಿದು, ಚೊಕ್ಕ ಮಾಡಿ,ಡಬ್ಬಿಗೆ ತುಂಬಿಸಿ ತರುವ ತನಕ ಆ ಉದ್ಯೋಗ ಬೆಳೆದಿದೆ. ಮೀನುಗಾರಿಕೆಯ ಉದ್ಯೋಗ ದೊಡ್ಡ ವೈಜ್ಞಾನಿಕ ವ್ಯವಸಾಯವಾಗಿ ಆಗಿದೆ. ಇಲ್ಲಿ ಮೀನುಗಳ ಹಿಂಡು ನೀರಿನ ಮೇಲೆ ಬಂದಾಗ ಗೊತ್ತಾಗುವುದಷ್ಟೆ; ಅಲ್ಲಿ ನೀರ ಕೆಳಗೇನೆ ಅವಿರು ವುದನ್ನು ಗುರುತಿಸುವ ಸಾಧನಗಳನ್ನು ಮಾಡಿದ್ದಾರೆ. ನನಗೆ ಇದೆಲ್ಲ ಏಕೆನಿ ಸಿತು ಅಂದರೆ, ಮೊನ್ನೆ ಟೈಮ್ಸ್ ಒಫ್ ಇಂಡಿಯಾ ಪತ್ರಿಕೆಯಲ್ಲಿ Trawlers for saleಎಂದು ಜಾಹೀರಾತು ಬಂದಿತ್ತು. ಮೋಟರ್ ದೋಣಿಗಳಿರಬೇಕು. ಈ ಕೆಲಸಕ್ಕೆ ಬಂದಾವು. ಒಂದು ಐಸ್ ಕಾರ್ಖಾನೆ ಮಾಡಿಕೊಂಡೋ, ರಿಫ್ರಿಜಿಯೇಟರ್ ವೇನ್ ಮಾಡಿಕೊಂಡೋ-ಕೆಲಸ ತೊಡಗಿದ್ದಾದರೆ ಸುಲಭ ಖರ್ಚಿನಲ್ಲಿ ಬೆಳಗಾಂವಿ, ಕೊಲ್ಹಾಪುರಗಳ ತನಕವೂ ಮೀನನ್ನು ಒಯ್ದು ಮಾರಬಹುದು. ಈಗ ಹಾಗಿಲ್ಲ ನೋಡು, ದೊಡ್ಡ ಬಲೆ ಬಿದ್ದದ್ದಾದರೆ, ಸಂಜೆಯೊಳಗೆ ಆ ಮೀನು ಮಾರಾಟವಾಗದಿದ್ದರೆ, ಒಣಗಿಸಬೇಕು, ಗೊಬ್ಬರ ಮಾಡಬೇಕು-ಅಲ್ಲವೇ. ಈ ಊರಿನಿಂದಲೇ ಮೋಟಾರು ಲಾಂಚಿನಲ್ಲಿ ೨೪ ತಾಸಿನೊಳಗೆ ಮುಂಬಯಿಗೂ ಮೀನನ್ನು ಒಯ್ದು ಮಾರಾಟಮಾಡಬಹುದು.

"ನಾನು ಯಾಕೆ ಇಷ್ಟೆಲ್ಲ ಉದ್ದವಾಗಿ ಹೇಳಿದೆ ಎಂಬುದನ್ನು ಕೇಳು. ನನ್ನ ಮನಸ್ಸಿನಲ್ಲಿ ಮೊದಲಿನಿಂದಲೂ ಒಂದು ಭ್ರಮೆ-ಒಂದು ಊರಿನಲ್ಲಿ ಹುಟ್ಟಿದ ಒಬ್ಬ, ತನ್ನ ಊರಿಗೆ ಏನಾದರೂ ಋಣ ಸಲ್ಲಿಸ ಬೇಕು-ಎಂದು. ಈ ಊರಿನ ಒಂದು ನೂರು ಜನಗಳಿಗೆ ನೀನು ಒಂದು ಶಾಶ್ವತ ಜೀವನ ಕಲ್ಪಿಸಿ ಕೊಟ್ಟದ್ದಾದರೆ, ಅದಕ್ಕಿಂತ ದೊಡ್ಡ ಕೆಲಸವಿದೆಯೆ? ಇದೇನು ದಾನವಲ್ಲ. ಆದರೂ ಹತ್ತು ಜನಗಳಿಗೆ ಪ್ರಯೋಜನವಾಗುವ ಕೆಲಸ.

"ಇದನ್ನೇ ಮಾಡಬೇಕೆನ್ನುವುದಿಲ್ಲ ನಾನು. ನೀನು ಇಂಥ ಏನನ್ನು ಮಾಡಿದರೂ ಸರಿಯೆ."

ಶಿವಪ್ಪನವರು ತದೇಕಚಿತ್ತರಾಗಿ ಈ ಉಪನ್ಯಾಸವನ್ನುಮಾಡುತಿದ್ದಾಗ, ಅಷ್ಟೇ ಮನಸ್ಸು ಕೊಟ್ಟು ಗಂಪು ಅವರ ಮಾತುಗಳನ್ನು ಕೇಳುತಿದ್ದನು. ಆ ಮಾತಿನ ಸತ್ಯ ಅವನಿಗೆ ಹೊಳೆಯುತಿತ್ತು. ಅವನ ಪಾಲಿಗೆ ಲಕ್ಷ್ಮಿ ಸುಲಭ

ದಲ್ಲಿ ಒಲಿದಿದ್ದಳಾದರೂ ಅನೇಕರ ಬಾಳು ಏರಿಳಿತಗಳಿಂದ ಕೂಡಿದೆಯೆಂದು ಗೊತ್ತು. ಅದಲ್ಲದೆ ಶಿವಪ್ಪನವರಂಥವರು ತಮ್ಮ ಹೊಟ್ಟೆಗಾಗಿ ದುಡಿಯುವು ದರ ಜತೆಗೆ, ಊರಿಗೂ ಉಪಕಾರಿಗಳಾಗಿ ಬಾಳುತ್ತಿದ್ದಾರೆ. ಆ ಆದರ್ಶವೂ ಮನನೀಯವಾದದ್ದೇ–ಎಂದೆನಿಸಿತು. ವ್ಯವಹಾರದಲ್ಲಿ ಅವನಿಗೆ ಅಳುಕು, ಅಂಜಿಕೆಗಳು ಕಡಿಮೆ. ಸಾಹಸಗಳಿಗೆ ಅವನು ಸದಾ ಸಿದ್ಧನು."ನೀವು ಹೇಳಿದ ಕೆಲಸ ಆಗಬಾರದೆಂದಿಲ್ಲ. ಒಳ್ಳೆಯ ಆಲೋಚನೆ. ಆದರೆ ಅದಕ್ಕೆ ಸಮನಾದ ಅನುಭವ ಕೊಡುವವರು ಯಾರಿದ್ದಾರೆ–ಎಂದು ವಿಚಾರಿಸಿ ನೋಡುತ್ತೇನೆ" ಎಂದು ಹೇಳಿ ಆತ ಆ ದಿನ ಹೊರಟು ಹೋದ.

ಇನ್ನೊಮ್ಮೆ ಆತ ಊರಿಗೆ ಬರುವಾಗ ಮೂರು ತಿಂಗಳ ಕಾಲ ಕಳೆದು ಹೋಗಿತ್ತು. ಡಾಕ್ಟರರೊಡನೆ ವಿರಾಮವಾಗಿ ಮಾತನಾಡುತ್ತಿದ್ದ ಗಳಿಗೆಯಲ್ಲಿ ಆತ "ಡಾಕ್ಟರರೆ, ನಿಮ್ಮ ಆಲೋಚನೆಯನ್ನೇ ಗಟ್ಟಿ ಮಾಡಿದ್ದೇನೆ" ಎಂದಾಗ ಅದು ಏನೆಂದು ಶಿವಪ್ಪನವರಿಗೇ ನೆನಪಾಗಲಿಲ್ಲ.

"ಏನಪ್ಪ ಅದು?" ಎಂದು ಕೇಳಿದರು.

"ಫಿಶ್ ಇಂಡಸ್ಟ್ರಿ ವಿಚಾರ. ಅದನ್ನು ಮಾಡಬೇಕು ಎಂಬ ನಿರ್ಧಾರ ಮಾಡಿದ್ದೇನೆ." ಎಂದು ವಿಷಯವನ್ನು ವಿವರಿಸುತ್ತ, ಅವರು ಸೂಚಿಸಿದ ಆ ಯೋಚನೆಯನ್ನು ಹಿಂಬಾಲಿಸಿ ಯಾರಾರನ್ನು ಕಂಡೆ, ಯಾವ ಸ್ಥಳಗಳಿಗೆಲ್ಲ ಹೋದೆ, ತಜ್ಞರ ಅಭಿಪ್ರಾಯ ಹೇಗೆ ದೊರಕಿಸಿದೆ–ಎಂಬುದನ್ನು ತಿಳಿಸಿದ. "ಅದಕ್ಕಾಗಿ ಎರಡೆರಡು ಟ್ರಾಲರ್ ಕೊಂಡಿದ್ದೇನೆ. ಹಿಮಗಡ್ಡೆ ತಯಾರಿಸುವ ಯಂತ್ರಕ್ಕೆ, ಶೀತಳ ಮೋಟರಿಗೆ ಆರ್ಡರ್ ಕೊಟ್ಟಿದ್ದೇನೆ" ಎಂದ. ಅವನ ಆತ್ಮವಿಶ್ವಾಸ ಬಹಳ; "ಡಾಕ್ಟರರೇ, ನಮ್ಮಲ್ಲಿ ಸಮನಾದ ತಜ್ಞರು ಸಿಗು ವುದೇ ಕಷ್ಟ. ಈ ಉದ್ಯೋಗವನ್ನು ಬೆಳೆಯಿಸಬೇಕಾದರೆ ಒಳ್ಳೆಯ ಎಕ್ಸ್ಪರ್ಟ್ಸ್ ಬೇಕು. ಊರಿನ ವ್ಯಾಪಾರವನ್ನೇ ಮಾಡುವುದಾದರೆ ಕಾರ್ವಿಯರ ಮಕ್ಕಳಾದ ನಾವೇ ಸಾಕಲ್ಲ. ಜತೆಗೆ ಕೆನಿಂಗ್ ಮಾಡಬೇಕು. ಕೆನಡಾದಿಂದ ಸಾರ್ಡಿನ್, ಸಾಲ್‌ಮನ್ ಮೀನುಗಳನ್ನು ಡಬ್ಬಿಯಲ್ಲಿ ತುಂಬಿಸಿ,ನಮ್ಮೂರಿಗೆ ತಂದು ಮಾರುತ್ತಲಿಲ್ಲವೆ? ಏನು ಬೆಲೆ ಗೊತ್ತೇ? ಎಂಟು ಔನ್ಸಿಗೆ ಒಂದು ರೂಪಾಯಿ. ನಮ್ಮೂರಿನ ಬೈಗೆ, ಬಂಗುಡೆಗಳೆಲ್ಲ ದುಡ್ಡಿಗೆ ಪಂಥೇರಿನಂತೆ ಮಾರುತ್ತಿವೆ. ಒಮ್ಮೆ ಕೆಲಸ ತೊಡಗಿದೆನೆಂದರೆ ಮತ್ತೆ ಅರ್ಧ ವ್ಯಾಪಾರವಿಲ್ಲ. ಪ್ರಸಂಗ ಬಂತೆಂದರೆ ಜಾಪಾನಿನಿಂದಲೊ, ಕೆನಡಾದಿಂದಲೊ ಎಕ್ಸ್ಪರ್ಟ್ಸ್

ತರಿಸಿದರೂ ತರಿಸಿದೆನೇ" ಎಂದಾಗ ಅವನ ಮಾತಿನಿಂದ ತುಂಬ ಸಂತೋಷವಾಯಿತು. ಆತ ಕೊನೆಯ ವಾಕ್ಯವನ್ನು ಹೇಳಿದ್ದು ಅತಿಶಯೋಕ್ತಿ ಎಂದು ಕಂಡರೂ, ಉಳಿದ ಕೆಲಸ ಮಾಡಿದರೆ, ಅವನಿಗೂ ತಮ್ಮ ಊರಿಗೂ ಒಂದು ಭೂಷಣ ಎಂದು ತಿಳಿದರು.

ಅಷ್ಟರಲ್ಲಿ ಗಂಪುವಿನ ಮನಸ್ಸು ವಿಷಯಾಂತರಕ್ಕೆ ಹೊರಳಿತು. ಆತ ನಗುತ್ತ "ಡಾಕ್ಟರರೇ, ನಾನು ಊರಲ್ಲಿಯೆ ಬಂದಿರುವವನೆಂದು ಇಷ್ಟರೊಳಗೆ ಸುದ್ದಿಯೂ ಹರಡಿಬಿಟ್ಟಿದೆ. ಅದರಿಂದೇನು ನಷ್ಟವಿಲ್ಲ. ಆದರೆ ನಮ್ಮ ಜನಗಳ ಸ್ವಭಾವ ನೋಡಿ ನನಗೆ ಆಶ್ಚರ್ಯವಾಗುತ್ತದೆ. ಹಿಂದೆ ನನ್ನನ್ನು 'ಇದೊಂದು ಕಾರ್ವಿಯರ'ಗಂಡು'ಎಂದು ತಿಳಿದವರು ಈಗ ಹೂವಿನಹಾರ ಹಾಕುವುದಕ್ಕೆ ಹೊರಟಿದ್ದಾರೆ."

"ಏನಪ್ಪ ಅದು?"

"ನಿನ್ನೆ ನಮ್ಮ ಊರಿನ ಕಾಂಗ್ರೆಸ್ ಪ್ರಭೃತಿಗಳು ನನ್ನ ಹತ್ತಿರ ಬಂದಿದ್ದರು. ಅವರ ಕಡೆಯಿಂದ ನಾನು ಮುನ್ಸಿಪಲ್ ಚುನಾವಣೆಗೆ ನಿಲ್ಲಬೇಕಂತೆ. ಹ್ಯಾಗೂ ನಮ್ಮೂರಲ್ಲಿ ಹೊಸತಾಗಿ ಮುನ್ಸಿಪಾಲಿಟಿಯಾಗಿದೆ. ನನ್ನನ್ನೇ ಅದರ ಚೆಯರ್‌ಮೆನ್ ಮಾಡುತ್ತಾರಂತೆ.'ಯಾಕೆ ಇದೆಲ್ಲ' ಎಂದು ಕೇಳಿದೆ.'ಹಾಗಲ್ಲ ಸಂಗತಿ; ಇನ್ನೊಬ್ಬರು ಚುನಾವಣೆಗೆ ನಿಂತರೆ ಅನಾವಶ್ಯಕವಾದ ಸ್ಪರ್ಧೆ ಉಂಟಾಗುತ್ತದೆ. ನಿಮ್ಮ ಹೆಸರಿಗೆ ತುಂಬ ಮರ್ಯಾದೆಯಿದೆ. ನೀವು ನಿಂತರೆ ಯಾರ ತೊಂದರೆಯೂ ಬರುವುದಿಲ್ಲ' ಎಂದು ನಮ್ಮ ಕಾಂಗ್ರೆಸ್ ಅಧ್ಯಕ್ಷರು ಅಪ್ಪಣೆ ಕೊಡಿಸಿದರು."

"ಕಾಂಗ್ರೆಸ್ ಫಂಡಿಗೆ ಹಣ ಬೇಕಿತ್ತೋ ಏನೋ."

"ಆ ಠಕ್ಕು ನನಗೆ ಗೊತ್ತಿಲ್ಲವೆ? ಅವರು ದುಡ್ಡು ಬೇಕಿದೆ--ಕೊಡಿ ಎಂದರೆ ನಾನು ಕೊಡುವುದಿಲ್ಲವೆ? ಗಾಳ ಹಾಕುವ ಜಾತಿ ನನ್ನದು. ನನ್ನನ್ನೇ ಗಾಳಹಾಕಿ ಇವರು ಹಿಡಿಯ ಬೇಕೆಂದಿದ್ದಾರಲ್ಲ."

"ರಾಜಕೀಯ ಎಂದರೆ ಹಾಗೇನೆ. ನಿನ್ನನ್ನು ಚೆಯರ್‌ಮೆನಾಗಿ ಮಾಡಿದರೆ ದುಡ್ಡು ತೆತ್ತ ನೋವು ನಿನಗೆ ಗೊತ್ತಾಗುವುದಿಲ್ಲ"

"ಹಾಗೆ ಮಾಡುವುದಕ್ಕೆ ಹೋಗಿಯೇ, ರಾಜಕೀಯದ ಮರ್ಯಾದೆ ಕಳೆದದ್ದು. ಇನ್ನೂ ಇದೆ ತಮಾಷೆ-ಹೇಳುತ್ತೇನೆ; ನಿಮ್ಮ, ನಮ್ಮ ಲೆಟರ್ ಹೆಡ್‌ಗಳನ್ನೆಲ್ಲ ಇನ್ನೊಂದು ಸಾರಿ ನಾವು ಮುದ್ರಿಸಬೇಕಾಗುತ್ತದೆ. ಸದ್ಯವೇ

ಮುಂಬಯಿಂದ ಲೋಕಲ್ ಬೋರ್ಡುಗಳ ಮಂತ್ರಿಗಳು ಬರುತ್ತಾರಂತೆ ಅವರು ಬರುವಾಗ ನಮ್ಮ ಕಾಳೂರೆಂಬ ಹೆಸರನ್ನು ವಜಾಮಾಡಿ 'ಕಾಂಚನ ಪುರ' ಎಂದು ಮಾಡುತ್ತಾರಂತೆ. ಅಷ್ಟರೊಳಗೆ ಚುನಾವಣೆ ಮುಗಿಯುತ್ತದೆ. ಅವರಿಗೆ ಸಾರ್ವಜನಿಕ ಬಿನ್ನವತ್ತಳೆ ಅರ್ಪಿಸುತ್ತಾರಂತೆ; ಸ್ವಾಗತ ಸಮಿತಿ ಮಾಡುತ್ತಾರಂತೆ; ನಾನು ಅಧ್ಯಕ್ಷನಾಗಬೇಕಂತೆ. ಇನ್ನೂ ಏನೇನೋ ಹೇಳಿದರು. ನಮ್ಮೂರಿಗೆ ಬಹಳ ಪೂರ್ವದಲ್ಲಿ ಅದೇ ಹೆಸರಿತ್ತಂತೆ. ಈಗ ಹೊಸತಾಗಿ ಬಂದ ಸ್ವರಾಜ್ಯದ ದಿವಸಪಲ್ಲಿ ಹಲವರು ತಮ್ಮ ಊರಿನ ಹೆಸರನ್ನು ಬದಲಿಸಿದ ಹಾಗೆ, ನಾವೂ ಬದಲಿಸಬೇಕು—ಎಂದು ದೊಡ್ಡ ಉಪನ್ಯಾಸವನ್ನು ಬಿಗಿದರು."

"ಹಾಗಾದರೆ ಭಯಂಕರ ಸುಧಾರಣೆಯಾಯಿತಲ್ಲ?"

"ಸುಧಾರಣೆ ಆಗುವುದಾದರೆ ಸಮನಾದ ಸುಧಾರಣೆ ಆಗಬೇಕು. ಕಾಳೂರು ಕಾಂಚನಪುರವಾದ ಮೇಲೆ, ನಾನು ನಮ್ಮ ಅಪ್ಪ ಇರಿಸಿದ ಹಳೆಯ ಹೆಸರನ್ನಿಟ್ಟುಕೊಂಡರೆ ಏನು ಚಂದ? ಗಂಪು ಎಂಬ ನನ್ನ ಹೆಸರು ಕಿತ್ತು ಹಾಕಬೇಕು. ನಮ್ಮ ಕಾಂಗ್ರೆಸ್ ಅಧ್ಯಕ್ಷರಾದ ಅಣ್ಣಪ್ಪಯ್ಯನವರೂ ಆ ಬುರ್ನಾಸು ಹೆಸರನ್ನು ಕಿತ್ತುಹಾಕಬೇಕು. ಅವರೇನು ಹೆಸರಿಟ್ಟುಕೊಳ್ಳುತ್ತಾರೋ? ನಾನು ಗಟ್ಟಿಯಾಗಿ—ಯೋಚನೆಮಾಡಿದ್ದೇನೆ, ಮುಂಬಯಿಯ ಜನಗಳ ಹಾಗೆ ಒಂದು ಹೆಸರನ್ನು ತಯಾರಿಸುವುದು 'ಜೀಪ್ ಕಂಟ್ರಾಕ್ಟರ ವಾಲಾ' ಎಂದೋ, 'ಫಿಶ್ ಟ್ರಾಲರ್ ವಾಲಾ' ಎಂದೋ ಹೆಸರಿಟ್ಟುಕೊಂಡರೆ ನಮ್ಮ ಕುಲ ಗೋತ್ರಗಳು ಒಬ್ಬರಿಗೂ ಗೊತ್ತಾಗುವುದಿಲ್ಲ. ಆದರೆ ಕರ್ಮ— ನಮ್ಮಮ್ಮ ಇನ್ನೂ ನನ್ನನ್ನು ಗಂಪು ಎಂದೇ ಕರೆಯುತ್ತಿದ್ದಾಳಲ್ಲ!

"ತಪ್ಪೇನಯ್ಯ? ಹಿಂದೆ ನಮ್ಮೂರಿಗೆ ಕಾಂಚನಪುರವೆಂದು ಹೆಸರಿತ್ತೆಂದು ನನ್ನಪ್ಪನೂ ಹೇಳುತ್ತಿದ್ದರು. ಹಳೆಯ ಹೆಸರನ್ನೇ ಹೊಸತಾಗಿ ಇಟ್ಟ ಹಾಗಾಯಿತು. ನಿನ್ನ ಹೆಸರು ಹಾಗೇನೂ ಇಲ್ಲವಲ್ಲ. ನೀನು ಮೊದಲೂ ಗಂಪು, ಈಗಲೂ ಗಂಪು. ಕಾಂಚನಪುರವೆಂಬ ಹೆಸರು ಮಾತ್ರ ಭರ್ಜರಿ ಹೆಸರು. ಚಿನ್ನದ ಊರು! ಊರೇನೊ ಚಿನ್ನ! ಬುದ್ಧಿ; ಕಿವಿ ಹಿತ್ತಾಳಿ. ಯಾರದ್ದಪ್ಪ ಇಷ್ಟು ಆಲೋಚನೆ?"

"ಮೊನ್ನೆ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯಲ್ಲೇ ಇದು ಸರ್ವಾನುಮತದಿಂದ ನಿರ್ಣಯವಾಯಿತಂತೆ. ಸರಕಾರಕ್ಕೆ ಮನವಿ ಮಾಡುತ್ತಾರಂತೆ."

"ಮಂತ್ರಿಗಳಿಗೆ ಇನ್ನೇನು ಮಾಡುವುದಕ್ಕೆ ಬಾರದಿದ್ದರೂ, ಇಷ್ಟುಮಾಡ ಬಹುದಲ್ಲ. ಒಂದಿಷ್ಟು ಛಾಪಿಸಿದ ಕಾಗದಗಳು ಹಾಳಾದಾವು. ಟಪ್ಪಾಲು ಕಟ್ಟೆಯವರು ಹಳೆಯ ಮೊಹರನ್ನೆಸೆದು, ಹೊಸ ಮೊಹರು ಮಾಡಬೇಕು. ಒಂದು ನಾಲ್ಕು ದಿನ, ಕಾಳೂರಿಗೆ ಬರುವ ಕಾಗದಗಳು ಯಾವ್ಯಾವ ಊರಿಗೆ ಹೋದಾವು. ಅಷ್ಟರಿಂದ ನಮ್ಮೂರಿನ ದೈವಗಳಿಗೆ ತೃಪ್ತಿಯಾಗುವುದಾದರೆ ಆಗಲಿ."

*  *  *  *  *

ನಾಡಿಗೆ ನಾಡೇ ಸ್ವಾತಂತ್ರ್ಯೋತ್ಸವದ ಹಿಗ್ಗಿನಿಂದ ನಲಿಯುತ್ತಿರುವಾಗ ಕಾಳೂರು ಕಾಂಚನಪುರವಾದುದರಲ್ಲಿ ಸೋಜಿಗವೇನಿಲ್ಲ. ಸ್ವಾತಂತ್ರ್ಯಯುಗ ತೊಡಗಿದುದರಿಂದ ಸ್ವರ್ಣಯುಗವೇ ಬಂದಿತೆಂಬ ಭಾವನೆ ಹಲವರಿಗೆ. ಕಾಳೂರು ತನ್ನ ಹೆಸರನ್ನು ಬದಲಿಸಿಕೊಂಡದ್ದರಿಂದ ರಾಜಕೀಯದಲ್ಲೂ ವ್ಯವಹಾರದಲ್ಲೂ ಮೆರೆದಾಡುವ ಮಹಾನುಭಾವರಿಗೆ ಈ ಬದಲಾವಣೆ ನವ ಸಂಸ್ಕೃತಿಯ ಸೂಚನೆಯಾಯಿತು. ಜನಗಳ ಬುದ್ಧಿ ಬೆಳೆಯದಿದ್ದರೂ, ಶುಚಿಗೊಳ್ಳದಿದ್ದರೂ ನಗರವು ವಿಸ್ತರಿಸಿದೆ. ತೋರಿಕೆಯ ಬೆಡಗು ಹೆಚ್ಚಿದೆ. ಜನ ಜೀವನದಲ್ಲಿ ವಿಲಾಸ ಹೆಚ್ಚುತ್ತಿದೆಯೆಂಬುದರಲ್ಲಿ ಸಂದೇಹವಿಲ್ಲ. ಲಕ್ಷ್ಮಿ ಒಲಿದುದರಿಂದ ಕಾಳೂರು ಅಭಿವೃದ್ಧಿಯ ದಾರಿಯಲ್ಲಿದೆ-ಎಂಬುದು ಒಂದು ದೃಷ್ಟಿಯಲ್ಲಿ ನಿಜ. ಯುದ್ಧದ ಒದೆತದಿಂದ ತೂಕಡಿಸುತ್ತಿದ್ದ ಪಟ್ಟಣ, ಚಟು ವಟಿಕೆಗೊಂಡು ಚೇತರಿಸಿದೆ ಎಂಬುದೂ ನಿಜ.

ಇದಕ್ಕೆ ಪೂರ್ವಸೂಚನೆ ಯೆಂಬಂತೆ ಒಂದು ಸೋಜಿಗವು ಮಹಾಂ ಕಾಳಿಯ ಗುಡಿಯಲ್ಲಿ ಕಾಣಿಸಿತು. ಬಲ್ಲವರಿಗಷ್ಟೆ ಅದು ಗೊತ್ತಿತ್ತು. ದೇವರ ಗುಡಿಯ ಮುಂದಿನ ಧ್ವಜಸ್ತಂಭದ ಮರವು ಒಡೆದು ಸಿಂಬಿಯಾಗಿ, ನರನಾಡಿ ಗಳನ್ನು ತೋರಿಸಿಕೊಂಡು ಶತಮಾನಗಳಿಂದ ಅಲ್ಲಿ ನಿಂತಿತ್ತಾದರೂ, ಗುಲಾ ಬಿಯ ಅಡುಗೆ ಹೆಂಗಸು ಕಾಳಿ-'ಅದು ಕುಡಿಯಲ್ಲಿ ಚಿಗುರೊಡೆದು ಹಸು ರಾಗಿ ಕಾಣಿಸುತ್ತದೆ' ಎಂದಿದ್ದಳು. 'ಗುಲಾಬಿ, ಈ ಧ್ವಜಮರ ಚಿಗುರುವ ಹಾಗೆ ಕಾಣುತ್ತದೆಯಲ್ಲ" ಎಂದಾಗ "ಹೌದು ಕಾಳಿ, ಅದರಲ್ಲಿ ಆಶ್ಚರ್ಯ ವಿಲ್ಲ. ಮೊನ್ನೆ ನಮ್ಮ ದವಾಖಾನೆಗೆ ಒಬ್ಬಳು ಮುದಿ ಅಜ್ಜಿ ಬಂದಿದ್ದಳು. ಅವಳ ಬಾಯಿ ಬೋಡಾಗಿ ಹತ್ತು ವರ್ಷವಾಗಿತ್ತು. ಅವಳು, ನಿಜ ನೋಯು ತ್ತದೆ-ಎಂದು ಕೂಗುತ್ತ ಬಂದಳು. ಅವಳಿಗೂ ತಿರುಗಿ ಸಾಲಾಸಾಲು ಹಲ್ಲು

ಬರುವಂತೆ ಕಾಣುತ್ತದೆ" ಎಂದಳು.

"ಹಾಗೂ ಒಂದುಂಟೇ?"

"ಹೌದು ಕಾಳಿ. ನಾನು ಅವಳ ವಸಡನ್ನು ಮುಟ್ಟಿ ನೋಡಿದೆನಲ್ಲ. ಹರಿತವಾದ ನಾಲ್ಕಾರು ಹಲ್ಲುಗಳು ನನ್ನ ಬೆರಳಿಗೆ ನಾಟಿದುವು" ಎಂದು ಹಾಸ್ಯ ಮಾಡಿದಳು. ಕಾಳಿಗೆ ದೃಷ್ಟಿಮಂದವಾಗುತ್ತಿರುವುದರಿಂದ ತನಗೆ ಕಾಣಿಸದ ಚಿಗುರು ಅವಳಿಗೆ ಕಾಣಿಸುತ್ತದೆ, ಎಂದು ಗುಲಾಬಿ ಚೇಷ್ಟೆಮಾಡಿದಳು.

ಸ್ವಾತಂತ್ರ್ಯೋತ್ಸವದ ದಿನ ಊರ ತರುಣರಿಗೆ ಅತಿ ಎತ್ತರದ ಸ್ತಂಭಗಳಿಗೆಲ್ಲ ಪತಾಕೆಗಳನ್ನೇರಿಸುವ ಹುಮ್ಮಸವಾಯಿತು. ಅದರಲ್ಲೊಬ್ಬ ಮಹಾನುಭಾವ "ಏನಾಗುತ್ತದೆ—ಮಹಾಕಾಳಿ ಗುಡಿಯ ಧ್ವಜಸ್ತಂಭಕ್ಕೆ ಒಂದು ಬಾವುಟವನ್ನೇರಿಸಿದರೆ" ಎಂದು ಹಂಬಲ ತೊಟ್ಟು, ಊರಿಗೆ ಬೆಳಗಾಗುವ ಮುಂಚೆ, ಆ ಸಾಹಸವನ್ನು ಮಾಡಲು ಹೋದ. ಅದನ್ನು ಹತ್ತಿ, ಇಳಿಯುವ ಡೊಂಬರಾಟಮಾಡಿ ಸಾಕಾಯಿತು. ಆದರೆ ಅರ್ಧ ದೂರ ಹತ್ತಿ ಮೇಲೆ ನೋಡುವಾಗ, ಬೆಳಗಿನ ಸೂರ್ಯರಶ್ಮಿಗೆ ಥಳಿಸುತಿದ್ದ ನಾಲ್ಕೆಂಟು ಅಶ್ವತ್ಥದ ಚಿಗುರೆಲೆಗಳನ್ನು ಕಂಡು "ಇಷ್ಟು ವರ್ಷಗಳ ಮೇಲೆ ಈ ಮರ ಚಿಗುರೊಡೆಯಿತಲ್ಲ. ಅದು ಸ್ವಾತಂತ್ರ್ಯೋತ್ಸವದ ದಿನವೇ!" ಎಂದು ವಿಸ್ಮಯಗೊಂಡು ಕೆಳಕ್ಕಿಳಿದ. ಆ ಸಂಗತಿಯನ್ನು ಗುಟ್ಟಿನಲ್ಲಿಟ್ಟುಕೊಂಡಾನೆಯೆ? ಹತ್ತುಜನರಿಗೆ ಅದನ್ನು ಕರೆದು ತೋರಿಸಿದ. ಜನ ಹಿಂಡಾಗಿ ಬಂದು ನೋಡತೊಡಗಿದರು. ಇಬ್ಬರು ನಾಸ್ತಿಕರು "ನಿಮಗೆ ಮರುಳು; ಅದು ಅಶ್ವತ್ಥವೋ,ಗೋಳಿಯೋ ಇರಬೇಕು. ಮಳೆಗಾಲದ ಪಸೆಗೆ ಕಾಗೆಯ ಪಿಟ್ಟೆಯಿಂದ ಹುಟ್ಟಿರಬೇಕು" ಎಂದು ಹೇಳಿದರು. ಪ್ರತಿವಾದ ಹುಟ್ಟಿತು. "ಅಷ್ಟು ದೊಡ್ಡ ಗೆಲ್ಲು ಕಾಣುತ್ತಿದೆ! ತುಂಬ ಎಲೆಗಳಿವೆ. ಅದು ನಿನ್ನೆಯವರೆಗೆ ಕಾಣಿಸದೆ, ಇವತ್ತೇ ಕಾಣುವುದು ಹೇಗೆ?" ಎಂದು ಹಳೆಗಾಲದ ದಂತಕತೆಯನ್ನು ಸ್ಮರಿಸಿ "ಇಲ್ಲ, ಖಂಡಿತಕ್ಕೂ ನಮ್ಮ ಊರಿನ ನಸೀಬಿನಲ್ಲಿ ಅಂಥ ಯೋಗವುಂಟೆಂದು ಪ್ರಾಚೀನ ಪುರಾಣವೇ ಉಂಟು" ಎನ್ನತೊಡಗಿದರು. ಕಾಳಿಯ ಕಣ್ಣಿಗೆ ಆ ಹಸುರು ಎಂಟು ದಿನಗಳ ಹಿಂದೆಯೇ ಕಂಡಿದ್ದರೂ, ಜನಗಳ ರಿಕಾರ್ಡಿನಲ್ಲಿ ಅದರ ಹುಟ್ಟು ಆಗಸ್ಟ್ ಹದಿನೈದಕ್ಕಾಯಿತು. ಸ್ವಾತಂತ್ರ್ಯ ಪಡೆದ ದಿವಸವೇ ಆಯಿತು.

ಹಳ್ಳಿಯ ಗಾದೆಯೊಂದುಂಟು—'ಊರ ಮೇಲೆ ಊರು ಬಿದ್ದರೂ

ಶ್ಯಾನುಭಾಗರ ತಾರ ಬೀಳ!' ಎಂದು; ಅಂಥವರು ಕೆಲವರು ಇದ್ದೇ ಇರು ತ್ತಾರೆ, ಹೊರಗಿನ ಜಗತ್ತಿಗೆ ಕುರುಡರಾಗಿ ತಮ್ಮ ಬದುಕನ್ನು ಸಾಗಿಸುವವರು. ಅಂಥವರಲ್ಲಿ ನಮ್ಮ ಡಾಕ್ಟರರೂ ಒಬ್ಬರು. ಕಾಳೂರು ಕಾಂಚನಪುರವಾದ ಮೇಲೆಯೂ ಡಾಕ್ಟರ್ ಶಿವಪ್ಪನವರ ಚಟುವಟಿಕೆಗಳಲ್ಲಿ, ರೀತಿಯಲ್ಲಿ, ಉಡುಗೆತೊಡುಗೆಗಳಲ್ಲಿ ಯಾವುದಾದರೂ ವ್ಯತ್ಯಾಸವುಂಟಾಗಬೇಕೆ! ಸಾಮಾ ಜಿಕ ಕೂಟಗಳಲ್ಲಿ, ರಾಜಕೀಯದಲ್ಲಿ ಅವರಿಲ್ಲ; ಮುನಿಸಿಪಲ್ ಚುನಾವಣೆ ಯಲ್ಲಿಅವರಿಲ್ಲ. ಊರಲ್ಲಿ ಏಳುತ್ತಿರುವ, ಬೀಳುತ್ತಿರುವ ಕಾರ್ಖಾನೆ, ಕಂಪೆನಿ ಗಳಲ್ಲಿಯೂ ಅವರಿಲ್ಲ. ಅದನ್ನು ಕಂಡು, ಹಲವರು ಹೊಸ ತರುಣ ಪ್ರಜೆಗಳು, ಶಿವಪ್ಪನವರನ್ನು ಕುರಿತು ಹಾಸ್ಯಮಾಡುವುದುಂಟು; "ಪಬ್ಲಿಕ್ ಲೈಫ್ ಎಂಬುದೇ ಬೇಡ ಆ ಪ್ರಾಣಿಗೆ. ಫಕ್ತ ಕಾಸು ಮಾಡುವುದೊಂದೇ. ಎಷ್ಟು ಹೊತ್ತಿಗೂ ಆಸ್ಪತ್ರೆಯೆ. ಈ ಲೋಕವನ್ನು ಸೃಷ್ಟಿಮಾಡಿದ ಬ್ರಹ್ಮನಿಗೂ ಸಹ- ಅವರು ಬದುಕಿದ್ದಾರೋ, ಸತ್ತಿದ್ದಾರೋ ಎಂಬ ಲೆಕ್ಕ ಸಿಗಲಾರದು" ಎನ್ನು ತ್ತಾರೆ. ಅದನ್ನು ಗ್ರಾಮಫೋನು ರಿಕಾರ್ಡು ಮಾಡಿ, ಅವರ ಕಿವಿಗೇನೆ ತಂದು ಹಾಡುವವರಿದ್ದಾರೆ. "ಅದು ನಿಜವಲ್ಲವೆ? ನಾನೇನು ಸಾರ್ವಜನಿಕ ಭಾಷಣ ಮಾಡುತ್ತೇನೆಯೆ? ದೇಶೋದ್ಧಾರದ ಹೊಸ ಹಾದಿ ತೋರಿಸುತಿದ್ದೇನೆಯೆ? ನನಗೆ ಕಲಿಸಿದವರು, ಕಾಯಿಲೆಯಾಗಿ ಬಂದವರಿಗೆ ಇಷ್ಟು ಮದ್ದು ಚುಚ್ಚು- ಎಂದು ಹೇಳಿದ್ದರು. ಬಂದವರ ಮೂಗು ಹಿಡಿದಾಗಲಿ, ಕೈಚುಚ್ಚಿಯಾಗಲಿ ಅಷ್ಟು ಕೆಲಸ ಮಾಡುತ್ತಿದ್ದೇನೆ. ಇನ್ನು, ಧರ್ಮಕ್ಕೆ ನಾನು ದುಡಿಯು ತಿದ್ದೇನೆಯೆ? ಅದೂ ಇಲ್ಲ; ಮದ್ದಿಗೆ ದುಡ್ಡು ತೆಗೆದುಕೊಳ್ಳುತಿದ್ದೇನೆ. ಕೊಟ್ಟ ವರೊಬ್ಬರಿಂದಲೂ "ದುಡ್ಡು ಬೇಡ' ಅಂದಿಲ್ಲ. ಅಥವಾ ತೀರ ಬಡವರನ್ನು ಕಂಡು ಕನಿಕರವಾಗಿ 'ಬೇಡಪ್ಪ ನಿನ್ನ ದುಡ್ಡು' ಎಂದಿದ್ದರೂ, ಅದು ಸಾವಿರ ರೂಪಾಯಿಗಳ ಗಂಟಾಗಲಾರದು" ಎಂದು ಶಿವಪ್ಪನವರೇ ಹೇಳುತ್ತಾರೆ.

ಅವರ ಅನುಯಾಯಿಗಳು "ಹಾಗೆಂದರೆ ಏನು ಡಾಕ್ಟರರೇ? ನೀವು ಈ ಊರಿಗೆ ಬರುವ ಮೊದಲು ಇಲ್ಲಿ ಡಾಕ್ಟರರೆಂಬವರು ಯಾರಿದ್ದರು? ನೀವು ಬಂದಿರಿ; ಒಂದು ಸರಕಾರಿ ಆಸ್ಪತ್ರೆಯೂ ಆಯಿತು. ಒಂದು ಜಡ, ಜಾಪತ್ತು ಬಂದರೆ ಕುಮಟೆಗೊ, ಹುಬ್ಬಳ್ಳಿಗೊ ಓಡಬೇಕಾದ ಪ್ರಸಂಗ ತಪ್ಪಿತು. ಒಂದು ವೈದ್ಯಕೀಯ ಸಹಾಯ, ಆಪತ್ತಿನಲ್ಲಿ ನೆರವಾಗುವ ಕೆಲಸ, ಪಬ್ಲಿಕ್ ಸರ್ವಿಸ್ ಅಲ್ಲವೆಂದರೇನರ್ಥ? ಇವರ ಫಂಡಿಗೆ ಹಣ ತುಂಬಿಸಿದವರು,

ಗಾಂಧಿ ಟೋಪಿ ಧರಿಸಿ ಜೈಲಿಗೆ ಹೋದವರು ಮಾತ್ರ ಸಾರ್ವಜನಿಕ ಸೇವಕರೆಂದೇನು ಅವರ ತಿಳುವಳಿಕೆ?" ಎಂದು ವಾದಿಸುತ್ತಾರೆ.

"ಅದರ ಹಾಗೆ ಇದು ಹೇಗೆ ಆದೀತು? ಊರಿನಲ್ಲಿ ಯೋಗ್ಯ ಕ್ಷೌರಿಕರಿಲ್ಲದೆ ಜನ ಒದ್ದಾಡುತಿದ್ದಾರೆ-ಅನ್ನಿ. ಒಬ್ಬ ಯೋಗ್ಯ ಬಂದ. ಅವನಿಂದಾಗಿ ನಾಲ್ಕು ಜನರು ಮುಖ ಕ್ಷೌರಮಾಡಿಸಿಕೊಂಡು ಚಂದವಾಗಿ ಮೆರೆದಾಡಿದರು. ಅದರಿಂದ ನಾಲ್ವರು ಹುಡುಗಿಯರಿಗೆ ಚೆಲುವಿನ ಗಂಡಂದಿರು ಸಿಕ್ಕಿದರು. ಹಾಗೆಂದ ಮಾತ್ರಕ್ಕೆ, ಎರಡಾಣೆ ತೆಗೆದುಕೊಂಡು ಮುಖ ಕ್ಷೌರಮಾಡಿದ ಹಜಾಮ 'ನನ್ನಿಂದಲೇ ಲೋಕೋದ್ಧಾರವಾಯಿತು' ಎಂದ ಹಾಗಾಗಲಿಲ್ಲವೆ? ನಾನು ಡಾಕ್ಟರನಾಗಿ ದುಡಿಯುವ ಹಾಗೆ, ಅವನೂ ದುಡಿಯುತಿದ್ದಾನೆ; ಅದರಲ್ಲೇನು ವ್ಯತ್ಯಾಸ?"

ಈ ವಾದಸರಣಿ ಮುಗಿಯುವುದರೊಳಗೆ, ಯಾವನಾದನೊಬ್ಬ ಬಂದು ನಿಂತಿರುತ್ತಾನೆ. ಅವನ ಮುಖ, ಕಣ್ಣು, ಕೈನೋಡಿ, ಮಾತು ಕೇಳಿ "ಏನು, ಸೀಸೆ ತಂದಿದ್ದೀಯಾ?" ಎಂದು ವಿಚಾರಿಸುತ್ತಾರೆ. ಅನಂತರ

"ಮನೆಯಲ್ಲಿ ಸ್ವಲ್ಪ ಹಾಲು ಗೀಲು ತರಿಸಿ, ದಿನಕ್ಕೊಂದು ಕಾಲು ಸೇರಿನ ಹಾಗಾದರೂ ತೆಗೆದುಕೊಳ್ಳಲು ಬಂದೀತೆ? ಪಥ್ಯ ಏನೆಂದು ಹೇಳಿದರೆ ನಿನ್ನ ತಲೆಗೆ ಹೋದೀತೆ?" ಎಂದು ವಿಚಾರಿಸಿ, ಅವನ ಹಣೆಯ ಬರಹಕ್ಕೆ ಸಮನಾಗಿ ಮದ್ದು ಬರೆದು ಕೊಟ್ಟ ಬಳಿಕ, ಆ ವಾದ ಮುಂದುವರಿಯಬೇಕು. ಅಷ್ಟರಲ್ಲಿ ಅದು ಮರವೆಯಾಗುವುದೂ ಉಂಟು. ಈ ದಿನ ಅದು ಮರವೆಯಾಯಿತು. ಆದರೆ ಅದನ್ನು ಕೇಳಿದ ಒಬ್ಬ ಗೆಳೆಯ ಮರುದಿನ ಅವಕಾಶ ಹುಡುಕಿಕೊಂಡು "ಡಾಕ್ಟರರೆ, ನಿನ್ನೆ ನೀವು ಏನೋ ಅಂದಿರಲ್ಲ, ನೀವು ನಿಮ್ಮ ಡಾಕ್ಟರಿಕೆಯನ್ನು ಹಜಾಮನ ಕೆಲಸಕ್ಕೆ ಹೋಲಿಸಿ ಬಿಟ್ಟಿರಿ. ನಾನೀಗ ರಜೆಯಲ್ಲಿ ಊರಿಗೆ ಬಂದಿದ್ದೇನೆ. ನನಗೆ ಮುಂದೇನು ಓದಬೇಕು-ಎಂಬ ಯೋಚನೆ ಹಿಡಿದಿದೆ. ಮೆಡಿಕಲಿಗೆ ಹೋಗುವ ಆಸೆ ತುಂಬ. ಅದರಿಂದ ಲೋಕಕ್ಕೊಂದು ಸೇವೆಯಾಗುತ್ತದೆ, ನರಳುವ ಜನಗಳನ್ನು ಉಳಿಸಿದಂತಾಗುತ್ತದೆ-ಎಂದೇನೇನೊ ಕನಸು. ನಿನ್ನೆ ನಿಮ್ಮ ಮಾತು ಕೇಳಿ ನನ್ನ ಉತ್ಸಾಹಕ್ಕೆ ತಣ್ಣೀರೆರಚಿದಂತಾಯಿತು. ಡಾಕ್ಟರರಾದ ನೀವು ಸಹ ಇದೊಂದು ಸೇವೆ—ಎಂದು ತಿಳಿದಿಲ್ಲ—ಎಂದ ಮೇಲೆ ಇನ್ನೇನು ಉಳಿಯಿತು? ಆ ದೃಷ್ಟಿ ನಮಗೆ ಇರಬೇಡವೆ?" ಎಂದು ಪ್ರಶ್ನಿಸಿದ.

"ನನ್ನ ದೃಷ್ಟಿ ಏನಿದ್ದರೇನು? ನಿನ್ನ ಅಭಿರುಚಿಗೆ ಸಮನಾಗಿ ಮುಂದು ವರಿಸಿಕೊಂಡು ಹೋಗಬಾರದೇ?"

"ಆದರೂ ನಾವು ತರ್ಕಕ್ಕೆ ನಿಂತರೆ, ಡಾಕ್ಟರಿಕೆ ಹೆಚ್ಚಿನ ಸರ್ವಿಸ್ ಅಲ್ಲವೆ? ಅನೇಕರ ಸಾವು ಜೀವಗಳ ಸಮಸ್ಯೆಗೆ ನೆರವಾಗುವ ಕೆಲಸ ಒಂದು ದೊಡ್ಡ ಸೇವೆ ಅಲ್ಲವೆ?"

"ನೀನು ತರುಣ—ಅಂಥ ಅಭಿಲಾಷೆ, ಉತ್ಸಾಹ ನಿನ್ನಲ್ಲಿ ಇರಬೇಕಾದದ್ದೇ. ಆದರೆ ಜನಗಳ ಸಾವು, ಜೀವನದ ಸಮಸ್ಯೆ ಎಲ್ಲ ನಿನ್ನ ಕೈಯೊಳಗೇ ಇದೆಯೆಂದು ತಿಳಿದರೆ ಮಾತ್ರ ಶುದ್ಧ ಹುಚ್ಚನೆನಿಸಿಕೊಂಡೀಯು."

"ಹಾಗಲ್ಲ. ಉಳಿದೆಲ್ಲ ಸೇವೆಗಳಿಗಿಂತ ಇದು ಹೆಚ್ಚಿನ ಸೇವೆಯಲ್ಲವೆ?"

"ನನಗೆ ರಾಜಾ, ಈಗೀಗ ನಮ್ಮ ಜನಗಳನ್ನು ನೋಡಿ ಅಂಥ ಭ್ರಮೆ ಏನೂ ಉಳಿದಿಲ್ಲ. ಈ ಸೇವೆ,ಗೀವೆ ಒಂದೂ ನನಗೆ ಅರ್ಥವಾಗುವುದಿಲ್ಲ. ಒಬ್ಬನಮಗೆ ಮೂರು ಕಾಸು ಕೊಟ್ಟರೆ, ಆ ಮೂರು ಕಾಸುಗಳಿಗೆ ತಕ್ಕುದಾದ ವಸ್ತುವನ್ನು ಪ್ರತಿಯಾಗಿ ಕೊಡುವಂಥ ಬುದ್ಧಿ, ಪ್ರಾಮಾಣಿಕತೆ ನಮ್ಮಲ್ಲಿ ಬಂದು ಬಿಟ್ಟರೆ ದೇಶ ತನ್ನಂತೆಯೆ ಉದ್ಧಾರವಾಗುತ್ತದೆ; ಮತ್ತೇನೂ ಮಾಡಬೇಕಾಗಿಲ್ಲ. ಯಾವ ಉದ್ಯೋಗವನ್ನೂ ಮಾಡಬಹುದು. ಮಾಡುವ ಕೆಲಸವನ್ನು ಪ್ರೀತಿಯಿಂದ ಮಾಡಿ 'ನಾಲ್ಕಾಣೆ ದುಡಿತ ಹಾಕುತ್ತೇನೆ ನಾನು. ಇದಕ್ಕೆ ಪ್ರತಿಯಾಗಿ ನನಗೆ ನಾಲ್ಕಾಣೆ ಸಿಕ್ಕಿದರೆ ಸಾಕು, ಅದಕ್ಕೆ ಆರಾಣೆ ಬರಬೇಕಾಗಿಲ್ಲ" ಎಂದರೂ ಸಾಕು. ನಾವು ಹಾಳಾದದ್ದು, ನಮ್ಮ ದೇಶ ಹಾಳಾದದ್ದು, ಅದಿಲ್ಲದೆಯೆ. ಪ್ರತಿಯೊಬ್ಬನೂ ತನಗೆ ನ್ಯಾಯ ಸಿಗಬೇಕೆಂದು ಬಯಸುತ್ತಿದ್ದಾನೇ ಹೊರತು, ತಾನು ಇನ್ನೊಬ್ಬರಿಗೆ ಅದನ್ನು ಸಲ್ಲಿಸಬೇಕೆಂದು ಯೋಚಿಸುತ್ತಲಿಲ್ಲ" ಎಂದರು. ಆ ಗಳಿಗೆಯಲ್ಲಿ ಹಲವು ಘಟನೆಗಳ ನೆನಪಿನಿಂದ ಅವರ ಮನಸ್ಸು ಒಮ್ಮೆಗೆ ಬೇಸರಗೊಂಡಿತು. ಕಾಳೂರಿನಲ್ಲಿ ಹುಟ್ಟಿ, ಬೆಳೆದ ತಾವು, ಊರಿನ ಎಷ್ಟು ಹೆಮ್ಮರಗಳನ್ನು ಕಂಡಿಲ್ಲ? ಅಭಿಮಾನದಿಂದ ಅವನ್ನು ಮೆಚ್ಚಿರಲಿಲ್ಲ! ಅವೇ ಹೆಮ್ಮರಗಳು-ಯುದ್ಧದ ಗಾಳಿ, ಅವಕಾಶದ ಬಿರುಗಾಳಿ, ಹಣದುಬ್ಬರದ ನೆರೆ ಬಡಿಯಲು-ಕುಸಿದ ಬಗೆಯೆಂತು! ಒಂದು ಎರೆಹುಳುವಿನ ದಿಟ್ಟತನವನ್ನು ತೋರಿಸದೆಯೇ ಅವು ಜಗ್ಗಿ, ಕುಸಿದು, ತಮ್ಮ ಕಣ್ಣೆದುರಿಗೇ ಮುರಿದುಬಿದ್ದುದನ್ನು ಕಂಡ ಮೇಲೆ—ಅವರ ಬಾಯಿಗೆ ಲೋಕೋಪಕಾರದ ಹೆಮ್ಮಾತುಗಳು ಬರಲಾರವು. ಅವರೊಡನೆ ಚರ್ಚಿಸು

ತ್ತಿದ್ದ ಎಳೆಯನು "ಪಾಯಿಂಟ್ ಕ್ಲಿಯರ್ ಆಗಲಿಲ್ಲ ಸರ್, ಅದಕ್ಕೂ ಇದಕ್ಕೂ ಏನು ಸಂಬಂಧವೆಂದೇ ತಿಳಿಯಲಿಲ್ಲ" ಎಂದ.

"ಅದರ ಅರ್ಥವನ್ನು ನೀನೆ ಕಾಣಬೇಕು, ಮಗು. ಒಬ್ಬೊಬ್ಬ ತನ್ನ ಜೀವನಕ್ಕೆ ಒಂದೊಂದು ದಾರಿ ಅರಸಿಕೊಂಡು ಹೋಗುತ್ತಾನೆ. ತನ್ನ ದಾರಿಗೆ ಸಂಬಂಧಿಸಿದ ಕರ್ತವ್ಯವನ್ನು ಅವನು ಮರೆಯದೆ ಮಾಡಿದರೆ ಅದೇನೆ ದೊಡ್ಡದು."

ಆದರೆ ಜೀವನದಲ್ಲಿ ಹೊಂಗನಸುಗಳನ್ನು ಕಾಣುತ್ತಿರುವ ಎಳೆಯರಿಗೆ ಅವರ ಮಾತುಗಳು ಯಾವ ಹುರುಪನ್ನೂ ಕೊಡಲಾರವು. ಸಂಸಾರದ ಕಡಲಲ್ಲಿ ಯಶಸ್ವಿಯಾಗಿ ಈಸಿದವರು ಅದರಿಂದ ಕಲಿಯುವ ಪಾಠವೂ ಇಲ್ಲ. ಸೋತವರು ಗೆದ್ದವರ ಬಗ್ಗೆ ಅಸೂಯೆಪಟ್ಟು, ತಮ್ಮ ವಿಚಾರದಲ್ಲಿ ತಾವೇ ಮರುಕಗೊಳ್ಳುವುದಷ್ಟು ಕಾಣುತ್ತದೆ.

ದವಾಖಾನೆಯ ಕೆಲಸ ಮುಗಿಯಿತೆಂದರೆ ಶಿವಪ್ಪನವರು ಊರಿನ ರೋಗಿಗಳ ದರ್ಶನಕ್ಕೆ ಹೊರಡುತ್ತಾರೆ. ಪ್ರತಿ ದಿನವೂ ಅಂಥ ದರ್ಶನ ಇದ್ದೇ ಇರುತ್ತದೆ. ಕೆಲವು ಕಾಯಿಲೆಯ ಜನಕ್ಕೆ ಡಾಕ್ಟರರು ಮನೆಗೆ ಬಂದು "ನಿನ್ನೆಗಿಂತ ಈವತ್ತು ನೀವು ಚೆನ್ನಾಗಿದ್ದೀರಿ" ಎಂದರೇನೆ, ಹಾಗೆ ಕಾಣಿಸುವುದು. ಉಳಿದವರು ಹಾಗೆ ಹೇಳಿದರೂ ನಂಬುವುದಿಲ್ಲ; ಅಂಥ ರೋಗಿಗಳ ಪರಂಪರೆಯೂ ಒಂದಿದೆ. ಅಂಥವರನ್ನೆಲ್ಲ ನೋಡಿಕೊಂಡು, ಮನೆಗೆ ಬಂದ ಮೇಲೆ, ಉಳಿಯುವ ಅಲ್ಪ ವಿರಾಮ ಇಂದುಮತಿಯೊಡನೆ ಹರಟುವುದಕ್ಕೆ. ಅವರ ಸಂಸಾರ ಬೆಳೆದಿದೆ. ಮೂವರು ಮಕ್ಕಳಿದ್ದಾರೆ, ಮೂವರೂ ಗಂಡು ಹುಡುಗರು. ಎರಡನೆಯ 'ಸುಧಾ' ಮೊನ್ನೆಯಿಂದ ಶಾಲೆಗೆ ಹೋಗತೊಡಗಿದ್ದಾನೆ. ಮೂರನೆಯ ಚಂದ್ರ ತೀರ ಚಿಕ್ಕವ. ಈಗ ಅವರ ಮನೆಯ ಬಳಿಯಲ್ಲಿ ಕಟ್ಟುತ್ತಿದ್ದ ವಾರ್ಡಿನ ಕೆಲಸ ಮುಗಿದಿದೆ. ಹಿತ್ತಿಲಿನ ಎದುರಿಗೆ, ರಸ್ತೆಗೆ ಸಮೀಪವಾಗಿ ದವಾಖಾನೆಯ ಚಿಕ್ಕ ಕಟ್ಟಡವೂ ಪೂರ್ತಿಯಾಗಿರುವುದರಿಂದ ಅಷ್ಟು ಮಟ್ಟಿನ ಓಡಾಟ ತಪ್ಪಿದೆ. ಕೆಲಸ ರೂಢಿಯಾಗಿದ್ದುದರಿಂದ ಅದರಿಂದ ಶ್ರಮವಿಲ್ಲ. ಅವರ ಸಂಸಾರ ಸುಖಮಯವಾಗಿಯೇ ಸಾಗಿದೆ.

ಆ ಒಂದು ವರ್ಷದಿಂದ ಗುಲಾಬಿಗೆ ಡಾಕ್ಟರರ ಹಿತ್ತಿಲಿನ ಸಮೀಪವಿರುವ ಇನ್ನೊಂದು ಮನೆಗೆ ಬರುವ ಆತುರ. ಮೊದಲಿನ ಮನೆಯೂ ಬಹು ದೂರವಾಗಿಲ್ಲ. ಆದರೂ ಗುಲಾಬಿ ಹೇಳುತ್ತಾಳೆ "ನನ್ನ ಕೆಲಸ, ಜೀವ ಇರು

ವುದೆಲ್ಲ ಇಲ್ಲಿಯೇ. ಇದ್ದೊಂದು ಮಗುವನ್ನು ಇಡೀ ದಿನ ಬಿಟ್ಟಿರುವುದಕ್ಕೆ ಜೀವ ತಳಮಳಿಸುತ್ತದೆ. ಕಾಳಿಗೂ ನಮ್ಮ ಪ್ರಭಾಕರನಿಗೂ ದಿನವೆಲ್ಲ ಜಗಳ. ಮನೆಯನ್ನು ಬಾಡಿಗೆಗೆ ಕೊಟ್ಟು, ನಿಮ್ಮ ಆಚೆ ಹಿತ್ತಿಲಿನಲ್ಲಿರುವ ಮನೆಯನ್ನು ಬಾಡಿಗೆಗೆ ಮಾಡಿಕೊಂಡರೆ, ಮಗುವನ್ನು ಆಗಾಗ ಕಾಣಬಹುದಲ್ಲ. ಅವನಿಗೂ ನಿಮ್ಮ ಮಕ್ಕಳೊಡನೆ ಸೇರಿ ಆಡುವುದಕ್ಕಾಗುತ್ತದೆ. ಕಾಳಿಯ ಮೇಲೆ ಮನೆಯನ್ನು ಬಿಟ್ಟು ಇರುವುದಕ್ಕೆ ಧೈರ್ಯವಿಲ್ಲ" ಎಂದು ಹೇಳಿ, ಸಮೀಪದ ಮನೆಗೆ ಬಂದವಳು. ಕಾಳಿಯ ಮೇಲಿನ ಅಧೈರ್ಯವೆಂದರೆ ಇನ್ನೇನೂ ಅಲ್ಲ– ತಾನು ಅಡಗಿಸಿಟ್ಟ ಚಿನ್ನಾಭರಣ ಒಂದಲ್ಲ ಒಂದು ದಿನ ಅವಳ ಕಣ್ಣಿಗೆ ಬಿದ್ದು ಕಣ್ಮರೆಯಾದೀತೋ ಎಂಬ ಭಯ. ಆ ಗುಪ್ತನಿಧಿಯನ್ನು, ಇನ್ನೊಂದು ಜೀವ, ಎಂಬಷ್ಟು ಆತುರದಿಂದ ಕಾದು ಬಂದಿದ್ದಾಳೆ. ದೊಡ್ಡದಾಗುವ ತನ್ನ ಮಗನ ವಿದ್ಯಾಭ್ಯಾಸಕ್ಕೆ ಅದು ಇರಲಿ ಎಂಬ ಆಸೆ ತಾಳಿದ್ದಾಳೆ.

ಅಷ್ಟು ಕಾಲದ ಬಳಿಕ ತನ್ನ ಹೊಸ ಬಿಡಾರಕ್ಕೆ ಬಂದು, ಅಲ್ಲಿಯೂ ತನ್ನ ಹಳೆಯ ಚಿನ್ನಾಭರಣಗಳನ್ನು ಇರಿಸಿಕೊಳ್ಳುವ ಧೈರ್ಯವಿಲ್ಲದೆ, ಗುಲಾಬಿ ಅದನ್ನು ಇಂದುಮತಿಯ ವಶಕ್ಕೆ ತಂದುಕೊಟ್ಟಳು. ತಂದುಕೊಡುತ್ತ "ನಾನು ಇದನ್ನೇ ಕೊಡುತ್ತೇನೆಂದದ್ದು. ಇದರ ಭದ್ರತೆಯಿಂದ ಸಾಲಮಾಡಿಯಾದರೂ ಆಸ್ಪತ್ರೆಯನ್ನು ಕಟ್ಟಿಸಬೇಕು ಎಂದದ್ದು. ತಮ್ಮ ಯಜಮಾನರಿಗೆ ಇನ್ನೊಬ್ಬರ ದುಡ್ಡು ಮುಟ್ಟುವುದೆಂದರೆ ಬೆಂಕಿಯ ಕೆಂಡ ಮುಟ್ಟಿದಂತಾಗುತ್ತದೆ. ಹೇಗೂ ಆಗಲಿ, ಅವರ ಹಣದಿಂದಲೇ ಆಸ್ಪತ್ರೆ, ವಾರ್ಡುಗಳನ್ನು ಕಟ್ಟಿಸಿದರಲ್ಲ. ನನ್ನ ಚಿನ್ನ ಖರ್ಚಾಗದೆ ಹಾಗೆಯೇ ಉಳಿಯಿತು. ಅವರ ಆಸ್ಪತ್ರೆಯ ಚಾಕರಿ ಮಾಡುತ್ತ ಜೀವನ ಸಾಗಿಸುವುದಕ್ಕೂ ನನಗೊಂದು ದಾರಿಯಾಯಿತು" ಎಂದು ನಕ್ಕು ನುಡಿದಳು.

ಇಂದುಮತಿ, ತೂಕವಾಗಿದ್ದ ಆ ಡಬ್ಬಿಯನ್ನು ತೆರೆದು, ಒಳಗಿನ ಆಭರಣಗಳನ್ನು ಒಂದೊಂದಾಗಿ ನೋಡಿದಳು. ನೋಡುತ್ತ "ಗುಲಾಬಿ ಇದನ್ನು ಒಂದು ಸಾರಿಯಾದರೂ ನೀನು ಹಾಕಿದ್ದೀಯ? ತಾಯಿಯ ಚಿನ್ನ ಎಂಬ ಅಭಿಮಾನದಿಂದ ಹಾಕಿಕೊಂಡರೇನಾಗುತ್ತದೆ? ನೀನು ಚಿನ್ನ ಹಾಕಿದ್ದೆಂಬುದನ್ನು ನಾನು ಕಾಣಲೇ ಇಲ್ಲ. ಯಾವ ಯುಗದಲ್ಲೊ ದೇವಸ್ಥಾನಕ್ಕೆ ಹೋಗುವಾಗ ಒಂದೆರಡು ಸಾರಿ ಸ್ವಲ್ಪ ಚಿನ್ನ ಹಾಕಿಕೊಂಡಿದ್ದೆ. ಅದನ್ನು ಕಂಡ ನೆನಪೂ ಈಗ ನನಗಿಲ್ಲ. ನೋಡುವ ಹೇಗೆ ಕಾಣುತ್ತದೆಂದು–ಒಂದು

ಸಾರಿ ಹಾಕಿಕೊ" ಎಂದಳು.

"ಇದನ್ನು ಹಾಕಿಕೊಂಡರೆ? ಯಾರಾದರೂ–ಹಳ್ಳಿಯಿಂದ ಬಂದ ಗೌಡಿತಿ–ಎಂದಾರು. ಆಗಿನ ಕಾಲಕ್ಕೆ ಇದು ಚೆನ್ನಾಗಿತ್ತು. ಈಗ ಇಂಥವನ್ನು ಯಾರು ಹಾಕುತ್ತಾರಮ್ಮ? ನನಗಂತೂ ಅದರ ಭ್ರಮೆ ಹೋಗಿದೆ. ಅದನ್ನು ಕರಗಿಸಿ, ಮಾರಾಟಮಾಡಿ, ನಗದು ರೂಪಾಯಿಯನ್ನು ಬೇಂಕಿನಲ್ಲಿರಿಸಿದ ರೇನು? ನಮ್ಮ ಪ್ರಭಾಕರ ದೊಡ್ಡವನಾಗುವಾಗ ಅವನ ವಿದ್ಯೆಗೊಂದು ದಾರಿ ಯಾಯಿತು. ಅಷ್ಟಕ್ಕೆ ಬಂದರೆ ಸಾಕು."

ಇಂದುಮತಿ "ಇರಲಿರಲಿ, ಹಾಗೆಯೇ. ಇಷ್ಟದನ್ನು ಮಾರಾಟಮಾಡಿ ನಗದು ಇಟ್ಟುಕೊಂಡರೆ, ಆ ಹಣ ಕೈಯಲ್ಲಿ ಉಳಿಯುತ್ತದೆ ಅನ್ನುತ್ತೀಯಾ" ಎಂದು ಉಪದೇಶಿಸಿ, ಅವಳ ಸಮ್ಮತಿಯಂತೆ ಅದನ್ನು ಮನೆಯೊಳಕ್ಕೆ ಇರಿಸಿ ಕೊಂಡಳು. ಇಂದುಮತಿಗೆ ಗುಲಾಬಿಯು ನೆರೆಮನೆಗೆ ಬಂದುದರಿಂದ ಮತ್ತಷ್ಟು ಹಿತವೇ ಆಯಿತು.

ಮಹಾಯುದ್ಧದ ದೀರ್ಘಕಾಲವನ್ನು ತಮ್ಮ ದಾಂಪತ್ಯದ ತರುಣದಲ್ಲಿ ಹಾಯ್ದು ಇಂದುಮತಿಗಾಗಲಿ, ಶಿವಪ್ಪನವರಿಗಾಗಲಿ, ವೈಯಕ್ತಿಕವಾದ ಕೊರಗು, ಅತೃಪ್ತಿಗಳಿಗೆ ಹೆಚ್ಚಿನ ಎಡೆ ಇರಲಿಲ್ಲ. ಅವರ ಬದುಕು ಹೂವಿನ ಹಾಸಿಗೆಯಾಗದಿದ್ದರೂ ಅತ್ಯಭಿಲಾಷೆಯಿಲ್ಲದಿದ್ದುದರಿಂದ ಮುಳ್ಳಿನ ಹಾಸಿ ಗೆಯೂ ಆಗಿರಲಿಲ್ಲ. ಬರುತ್ತಿದ್ದ ಆದಾಯವು ಏರುತ್ತಿದ್ದ ವೆಚ್ಚಕ್ಕೆ ಸಾಕಾಗು ತ್ತಿತ್ತು. ಕೂಡಿಟ್ಟು, ಹಣದ ಅಂಕೆ ಸಂಖ್ಯೆಯಿಂದ ಹರ್ಷಗೊಳ್ಳಬೇಕೆಂಬ ಆಸೆ ಮೊದಲಿಂದಲೂ ಇದ್ದಿರಲಿಲ್ಲ. ಅವರ ಪರಮಾವಧಿ ಅಭಿಲಾಷೆ–ತಾನು ದುಡಿದು ತಮ್ಮ ಉದ್ಯಮಕ್ಕೆ ಬೇಕಾದ ಆಸ್ಪತ್ರೆ, ವಾರ್ಡುಗಳನ್ನು ಕಟ್ಟಿಸಿ ನಡೆ ಯಿಸಬೇಕೆಂದು. ಆ ಕೆಲಸವು ಮುಗಿದಿದೆ. ಶಿವಪ್ಪನವರು ಅದರಿಂದ ಪರಮ ತೃಪ್ತರು. ಇಂದುಮತಿಯ ಜೀವನದಲ್ಲೂ ತಾರುಣ್ಯದ ಹುಚ್ಚು ಶ್ರೀಮಂತಿ ಕೆಯ ಆಸೆ, ಲಘು ಜೀವನದ ಬಯಕೆ ಎಂದೇ ಮಾಯವಾಗಿದ್ದವು. ಮುನಿಸು ಗೊಳ್ಳದಂಥ ಪತಿಯಿದ್ದಾನೆ, ನಗುವಿನಿಂದ ತೇಲಿಸುವ ಮೂರು ಮಂದಿ ಮಕ್ಕಳಿದ್ದಾರೆ. ಅವರೊಡನೆ ಆಡಿ, ನಗುವ ಭಾಗ್ಯಕ್ಕಿಂತ ಮತ್ತೊಂದು ಹಿರಿಯ ಸಂಪತ್ತುಂಟೆಂದು ಅವಳು ತಿಳಿದಿಲ್ಲ. ದವಾಖಾನೆಯಿಂದ ಹೊರಟು ಪೇಟೆಗೆ ಹೋದ ಡಾಕ್ಟರರು ಮನೆಗೆ ಬರುವುದು ತುಸು ತಡವಾದರೆ "ಬರಲೇ ಇಲ್ಲ ಡಾಕ್ಟರರು, ಗುಲಾಬಿಯೂ ಬರಲಿಲ್ಲ, ಎಲ್ಲಿ ಹೋಗಿದ್ದಾರೋ, ಯಾರಿಗೆ

ಏನಾಗಿದೆಯೋ” ಎಂಬ ಕುತೂಹಲ ಬರುವುದು ಬರುತ್ತದೆ. ವೇಳೆಯಾದರೆ, ತನ್ನ ವೇಳೆಗೆ ಸಮನಾಗಿ ಮಕ್ಕಳಿಗೆ ಬಡಿಸಿ ತಾನು ಉಣ್ಣುತ್ತಾಳೆ. ಮೊದಲಷ್ಟು ಕಾಲ, ಗಂಡನಿಗಾಗಿ ಮಧ್ಯಾಹ್ನ, ರಾತ್ರೆ ಕಾದು ಕುಳಿತಿರುವುದಿತ್ತು. ಅದನ್ನು ಅವರು ಆಕ್ಷೇಪಿಸಿದರು. “ನನ್ನ ಕೆಲಸ ನನಗಿರುತ್ತದೆ. ನನ್ನ ಹೊಟ್ಟೆ ನನಗೆ, ನಿನ್ನ ಹೊಟ್ಟೆ ನಿನಗೆ. ಇಬ್ಬರೂ ಹಸಿದು ಕುಳಿತಿದ್ದುದರಿಂದ ಯಾವ ದೇವರಿಗೆ ತೃಪ್ತಿ?” ಎಂಬ ತರ್ಕ ಹೂಡಿದ ಮೇಲೆ, ಕಾಯುವುದನ್ನು ಬಿಟ್ಟಿದ್ದಾಳೆ. ಈಗಲೋ, ರಾತ್ರೆ ಮಲಗಿ ನಿದ್ದೆಮಾಡುವ ಮೊದಲು ಅವರು ಬಂದರಾಯಿತು. ಬಂದ ಮೇಲೆ ಅವರಿಗೆ ಬಡಿಸಿ “ಈವತ್ತು ಯಾರಿಗೆ ಏನಾಯಿತು?” ಎಂದು ಕೇಳುವುದುಂಟು.

ಅವರದ್ದೇನು – ಕಾಯಿಲೆಯ ಕತೆ, ಹೆರಿಗೆಯ ಕತೆ, ಅಲ್ಲೊಂದು ಇಲ್ಲೊಂದು ಸಾವು ನೋವುಗಳ ಕತೆ. ಅದನ್ನೆಲ್ಲ ನಕ್ಕೊ, ನಗದೆಯೊ ಹೇಳಿ ಮುಗಿಸಿದರೆ ಅಂದಿನ ದಿನ ಸರಿದಂತೆಯೆ. ಆದರೆ ಇಂಥ ಸವಿಯಾದ ದಿನಗಳು ಅವರ ಬಾಳಿನಲ್ಲಿ ಬಹುದಿನ ಉಳಿಯುವ ಯೋಗ ಮಾತ್ರ ಇರಲಿಲ್ಲ.

ಒಂದುದಿನ ಇಂದುಮತಿ ಗುಲಾಬಿಯೊಡನೆ ಮಾತನಾಡುತ್ತ “ಗುಲಾಬಿ, ನನ್ನ ಬೆನ್ನು ಮೂಳೆಗೆ ಏನಾಗಿದೆ, ನೋಡೇ. ಸುಮಾರು ದಿನವಾಯಿತು, ಅಲ್ಲೊಂದು ಕಡೆ ನೋವಾಗ ತೊಡಗಿ. ಸ್ವಲ್ಪ ಉಬ್ಬಿರಬೇಕಲ್ಲವೆ? ಕುರವೋ ಇನ್ನೇನು ಮಣ್ಣೋ ಏಳುವ ಹಾಗಿದೆ.... ನಮ್ಮತ್ತೆಗಾದ ಕುರ ಆಗದಿದ್ದರೆ ಸಾಕು” ಎಂದಳು. ಗುಲಾಬಿ ರವಕೆಯ ಒಳಗಿಂದ ಬೆನ್ನಿಗೆ ಕೈ ತುರುಕಿ, ಮೈ ಬಳಚಿ ಕುರವಿರುವ ತಾವನ್ನು ಕಂಡುಹಿಡಿದು “ಕುರವೇ ಇರಬೇಕು. ನೋವು ಹೆಚ್ಚಿದೆಯೆ? ನೋವು ಹೆಚ್ಚಿದ್ದರೆ ಶಾಖಕೊಡಬಹುದಲ್ಲ. ಇಲ್ಲದೆ ಹೋದರೆ ಪ್ಲೇಸ್ಟರ್ ಹಚ್ಚಿದರೆ ಕುರ ಬೇಗನೆ ಹಣ್ಣಾದೀತು” ಎಂದು ಉಪದೇಶಮಾಡಿದಳು. ಏನೋ ಒಂದು ಮದ್ದನ್ನು ತಂದು ಸವರಿದಳು.

ಅಲ್ಲಿಂದ ಮೆಲ್ಲ ಮೆಲ್ಲಗೆ ಇಂದುಮತಿಯ ಮೈಯು ಬೆಚ್ಚಗಾಗುವುದಕ್ಕೆ ಪ್ರಾರಂಭವಾಯಿತು; ಹೌದೋ ಅಲ್ಲವೋ ಎಂಬಷ್ಟು ಕ್ಷೀಣವಾದ–ಜ್ವರ. ಒಂದಷ್ಟು ದಿನ ಆಕೆ ಆ ಲಘು ಜ್ವರವನ್ನು ಹೊತ್ತುಕೊಂಡು “ಇದನ್ನೆಲ್ಲ ಏನು ಅವರಿಗೆ ಹೇಳುವುದು?” ಎಂದುಕೊಂಡು, ಪತಿಗೂ ತಿಳಿಸದೆ ಸುಮ್ಮನಿದ್ದಳು. ಒಂದು ದಿವಸ ಶಿವಪ್ಪನವರೇ ವಿರಾಮದಲ್ಲಿ ಆಕೆಯ ಮುಂದೆ ಮಾತನಾಡುತ್ತ ಕುಳಿತಾಗ “ಏನು ಇಂದು, ನಿನ್ನ ಮುಖ ಬಾಡಿದ ಹಾಗಿದೆ

ಯಲ್ಲ, ಜ್ವರವೇ?" ಎಂದು ಕೈಹಿಡಿದರು. ಸ್ಪರ್ಶಬೋಧವಾದ ಉಷ್ಣತೆಯೂ ಕಾಣಿಸಿತು. ಥರ್ಮಾಮಿಟರ್ ತಂದು ಒತ್ತಾಯದಿಂದ ಅವಳ ನಾಲಗೆಯ ಎಡೆಯಲ್ಲಿ ತುರುಕಿ, ಜ್ವರವನ್ನು ಅಳೆದರು; ಎರಡು ಡಿಗ್ರಿಗಳಷ್ಟು ಕಾದಿತ್ತು. "ಈವತ್ತೇಯೆ ಜ್ವರ ಕಾಣಿಸಿದ್ದು?" ಎಂದು ಕೇಳಿದರು.

"ಹಾಗೇನೋ ಇದ್ದ ಹಾಗೆ ಅನಿಸಿತು-ಸುಮಾರು ದಿನಗಳಿಂದ. ಅಷ್ಟೇನು ಸಹಿಸಲಾರದ ತಾಪವಲ್ಲ; ಸ್ವಲ್ಪ ದಣಿವುಂಟು" ಎಂದಳು.

ಯುದ್ಧ ಪರ್ಯವಸಾನದ ಬಳಿಕ, ಎಲ್ಲೆಲ್ಲೂ ಹಬ್ಬಿದ ಮಲೇರಿಯದ ಬಾಧೆಯು ಕಾಳೂರಿನಲ್ಲಿಯೂ ಕಾಣಿಸಿದ್ದುದರಿಂದ, ಅದು ಮಲೇರಿಯಾ ಇರಬಹುದೆಂದು ಶಿವಪ್ಪನವರು ಮೊದಲಿಗೆ ಯೋಚಿಸಿದರು. ಅನಂತರ ಎರಡು ದಿನ ಕಾದು "ನೀನು ವಿಶ್ರಾಂತಿ ತೆಗೆದುಕೋ. ಅಡುಗೆಯ ಹುಡುಗ ಇದ್ದಾನಲ್ಲ. ಅದು ಪಾರಾ ಟೈಫಾಯಿಡು ಇದ್ದರೂ ಇರಬಹುದು" ಎಂದು ಒತ್ತಾಯದಿಂದ ಅವಳಿಗೆ ವಿಶ್ರಾಂತಿ ಕೊಟ್ಟರು. ಆಕೆ ಗಂಡನ ಸಮಾಧಾನಕ್ಕೆ ಒರಗಿಕೊಂಡಳು. ಜ್ವರ ಪ್ರತಿ ದಿನವೂ ಕೆಲವು ಗಂಟೆ ಕಾಲ ನಿಶ್ಚಿತ ವೇಳೆಗೆ ಬರುವುದು ಕಂಡಿತು; ಎಡೆಯಲ್ಲೊಂದು ದಿನ ಗುಲಾಬಿ ತಂದು ಕೊಟ್ಟಿದ್ದ ಅಂಜನವನ್ನು ಬೆನ್ನಿನ ಕುರದಂತಿರುವ ಉಬ್ಬಿಗೆ ಸವರುತ್ತಿದ್ದುದನ್ನು ಕಂಡಾಗ, ಶಿವಪ್ಪನವರಿಗೆ 'ಅದೇನು' ಎಂಬ ಕುತೂಹಲವಾಯಿತು. "ಏನು, ಇರುವೆ ಗಿರುವೆ ಕಚ್ಚಿತೇ" ಎಂದು ಪ್ರಶ್ನಿಸಿದಾಗ "ಅಲ್ಲ; ಕುರ" ಎಂದಳು. ಅವರಿಗೂ ತಮ್ಮ ತಾಯಿಯ ನೆನಪು ಬಂದು ಅದನ್ನು ಪರಿಶೀಲಿಸಹೋದರು. ಅನಂತರ "ಆವತ್ತು ಕುರ ಏಳುತ್ತದೆ ಎಂದಿದ್ದೆಯಲ್ಲ, ಅದೇನೆಯೋ, ಇನ್ನೊಂದೋ?" ಎಂದು ವಿಚಾರಿಸಿದರು. ಊರಿನ ಸುಖ, ದುಃಖ ಚಿಂತನೆಯಲ್ಲಿ ಮನೆಯವಳಿಗಾದ ಈ ಕಿರಿಯ ಕುರವನ್ನು ಅವರು ಮರೆತಿದ್ದರು.

"ಅದೇನೆ; ಹೇಳಿದ ಹಾಗೆ-ಸುಮಾರು ದಿನವಾಯಿತು. ಹಣ್ಣೂ ಆಗಲಿಲ್ಲ; ಗುಣವೂ ಆಗಲಿಲ್ಲ" ಎಂದಳು. ತಮ್ಮ ವಿರಾಮವಿದ್ದುದರಿಂದಲೊ ಏನೋ-ಶಿವಪ್ಪನವರು ಇಂದುವನ್ನು ಒತ್ತಾಯಿಸಿ, ರವಕೆ ತೆಗೆಯಿಸಿ, ಭುಜದ ಹಿಂಗಡೆ ಬೆನ್ನಿನ ಎಡಮಗ್ಗುಲನ್ನು ನೋಡುವಾಗ, ಕುರದ ಮಾದರಿಯಲ್ಲಿರುವ ಎರಡೆರಡು ಗುಳ್ಳೆಗಳನ್ನು ನೋಡಿದರು. ಅದನ್ನೊತ್ತಿದರು; "ನೋವಿದೆಯೇ?" ಎಂದು ಕೇಳಿದರು.

"ಉಂಟೆಂತಲೂ ಇಲ್ಲ, ಇಲ್ಲವೆಂದೂ ಇಲ್ಲ. ಒಂದೊಂದು ಸಾರಿ

ಒಂದೊಂದು ನಮೂನೆ" ಎಂದಳು ಇಂದುಮತಿ.

ಆ ರಾತ್ರೆ ಮಾತ್ರ ಶಿವಪ್ಪನವರ ಮನಸ್ಸು ಸುತ್ತಿ ಸುಳಿಯ ತೊಡಗಿತು. "ಎಂಥ ಹುಚ್ಚ ನಾನು! ಅವಳು ಜ್ವರವೆಂದಾಗಲೇ ಚೆನ್ನಾಗಿ ನೋಡದೆಯೆ ಹೋದೆನಲ್ಲ? ಇದು ಕುರವಲ್ಲ. ಕೊಲ್ಡ್ ಎಬ್‌ಸೆಸ್ ಇರಬಹುದೇ" ಎಂಬ ಅನುಮಾನ ಮೂಡಿತು. ಅನುಮಾನದ ಜೊತೆಗೆ ಬೋನ್ ಟಿ. ಬಿ. ಎಂಬ ಬೆದರಿಕೆಯುಂಟಾಯಿತು.ತಮ್ಮ ಮನಸ್ಸಿಗೆ ಅದು ನಿಶ್ಚಯವೆನಿಸುವವೊದಲು ಅದನ್ನು ಅವಳಿಗೆ ತಿಳಿಸುವಂತಿಲ್ಲ,ಬಿಡುವಂತಿಲ್ಲ-ಎಂಬ ಸಂಕೋಚವುಂಟಾಗಿ ರಾತ್ರೆಯೆಲ್ಲ ತುಂಬ ಚಿಂತೆಗೀಡಾದರು.

ಮರುದಿನ ಬೆಳಿಗ್ಗೆ ಗಂಪುವಿಗೆ ಹೇಳಿಕಳುಹಿಸಿದರು. ಹೊತ್ತಾಗಿ ಆತ ಬಂದು "ಏನು ಡಾಕ್ಟರರೆ, ಹೇಳಿ ಕಳುಹಿಸಿದಿರಂತೆ! ನಿಮ್ಮ ಜನ ಬರುವಾಗ ನಾನು ಮನೆಯಲ್ಲಿರಲಿಲ್ಲ"

"ಅದಿರಲಿ ಗಂಪು, ನಿನ್ನ ಕಾರು ಹುಬ್ಬಳ್ಳಿಗೆ ಗಿಬ್ಬಳ್ಳಿಗೆ ಹೋಗುವುದುಂಟೇ ಸದ್ಯ?"

"ಯಾಕೆ ಹೇಳಿ? ಜೀಪ್ ರೆಡಿ ಇದೆಯಲ್ಲ."

"ಜೀಪಲ್ಲ; ಕಾರೇ ಬೇಕಿತ್ತು. ದೊಡ್ಡ ಕಾರು ಇತ್ತಲ್ಲ?"

"ಕಾರಿದೆ,ಯಾವುದೋ ಒಂದು ಕೆಲಸದ ಮೇಲೆ ಕುಮಟೆಗೆ ಹೋಗಿದೆ. ಒಂದು ಟಾಯರ್ ಬೇಕಿತ್ತು; ತರುವುದಕ್ಕೆ ಹೋಗಿದೆ ಜನ. ಜೀಪ್ ಆದರೆ ಇಲ್ಲೇ ಹೊರಗಿದೆ. ಕೂಡಲೆ ಹೊರಡಬಹುದು. ಏನು? ಅರ್ಜೆಂಟ್ ಕೆಲಸ ಏದೆಯೆ?" ಎಂದು ಆತ ವಿಚಾರಿಸಿದಾಗ "ಹೇಳುತ್ತೇನೆ" ಎಂದು ಅಲ್ಲಿ ನೆರೆದ ಇತರ ರೋಗಿಗಳ ಮುಂದೆ ಮಾತನಾಡದೆ, ಗಂಪುವಿನ ಭುಜದ ಮೇಲೆ ಕೈ ಇರಿಸಿಕೊಂಡು ಹೊರಕ್ಕೆ ಬಂದರು. "ಹುಬ್ಬಳ್ಳಿಗೆ ಹೋಗಿ ಇಂದುವನ್ನು ತೋರಿಸಿ ಎಕ್ಸರೇ ತೆಗೆಯಿಸಬೇಕೆಂದಿದೆ" ಎಂದರು. ಅವನ ಮುಂದೆ ಮನಸ್ಸಿನ ಸಂಶಯವನ್ನು ಬಿಚ್ಚಿ ಹೇಳಿದರು. ಇಂದುವಿಗೆ ಮಾತ್ರ ಯಾವ ಸುದ್ದಿ, ಸಮಾಚಾರಗಳನ್ನೂ ಕೊಡಲಿಲ್ಲ.

ಮರುದಿನ ಬೆಳಿಗ್ಗೆ ಹೊರಡುವ ನಿಶ್ಚಯಮಾಡಿದರು. ಶಿವಪ್ಪನವರು ಗುಲಾಬಿಯನ್ನು ಕರೆದು "ಗುಲಾಬಿ ನಾನು ನಾಳೆ ಇಲ್ಲ. ನೀನು ಮನೆಯಲ್ಲಿ ಸಣ್ಣ ಮಕ್ಕಳನ್ನು ನೋಡಿಕೊಂಡಿರುತ್ತೀಯ. ಇಂದುವಿನ ಎಕ್ಸರೇ-ತೆಗೆಯಿಸುವುದು ಒಳ್ಳೆಯದೆಂದು ಕಾಣುತ್ತದೆ" ಎಂದರು.

"ಅಷ್ಟಕ್ಕೆ?"

"ಎಷ್ಟಕ್ಕೆ ಎಂದು ಈಗ ಹೇಗೆ ಹೇಳಲಿ?" ಎಂದು ಶಿವಪ್ಪನವರು ಹೇಳಿದರು. ಮರುದಿನ ಬೆಳಗ್ಗೆ ಅವರು ಇಂದುವಿನೊಡನೆ "ಇಂದೂ, ಈವತ್ತು ಹುಬ್ಬಳ್ಳಿಗೆ ಹೋಗಿ ಬರುವ. ಗಂಪು ಕಾರು ತರುತ್ತಾನೆ. ಬೆನ್ನಿನ ಎಕ್ಸರೇ-ತೆಗೆಯುವುದು ಒಳ್ಳೆಯದು. ಜ್ವರಕ್ಕೂ ಅದಕ್ಕೂ ಸಂಬಂಧವಿದ್ದ ಹಾಗಿದೆ" ಎಂದಾಗ ಆಕೆ ಒಡಂಬಟ್ಟಳು. ಆದರೆ ತನ್ನ ಕಿರಿಯ ಮಗುವನ್ನು ಮನೆಯಲ್ಲಿ ಬಿಡುವುದಕ್ಕೆ ಇಷ್ಟಪಡಲಿಲ್ಲ. ಅವಳೆಂದೂ ಮಕ್ಕಳಿಂದ ದೂರವಾದವಳಲ್ಲ. ಅದೂ ಬರಿಯ ಎರಡು ವರ್ಷದ ಮುದ್ದು ಚಂದ್ರಶೇಖರನನ್ನು ಬಿಟ್ಟಿರುವುದಾಗದು. ಹುಬ್ಬಳ್ಳಿಗೆ ಹೋದರೆ, ತವರಿನ ಮುಖವನ್ನೂ ಕಂಡು ಬರಬಹುದು" ಎಂದು ಮಗುವನ್ನು ಕರೆದೊಯ್ಯುವ ಹಟ ಮಾಡಿದಳು. "ಆಗಲಿ" ಎನ್ನಬೇಕಾಯಿತು ಶಿವಪ್ಪನವರು. ಗಂಪುವಿನ ಮೋಟರು ಬರುತ್ತಲೆ ಎಲ್ಲರೂ ಹೊರಟು ಕುಳಿತರು. ಡಾಕ್ಟರರು ಅವಸರಿಸಿ, ಕ್ಷಣ ಕಾಲ ಊರಿನ ತಮ್ಮ ರೋಗಿಗಳನ್ನು ನೆನೆದು, ಗುಲಾಬಿಯನ್ನು ಕರೆದು ಅವಳೊಡನೆ "ಮನ್ನೆ, ಡಿಸ್‌ಪೆನ್ಸರಿ ನೋಡಿಕೊಂಡಿರು, ಆಚೆಯ ಡಾಕ್ಟರರು ಕುಲಕರ್ಣಿಯವರಿಗೆ ಒಂದು ಗಳಿಗೆ ಬಂದು ಹೋಗಿ ಎಂದಿದ್ದೇನೆ. ಬಂದಾರು . . . . ಮನೆಯಲ್ಲಿ ಮಕ್ಕಳು ಜಾಗ್ರತೆ. ಬರಲು ಎರಡು ಮೂರು ದಿನ ಹಿಡಿದರೂ ಹಿಡಿದೀತು" ಎಂದು ಮೇಲಿಂದ ಮೇಲೆ ನೆನಪು ಕೆದಕಿ, ಕೆದಕಿ, ಹೇಳಬೇಕಾದ್ದನ್ನೆಲ್ಲ ಹೇಳಿ, ಅವರು ಹೊರಡುವಾಗ ಬೆಳಗಿನ ಹತ್ತು ಗಂಟೆಯಾಗಿತ್ತು. ಸಂಜೆಯಾಗುವಾಗ ಹುಬ್ಬಳ್ಳಿಯನ್ನು ಸೇರಿದರು.

ರಾತ್ರಿ ಹುಬ್ಬಳ್ಳಿಯಲ್ಲಿ ಉಳಿಯುವುದಕ್ಕಿಷ್ಟವಾಗದೆ, ನೇರಾಗಿ ಧಾರವಾಡದ ಮಾವನ ಮನೆಗೆ ಹೋದರು. ಅಪೂರ್ವಕ್ಕೆ ಬಂದ ಅಳಿಯ, ಗೆಳೆಯ, ಮಗಳು ಮತ್ತು ಮೊಮ್ಮಗನನ್ನು ನೋಡಿ ಮನೆಯವರಿಗೆ ಆಶ್ಚರ್ಯವಾಯಿತು. "ಹೀಗೆಯೇ ನೋಡಿಕೊಂಡು ಹೋಗುವ-ಎಂದು ಬಂದೆ. ಹುಬ್ಬಳ್ಳಿಗೆ ಬರುವುದಿತ್ತು. ಇವತ್ತೇನು ಕೆಲಸವಾಗುವ ಹಾಗಿಲ್ಲ" ಎಂದು ನೆಪಹೇಳಿ, ಅವರ ಆತಿಥ್ಯದಲ್ಲಿ ರಾತ್ರಿಯನ್ನು ಕಳೆದರು. ಹುಬ್ಬಳ್ಳಿಗೆ ಹೋಗಿ ಎಕ್ಸರೇ—ಮಾಡಿಸಿದಾಗ, ಶಿವಪ್ಪನವರ ಅನುಮಾನ ಖಚಿತವಾಯಿತು. ಗಂಪು ಆಸ್ಪತ್ರೆಯೊಳಕ್ಕೆ ಬಂದಿರಲಿಲ್ಲ. ಕಾರಿನ ಬಳಿಯಲ್ಲಿ ನಿಂತು ಯಾರೊಡನೆಯೊ ಸಂಭಾಷಿಸುತಿದ್ದ. ಡಾಕ್ಟರರು ಗಂಪುವನ್ನು ಸೇರುವಾಗ ಅವರ ಮುಖದ ಕಾಂತಿ ತಗ್ಗಿತ್ತು; ಕಣ್ಣು

ವ್ಯಾಕುಲಭರಿತವಾಗಿತ್ತು. ಬಂದ ಶಿವಪ್ಪನವರೊಡನೆ ಗಂಪು "ಏನಿಲ್ಲವಲ್ಲ ವಿಶೇಷ?" ಎಂದು ಕೇಳಿದ.

"ಇಲ್ಲ ಎಂದರೇನು? ಇದೆ. ನಾನು ಊಹೆಮಾಡಿದ್ದೇ ಸಮ. ನನ್ನಲ್ಲಿ ಮಾತ್ರ ಅದರ ಚಿಕಿತ್ಸೆಗೆ ಏರ್ಪಾಟಿಲ್ಲ. ನಮ್ಮ ಊರೇನೆ ಅದಕ್ಕೆ ಪ್ರಯೋಜನವಿಲ್ಲ."

"ಪುನೆ ಇಲ್ಲವೆ, ಮುಂಬಯಿಗೆ ಹೋಗಬೇಕಾದೀತೆ?"

"ಪುನೆಯುಷ್ಟು ದೂರ ಬೇಡ; ಕುಕನೂರು ಆಸ್ಪತ್ರೆ ಸಾಕಷ್ಟು ಸಮೀಪವಾಗಿದೆಯಲ್ಲ."

"ಏನು ಕಷ್ಟ, ಕೊಂಡು ಹೋಗಬಹುದಲ್ಲ"

"ನೋಡುವ–ಯಾವುದಕ್ಕೂ. ನಿನಗೆ ಆ ಮೇಲೆ ಹೇಳುತ್ತೇನೆ. ಊರಿಗೆ ಹೋಗಿ ಯೋಚನೆ ಮಾಡಬೇಕಾದೀತು. ಕುಕನೂರಲ್ಲಿ ಜಾಗ ಸಿಗುತ್ತದೆಯೆಂದು ಖಾತ್ರಿಯಾದ ಮೇಲೆ ಹೊರಡಬೇಕು. ಅವಳ ಜತೆಯಲ್ಲಿ ಹೋಗಿ ಇರುವವರು ಬೇಕು. ಇದು ತಿಂಗಳು, ಆರು ತಿಂಗಳುಗಳ ವ್ಯಾಪಾರ. ಥಕ್ಕನೆ ಹೋಗಿಬರುವ ಸಂಗತಿಯಲ್ಲ. ನಾನು ಊರು ಬಿಡುವುದೂ ಕಷ್ಟ; ಬಿಡದಿರುವುದೂಕಷ್ಟ. ಹೀಗಾಗಿ ಯೋಚಿಸಬೇಕಾಗಿದೆ."

"ಸೀಟು, ಎಡ್ಮಿಷನು ಇವುಗಳ ಚಿಂತೆಯೆಲ್ಲ ನಿಮಗ್ಯಾಕೆ ಡಾಕ್ಟರರೇ? ಕುಕನೂರಲ್ಲ ಯಾವ ಊರಾದರೂ ಆ ಜವಾಬ್ದಾರಿ ನನಗಿರಲಿ. ಒಬ್ಬರಲ್ಲ ಒಬ್ಬರನ್ನು ಹಿಡಿದು ಅಷ್ಟು ಕೆಲಸ ಮಾಡಿಸಿಯೇನು. ಉಳಿದ ಏರ್ಪಾಟು ನಿಮ್ಮದು. ಕಾರೂ ನಿಮ್ಮದಾಗಿದೆ. ಆದರೆ ಇಂದಮ್ಮನ ಜತೆಗಿರುವುದಕ್ಕೆ ಒಬ್ಬರು ಬೇಕು-ಎಂಬುದು ಖಂಡಿತ. ಅಲ್ಲದೆ ನಿಮ್ಮ ಚಂದ್ರನನ್ನು ಅಜ್ಜಿಯ ಮನೆಯಲ್ಲಿ ಬಿಡುವುದೇ, ಊರಿಗೆ ಕೊಂಡುಹೋಗುವುದೇ ಎಂದು ಯೋಚನೆ ಮಾಡಬೇಕು"

ಬೆನ್ನ ಹಿಂದುಗಡೆಯಲ್ಲಿಯೇ ನಿಂತಿದ್ದ ಇಂದುಮತಿಯ ಮನೋಭಾವ ಈ ಸಂಭಾಷಣೆಯಿಂದ ಏನಾದೀತೆಂದು ಶಿವಪ್ಪನವರು ಯೋಚಿಸಿಯೇ ಇರಲಿಲ್ಲ. ಆಕೆ ಕೇಳಿ ಚಕಿತಳಾದಳು. ಮೂರು ತಿಂಗಳೋ, ಆರುತಿಂಗಳೋ, ಗಂಡನನ್ನು ಬಿಟ್ಟು, ಮಕ್ಕಳನ್ನು ಬಿಟ್ಟು, ಯಾವುದೋ ಕುಕನೂರಲ್ಲಿ ಇರಬೇಕೆನ್ನುತ್ತಾರಲ್ಲ. ಅದೂ ಇಂಥ ಚಿಲ್ಲರೆ ಬೇನೆಗೆ!" ಎಂದು ಅವಳು ಬೆರಗುಗೊಂಡಳು. ಮೋಟರಿನಲ್ಲಿ ಕುಳಿತಾಗ ಶಿವಪ್ಪನವರು, ಇಂಥ ಸಮಯದಲ್ಲಿ

ಮುಚ್ಚುಮರೆ ಸಮನಲ್ಲವೆಂದು ಯೋಚಿಸಿ,ಬೇನೆಯ ಹೆಸರೊಂದನ್ನು ಬಿಟ್ಟು ಉಳಿದ ವಿಪತ್ತಿನ ವಿವರಗಳನ್ನು ಹೇಳಿದರು. "ಆರಂಭದಲ್ಲಿಯೇ ತಡೆಯು ಬೇಕು ಅದನ್ನು. ಉದಾಸೀನಮಾಡಿ ಒಂದಕ್ಕೊಂದಾಗಬಾರದಲ್ಲ" ಎಂದು ಸಮಾಧಾನ ಹೇಳಿದರು. ದೂರ ಹೋಗುವುದಕ್ಕೆ ಅವಳು ಅಂಜುತ್ತಲಿಲ್ಲ. ಅವಳ ನೋವು--ಮಕ್ಕಳನ್ನು ಬಿಟ್ಟಿರುವುದಕ್ಕೆ;ಪತಿಯನ್ನು ಅಗಲಿರುವುದಕ್ಕೆ.

"ಇಂದೂ, ನೀನೇನು ಮಗುವೇ? ನಾವೆಲ್ಲರೂ ಬಂದು ಕುಕನೂರಲ್ಲಿ ಬಿಡಾರ ಮಾಡುವುದಾದರೂ ಸಾಧ್ಯವೆ?"

"ನೀವು ಬರುವುದು ಕಷ್ಟ; ನನಗೆ ಗೊತ್ತು. ಊರಲ್ಲಿ ನಿಮ್ಮನ್ನು ನಂಬಿ ಇರುವವರನ್ನು ಓಡಿಸುವುದಕ್ಕೂ ಆಗುವುದಿಲ್ಲ. ಸಣ್ಣ ಮಕ್ಕಳಾದರೂ ಸಮೀಪ ವಿದ್ದರೆ ಆಗುತಿತ್ತು. ಇಲ್ಲದೆ ಹೊತ್ತುಹೋಗುವುದು ಹೇಗೆ? ಅವುಗಳ ಚಿಂತೆ ಯಿಂದಲೇ ನನ್ನ ಜ್ವರ ಹೆಚ್ಚಾದೀತು."

"ಆ ಮಕ್ಕಳಿಗೋಸ್ಕರವೇ ನೀನು ಹೋಗುವುದೆಂದು ತಿಳಿ. ವಿಶ್ರಾಂತಿಗೆ ಹೋಗುವವಳು ಮಕ್ಕಳನ್ನು ಕಟ್ಟಿಕೊಂಡು ಹೋದರೆ, ವಿಶ್ರಾಂತಿ ಸಿಗುವು ದುಂಟೆ? ಹೆಚ್ಚೆಂದರೆ ಮೂರು ತಿಂಗಳು ಇರಬೇಕಾದೀತು. ಹಾಗೆ ಮೂರು ತಿಂಗಳಿದ್ದರೆ ಮೂರು ವರ್ಷದ ಆಯುಷ್ಯ ಹೆಚ್ಚಾದೀತು" ಎಂದರು. ಮೋಟರಿ ನಲ್ಲಿ ಕುಳಿತು ಧಾರವಾಡಕ್ಕೆ ಮರಳಿ ಬರುವಾಗ ವಿಶೇಷವಾದ ನಿರ್ಧಾರ ವೇನೂ ಆಗಲಿಲ್ಲ. ಇಂದು ತನ್ನ ಚಂದ್ರನನ್ನು ಕೂಡಿಕೊಂಡುದರಿಂದ ಒಮ್ಮೆ ಮನಸ್ಸಿಗಾದ ಗಾಬರಿಯೂ ಹೋಯಿತು. ಅವಳ ಅಂತರಂಗಕ್ಕೆ ಅದೊಂದು ವಿಶೇಷವಾದ ಜ್ವರ, ಆಪತ್ತು--ಎಂದು ಹೊಳೆಯುತ್ತಿರಲಿಲ್ಲ. ಇಂದುಮತಿಯನ್ನು ತಿರುತಿರುಗಿ ಮೋಟರಿನಲ್ಲಿ ಅಲೆದಾಡಿಸಿ ದಣಿಸಬಾರ ದೆಂದು "ನಾಲ್ಕು ದಿನ ನೀನು ತವರಿನಲ್ಲಿರು" ಎಂದು ಉಪದೇಶಿಸಿ, ಶಿವಪ್ಪ ನವರು ಊರಿಗೆ ಮರಳಿದರು. ಗಂಪು ಅವರ ಸಲುವಾಗಿ ಕುಕನೂರಿಗೆ ಹೊರಟ.

ಕುಕನೂರು ಆ ಪ್ರದೇಶದಲ್ಲಿ ಒಂದು ಆರೋಗ್ಯ ಧಾಮ; ಹೆಸರಾದ ಒಂದು ಆಸ್ಪತ್ರೆ ಇರುವಂಥ ಸ್ಥಳ. ಅಲ್ಲಿಗೆ ಹೆಚ್ಚಾಗಿ ಬರುವವರು ಕ್ಷಯ ರೋಗಿಗಳು. ಅದು ರೋಗಿಗಳವೇ ಒಂದು ನಗರ ಎಂದರೂ ಸಲ್ಲುತ್ತದೆ. ಅದನ್ನು ಬಿಟ್ಟರೆ ಊರು, ಪೇಟೆಯೆಂಬುದು ಬಲು ಸಣ್ಣದು. ಅಲ್ಲಿನ ಆಸ್ಪತ್ರೆ ಯಲ್ಲಿ ಜಾಗ ದೊರಕಿಸಿಕೊಳ್ಳುವುದಕ್ಕೆ ಎಲ್ಲೆಲ್ಲಿಂದ ಬಡಪಾಯಿಗಳು ಬರು

ತ್ತಾರೆ. ಅಲ್ಲಿ ಒಂದು ಸ್ಥಳ ಸಿಕ್ಕಿತೆಂದರೆ, ತಾವು ಪಾರಾದೆವೆಂದು ರೋಗಿಗಳ ಪಾಲಿನ ತಿಳುವಳಿಕೆ. ಅದರ ನಿಜತ್ವ ಹೇಗೂ ಇರಲಿ; ಆಸ್ಪತ್ರೆಯ ಪ್ರಸಿದ್ಧಿ ಅಷ್ಟಿತ್ತು.

ಗಂಪು ಅದೇ ದಿನ, ನೆಟ್ಟಗೆ ಕುಕನೂರಿಗೆ ಹೊರಟುಹೋದ. ಹೋದ ದಿವಸ ಅವನ ಕೆಲಸವಾಗಲಿಲ್ಲ. ಮರುದಿನ ವಿಚಾರಿಸಿದಾಗ-ಆಸ್ಪತ್ರೆಯ ಸುಪರಿಂಡೆಂಟರು, ಕಾದಿರುವ ಹಲವಾರು ರೋಗಿಗಳ ಪಟ್ಟಿಯನ್ನು ತೋರಿಸಿದರು. "ಹತ್ತು ರೂಪಾಯಿ ಕೊಟ್ಟು ನಿಮ್ಮ ಹೆಸರನ್ನು ರಿಜಿಸ್ಟ್ರಿಮಾಡಿರಿ. ಖಾಲಿಯಾದಾಗ ಸೀರಿಯಲ್ ಆರ್ಡರಿನಂತೆ ನಿಮಗೆ ತಂತಿ ಕೊಡುತ್ತೇವೆ. ಆಮೇಲೆ ರೋಗಿಯನ್ನು ಕರೆದುತಂದರೆ ಸಾಕು" ಎಂದರು.

"ಎಷ್ಟು ಸಮಯ ಹಿಡಿದೀತು?"

"ತಿಂಗಳಾಗುವುದೂ ಉಂಟು, ಆರು ತಿಂಗಳಾಗುವುದೂ ಉಂಟು. ಹ್ಯಾಗೆ ಹೇಳಲು ಬರುತ್ತದೆ?"

"ಆರು ತಿಂಗಳೇ? ಅಷ್ಟರಲ್ಲಿ ಕಾಯಿಲೆ ಹೆಚ್ಚಾಗಿ, ತಂದೂ ಪ್ರಯೋಜನವಾಗದಿದ್ದರೆ?"

"ಅದರ ಹೊಣೆ ನಾವು ಹೊರುತ್ತೇವೆಯೆ?" ಎಂಬ ನಿರಾಶೆಯ ಪ್ರತ್ಯುತ್ತರ ದೊರೆಯಿತು. ಗಂಪುವಿಗೆ ಕುಕನೂರು ಗುರುತಿಲ್ಲದ ಊರು. ಗುರುತಾಗಬೇಕಾದ ಕಾರಣವೂ ಇದ್ದಿರಲಿಲ್ಲ. ಅಲ್ಲಿಂದ ಕೊಲ್ಲಾಪುರಕ್ಕೆ ಕೆಲವೇ ತಾಸುಗಳ ಪಯಣ. ಅಲ್ಲಿ ಅನೇಕ ಸ್ನೇಹಿತರಿದ್ದಾರೆ. ಅಲ್ಲಿಗೆ ಧಾವಿಸಿದ. ಪ್ರಭಾವಶಾಲಿ ಮಿತ್ರರೊಬ್ಬರಿಂದ ಒಂದು ಪತ್ರವನ್ನು ತಂದ: "ಈ ಪರಿಚಯ ಪತ್ರ ತರುವ ನಮ್ಮ ಮಿತ್ರರಿಗೆ ಕೂಡಲೆ, ಆದಷ್ಟು ಬೇಗ, ಅನುಕೂಲತೆ ಕಲ್ಪಿಸಿ ಕೊಡಬೇಕು" ಎಂಬ ಪತ್ರ ಅದು. ಪತ್ರಕೊಟ್ಟವರು ಒಬ್ಬ ನಿವೃತ್ತ ಅಧಿಕಾರಿಗಳು; ಪ್ರತಿಷ್ಠಿತರು. ಆ ಪತ್ರವನ್ನು ತಂದಾಗ ಮೊದಲು ದೊರೆಯದಂಥ ಗೌರವ ಸತ್ಕಾರಗಳು ಆಸ್ಪತ್ರೆಯ ಸುಪರಿಂಡೆಂಟರಿಂದ ದೊರೆಯಿತು. ಆ ಅಧಿಕಾರಿಯು ಈಗ ನಿವೃತ್ತನಾಗಿದ್ದರೂ ಅಧಿಕಾರದಲ್ಲಿದ್ದಾಗ, ಗಂಪುವಿನಿಂದ ಉಪಕೃತನಾಗಿದ್ದ. ಮೋಟರುಗಳ ಅಭಾವದ ಕಾಲದಲ್ಲಿ ಗಂಪು ತಾನು ಕಷ್ಟದಿಂದ ಪರ್ಮಿಟ್ ಪಡೆದು ದೊರಕಿಸಿಕೊಂಡ ಒಂದು ಕಾರನ್ನು, ಕೊಂಡ ಬೆಲೆಗೂ ಕಡಿಮೆಯಾಗಿ ಆತನಿಗೆ ಮಾರಿದ್ದ. ನಿವೃತ್ತಿಯಾದ ಮರುದಿನ ಆ ಅಧಿಕಾರಿ, ಅದನ್ನು ಮುಮ್ಮಡಿ ಬೆಲೆಗೆ ಮಾರಿ, ಗಂಪುವಿಗೆ ಅಪ್ರತ್ಯಕ್ಷವಾಗಿ

ಋಣಿಯಾಗಿದ್ದ. ಹೀಗಾಗಿ ಹಳೆಯ ಋಣವನ್ನು ಇಷ್ಟು ಸುಲಭದಲ್ಲಿ ಸಲ್ಲಿಸುವುದಕ್ಕೆ ಬಂದುದರಿಂದ ಅವನಿಗೂ ಆನಂದವಾಗಿತ್ತು.

ಏನೂ ಇರಲಿ, ಪತ್ರದಿಂದ ಪ್ರಯೋಜನವಾಯಿತು. ಸುಪರಿಂಡೆಂಟ್ ಉಪಚಾರದ ಮಾತುಗಳನ್ನಾಡಿದ. "ಗಣಪತಿರಾಯರೇ, ನಿಮ್ಮ ಪರಿಚಯ ವಾದುದು ಸಂತೋಷ. ಯಾವ ಗಳಿಗೆಗೂ ನಿಮ್ಮ ರೋಗಿಯನ್ನು ಸೇರಿಸಿ ಕೊಳ್ಳುವ" ಎಂದರು. ಬರಲಿರುವ ರೋಗಿಯು ತನ್ನ ಮಿತ್ರರ ಮಡದಿ ಎಂದು ತಿಳಿಸಿದರೂ, ಪ್ರವೇಶದ ಅವಕಾಶ ದೊರೆಯುತ್ತದೆಂದು ಖಂಡಿತವಾದ ಮೇಲೆ ಗಂಪು ಅಲ್ಲಿಂದ ಹೊರಟ. ಅಲ್ಲಿಂದ ಧಾರವಾಡಕ್ಕೆ ಬಂದು, ಇಂದುಮತಿಯನ್ನು ಭೇಟಿಮಾಡಿ "ಅಮ್ಮ, ಏನೇನೂ ಚಿಂತೆ ಬೇಡ. ಅಲ್ಲಿ ನಿಮಗಾಗಿ ಬೇಕಾದ ಏರ್ಪಾಟುಮಾಡಿದ್ದೇನೆ" ಎಂಬ ವಿಶ್ವಾಸದ ಮಾತು ಹೇಳಿ, ಊರಿಗೆ ಧಾವಿಸಿದ. ಊರನ್ನು ಸೇರಿದ ಬಳಿಕ ಶಿವಪ್ಪನವರೊಡನೆ ದೀರ್ಘಾಲೋಚನೆ ಮಾಡಬೇಕಾಯಿತು. ಶಿವಪ್ಪನವರಿಗೆ, ತನ್ನನ್ನು ನಂಬಿರುವ ಊರಿನ ಕೆಲವು ರೋಗಿಗಳನ್ನು ತಿಂಗಳು ಆರು ತಿಂಗಳುಗಳ ಕಾಲ ಬಿಟ್ಟಿರುವುದು ಅಸಾಧ್ಯವಾಗಿತ್ತು. ಅಲ್ಲದೆ ಬೇನೆಯ ಕಾಲವನ್ನು ಇಂತಿಷ್ಟೇ ಎಂದು ನಿರ್ಣಯಿಸುವ ಹಾಗಿರಲಿಲ್ಲ. ಇತ್ತ ಮಕ್ಕಳನ್ನು ಮನೆಯಲ್ಲಿರಿಸಿಕೊಳ್ಳುವುದೇ, ಧಾರವಾಡಕ್ಕೆ ಕಳುಹಿಸಿ ಕೊಡುವುದೇ—ಎಂಬ ಚಿಂತೆ ಬೇರೆ. ಒಟ್ಟಿಂದ ಯೋಚಿಸಿ, ಯೋಚಿಸಿ, ಇಂದುಮತಿಯ ಜತೆಗೆ ಗುಲಾಬಿಯನ್ನು ಕಳುಹಿಸುವ ನಿರ್ಧಾರವನ್ನು ಮಾಡಿದರು. ಮಕ್ಕಳನ್ನು ಸ್ಥಳಾಂತರಿಸುವ ಆವಶ್ಯಕತೆ ಇಲ್ಲವೆಂದು ತೀರ್ಮಾನಿಸಿದರು.

ಒಂದೆರಡು ದಿನಗಳಲ್ಲಿಯೆ ಶಿವಪ್ಪನವರು, ಗಂಪು, ಗುಲಾಬಿಯರು ಧಾರವಾಡವನ್ನು ಸೇರಿದರು. ಇಂದುಮತಿಯ ಮನಸ್ಸು ಧಾರವಾಡದಲ್ಲಿದ್ದೇ ಬೇಸರಗೊಂಡಿತ್ತು. ದೂರದ ಕುಕನೂರನ್ನು ನೆನೆದಾಗ ಅವಳ ಮನಸ್ಸು ಕದಲುವುದಕ್ಕೆ ಇಷ್ಟಿಷ್ಟು ಇಷ್ಟಪಡಲಿಲ್ಲ. 'ಸಾಯುವುದಾಗಲಿ, ಬದುಕುವುದಾಗಲಿ ಊರಲ್ಲಿದ್ದು ಆಗಬಾರದೆ' ಎಂದು ಅವಳು ಚಿಂತಿಸುತ್ತಿದ್ದಾಗಲೇ ಊರಿಂದ ಅವರೆಲ್ಲರು ಬಂದೂ ಆಯಿತು. ಗುಲಾಬಿ ತನ್ನ ಜತೆಗೆ ಬಂದು ಇರುತ್ತಾಳೆ-ಎಂಬುದನ್ನು ಅರಿತುಕೊಂಡ ಮೇಲೆ, ಅವಳ ಮನಸ್ಸಿನ ಭಾರ ಎಷ್ಟೋ ಕಡಿಮೆಯಾಯಿತು. ಆದರೆ ತನ್ನ ಕಿರಿಯ ಮಗುವನ್ನು ಅಗಲಿರುವ ಯೋಚನೆ ಸಹಿಸಲಾರದ್ದು. "ಅದೊಂದು ಬೇಕಾದರೆ ಅಜ್ಜನ ಮನೆಯಲ್ಲಿ

ರಲಿ" ಎಂದು ಶಿವಪ್ಪನವರು ಹೇಳಿದರೆ, ಆಕೆ ಗಂಡನೊಡನೆ "ಬೇಡವೇ ಬೇಡ. ಅಪ್ಪ, ಅಮ್ಮ ಎಲ್ಲರೂ ಹಾಗೆಯೇ ಹೇಳುತಿದ್ದಾರೆ. ಆದರೆ ಇಲ್ಲಿರುವ ಮಕ್ಕಳ ಲೂಟಿಯನ್ನು ನೋಡಿದರೆ, ಅದು ನಿಮ್ಮ ಜತೆಯಲ್ಲೇ ಇರಲಿ ಎಂದು ಕಾಣುತ್ತದೆ. ಎಷ್ಟು ಕಷ್ಟವಾದರೂ ಚಿಂತೆಯಿಲ್ಲ; ಮನೆಗೆ ಕೊಂಡುಹೋಗಿ" ಎಂದಳು.

ಅವರು ಕುಕನೂರನ್ನು ಸೇರಿದ್ದಾಯಿತು. ಅಲ್ಲಿನ ವಿಶಾಲವಾದ ಆಸ್ಪತ್ರೆಯ ಕಟ್ಟಡವನ್ನು ಕಂಡಾಗ ಇಂದುಮತಿಗೆ ತುಂಬ ಬೆರಗಾಯಿತು. ಶಿವಪ್ಪನವರಿದ್ದಾಗಲೇ ಅವಳನ್ನು ಪರಿಶೀಲಿಸಿದರು;ಎಕ್ಸ್-ರೇ ನೋಡಿದರು. ಅನಂತರ ರೋಗ ತಗಲಿದ ಬೆನ್ನೆಲುಬಿನ ಚೂರೊಂದನ್ನು ಕತ್ತರಿಸುವುದೊಳಿತೆಂದು ಉಪದೇಶಿಸಿದರು. ಹಾಗಾಗಬೇಕಾದ್ದು ಅನಿವಾರ್ಯವೆಂದು ಅವರಿಗೆ ತಿಳಿದಿತ್ತಾದರೂ, ಇಂದುಮತಿಗೆ ಅದನ್ನು ತಿಳಿಸುವ ಕಷ್ಟವೊಂದಿದೆಯಲ್ಲ. ತಿಳಿಸಿದರು: "ಇದು ಎಲುಬಿನ ಬೇನೆ.ರೋಗಗ್ರಸ್ತ ಭಾಗವನ್ನು ಕತ್ತರಿಸಲೇಬೇಕು; ಅಂಜಬಾರದು, ಬೇಡ ಅನ್ನಬಾರದು, ನೀನು ಧೈರ್ಯವಾಗಿದ್ದರೇನೆ ಚಿಕಿತ್ಸೆ ಸಾಧ್ಯ" ಎಂದರು. ಇಂದುಮತಿಯು ಅಲ್ಲಿಗೆ ಬಂದ ಮೇಲೆ, ಒಪ್ಪದೆ ಏನು ಮಾಡುತ್ತಾಳೆ? ಗುಲಾಬಿ ಸಮೀಪದಲ್ಲಿರುವುವರಿಂದ "ನೀನಿದ್ದೀಯಲ್ಲ, ನನಗೇನು ಹೆದರಿಕೆ?" ಎಂದಳು.

ಶಿವಪ್ಪನವರ ಮನಸ್ಸು ಅಲ್ಲಿಂದ ಹೊರಡುವಾಗ ಹೆಚ್ಚಿನ ಯಾವ ಆಸೆ, ಭರವಸೆಗಳನ್ನೂ ತಾಳಿರಲಿಲ್ಲ. 'ಗುಣವಾಗುವುದು ಬರಿಯ ಅದೃಷ್ಟ. ಮಾಡುವ ಕರ್ತವ್ಯವನ್ನು ಮಾಡಬೇಕಷ್ಟೆ' ಎಂದು ಅವರು ತಿಳಿದಿದ್ದರು. ಅಲ್ಲಿಯ ತನಕ, ಚಂದ್ರ ತಾಯನ್ನು ಅಂಟಿಕೊಂಡು ಬಂದಿದ್ದ. ಶಿವಪ್ಪನವರು ಬೀಳ್ಕೊಡುವ ಕಾಲಕ್ಕೆ ಕೂಸನ್ನು ಎತ್ತಿಕೊಂಡು, ಆಕೆಯ ಮಂಚದ ಬಳಿ ಬಂದು ನಿಂತು "ಇಂದೂ, ಬೇಗ ಗುಣವಾಗಲಿ ಎಂದು ಪ್ರಾರ್ಥಿಸು. ಆಗುತ್ತದೆಯೆಂಬ ನಂಬಿಕೆಯನ್ನು ಕಳೆದುಕೊಳ್ಳಬೇಡ" ಎಂದು ಹೇಳಿ,ಅವಳ ಹಣೆಯನ್ನು ಮುದ್ದಿಸಿದರು. ಇನ್ನೂ ತನಗೆ ವಿಶೇಷವೇನಾಗಿಲ್ಲ—ಎಂಬ ಅಜ್ಞಾನ ಆಕೆಯಲ್ಲಿದ್ದು, ಮಗುವನ್ನು ಕೊಡಿರೆಂದು, ಕೇಳಿ, ತನ್ನ ಕೈಯಲ್ಲಿ ಹಿಡಿದು ಮುದ್ದಿಸಿದಳು. ಮರಳಿ ಅದನ್ನೊಪ್ಪಿಸಿ "ನೀವು ನನ್ನ ಯೋಚನೆ ಮಾಡುತ್ತಿರಬೇಡಿ. ಮಕ್ಕಳು ಮಾತ್ರ ಜಾಗ್ರತೆ" ಎಂದು ಉಪದೇಶಿಸಿದಳು. ಶಿವಪ್ಪನವರು, ಬೇಕೋ ಬೇಡವೊ ಎಂಬಷ್ಟು ಅರೆಮನಸ್ಸಿನಿಂದ, ಅವಳನ್ನೇ

ನೋಡನೋಡುತ್ತ ಹೊರಕ್ಕೆ ಬಂದರು. ಹೊರಗೆ ನಿಂತಿದ್ದ ಗಂಪು ಒಳಗೋಡಿ ಬಂದು, ವಂದಿಸಿ, ಡಾಕ್ಟರರ ಜತೆಗೆ ಹೊರಕ್ಕೆ ಬಂದ. ಹೊರಗೆ ಬಂದ ಮೇಲೆ ಶಿವಪ್ಪನವರು ಗುಲಾಬಿಯನ್ನು ಕರೆದರು; ಬೇಕಾದ ಎಚ್ಚರ ಹೇಳಿ, ಕೈಯಲ್ಲಿ ನೂರು ರೂಪಾಯಿಗಳನ್ನು ಕೊಟ್ಟು ಹೊರಟುಹೋದರು. ಅವರ ಬಂಡಿಯು ಹೊರಟು ಹೋಗುವ ತನಕವೂ, ಗುಲಾಬಿ ಅವರನ್ನೇ ನೋಡುತ್ತಿದ್ದಳು. ಬಳಿಕ ಬೇಸರದಿಂದ ಒಳಗೆ ಬಂದು, ಇಂದುವಿನ ಮಗ್ಗುಲಿನಲ್ಲಿ ನಿಂತಾಗ ಅವಳು "ಹೋಗಿ ಆಯಿತೇ?" ಎಂದು ಕೇಳಿದಳು.

"ಹೂಂ."

"ನೀನು ಖಂಡಿತವಾಗಿ ನಿಲ್ಲುತ್ತೀಯಲ್ಲ? ನಿಲ್ಲಲು ಬಿಡುತ್ತಾರಲ್ಲ?"

"ಅದಕ್ಕಲ್ಲವೆ ನಾನು ಬಂದದ್ದು? ಮೋಸಮಾಡಿ ಹೋಗುತ್ತೇನೆಂದು ತಿಳಿದಿರಾ? ಸಾಮಾನ್ಯವಾಗಿ ಇಡೀ ದಿನ ಎಲ್ಲರನ್ನೂ ಇಲ್ಲಿರುವುದಕ್ಕೆ ಬಿಡುವುದಿಲ್ಲವಂತೆ. ಗಂಪು ಸಾಹುಕಾರರು ಯಾರಿಂದಲೋ ಹೇಳಿಸಿ, ಮಾಡಿ, ಅಷ್ಟು ಅನುಕೂಲ ಪಡಿಸಿದ್ದಾರೆ."

"ನೀನಿದ್ದರೆ ನನಗೇನೂ ಅಧೈರ್ಯವಿಲ್ಲ. ಮಕ್ಕಳ ಯೋಚನೆ ಮಾತ್ರ ಹೋಗುವುದಿಲ್ಲ. ಹೆತ್ತಮೇಲೆ ಅವನ್ನು ಮರೆಯಲಿಕ್ಕಾಗುತ್ತದೆಯೆ? ನಿನಗೂ ನಿನ್ನ ಮಗನ ಯೋಚನೆಯಾಗುತ್ತಿರಬಹುದು. ರತ್ನಾಕರ ಹೇಗೂ ಇದ್ದಾನು. ಸಣ್ಣವರದ್ದೇ ಚಿಂತೆ ನನಗೆ."

"ಚಿಂತೆಯಾಗದೆ ಇರುತ್ತದೆಯೆ? ಆದರೆ ಡಾಕ್ಟರರಿದ್ದಾರಲ್ಲ. ಏನು ಅಮ್ಮ ಹೆದರಿಕೆ? ಮೊದಲಿನ ಹಾಗೆ ಆಸ್ಪತ್ರೆ ಒಂದುಕಡೆ, ಮನೆ ಒಂದು ಕಡೆಯಲ್ಲ. ಅದೆಲ್ಲ ಚಿಂತೆಯನ್ನು ಕಟ್ಟಿಕೊಂಡರೆ ಪ್ರಯೋಜನವಿಲ್ಲ."

---

# ಅಧ್ಯಾಯ ೧೨.

ಇಂದುಮತಿ ಕುಕನೂರು ಆಸ್ಪತ್ರೆಯನ್ನು ಸೇರಿ ಒಂದು ತಿಂಗಳಕಾಲ ಸಂದಿದೆ. ಆಕೆ ಅಲ್ಲಿನ ನಿತ್ಯ ನಿವಾಸಿಗಳಲ್ಲಿ ಒಬ್ಬಳೆನಿಸಿದ್ದಾಳೆ. ಹಾಸುಗೆ ಯಲ್ಲೇ ಬಿಡಾರ. ಇಷ್ಟಬಂದ ಹಾಗೆ ಕುಳಿತೇಳುವುದಕ್ಕೆ, ನಡೆಯುವುದಕ್ಕೆ, ಮಗ್ಗಲು ಮಗುಚುವುದಕ್ಕೆ ಈಗ ಸಾಧ್ಯವಿಲ್ಲ. ತನ್ನ ಮೈ ಹೊರಳಿಸುವುದಕ್ಕೂ ಗುಲಾಬಿಯ ನೆರವು ಬೇಕು. ಒಂದೇ ಪಕ್ಕದಲ್ಲಿ ಮಲಗಿ, ಮಲಗಿ ದಣಿವಾ ದರೂ ಮಾಡುವುದೇನು? ಬೆನ್ನಿನ ಪಕ್ಕೆಲುಬಿನ ತುಂಡೊಂದನ್ನು ಡಾಕ್ಟರ್ ಪುರಂಧರೆಯವರು ಕಡಿದು ತುಂಡರಿಸಿದರು: ಎಲುಬಿನಲ್ಲಿ ಆಶ್ರಯ ಪಡೆದು ಮೇಲಿನ ಕುರಕ್ಕೆ ಕಾರಣವಾದ ಕ್ಷಯರೋಗದ ಅಣುಜೀವಿಗಳ ಹುತ್ತವನ್ನೇ ಅವರು ಕಿತ್ತೊಗೆಯುವುದಕ್ಕೆ ಹಾಗೆಮಾಡಬೇಕಾಯಿತು. ಕತ್ತರಿಸಿದ ಬೆನ್ನಿನ ಮಾಂಸ ಖಂಡಗಳನ್ನು ತಿರುಗಿ ಹೊಲಿದು ಮಲಗಿಸಿದರು. ಅದರಿಂದ ಜ್ವರ ಎಷ್ಟೋ ಕಡಿಮೆಯಾಗಿದೆ; ಇನ್ನೇನು, ಹೀಗೆಯೆ ಕೆಲವು ದಿವಸ ವಿಶ್ರಾಂತಿ ಗೊಂಡು ಆ ಮೇಲೆ ಕಾಳೂರಿಗೆ ಹಿಂದಿರುಗಬಹುದು' ಎಂದು ಗುಲಾಬಿ ಭರ ವಸೆ ಕೊಡುತ್ತಿದ್ದಾಳೆ. ಇಂದುವಿಗೂ ಹೌದೆನಿಸುತ್ತದೆ. ಹಾಗಾಗುತ್ತದೆಯೆಂಬ ಆಸೆಯಿಂದ ಇನ್ನೂ ಒಂದು ತಿಂಗಳು ಕಳೆಯಿತು. ಮನಸ್ಸಿನಿಂದ ಪತಿಯ, ಮಕ್ಕಳ ಚಿಂತೆ ಹೋಗದಿದ್ದುದರಿಂದ "ಎಷ್ಟು ದಿನ ಇಲ್ಲಿ ನಿಲ್ಲಬೇಕಾಗುವು ದೋ?" ಎಂದು ಆಗಾಗ ಕೇಳುತ್ತಾಳೆ. ಮಕ್ಕಳ ಆಟ, ಚೀರಾಟ,ನಗುಗಳನ್ನು ನೋಡಲು ಮನಸ್ಸು ಕಾತರಗೊಳ್ಳುತ್ತದೆ.

ಗೆಳತಿಯಲ್ಲಿ ಭರವಸೆಯನ್ನು ಹುಟ್ಟಿಸುವುದಕ್ಕೆ, ಬೇಗ ಊರಿಗೆ ಹೋಗಬಹುದು ಎಂಬ ನಂಬಿಕೆ ಹುಟ್ಟಿಸುವುದಕ್ಕೆ ಗುಲಾಬಿ ಪ್ರಯತ್ನಿಸುತ್ತಿ ದ್ದಾಳೆ. ಅವಳೇನು ದೊಡ್ಡ ಆಸ್ಪತ್ರೆಯಲ್ಲಿ ಕಲಿತವಳಲ್ಲ; ಸೇವೆ ಮಾಡಿದ ವಳಲ್ಲ. ಶಾಸ್ತ್ರ ಜ್ಞಾನ ಪಡೆದ ದಾದಿಯಲ್ಲ. ಅವಳದೇನಿದ್ದರೂ ಶಿವಪ್ಪನವರ ಕೆಳಗೆ ದೊರಕಿಸಿಕೊಂಡ ಅನುಭವ. ಆ ಬೇನೆಯ ಪರಿಚಯವೂ ಅವಳಿಗೆ ಹಿಂದೆ ಇದ್ದಿಲ್ಲ. ಅವಳು ಇನ್ನೊಬ್ಬರ ಸಲುವಾಗಿ ಅಲ್ಲಿಗೆ ಬರುತ್ತಿದ್ದಿಲ್ಲ. ಇಂದು ಮತಿಗಾಗಿ ಬಂದಳು. ಇಂದುವಿನ ಮನಸ್ಸು ತನ್ನ ಮಕ್ಕಳನ್ನು ಕುರಿತು ಹಂಬ ಲಿಸುತ್ತಿರುವಷ್ಟೇ ಅವಳ ಮನಸ್ಸು ತನ್ನೊಬ್ಬನೇ ಮಗ, ಪ್ರಭಾಕರನಿಗಾಗಿ ಹಾತೊರೆಯುತ್ತಿದೆ. ನಿತ್ಯವೂ ಅವನದೇ ಕನಸಾಗುತ್ತದೆ. ಆದರೆ ತನ್ನನ್ನು,

ತನ್ನ ಮಗುವನ್ನು ಕಾಯ್ದು ಪಾರುಮಾಡಿದ ಶಿವಪ್ಪನವರ ಔದಾರ್ಯ ನೆನೆಯುತ್ತಾಳೆ. ಅವರ ಹೆಂಡತಿಗೆ ಬಂದೊದಗಿದ ಸಂಕಟಕ್ಕಾಗಿ ದುಃಖಿ ಸುತ್ತಾಳೆ. ತನ್ನ ಬೇಸರವನ್ನಡಗಿಸಿಕೊಂಡು ಇಂದುಮತಿಯ ಬೇಸರವನ್ನು ಹೋಗಲಾಡಿಸುವುದಕ್ಕೆ ಪ್ರಯತ್ನಿಸುತ್ತಾಳೆ.

ಆಸ್ಪತ್ರೆಯು ಬಹು ದೊಡ್ಡದು. ಆರೆಂಟು ನೀಳವಾದ ಕೊಠಡಿಗಳಲ್ಲಿ ಎರಡೆರಡು ಸಾಲಾಗಿ ರೋಗಿಗಳನ್ನು ಮಲಗಿಸಿದ್ದಾರೆ. ಎಲ್ಲರೂ ಒಂದೊಂದು ವಿಧದ ಬೇನೆಯಿಂದ ನರಳುವವರು. ಒಂದು ಕೋಣೆಯ ತುತ್ತುದಿಯಲ್ಲಿ ಮಲಗಿಕೊಂಡ ಇಂದುವಿಗೆ, ಕಣ್ಣು ಹೊರಳಿಸಿದರೆ ಐವತ್ತು ಮಂದಿಗಿಂತ ಹೆಚ್ಚಾಗಿ ನರಳುವ ಜೀವಿಗಳು ಕಾಣಿಸುತ್ತಾರೆ. ಅವರನ್ನೆಲ್ಲ ಕಂಡಾಗ "ಯಾವೆಲ್ಲ ಊರಿಂದ ಬಂದಿದ್ದಾರೊ, ಎಷ್ಟೆಲ್ಲ ದೂರದಿಂದ ಬಂದಿದ್ದಾರೊ, ನನ್ನಂತೆ ನರಳುವವರು" ಎಂದು ತೋರುತ್ತದೆ. ಅವಳನ್ನು ಮೊದಲಿಗೆ ಸೇರಿ ಸಿದ್ದು ಸ್ತ್ರೀಯರ ಸಾಮಾನ್ಯ ವಾರ್ಡಿನಲ್ಲಿ. ಅಲ್ಲಿರುವವರೆಲ್ಲ ಹೆಂಗಸರು. ನಿದ್ರೆ ತೂಕಡಿಸುವಾಗ ಸಾಲಾಗಿ ಮಲಗಿಕೊಂಡ ನೆರೆಕರೆಯ ಜನಗಳ ಸಂಖ್ಯೆ ಒಂದಕ್ಕೆ ಹತ್ತಾಗುತ್ತದೆ. ತುಸು ತ್ರಾಣವಿದ್ದಾಗ ಮೈ ನೆಟ್ಟಗೆ ಮಾಡಿ ಕುಳಿತರೆ, ಮಗ್ಗುಲಿನ ಕನ್ನಡಿಯ ಕಿಟಿಕಿಯಿಂದ ಆಚೆಗಿರುವ ಗಂಡಸರ ಸಾಲು ಕಾಣಿಸುತ್ತದೆ. ಅದೂ ದೊಡ್ಡ ಪಂಕ್ತಿಯೇ. ಎದುರು ಕಣ್ಣನ್ನು ಚಾಚಿದರೆ ಎದುರಿನ ಬಾಗಿಲಿಂದ ಆಗಾಗ ಬಂದು ಹೋಗುವ ವೈದ್ಯರು, ದಾದಿಯರು ಕಾಣಿಸುತ್ತಾರೆ. ಆಚೆಯೂ ತುಂಬ ಜನಗಳಿರಬೇಕು ಎಂಬ ಜ್ಞಾನವಾಗುತ್ತದೆ. "ನಾನೊಬ್ಬಳೇ ಅಲ್ಲ. ಅಷ್ಟೆಲ್ಲ ಜನಗಳಿರುವಾಗ ಮಾತನಾಡಿಯಾದರೂ ಹೊತ್ತು ಹೋದೀತು" ಎಂದು ಬಂದ ಒಂದೆರಡು ದಿನ ಅವಳ ಮನಸ್ಸಿಗನಿಸಿತು.

ಆ ಎರಡು ದಿನ ಪೂರ್ಣವಾಗುವುದರೊಳಗೆ, ನೆರೆಕರೆಯವರೊಡನೆ ಹೊತ್ತು ಕಳೆಯಬೇಕೆಂಬ ಆತುರ ಹೊತ್ತಿಯೇ ಹೋಯಿತು. ಉತ್ಸಾಹದ ಉಸಿರೆಲ್ಲವೂ ಆರಿತು. ತನ್ನ ಸುತ್ತಲಿರುವ ಜೀವಗಳು ಒಂದೊಂದು ಒಂದೊಂದು ತೆರನಾಗಿವೆ. ಮೈಯೊಣಗಿದವರು, ಕಣ್ಣಾಲಿ ಹುದುಗಿದವರು, ನೋವಿನಿಂದ ನರಳುವವರು, ನಡು ರಾತ್ರಿಗೂ ನಿದ್ರೆ ಬರಲಾರದೆ ವಿಚಿತ್ರವಾಗಿ ಗೋಳುಗರೆವವರು-ಅಂಥವರನ್ನು ಕಾಣುವಾಗ 'ಇಲ್ಲಿಗೇಕೆ ಬಂದೆ' ಎಂದು ಅನಿಸಿತು. "ಗುಲಾಬಿ, ಇಲ್ಲೇ ಇದ್ದರೆ ಏನಾದೀತೋ? ಆಚೀಚಿನವರ ಬೇನೆ

ಬಂದು ನಾನು ಸಾಯುವುದೇ ಖಂಡಿತ" ಎಂದು ಗುಲಾಬಿಯ ಮುಖನೋಡು ವುದಕ್ಕೆ ಕತ್ತನ್ನು ತಿರುಗಿಸಿದಳು. ಗುಲಾಬಿ ಮಾತ್ರ ಅಲ್ಲಿರಲಿಲ್ಲ. "ಪಾಪ! ಕಾದು ಬೇಸರವಾಗಿ ಆಚೆಲ್ಲಿಗೆ ಹೋದಳೋ" ಎಂದೆಣಿಸಿ, ಮಗ್ಗಲು ಮಗುಚಿ ಮಲಗಿಕೊಂಡರೆ ಕಣ್ಣು ಮುಚ್ಚಿದರೂ ನಿದ್ರೆ ಬರಲಾರದು. ಉಳಿದವರ ಚಿತ್ರ ವನ್ನು ಕಣ್ಣಿಂದ, ಸ್ಮರಣೆಯಿಂದ, ತೊಡೆಯುವ ಪ್ರಯತ್ನಮಾಡಿದರೆ ಕಿರಿಯ ಚಂದ್ರಶೇಖರನ ಬಿಂಬ ಕಣ್ಣಿಗೆ ಕಾಣುತ್ತದೆ. "ಅಯ್ಯೋ, ಮಕ್ಕಳನ್ನು ಉಣಿಸಿ, ಮಿಂಯಿಸಿ, ನೋಡಿಕೊಳ್ಳುವುದಕ್ಕೆ ಅವರಿಂದಾಗುತ್ತದೆಯೆ? ಆಸ್ಪತ್ರೆಯಲ್ಲಿ ಯೇ ಅವರು ದುಡಿದು ನುಗ್ಗಾಗುತ್ತಾರೆ. ಅಡುಗೆಯ ಹುಡುಗ ಏನು ಬೇಯಿ ಸುತ್ತಾನೊ, ಏನು ಬಡಿಸುತ್ತಾನೊ, ಇವರೇನು ಉಣ್ಣುತ್ತಾರೊ! ಒಂದಿಷ್ಟು ದಣಿದು ಬಂದರೆ, 'ಒಂದು ಕಪ್ ಚಹಾ ಮಾಡಿಕೊಡಲೇ' ಎಂದು ಕೇಳುವ ಬುದ್ಧಿ ಆ ಹುಡುಗನಿಗಿಲ್ಲ. ಇವರಾಗಿ 'ಮಾಡು' ಎಂದು ಹೇಳುವವರಲ್ಲ. ಒಟ್ಟಾರೆ ನಾನು ಊರನ್ನು ಸೇರುವುದರೊಳಗೆ ಮಕ್ಕಳೂ ಸರಿಯೆ, ಅವರೂ ಸರಿಯೆ, ಅರ್ಧಜೀವರಾಗುತ್ತಾರೆ" ಎಂದು ಚಿಂತಿಸಿದಳು.

ದಿನವೆಲ್ಲ, ತನ್ನ ತೊಡೆಯಲ್ಲಿಯೇ ಬಿಡಾರಮಾಡುವ ಚಂದ್ರಶೇಖರನ ನೆನಪಾಗುತ್ತಲೆ ಬಳಬಳನೆ ಕಣ್ಣೀರೂ ಬರತೊಡಗಿತು. "ನಾನು ಸತ್ತೆನೆಂದೇ ತಿಳಿಯುವ. ಆಗ ನನ್ನ ಕೂಸಿನ ಗತಿಯೇನು! ಅವರಿಂದೇನಾದೀತು? ಆ ಮಗು ಹೇಗೆ ಬೆಳೆದೀತು? ಏನಿಲ್ಲ–ಅಜ್ಜಿಯ ಮನೆಗೆ ಎರಡು ದಿನಕ್ಕೆ ತಂದಾಗಲೇ ನೋಡಿದೆನಲ್ಲ—ಮನೆಯ ಉಳಿದ ಮಕ್ಕಳು ಅದನ್ನು ಹೊಡೆದು, ಬಡಿದು ತಿಂದೇ ಬಿಟ್ಟವು" ಎಂಬೆಲ್ಲ ಸಂಗತ, ಅಸಂಗತ ವಿಚಾರಗಳು ನಲಿದಾಡ ತೊಡಗಿದವು. ನಿದ್ರೆ ಬಾರದಾಯಿತು. ಕಣ್ಣೆವೆ ತೆರೆಯುವ ಮೊದಲೆ ಇನ್ನೊಮ್ಮೆ 'ಗುಲಾಬಿ' ಎಂದು ಕರೆದಳು. ಆದರೆ ಅವಳು ಕಾಣಿಸಲಿಲ್ಲ. ಕಣ್ಣೆದುರಿಗೆ ದೀಪ ತೂಗುತಿತ್ತು. "ರಾತ್ರಿಯಾಯಿತು. ಈ ಗುಲಾಬಿ ಎಲ್ಲಿಗೆ ಹೋದಳಪ್ಪ? ನಾನು ಎಲ್ಲಿದ್ದೇನೆ" ಎಂದು ಯೋಚಿಸಿ, ಯೋಚಿಸಿ ದಣಿದಳು. ಬೆಳಗಿನ ಜಾವಕ್ಕಷ್ಟೆ ನಿದ್ರೆ ಹತ್ತಿತು.

ಬೆಳಿಗ್ಗೆ ಕಣ್ಣು ತೆರೆದು ಆಕೆಯನ್ನು ಕಂಡವಳೇ "ರಾತ್ರಿ ನೀನು ನನ್ನ ಹತ್ತಿರ ಮಲಗಲೇ ಇಲ್ಲವೆ? ಇಲ್ಲಿಯೇ ಮಂಚದ ಸಮೀಪ ಮಲಗಿರುತ್ತೇನೆ ಎಂದಿದ್ದೆಯಲ್ಲ?" ಎಂದು ಕೇಳಿದಳು.

"ಹೇಳಿದ್ದು ಹೌದಮ್ಮ; ಆದರೆ ಹೆಡ್‌ನರ್ಸ್ ಬಂದು 'ಇಲ್ಲಿ ಮಲಗ

ಕೂಡದು'ಎಂದದ್ದರಿಂದ ಹೊರಗೆ ಹೋಗಿ ಮಲಗಿಕೊಂಡೆ. ಏನು ಮಾಡಲಿ?" ಎಂದು ತನ್ನ ಚಿಂತೆಯನ್ನು ವ್ಯಕ್ತಮಾಡಿದಳು. ಇಂದುಮತಿ ಗುಲಾಬಿಗೆ ಕಳೆದ ರಾತ್ರಿಯ ಹಾಳು ಸ್ವಪ್ನಗಳನ್ನೆಲ್ಲ ವಿವರಿಸಿದಳು. "ಇಲ್ಲಮ್ಮ. ಯಾಕೆ ಬೇಸರ ತಂದು ಕೊಳ್ಳುತ್ತೀರಿ? ಬೇಗನೆ ಊರಿಗೆ ಹೋಗುವುದಿಲ್ಲವೆ" ಎಂದು ಅವಳಿಗೆ ಭರವಸೆ ಹೇಳಿದಳು. ಆದರೆ ಅಂತರಂಗದಲ್ಲಿ ಗುಲಾಬಿಯ ದು:ಖ ಬಣ್ಣಿಸುವುದಕ್ಕಿಲ್ಲ—"ತನ್ನನ್ನು ಕರೆತಂದದ್ದು ಇಂದುವಿನ ಬಳಿ ಇರಲು. ಅದಕ್ಕೆ ಅಲ್ಲಿಯ ದಾದಿಯರು ಅವಕಾಶ ಕೊಡದೆಹೋದರೆ ತಾನೇನು ಮಾಡಲಿ"–ಎಂಬ ಚಿಂತೆ ಅವಳಿಗೆ. ಅದರಿಂದ ಸ್ತ್ರೀ ಶಾಖೆಯ ಮುಖ್ಯ ವೈದ್ಯಳ ಮನೆಗೆ ಹೋಗಿ "ನಾನು ಅವರ ಬಳಿಯಲ್ಲಿಲ್ಲದಿದ್ದರೆ ಅವರಿಗೆ ಗಾಬರಿ. ಹೆಡ್ ನರ್ಸ್ ನಾನು ಅಲ್ಲಿರಕೂಡದು ಎಂದು ಹೇಳುತ್ತಾಳೆ. ನೀವು ಅನುಮತಿ ಕೊಟ್ಟಿದ್ದರೆ ಆಗುತಿತ್ತು" ಎಂದಾಗ "ಅದು ಹೇಗಾಗುತ್ತದೆ? ಬಂದ ನೆಂಟರಿಷ್ಟರಿಗೆಲ್ಲಾ ಆಸ್ಪತ್ರೆಯಲ್ಲಿ ಉಳಿಯುವುದಕ್ಕೆ ಬಿಡಾರ ಕೊಟ್ಟರೆ ಹೇಗೆ? ಅವಳಿಗೇನು ಹೆದರಿಕೆಯಂತೆ? ನಮ್ಮ ನಂಬಿಕೆ ಇಲ್ಲವೆ? ರಾತ್ರಿಯಲ್ಲಿ ವಾರ್ಡ್ ಎಟೆಂಡೆಂಟ್ ಇರುವುದಿಲ್ಲವೆ?" ಎಂದು ಜಬರದಸ್ತಿಯಿಂದಲೇ ಆಕೆ ಮಾತನಾಡಿದಳು.

ಗುಲಾಬಿಯ ಕಣ್ಣಲ್ಲಿ ನೀರು ಮಾತ್ರ ಬರಲಿಲ್ಲ; ತಡೆಯಲಾರದ ದು:ಖವಾಯಿತು. "ಅಮ್ಮ, ಅವರ ಯಜಮಾನರು ನಿಮ್ಮ ವ್ಯವಸಾಯದವರೆ; ಕಾಳೂರಿನಲ್ಲಿ ಡಾಕ್ಟರರು; ನಾನು ಕೆಲವು ವರ್ಷಗಳಿಂದ ಅವರ ಕೈಯಲ್ಲಿ ದಾದಿಯಾಗಿ ಕಲಿತವಳು. ಅವರ ಗಂಡಸರಾರೂ ಇಲ್ಲಿಲ್ಲ. ಅವರ ಬಳಿಯಲ್ಲಿ ಇರುವುದಕ್ಕೆಂದೇ ನನ್ನನ್ನು ಇಲ್ಲಿ ಬಿಟ್ಟುಹೋದರು. ನನ್ನ ಊಟ, ಪಾಠ ಹೊರಗೆ ಮಾಡುತ್ತಿದ್ದೇನೆ. ರಾತ್ರಿಯಲ್ಲಿ ಅವರನ್ನು ಒಬ್ಬರಾಗಿ ಬಿಟ್ಟರೆ ತುಂಬ ಗಾಬರಿಗೊಳ್ಳುತ್ತಾರೆ. ನಿನ್ನೆ ರಾತ್ರಿ ನನ್ನನ್ನು ಕಾಣದೆಯೆ, ನಿದ್ದೆಯನ್ನು ಸಹ ಮಾಡದೆ ಮಲಗಿದರು. ಅದರಿಂದ ತುಸು ಜ್ವರವೂ ಹೆಚ್ಚಿದೆ" ಎಂದು ವಿನಯದಿಂದ ಹೇಳಿದಳು.

"ಅದೆಲ್ಲ ಪುರಾಣ ಬೇಡವಮ್ಮ, ನಾವು ಒಬ್ಬೊಬ್ಬರಿಗಾಗಿ ಆಸ್ಪತ್ರೆ ನಡೆಸಲು ಬರುವುದಿಲ್ಲ. ನಿಮಗೆ ಅಷ್ಟು ಅನುಕೂಲತೆ ಬೇಕೆಂದಿದ್ದರೆ, ಸ್ಪೆಶಲ್ ವಾರ್ಡಿಗೆ ದುಡ್ಡು ಕೊಡುವ ತ್ರಾಣವಿದ್ದರೆ ಹಾಗೆ ಮಾಡಿ" ಎಂದಳು. ಗುಲಾಬಿಗೆ ಅದೇಕೋ ವಿಚಿತ್ರವೆನಿಸಿತು. ಆದರೆ ಪ್ರತ್ಯೇಕ ಕೋಣೆಯನ್ನು

ಅವರು ಒದಗಿಸಿಕೊಡಬೇಕಾದರೆ ಕೈ ಬೆಚ್ಚಗೆ ಮಾಡಬೇಕಾದೀತು. ಅಲ್ಲದೆ ವಾರ್ಡಿಗೆ ದಿನಕ್ಕೆ ಹತ್ತು ರೂಪಾಯಿ ವೆಚ್ಚ ಬರುತ್ತದೆ. ಹಾಗೆ ಮಾಡಬೇಕಾದುದು ಅನಿವಾರ್ಯ. "ಇವತ್ತೇ ರೂಮ್ ಕೊಡಿಸುತ್ತೀರಾ?" ಎಂದು ಕೇಳಿದಳು. ಕೇಳುವುದರ ಜತೆಗೆ ಡಾಕ್ಟರರು ಕೊಟ್ಟ ಹಣದಿಂದ, ಐವತ್ತನ್ನು ಅವರ ಮುಂದಿರಿಸಿ "ವಾರ್ಡ್ ಬಾಡಿಗೆ ಬೇರೆಯಾಗಿ ಕೊಡುತ್ತೇನೆ" ಎಂದಂದಾಗ ಆಕೆ ಪ್ರಸನ್ನಳಾದಳು. ಅದಕ್ಕೆ ತಕ್ಕ ಏರ್ಪಾಟಾಯಿತು. ಹಿಂದಣ ದಿನ 'ಅಲ್ಲಿ ಮಲಗಬೇಡ' ಎಂದು ಹೇಳಿದ ಮುಖ್ಯ ದಾದಿಯೇ, ಇನ್ನೊಮ್ಮೆ ಭೇಟಿಯಾದಾಗ ಪ್ರಸನ್ನಳಾಗಿದ್ದಳು. ಅವಳ ಮೇಲಿನ ಡಾಕ್ಟರಣಿ–"ಇಂದುವಿನ ವಿಚಾರವಲ್ಲಿ ರಿಯಾಯಿತಿಯಿಂದಿರುವುದಕ್ಕೆ ಹೇಳಿದ್ದಳು. ಗುಲಾಬಿಗೆ, ಆಚೆ ಈಚೆ ಕೇಳಿದ್ದರ ಮೇಲಿಂದ, ಆಸ್ಪತ್ರೆಯಲ್ಲಿ ಸುಖ,ಸೌಕರ್ಯಗಳು ದೊರೆಯಬೇಕೆಂದಿದ್ದರೆ ಎಲ್ಲರನ್ನೂ ಒಳ್ಳೆಯದು ಮಾಡಿಕೊಳ್ಳಬೇಕು; ಅಂದರೆ ದುಡ್ಡು ಕೊಟ್ಟು ಪ್ರಸನ್ನರಾಗಿಸಿಕೊಳ್ಳಬೇಕು–ಎಂಬುದು ತಿಳಿದು ಬಂತು. ಇದಕ್ಕೆ ಸಿದ್ಧಳಾಗಿಯೇ ಆಕೆ ಊರಿಂದ ಹೊರಟಿದ್ದಳು. ಶಿವಪ್ಪನವರ ಭೋಳೆತನ ಎಷ್ಟಿತ್ತೆಂದರೆ, ಅವರು ಹೊರಡುವಾಗ ಕೊಟ್ಟುದು ನೂರು ರೂಪಾಯಿ ಮಾತ್ರ. 'ಆ ಮೇಲೆ ಕಳುಹಿಸುತ್ತೇನೆ' ಎಂದಿದ್ದರೂ ಇಂಥ ಜಗತ್ತಿನ ಅರಿವು ಅವರಿಗಿಲ್ಲ ಎಂಬುದು ಸ್ಪಷ್ಟ.

ಶಿವಪ್ಪನವರು ಹುಬ್ಬಳ್ಳಿಯಿಂದ ಮರಳಿ ಊರಿಗೆ ಬಂದಾಗ, ಮುಂದಿನ ವಿಚಾರಗಳನ್ನು ಕುರಿತು ಗುಲಾಬಿಯ ಮುಂದೆಯೂ ಚರ್ಚಿಸಿದ್ದರು. ಹಣದ ಖರ್ಚು,ವೆಚ್ಚಗಳು ಎಷ್ಟಾಗಬಹುದೆಂಬ ಊಹೆ ಅವರಿಗೂ ಇರಲಿಲ್ಲ. ಗುಲಾಬಿಗೆ ತಾನು ಕುಕನೂರಿಗೆ ಹೋಗಬೇಕಾದೀತೆಂದು ತೋಚಿದಾಗ ಕೈಯಲ್ಲಿಷ್ಟು ಹಣವನ್ನು ತೆಗೆದುಕೊಂಡು ಹೋಗಬೇಕೆಂಬ ಯೋಚನೆಯಾಯಿತು. ಹೊರಡುವ ಮುಂಚಿನ ದಿನ ಡಾಕ್ಟರರೊಡನೆ "ನನ್ನದು ಒಂದೆರಡು ಬಳೆ, ಸರ ಹೋಗುವಾಗ ಕೊಡುತ್ತೀರಾ?" ಎಂದು ಕೇಳಿದಳು. "ಹೋಗುವಾಗ ಏಕೆ? ಈಗಲೇ ತೆಗೆದುಕೋ; ಮತ್ತೆ ಮರೆಯುವುದು ಬೇಡ" ಎಂದು ಅವಳಿರಿಸಿದ ಡಬ್ಬಿಯನ್ನು ಕೊಟ್ಟರು. ಆಕೆ ನೆಪಕ್ಕೆ ಒಂದು ಸರವನ್ನು ಕೊರಳಿಗೆ, ಕೈಗೆರಡೆರಡು ಬಳೆಗಳನ್ನೂ ಹಾಕಿಕೊಂಡದ್ದಲ್ಲದೆ, ಹೆಚ್ಚಿನವನ್ನು ಬಚ್ಚಿರಿಸಿಕೊಂಡಳು. ಉಳಿದುವನ್ನು ಮರಳಿ ಕೊಟ್ಟಳು. ಆ ಚಿನ್ನವನ್ನು ಅಡವಿರಿಸಿ ಹಣ ಸಂಗ್ರಹಿಸಿದಳು. ಗೆಳತಿಯ ಸೌಕರ್ಯಗಳಿಗಾಗಿ ಯಾರ ಮುಖವನ್ನೂ

ಇದ್ದಿರುಕಾಯ ಬೇಕಿಲ್ಲ—ಎಂಬ ಹುಮ್ಮಸ ಅವಳಿಗಿತ್ತು. ಅಂತೂ ವಾರ್ಡು ದೊರೆಯುವುದಕ್ಕೆ ಮೂರು, ನಾಲ್ಕು ದಿನ ಹೋಯಿತು. ಅದು ದೊರೆತು ಅವಳಿಗೆ ಇರುವುದಕ್ಕೂ ಅನುಕೂಲವಾಯಿತು. ಇಂದುಮತಿಯ ಎಲುಬನ್ನು ಕತ್ತರಿಸಿದ ಮೇಲೆ, ಅವಳನ್ನು ತಂದು ಮಲಗಿಸಿದುದು ಒಬ್ಬಳೇ ಇರಬಹುದಾದ ಈ ಹೊಸ ವಾರ್ಡಿನಲ್ಲಿ. ಹಾಗೆ ಬದಲಿಸುವ ಮೂರು ದಿನಗಳ ಮುಂಚೆ ಇಂದುಮತಿಯ ಮನಸ್ಸು ಏನೇನೂ ಶಾಂತಿಯುತವಾಗಿರಲಿಲ್ಲ. ಅಲ್ಲಿ ನಡೆಯುವುದನ್ನೆಲ್ಲ ಆಕೆ ಕಾಣುತಿದ್ದಾಳೆ. ಬಂದ ರೋಗಿಗಳಿಗೆ ಒಂದೆರಡು ದಿನ ಉಪಚಾರ ಮಾಡುವುದು, ಅವರ ಜನಗಳು ಕೈ ಬೆಚ್ಚಗೆ ಮಾಡದೆಹೋದಲ್ಲಿ, ತೀರ ಔದಾಸೀನ್ಯ ತಾಳುವುದು — ಇವೆಲ್ಲ ಕಾಣುತಿತ್ತು. ಅದಕ್ಕೂ ಹೆಚ್ಚಾಗಿ ಅವಳು ಅಲ್ಲಿದ್ದ ಅಲ್ಪಾವಧಿಯಲ್ಲಿ ಇಬ್ಬರು ದುರ್ಬಲ ಜೀವರನ್ನು ಅಲ್ಲಿಂದ ಸಾಗಿಸಿದ್ದನ್ನೂ ಅವರ ಬಂಧುಗಳು ಗೋಳಿಟ್ಟದ್ದನ್ನೂ ಕಂಡಿದ್ದಳು. ಅಲ್ಲಿಗೆ ಬಂದವರೆಲ್ಲ ಬದುಕಲೇಬೇಕೆಂಬ ನಿಶ್ಚಯವಿಲ್ಲ—ಎಂಬ ಭೀತಿಯನ್ನು ಅದು ಹುಟ್ಟಿಸಿತು. ಹೇಗೂ ಇರಲಿ, ಈಗ ಒಪರೇಶನ್ ಮುಗಿದಿದೆ. ಅವಳನ್ನು ಸ್ವತಂತ್ರವಾದ ಕೋಣೆಗೆ ಸಾಗಿಸಿದ್ದಾರೆ. ಅಲ್ಲಿಗೆ ಬರುವ ದಾದಿಯರು ಮೊದಲಿಗಿಂತ ಪ್ರಸನ್ನಮುಖರಾಗಿದ್ದಾರೆ. ಅವಳನ್ನು ಮಾತನಾಡಿಸುತ್ತಾರೆ, ಗೆಲುವು ಹುಟ್ಟಿಸುತ್ತಾರೆ. ಆ ಕೊಠಡಿಯ ಮಟ್ಟಿಗೆ ಯಜಮಾನಿಕೆಯ ಸ್ಥಾನದಲ್ಲಿರುವ ಗುಲಾಬಿಯನ್ನೂ ಮಾತನಾಡಿಸುತ್ತಾರೆ. "ನೀವು ಡಾಕ್ಟರರ ಹತ್ತಿರ ತರಬೇತಿಯಾದ ನರ್ಸಂತೆ! ನಮಗೆ ಗೊತ್ತಿರಲಿಲ್ಲ. ಆದೇನು ನಮ್ಮ ಮೇಲೆ ನಂಬಿಗೆ ಸಾಲದೆಂದು ನಿಮ್ಮನ್ನು ಬಿಟ್ಟು ಹೋಗಿದ್ದಾರೆಯೆ?" ಎಂಬ ಕೊಂಕು ನುಡಿಯನ್ನೂ ಆಡುತ್ತಾರೆ. ಅವರಿಗೆ ಇನ್ನೊಬ್ಬಳು ಪ್ರತಿಸ್ಪರ್ಧಿಯಿರುವುದು ಇಷ್ಟವಿಲ್ಲ.

* * * * *

ಒಂದು ದಿನ ಇಂದಮ್ಮಗೆ ನೂರೊಂದು ಡಿಗ್ರಿ ಜ್ವರ ಕಾಯುತಿತ್ತು. ಅದನ್ನು ಗುಲಾಬಿ ನೋಡಿಕೊಂಡಿದ್ದಳು. ನರ್ಸ್ ಸಮನಾಗಿ ನೋಡದೆಯೊ ಏನೋ, ನೂರು ಡಿಗ್ರಿ ಎಂದು ಬರೆದಾಗ, ಆಕೆ "ನೂರಲ್ಲ, ನೂರೊಂದು ಪಾಯಿಂಟ್. . . . ." ಎಂದಾಗ ಆಕೆಗೆ ಬಿಸಿಯೇರಿತು.

"ಹಾಗಾದರೆ ನೀವೇ ನೋಡಿಕೊಂಡು ಬಿಡಿ, ಇಲ್ಲಿನ ಕೆಲಸ. ನಾನು ಈ ರೂಮಿಗೇ ಬರುವುದಿಲ್ಲ. ಲೇಡಿ ಡಾಕ್ಟರಿಗೆ ಹಾಗೆಯೇ ಹೇಳುತ್ತೇನೆ"

ಎಂದಾಗ ಗುಲಾಬಿ ನಾಲಗೆಯನ್ನು ಕಡಿದುಕೊಂಡಳು: "ಹಾಗಲ್ಲ, ಅಷ್ಟ ಕ್ಕೇಕೆ ಸಿಟ್ಟಾಗುತ್ತೀರಿ? ಅನುಭವವಿರುವ ನಿಮ್ಮೆದುರಿಗೆ ನಾನು ಜಗಳಾಡಲು ಬಂದಿಲ್ಲ" ಎಂದು ವಿನಯವಾಗಿ ಮಾತಾಡಿ, ಮಾತಿನ ಬೆನ್ನಿಗೆ ಹತ್ತು ರೂಪಾಯಿಗಳ ದಕ್ಷಿಣೆ ಕೊಟ್ಟು ಅವಳನ್ನು ಪ್ರಸನ್ನಗೊಳಿಸಬೇಕಾಯಿತು. ಅನಂತರ ಎಂಟು ದಿನಗಳಿಗೊಮ್ಮೆಯಾದರೂ ಬಂದ ದಾದಿಯರಿಗೆ ಸಮ್ಮಾನ ಮಾಡಲು ಅವಳು ಕಲಿತುಕೊಂಡಳು. ಅದರಿಂದ ಅವಳ ಮನಸ್ಸು ನೆಮ್ಮದಿ ಗೊಂಡಿತು. ಇಂದಮ್ಮನ ಜ್ವರವೂ ಉಲ್ಬಣಸ್ಥಿತಿಗೆ ಹೋಗಲಿಲ್ಲ. 'ಹೆಚ್ಚೆಂದರೆ ಇನ್ನೆರಡು ತಿಂಗಳ ಕಾಲ ತಾನು ಇರಬೇಕಾದೀತು. ಅಲ್ಲಿಯ ತನಕ ಅವರಿಗೆ ಸಲ್ಲಿಸುವ ಋಣವನ್ನು ಸಲ್ಲಿಸುವುದೇನು ಕಷ್ಟ? ಈ ಕಷ್ಟಕಾಲದಲ್ಲಿ ಅವರೂ ಜೀವನ ಮಾಡಬೇಕಲ್ಲ, ಎಂಬ ಆತ್ಮಸಮಾಧಾನವನ್ನು ಗುಲಾಬಿ ತಂದು ಕೊಂಡಳು.

ಇಂದಮ್ಮನ ಎಲುಬನ್ನು ಕತ್ತರಿಸಿದ ಡಾಕ್ಟರ್ ಪುರಂಧರೆಯವರು ಅಲ್ಲಿಯವರಲ್ಲ. ಅವರು ಎಲುಬಿನ ತಜ್ಞ ವೈದ್ಯರು. ತಿಂಗಳಲ್ಲಿ ನಾಲ್ಕು ಬೇರೆ ಬೇರೆ ಆಸ್ಪತ್ರೆಗಳಿಗೆ ಸಂಚರಿಸುತ್ತಿರುತ್ತಾರೆ. ಕುಕನೂರು ಆಸ್ಪತ್ರೆ ಯಲ್ಲಿ ತಿಂಗಳಲ್ಲಿ ನಾಲ್ಕಾರು ದಿನಗಳಿದ್ದು, ತಮ್ಮ ಕೆಲಸಮಾಡಿ ಹೋದರೆ, ತಿರುಗಿ ಬರುವುದು ಮುಂದಿನ ತಿಂಗಳಲ್ಲಿ. ಆ ಉಳಿದ ಅವಧಿಯಲ್ಲಿ ಸ್ಥಳಿಕ ವೈದ್ಯರು, ರೋಗಿಗಳ ಸ್ಥಿತಿ, ಗತಿಗಳನ್ನು ನೋಡಿಕೊಂಡಿರುತ್ತಾರೆ. ಎಲುಬಿನ ಒಪರೇಶನಿಗಾಗಿ ಅವರ ಬರವನ್ನು ನಿರೀಕ್ಷಿಸುತ್ತಾರೆ. ಇಂದು ಮತಿಯ ಮೊದಲ ಬಾರಿಯ ಶತ್ರ್ರಚಿಕಿತ್ಸೆ, ಅವಳು ಬಂದ ಮೂರು ನಾಲ್ಕು ದಿನಗಳಲ್ಲಿಯೇ ನಡೆದು ಹೋಯಿತು. ಡಾಕ್ಟರ್ ಪುರಂಧರೆಯರು ಬರುವ ವೇಳೆಯು ಅವಳ ಆಗಮನಕ್ಕೆ ಸಮನಾಗಿ ಕೂಡಿಬಂದಿತ್ತು. ಆ ಒಂದು ಶಸ್ತ್ರ ಚಿಕಿತ್ಸೆಯಿಂದ ಇಂದುಮತಿಗೆತಗಲಿದ ಪೀಡೆಯು ಸಂಪೂರ್ಣ ತೊಲಗಿತೆಂದು ಗುಲಾಬಿ ಊಹಿಸಿದಳು.

ಸ್ವತಃ ಗುಲಾಬಿಗೆ ಅನ್ನಾಹಾರಗಳ ಸೌಕರ್ಯ ಆ ಊರಲ್ಲಿ ಏನೇನೂ ಇದ್ದಿರಲಿಲ್ಲ. ಕುಕನೂರು ಪೇಟೆಯಲ್ಲಿ ಅಂಗಡಿ, ಹೊಟೇಲುಗಳ ಸಂಖ್ಯೆಯು ಬಲು ಕಡಿಮೆ. ಅವುಗಳಿಂದಲೇ ಆಸ್ಪತ್ರೆಗೆ ಬೇಕಾಗುವ ರೋಗಿಗಳ ಪೂರೈ ಕೆಯಾಗಬೇಕು-ಎಂಬಷ್ಟು ಅಶುಚಿ. ಆದರೆ ಆ ಊರಿಗೆ ಬರುವ ರೋಗಿಗಳ ಬಂಧು ಬಳಗದವರು ಒಂದಿಷ್ಟು ಅನ್ನ, ರೊಟ್ಟಿ, ತಿಂದು ಬರುವುದಕ್ಕೆ

ಅಲ್ಲಿಗೇ ಬರಬೇಕು. ಸ್ನಾನಮಾಡುವುದಕ್ಕೆ ಅಲ್ಲಿನ ಮುರುಕು ಬಚ್ಚಲೂ, ಕಾವಿ ಬಣ್ಣದ ನೀರೇ ಗತಿ. ಗುಲಾಬಿಯು ಇಂಥ ವಿಚಿತ್ರ ಭೋಜನ ಸೌಕರ್ಯಕ್ಕೆ ತಿಂಗಳಿಗೆ ಐವತ್ತು ರೂಪಾಯಿ ಕೊಡಬೇಕು. ಪರವೂರಿನವರು ಮುಂಗಡ ಕೊಡದೆ ಊಟ ದೊರೆಯಲಾರದು. ಹಿಗಾಗಿ ಡಾಕ್ಟರರು ಕೈ ಮೇಲಿರಿಸಿದ ನೂರು ರೂಪಾಯಿಗಳನ್ನು ನಂಬಿಕೊಂಡು ಆಕೆ ಕುಳಿತಿದ್ದರೆ ಖಂಡಿತ ಉಪವಾಸ.

ಹೀಗಾಗಿ ಅವಳು ಬಂದ ಒಂದು ತಿಂಗಳು ಕಳೆಯುವುದರೊಳಗಾಗಿ ವಾರ್ಡಿನ ವೆಚ್ಚ, ಅವಳ ವೆಚ್ಚ, ದಾದಿಯರ ಪುರಸ್ಕಾರಗಳು ಎಲ್ಲವೂ ಸೇರಿ ಒಟ್ಟು ಮೊತ್ತ ನಾನ್ನೂರೈವತ್ತಕ್ಕೆ ಮುಟ್ಟಿತು. ಅವಳಿಗದರಲ್ಲಿ ಇಷ್ಟಿಷ್ಟೂ ಬೇಸರವಿಲ್ಲ. ಆ ಒಂದು ರೀತಿಯ ಉತ್ಸಾಹ ಸಂತೋಷಗಳೇ ಇದ್ದುವು. ಇಷ್ಟೊಂದು ವರ್ಷಗಳಿಂದ ತಾನಾಗಿ ಚಿನ್ನ ವಿಕ್ರಯಿಸಿ ಸಾಲಕೊಡುತ್ತೇನೆ, ಮನೆ ಕಟ್ಟಿಸಿ, ಆಸ್ಪತ್ರೆ ಕಟ್ಟಿಸಿ-ಎಂದಾಗಲೆಲ್ಲ ಡಾಕ್ಟರರು ನಕ್ಕು, ಮರೆತು ಕುಳಿತಿದ್ದರು. ಈಗ ಆಕೆ ಇದೊಂದು ಪ್ರೇಮದ ಸೇಡನ್ನು ತೀರಿಸುವ ಸಂದರ್ಭ, ಋಣ ಪರಿಹಾರದ ಮಾರ್ಗ—ಎಂಬ ಹಿಗ್ಗಿನಿಂದ ವೆಚ್ಚಕ್ಕೆ ಮುಂದಾದಳು.

ಒಂದು ತಿಂಗಳು ಕೊನೆಗೊಳ್ಳುವಾಗ ಸ್ತ್ರೀ ವಿಭಾಗದ ಮುಖ್ಯ ವೈದ್ಯಳನ್ನು ಆಕೆ ತಿರುಗಿ ನೋಡಿಕೊಂಡು ಬರಬೇಕಾಯಿತು. ಮುಖ್ಯದಾದಿ "ಅವರು ಹೇಳುತ್ತಾರೆ—ಯಾವುದೋ ಒಂದು ಅರ್ಜೆಂಟ್ ಕೇಸ್ ಬರುವುದಿದೆಯಂತೆ. ಸ್ಪೆಶಲ್ ವಾರ್ಡನ್ನು ಖಾಲಿಮಾಡಿ ಕೊಡಬೇಕು; ಒಂದು ತಿಂಗಳಿಗಿಂತ ಹೆಚ್ಚಾಗಿ ಅದನ್ನು ಯಾರಿಗೂ ಕೊಡವುದಿಲ್ಲ" ಎಂದಳು. ಆ ಕಿರುಕುಳದ ಮಾತಿಗೆ ಆಕೆ ಕಾರಣವನ್ನು ಸುಲಭವಾಗಿ ಊಹಿಸಬಲ್ಲಳು. ಎಷ್ಟೋ ಹಿರಿಯ ಆಸ್ಪತ್ರೆಗಳಲ್ಲಿ ಈ ತೆರನ ಉಪದ್ರವಿದ್ದೇ ಇದೆ. ಅವು ಸಾರ್ವಜನಿಕ ಸೇವೆಗಾಗಿ ಇರುವಂಥವುಗಳಾದರೂ, ವ್ಯಕ್ತಿ ಲಾಭದ ದೃಷ್ಟಿ ಬಂದೇ ಬರುತ್ತದೆ. ಹೊರಗಿನ ಜನಕ್ಕೆ ತಿಳಿಯದಾದರೂ ನರಳುವ ಜೀವಿಗಳು ಅದನ್ನು ತಿಳಿದು ಸಹಿಸಬೇಕು. ಆದುದರಿಂದ-ಗುಲಾಬಿ ಇನ್ನೊಮ್ಮೆ ಮುಖ್ಯ ವೈದ್ಯಳ ಭೇಟಿಯಾಗಿ ಸಲಿಸುವ ಕಾಣಿಕೆ ಸಲ್ಲಿಸಿ ಬಂದಳು.

ಎರಡನೆಯ ತಿಂಗಳು ಸರಿದುಹೋಯಿತು. ಇಂದುವಿನ ಮೊದಲನೆಯ ಗಾಯ ಮಾಸಿ, ಜ್ವರ ತೀರ ಕಡಿಮೆಯಾಗಿ, ಸ್ವಲ್ಪ ತೂಕ ಹೆಚ್ಚಿದಂತೆಯೂ ಕಂಡಿತು. ಮುಖದಲ್ಲಿ ಗೆಲುವಾಗುತ್ತ ಬಂತು. "ಇಂದಮ್ಮ, ಇನ್ನು ವಾರ,

ಹತ್ತು ದಿನಗಳಲ್ಲಿ ಡಿಸ್‌ಚಾರ್ಜ್ ಮಾಡಿದರೂ ಮಾಡಬಹುದು. ಈಗಿರುವ ಪಾಯಿಂಟ ಐದು—ಜ್ವರ ಹೋಯಿತೆಂದರೆ, ಜ್ವರದ ಪೀಡೆ ತೊಲಗಿದಂತೆಯೆ" ಎಂಬ ಆಶ್ವಾಸನೆ ಕೊಟ್ಟಳು. ಆ ಭರವಸೆಯ ಅವಧಿ ಮತ್ತೂ ಮುಂದು ವರಿಯಿತು,ಅನಂತರವೂ ಜ್ವರ ಏರತೊಡಗಿತು. ನೂರು ಡಿಗ್ರಿಯ ಅವಧಿಯಲ್ಲಿ ನಾಲ್ಕು ದಿನ ಸಿಂತಿತು. ಅಷ್ಟರಲ್ಲಿ ಬೆನ್ನಿನ ಮತ್ತೊಂದು ಪಕ್ಕೆಲುಬಿನ ಮೇಲೆ ಮಾಂಸ ಗಟ್ಟಿಯಾಗಿದ್ದುದು ಕಾಣಿಸಿತು. ಎರಡನೆಯ ಬಾರಿಗೆ ಎಕ್ಸ-ರೇ ತೆಗೆದರು.ಮತ್ತೊಂದು ಅಣುಜೀವಿಗಳ ಕೇಂದ್ರ ಎಲುಬಿನಲ್ಲುಂಟಾ ಗಿದೆಯೆಂದು ನಿರ್ಧಾರವಾಯಿತು. ಆದರೆ ಆ ತಿಂಗಳಲ್ಲಿ ಬಂದ ಡಾಕ್ಟರ್ ಪುರಂಧರೆಯವರಿಗೆ ಶಸ್ತ್ರಚಿಕಿತ್ಸೆಯನ್ನು ನಡೆಸಲು ವಿರಾಮ ಸಾಲದ್ದರಿಂದ ಮುಂದಿನ ಆಗಮನದ ಕಾಲದಲ್ಲಿ ಅದನ್ನು ಮಾಡುತ್ತೇನೆಂದರು. ಗುಲಾ ಬಿಗೆ ದಿಗಿಲೇ ಹಾರಿದಂತಾಯಿತು. ಶಸ್ತ್ರಚಕಿತ್ಸೆಗೆ ಇನ್ನು ಒಂದು ತಿಂಗಳಾದರೆ ಮುಂದಿನ ವಿಶ್ರಾಂತಿ ಇನ್ನೆರಡು ತಿಂಗಳು. ಮೂರು ತಿಂಗಳೇ-ಎಂದು ದಿಗಿ ಲಾಗಿ, ಅವಳೇ ಸಾಹಸಪಟ್ಟು ಡಾಕ್ಟರ್ ಪುರಂಧರೆಯವರನ್ನು ಕಂಡಳು. "ಪಾಪ! ಈ ಬಾರಿ ಏನಾದರೂ ಮಾಡಿ; ಅವರ ಸಮೀಪದವರು ಇಲ್ಲಾರೂ ಇಲ್ಲ. ಪರಿಚಾರಕರಿಗೆ ನಾನೊಬ್ಬಳು ಹೆಂಗಸು ಇರುವುದು. ಅವರ ಗಂಡ ಡಾಕ್ಟರರು; ಕಾಳೂರಿನಲ್ಲಿದ್ದಾರೆ. ದೂರದ ಊರಿನಲ್ಲಿರುವ ಅವರೆಲ್ಲ ಚಿಂತಿಸುವ ಸ್ಥಿತಿ ತಪ್ಪಿಸುತ್ತೀರಾ?"ಎಂದು ಬೇಡಬೇಕಾಯಿತು.ಬಂದು ಬೇಡಿ ದವಳು ಒಬ್ಬಳು ಯಃಕಶ್ಚಿತ ಹೆಂಗಸು. 'ಇಲ್ಲ' ಎನ್ನಲಾರರು ಡಾಕ್ಟರರು. "ಕೊನೆಯ ದಿನ ವಿರಾಮವಿದ್ದರೆ ನೋಡುತ್ತೇನಮ್ಮ" ಎಂದು ಹೇಳಿದರು. ಅವಳ ಸುದೈವಕ್ಕೆ ಶಸ್ತ್ರ ಚಿಕಿತ್ಸೆಯು ಸಕಾಲದಲ್ಲಿ ನಡೆಯಿತು. ಇಂದುಮತಿ ಮಾತ್ರ, ಮತ್ತಷ್ಟು ದಿನ ಮಗ್ಗಲು ಮಗುಚದೆ ಮಲಗುವ ಪಾಡು ಬಂದಿತು. ಒಮ್ಮೆ ಎಡವಾಯಿತು; ಈಗ ಬಲವಾಯಿತು. "ಅಯ್ಯೋ ನನ್ನ ದುರ್ದೈವವೆ" ಎಂಬ ಚಿಂತೆ ಸ್ವಾಭಾವಿಕವಾಗಿ ಮೂಡಿತು. ಶಿವಪ್ಪನವರು ಅವಳ ಮನಸ್ಸ ಮಾಧಾನಕ್ಕಾಗಿ ಮೇಲಿಂದ ಮೇಲೆ ಕಾಗದ ಬರೆಯುತ್ತಿದ್ದಾರೆ. ಇಂದುವಿನ ಪರವಾಗಿ ಗುಲಾಬಿಯೂ ಪ್ರತ್ಯುತ್ತರ ಹಾಕುತ್ತಿದ್ದಾಳೆ. "ಮಕ್ಕಳ ಚಿಂತೆ ಬೇಡ, ಅವರೆಲ್ಲ ಚೆನ್ನಾಗಿದ್ದಾರೆ. ಇಷ್ಟರಲ್ಲಿ ನಿನ್ನ ಎರಡನೆಯ ಶಸ್ತ್ರ ಚಿಕಿ ತ್ಸೆಯೂ ಆಗಿರಬಹುದೆಂದು ಊಹಿಸುತ್ತೇನೆ. ಡಾಕ್ಟರ್ ಪುರಂಧರೆಯವರು ತುಂಬ ಹೆಸರುವಾಸಿಯಾದ ಡಾಕ್ಟರರು—ಅವರಲ್ಲಿ ನಂಬಿಕೆಯನ್ನಿರಿಸು.

ನಿನಗೆ ಬೇಗ ಗುಣವಾದೀತು" ಎಂದು ಪತ್ರ ಬರೆದಿದ್ದರು. "ಏನೋ, ಇನ್ನೆಷ್ಟು ಅನುಭವಿಸುವುದಿದೆಯೊ" ಎಂಬ ನಿರುತ್ಸಾಹದ ಮಾತು ಇಂದುಮತಿಯದು. ಗುಲಾಬಿಯ ಚಿಂತೆ ಮಾತ್ರ ನಿರುತ್ಸಾಹವನ್ನು ಮೀರಿದ ವ್ಯಥೆಯ ರೂಪವನ್ನು ತಾಳಿತ್ತು. ಎರಡನೆಯ ಶಸ್ತ್ರ ಚಿಕಿತ್ಸೆಯು ಆಗಬೇಕೆಂದಾಗ, ಆಕೆ ಆಚೀಚಿನ ದಾದಿಯರನ್ನು ವಿಚಾರಿಸ ತೊಡಗಿದಳು. ಅವರು "ಅದು ನಿಶ್ಚಯವಲ್ಲಮ್ಮ; ಆ ಕಾಯಿಲೆಯೇ ಅಂಥದು. ಒಂದು ಸಾರಿ ಬೆನ್ನೆಲುಬಿನಲ್ಲಿ ಕಾಣಿಸಿದರೆ ಮತ್ತೊಂದು ಸಾರಿ ಕಾಲೆಲುಬಿನಲ್ಲಿ ಕಾಣಿಸ ಬಹುದು. ಬಹು ದಿನಗಳ ಮೇಲೆ ಇನ್ನಾವುದೋ ಎಲುಬಿನಲ್ಲಿ ಮೂಡಬಹುದು. ಆರು, ಎಂಟು ಒಪರೇಶನ್ ಆದವರುಂಟು. ಕಶೇರುಕದ (Spinal column) ಹತ್ತಿರವಾದರೆ ತೀರ ಅಪಾಯ" ಎಂದು ಅವರೆಲ್ಲ ಹೇಳಿದಾಗ "ಇಷ್ಟು ಒಳ್ಳೆಯವರಿಗೂ ದೇವರು ಹೀಗೆ ಕಷ್ಟಕೊಡಬೇಕೆ?" ಎಂದು ಹಲುಬತೊಡಗಿದಳು. ಆದರೆ ಒಂಟಿಯಾದಾಗ ತನಗೆ ಹೊಳೆಯುವ ನೂರಾರು ಚಿಂತೆಗಳನ್ನು, ಅವಳು ಇಂದಮ್ಮನ ಮುಂದೆ ತೋರಿಸಿಕೊಂಡವಳಲ್ಲ; ತನ್ನ ಅನುಮಾನದಿಂದ ಅವಳ ಅನುಮಾನ ಹೆಚ್ಚಿಸಿದವಳಲ್ಲ; ಹಿಂದೊಂದು ಮುಖ, ಮುಂದೊಂದು ಮುಖ. ಡಾಕ್ಟರರಿಗೆ ಪತ್ರ ಬರೆಯುವಾಗಲೆಲ್ಲ ತನಗೆ ಹೊಳೆದ ನಿಜಾಂಶಗಳನ್ನು ಬರೆಯುತ್ತಿದ್ದಾಳೆ. ಮನಸ್ಸಿನಲ್ಲಿ ಅತೀವ ನಿರಾಶೆಯಾದಾಗ ಅಲ್ಲಿನ ಮುಖ್ಯ ವೈದ್ಯಳನ್ನು ವಿಚಾರಿಸುತ್ತಾಳೆ. "ಹಾಗಾದರೆ ಈ ಬೇನೆಗೆ ಚಿಕಿತ್ಸೆಯೇ ಇಲ್ಲವೆ? ಕೊನೆಯೇ ಇಲ್ಲವೆ?" ಎಂದು. "ಹಾಗಿಲ್ಲ, ಎಷ್ಟೋ ಜನರು ವಾಸಿಯಾಗಿ ಹೋಗಿದ್ದಾರೆ. ಅದು ಅವರವರ ಅದೃಷ್ಟ. ಇನ್ನು ಮುಂದೆ ಅದು ಬರಲಾರದು ಎಂದು ಹೇಳುವುದಕ್ಕೆ ನಮಗೆ ಸಾಧ್ಯವೇ?" ಎನ್ನುವಾಗ ಗುಲಾಬಿಯ ಮನಸ್ಸು ತನ್ನ ಊರಿನ ಮಹಾಕಾಳಿಯನ್ನು ಸ್ಮರಿಸುತ್ತದೆ. ಆಕೆಯೊಬ್ಬಳೇ ಇಂದುವನ್ನು ಕಾಪಾಡಬೇಕೆಂದು ಶರಣುಹೋಗುತ್ತದೆ.

*        *        *        *        *

ಊರಿನಿಂದ ಶಿವಪ್ಪನವರು ಹೆಂಡತಿಗೆ ಬೇರೆ ಪತ್ರ ಬರೆಯುತಿದ್ದಾರೆ, ಗುಲಾಬಿಗೆ ಬೇರೆ ಪತ್ರ ಬರೆಯುತಿದ್ದಾರೆ. "ಏನು ಮಾಡಲಿ, ದಿವಸ ಎಷ್ಟು ಹೋಗುತ್ತದೋ, ಒಮ್ಮೆಯಾದರೂ ಬಂದು ನೋಡಿ ಹೋಗುವ--ಎಂದರೆ ಅವಕಾಶವಾಗುವುದಿಲ್ಲ. ನಿನ್ನ ಮೇಲಿನ ಧೈರ್ಯದಿಂದ ನಾನಿಲ್ಲಿ ಕುಳಿತಿದ್ದೇನೆ. ನಿನ್ನ ಉಪಕಾರ ಮರೆಯುವುದಿಲ್ಲ. ಈ ತಿಂಗಳಲ್ಲಿ ನೂರೈವತ್ತು ರೂಪಾಯಿ

ಕಳುಹಿಸಿದ್ದೇನೆ. ಅಷ್ಟು ಸಾಕಾದೀತೋ ಎಂದು ನನಗೂ ಗೊತ್ತಿಲ್ಲ; ನೀನು ಹಣದ ಲೆಕ್ಕಾಚಾರವನ್ನು ಒಮ್ಮೆಯೂ ಬರೆಯುತ್ತಲಿಲ್ಲ; ಕಡಿಮೆ ಬೀಳುವ ದಾದರೆ ತಂತಿಯ ಮೂಲಕವಾದರೂ ತಿಳಿಸು. ಆಸ್ಪತ್ರೆಯ ದಾದಿಯರಿಗೆ, ಚಾಕರರಿಗೆ ಆಗಾಗ ಸ್ವಲ್ಪ ಇನಾಮನ್ನು ಕೊಡಬೇಕಾದೀತು. ಮರೆಯದೆಯೆ ಕೊಟ್ಟು ಬಿಡು".

ಇಂಥ ಎಷ್ಟೋ ಪತ್ರಗಳಾದುವು. ಸಾರಾಂಶವೆಲ್ಲ ಒಂದೇ ತೆರನಾಗಿದ್ದುವೆಂದು ಹೇಳಬೇಕಾಗಿಲ್ಲ. ಅವರು ತಮ್ಮ ಪತ್ನಿಗೆ ಬರೆಯುತ್ತಿದ್ದ ಕಾಗದಗಳಲ್ಲಿ ಮಕ್ಕಳ ವಿಚಾರಗಳನ್ನು ಹೆಚ್ಚಾಗಿ ಬರೆಯುತ್ತಾರೆ. ಅವರಾಡುತಿದ್ದ ಬಾಲಿಶ ಆಲಾಪಗಳನ್ನು ಉದಾಹರಿಸುತ್ತಾರೆ. ಮಕ್ಕಳ ಫೋಟೋ ತೆಗೆಯಿಸಿ ಕಳುಹಿಸಿದ್ದಾರೆ. ಮೇಲಿಂದ ಮೇಲೆ 'ರತ್ನ, ಸುಧಾ, ಚಂದ್ರ ಇವರ ಮುತ್ತುಗಳು' ಎಂದೂ ಬರೆಯುತ್ತಾರೆ. ಅಂಥ ಪತ್ರಗಳು ಇಂದುಮತಿಯ ಪಾಲಿಗೆ ಮುತ್ತಿನ ಬೆಲೆಯನ್ನೇ ಕೊಡುತ್ತವೆ. ಒಂದು ಗಳಿಗೆಗೆ ಅವುಗಳಿಂದ ಸಂತೋಷವಾಗುವುದರ ಜತೆಗೆ, ಮಕ್ಕಳ ನೆನಪನ್ನೂ ಕೆರಳಿಸಿ "ಎಷ್ಟು ದಿನವಾಯಿತು ನೋಡದೆ; ಹೇಗಿದ್ದಾವೊ ಏನೋ!" ಎಂಬ ಹಂಬಲವನ್ನು ಹುಟ್ಟಿಸುತ್ತವೆ.

ಈಗ ನಾಲ್ಕು ತಿಂಗಳುಗಳು ಕಳೆದಿವೆ. ನಾಲ್ಕು ತಿಂಗಳೆಂದರೆ ನೂರಿಪ್ಪತ್ತು ದಿನ; ೨,೮೮೦ ತಾಸು. ನಿಜ, ಆಸ್ಪತ್ರೆಯಲ್ಲಿ ಬಾಳ್ವೆ ಮಾಡುವುದೆಂದರೆ ಗಂಟೆ, ನಿಮಿಷಗಳು ಸಹ ಎಣಿಕೆಗೆ ಬರುತ್ತವೆ — ನರಳುವವರಿಗೆ, ನಿರಾಶೆಗೊಂಡವರಿಗೆ, ತಮ್ಮವರಿಂದ ದೂರವಾಗಿರುವ ವಿರಹಿಗಳಿಗೆ. ಇಂದು ಮತ್ತು ಗುಲಾಬಿ, ಇಬ್ಬರ ಪಾಡೂ ಹಾಗೆಯೇ ಆಗಿದೆ. ಜ್ವರ ಸಂಪೂರ್ಣ ಬಿಡುವುದೆಂಬುದೂ ಇಲ್ಲ. ಇದ್ದುದರಲ್ಲಿ ಒಂದಿಷ್ಟು ಏರಿಳಿತ ಕಾಣುತ್ತದೆ. ಅದರ ಎರಡು ಸರದಿಗಳು ಕಳೆದು ಮೂರನೆಯ ಸರದಿ ಬರತೊಡಗಿದಾಗ, ಜ್ವರ ಇನ್ನೊಮ್ಮೆ ಏರುವಂತೆ ಕಾಣಿಸಿದಾಗ, ಗುಲಾಬಿಯ ಅಂತರಂಗ ಒಮ್ಮೆಗೇ ಬೇಯತೊಡಗಿತು. "ಇವತ್ತು ನೂರೊಂದು ಇದೆಯಲ್ಲ!" ಎಂದು ತಿಳಿದ ದಿನ ಅವಳ ಮೈಯ ಕಾವೂ ಅಷ್ಟಕ್ಕೆ ಏರಿರಬೇಕು. ಅವಳು ಕರೆಯತೊಡಗಿದ ಕಣ್ಣೀರು ಅದಕ್ಕಿಂತ ತಪ್ತವಾಯಿತು. ಮೆಲ್ಲಗೆ ಆಕೆಯು ಕೋಣೆಯಿಂದ ಹೊರಕ್ಕೆ ಬಂದಳು. ಜಗುಲಿಯ ಕಂಬವೊಂದಕ್ಕೆ ಒರಗಿ ಕುಳಿತಳು; ಮೊಣಗಂಟುಗಳೆಡೆಯಲ್ಲಿ ಕಪೋಲಗಳನ್ನು ಸಿಕ್ಕಿಸಿ ಕಣ್ಮುಚ್ಚಿದಳು. ಅಶ್ರು ಧಾರೆ

ಯಾಗಿ ಸುರಿಯತೊಡಗಿತು. ಮನಸ್ಸಿನ ತೆರೆಯಲ್ಲಿ ಊರ ದೇಗುಲದ ಮಹಾಂಕಾಳಿಯ ಅಲಂಕೃತ ಬಿಂಬ ಕಾಣಿಸಿತು: "ನೀನು ಜಗತ್ತಿಗೆ ತಾಯಿ. ತಾಯಿಯಾದವಳು ತನ್ನ ಮಕ್ಕಳನ್ನು ಹೀಗೆ ನರಳಿಸುತ್ತಾಳೆಯೆ? ಅವರ ಗಂಡ ಎಷ್ಟು ಜೀವಗಳ ನೋವನ್ನು ಪರಿಹರಿಸಲಿಲ್ಲ. ಅದನ್ನು ನೀನು ಕಾಣಬೇಡವೆ? ಇಂದಮ್ಮನ ಮೂವರು ಬಡ ಮಕ್ಕಳನ್ನು ನೆನೆಯ ಬೇಡವೆ? ಏನು ಮಾಡುತ್ತೀ ಹೇಳು? ಅವರನ್ನು ಉಳಿಸುತ್ತೀಯಾ, ಬಿಡುತ್ತೀಯ? ಉಳಿಸುವಿಯಾದರೆ ನಿನ್ನ ಮುಂದೆ ಚಿನ್ನದ ಹಣತೆ ಇರಿಸಿ ಹಸುವಿನ ತುಪ್ಪದಿಂದ ದೀಪ ಬೆಳಗುತ್ತೇನೆ" ಎಂಬ ಹರಕೆಯನ್ನು ಹೊತ್ತಳು. ಆದರೆ ಮುಂದರೆಗಳಿಗೆಯಲ್ಲಿ ತನ್ನ ಕಣ್ಣೊರಸಿಕೊಂಡು, ಮುಖದಲ್ಲಿ ಕೃತಕ ನಗುವನ್ನು ತೇಲಿಸಿಕೊಂಡು, ಗೆಳತಿಯ ಬಳಿಗೆ ಬಂದು "ಏನಿಲ್ಲವಮ್ಮ, ಅವರು ಈವತ್ತಿನಿಂದ ಚಿಕಿತ್ಸೆ ಬದಲಿಸುತ್ತೇನೆಂದಿದ್ದಾರೆ. ಯಾವಾವುದೋ ವಿಶೇಷ ಇಂಜಕ್ಷನ್ ಕೊಡುತ್ತಾರಂತೆ. ಖರ್ಚು ಎಷ್ಟಾದರೂ ಅಡ್ಡಿಯಿಲ್ಲ ಎಂದಿದ್ದೇನೆ. ನೀವೇನೂ ಯೋಚನೆ ಮಾಡಬೇಡಿ" ಎಂದು ಇನ್ನೊಂದು ತೆರನ ನಾಟಕ ಹೂಡುತ್ತಾಳೆ.

ಒಂದು ದಿನ ಇದ್ದಕ್ಕಿದ್ದಂತೆ ಆಸ್ಪತ್ರೆಯ ಪ್ರಮುಖ ಡಾಕ್ಟರರ ಜತೆಯಲ್ಲಿ ಗಂಪುವಿನ ಸವಾರಿಯು ಅಲ್ಲಿಗೆ ಬಂದೇ ಬಂದಿತು. ಹಿಂದೆ ಅಲ್ಲಿ ಪ್ರವೇಶ ಕೊಟ್ಟಾಗ ಆಕೆ ಜನರಲ್ ವಾರ್ಡಿನಲ್ಲಿದ್ದಳು. ಈ ಬಾರಿ ಡಾಕ್ಟರರು ಗಂಪುವನ್ನು ಕರೆದು ತಂದದ್ದು ಅವಳಿರುವ ಸ್ಪೆಶಲ್ ವಾರ್ಡಿಗೆ. ತನಗೆ ಹೊಸ ಪರಿಚಯವಾದರೂ ಸುಪರಿಂಡೆಂಟರು ಅಷ್ಟು ಅನುಕೂಲತೆ ಒದಗಿಸಿ ಕೊಟ್ಟರಲ್ಲ ಎಂಬ ಸಂತೋಷವಾಯಿತು.ಆತ ಬಂದವನೇ, ಬಾಗಿಲಲ್ಲಿ ಗುಲಾಬಿಯನ್ನು ಕಂಡು "ಅಮ್ಮ ಚೆನ್ನಾಗಿದ್ದಾರಲ್ಲವೆ" ಎಂದು ಕೇಳಿದಾಗ, ಒಂದು ಕ್ಷಣಕ್ಕೆ ಗುಲಾಬಿಯು ಮುಖ ವಿವರ್ಣಗೊಂಡಿತು. ಆದರೆ ಆತ ಬಂದುದಕ್ಕೆ ಸಂತೋಷವೂ ಆಯಿತು. ಗಂಪು ಮೆಲ್ಲಗೆ ಹೆಜ್ಜೆಯಿಟ್ಟು ಇಂದಮ್ಮನ ಹಾಸುಗೆಯ ಬಳಿಗೆ ಹೋದಾಗ, ಅವಳ ಕಳೆಗುಂದಿದ ಮುಖ, ಸೋತ ಶರೀರಗಳನ್ನು ಕಂಡು ಸಂಪೂರ್ಣ ನಿರುತ್ಸಾಹಗೊಂಡನು. ಆತ ತನ್ನ ಮುಖಚಹರೆಯನ್ನು ಬದಲಿಸಿದ. ಇಂದಮ್ಮನ ಮುಂದೆ "ನಾನು ಇವತ್ತಷ್ಟೆ ಊರಿಂದ ಬಂದೆ; ನಿತ್ಯ ನಿಮ್ಮ ಮನೆಗೆ ಹೋಗುತಿದ್ದೇನೆ. ಯಜಮಾನರು, ಮಕ್ಕಳು ಚೆನ್ನಾಗಿದ್ದಾರೆ. ಸಣ್ಣಮಗು ತುಂಬ ಮುದ್ದಾಗಿದೆ" ಎಂದು ಅಲ್ಲಿನ ವಾರ್ತೆ

ಕೊಟ್ಟ. ಅದನ್ನು ಕೇಳಿ ಇಂದಮ್ಮಗೆ ಎಷ್ಟೋ ಸಂತೋಷವಾಯಿತು. ಕಾಗದಕ್ಕಿಂತ ಕಣ್ಣಿಂದ ಕಂಡ ವ್ಯಕ್ತಿ, ಅದರಲ್ಲಿಯೂ ತಮ್ಮೊಡನೆ ಅಣ್ಣತಮ್ಮಂದಿರಿಗಿಂತಲೂ ಹೆಚ್ಚಾದ ಸಲುಗೆ, ಸ್ನೇಹವುಳ್ಳ ಗಂಪುವು ಆ ಮಾತನ್ನು ಹೇಳಿದಾಗ ತಾನು ಮಕ್ಕಳನ್ನು ಕಂಡಷ್ಟೇ ಆನಂದವಾಯಿತು.

"ಏನೂ ಯೋಚನೆ ಮಾಡಬೇಡಿ ತಾಯಿ. ಇಲ್ಲಿರುವವರೆಲ್ಲ ನಮ್ಮ ಸ್ನೇಹಿತರೇ. ಡಾಕ್ಟರರಿಗೆ ಬರಲು ಒಂದಿಷ್ಟೂ ಬಿಡುವಿಲ್ಲ. ಮಕ್ಕಳನ್ನು ಬಿಟ್ಟು ಬರುವುದಕ್ಕೂ ಆಗುವುದಿಲ್ಲ. ಅದಕ್ಕೆಂದೇ ನನ್ನನ್ನು ಕಳುಹಿಸಿದರು. ನಾನು ಬಂದ ದಿವಸವೂ ಒಳ್ಳೆಯದು. ಇವತ್ತು ಡಾಕ್ಟರ್ ಪುರಂಧರೆಯವರು ಬರುತ್ತಾರೆ. ನಾನು ಇವತ್ತೆಲ್ಲ ಇಲ್ಲಿದ್ದು, ಅವರನ್ನು ಕಂಡು ಮಾತನಾಡಿ ಹೋಗುತ್ತೇನೆ" ಎಂದ. ತಾನು ತಂದಿದ್ದ ಒಂದಿಷ್ಟು ಕಿತ್ತಳೆ, ಮುಸುಂಬಿ ಹಣ್ಣುಗಳನ್ನು ಅವಳ ಮಗ್ಗುಲಲ್ಲಿರಿಸಿದ. ಹೊರಕ್ಕೆ ಬಂದು ಗುಲಾಬಿಯೊಡನೆ "ನಿನಗೆ ತುಂಬ ಬೇಸರವಾಗುತ್ತಿರಬೇಕು" ಎಂದ.

"ನನಗೇನಾದರೂ ಅಡ್ಡಿಯಿಲ್ಲ, ಅವರಿಗೆ ಸುಖವಾದರೆ."

"ಬರುತ್ತೇನೆ, ಇವತ್ತೆಲ್ಲ ಇಲ್ಲಿದ್ದೇನೆ" ಎಂದು ಹೇಳಿ ಗಂಪು ಸುಪರಿಂಡೆಂಟರ ಜತೆಗೆ ಹೊರಟು ಹೋದ.

ಆ ಸಂಜೆಯೇ ಡಾಕ್ಟರ್ ಪುರಂಧರೆಯವರು ಆ ಊರಿಗೆ ಬಂದರು. ಗಂಪು ಅವರನ್ನು ಬಂಗಲೆಯಲ್ಲಿ ಭೇಟಿಯಾದ. ಅವರಿಗೆ ಪರಿಚಿತರಾದ ಸ್ನೇಹಿತರಿಂದ ಪತ್ರ ಬರೆಯಿಸಿ ತಂದು, ಸ್ನೇಹದ ಪೀಠಿಕೆ ಮಾಡಿಕೊಂಡಿದ್ದ. ಅವರೂ ಗಂಪುವಿನ ವರ್ಚಸ್ಸನ್ನು ಬಯಸುತಿದ್ದರು; ಮತ್ತೇಕಲ್ಲ–ಅವರ ಸ್ವಂತ ಉಪಯೋಗಕ್ಕಾಗಿ ಒಂದು ಮೋಟರು ಗಾಡಿ ಬೇಕಿತ್ತು. ಗಂಪು ಅದನ್ನು ದೊರಕಿಸಿಕೊಡುವ ಭರವಸೆಯನ್ನು ಕೊಟ್ಟ. ಆ ದಿನ ಅಲ್ಲಿ ನಿಲ್ಲಬೇಕಾಯಿತು. ಮರುದಿನ ಪುರಂಧರೆಯವರ ಜತೆಗೆ ಇಂದಮ್ಮನ ವಾರ್ಡಿಗೆ ಬಂದುದಾಯಿತು. ಮೂರನೆಯ ಬಾರಿಗೆ ಪರೀಕ್ಷೆಯೂ ನಡೆಯಿತು. ಎಕ್ಸ್-ರೇ ತೆಗೆದರು. ಇನ್ನೂ ಒಂದು ಶಸ್ತ್ರಚಿಕಿತ್ಸೆ ನಡೆಯಬೇಕೆಂದು ಅವರು ತಿಳಿಸಿದರು. ಆಗ ಗಂಪುವೂ ತಬ್ಬಿಬ್ಬಾದ. ಡಾಕ್ಟರ್ ಪುರಂಧರೆಯವರು, ವಿರಾಮವಾಗಿ ರೋಗಿಯ ಸ್ಥಿತಿಯನ್ನು ವಿವರಿಸಿ ಹೇಳಿದರು. ಈ ಬಾರಿ ಮೂರನೆಯ ಪಕ್ಕೆಲುಬಿನಲ್ಲಿ ರೋಗ ಕಾಣಿಸುತ್ತಿದೆ. ಕಶೇರುಕಕ್ಕೆ ತೀರ ಸಮೀಪವಾಗಿದೆ. ಆದಷ್ಟು ತೀವ್ರ ಅದನ್ನು ಕತ್ತರಿಸುವುದು ಒಳ್ಳೆಯದು. ಇಲ್ಲದೆ ಹೋದರೆ

ಕಶೇರುಕಕ್ಕೆ ರೋಗ ಹಿಡಿದರೆ ಕೆಲಸ ಮುಗಿದಂತೆಯೆ. ಒಪರೇಶನ್ ಮುಗಿದ ಮೇಲೆ ಒಡೆರಡು ತಿಂಗಳು ಪ್ಲೆಸ್ಟರ್ ಕವಚ ಹಾಕಿಕೊಂಡು ಮಲಗುವ ಪಾಡು ಬರುತ್ತದೆ. ಅದು ತುಂಬ ಆಯಕಟ್ಟಿನ ಎಲುಬಾದುದರಿಂದ ಶರೀರದ ಚಲನೆ ಆಗದಂತೆ ನೋಡಬೇಕು. ಅದಕ್ಕಾಗಿ ಪ್ಲೆಸ್ಟರ್ ಕವಚ ಬೇಕೇ ಬೇಕು. ಅನಂತರ ಕೆಲವು ಸಮಯದ ಬಳಿಕ ಅವರ ಹಾಳಿತಕ್ಕೆ ತೊಗಲಿನ ಕವಚ ಮಾಡಬೇಕಾದೀತು'ಎಂದು,ನಾಲ್ಕು ಗ್ರಂಥಗಳಿಂದ ಸಂಬಂಧಿಸಿದ ಎಲುಬಿನ ಚಿತ್ರಗಳನ್ನೂ ಅವನಿಗೆ ತೋರಿಸಿದರು. ಗಂಪು ಆ ಅಸ್ತಿಚ್ಛೇದನವಾಗುವ ದಿವಸ ಅಲ್ಲಿಯೇ ಉಳಿದು, ಶಸ್ತ್ರ ಚಿಕಿತ್ಸೆಯು ಯಶಸ್ವಿಯಾದುದನ್ನು ಕಂಡು, ಹೊರಡುವ ಯೋಚನೆ ಮಾಡಿದ. ಕವಚ ತೊಡಿಸಿ, ಗಾಯಕ್ಕೆ ಎಡೆಬಿಟ್ಟು ಮಲಗಿಸಿದ ಆ ದುರ್ದೈವಿಯನ್ನು ಕಂಡ ಗಂಪುವಿಗೆ, ಅಲ್ಲಿಂದ ಬೀಳ್ಕೊಡುವುದೇ ಕಷ್ಟವಾಗಿ ಕಂಡಿತು. ಇಂದಮ್ಮನ ಮನಸ್ಸು ಹೇಗಾಗಿರಬಹುದೆಂದು ಆತ ಊಹಿಸ ಬಲ್ಲ. ತಾನೆಷ್ಟು ಧೈರ್ಯ ಹೇಳಿದರೂ ರೋಗಿಯ ಮನಸ್ಸಿನ ಧೈರ್ಯ ಕುಸಿದಿದ್ದುದನ್ನು ಅವಳ ಕಣ್ಣುಗಳೇ ಹೇಳುತ್ತಿವೆ.

ಈಚೆಗೆ ಬಂದು,ಗುಲಾಬಿಯನ್ನು ಕಂಡು ತಾನು ಕೇಳಿದ ಅಂಶಗಳನ್ನು ಅವಳಿಗೂ ವಿವರಿಸಿದ, "ಎಲ್ಲವೂ ನಿನ್ನ ಮೇಲಿದೆ ನೋಡು. ಅವರ ಮನಸ್ಸಿಗೆ ಗೆಲುವನ್ನುಹುಟ್ಟಿಸುವ ಭಾರ ನಿನ್ನದು"ಎನ್ನುತ್ತ "ಹಾಗಾದರೆ ಹೋಗುತ್ತೇನೆ. ಈ ರೂಪಾಯಿ ನಿನ್ನ ಕೈಯಲ್ಲಿರಲಿ. ಡಾಕ್ಟರರು ತಿಂಗಳಿಗೆ ನೂರೈವತ್ತರಂತೆ ಕಳುಹಿಸುತ್ತಿದ್ದೇನೆ ಎಂದರು.ಇಲ್ಲಿನ ಕತೆ ವಿಚಾರಿಸುವಾಗ ಅಷ್ಟುಯಾತಕ್ಕೂ ಸಾಲದು. ಇದರಲ್ಲಿ ಐನೂರಿದೆ. ಡಾಕ್ಟರರಿಗೆ ತಿಳಿಸ ಬೇಡ" ಎಂದು ಹೇಳಿ ನಾಲ್ಕು ಹೆಜ್ಜೆ ಹೊರಟು ಹೋದ ಮೇಲೆ, ತಿರುಗಿ ಬಂದು "ನಿನ್ನ ಮಗನಿಗೇನು ಹೇಳಬೇಕು? ಡಾಕ್ಟರರಿಗೆ ಹೇಳುವುದನ್ನೆಲ್ಲ ಹೇಳುತ್ತೇನೆ" ಎಂದು ವಿಚಾರಿಸಿದ.

"ಪಾಪ! ಅವನಿಗೇನು ಹೇಳುವುದು? 'ಅಮ್ಮ ಹುಶಾರಿದ್ದಾಳೆ, ಬೇಗ ಬರುತ್ತಾಳೆ' ಎಂದರೆ ಸಾಕು" ಎಂದಳು.

ಊರನ್ನು ಸೇರಿ ಶಿವಪ್ಪನವರಿಗೆ "ನಿಮ್ಮ ಇಂದಮ್ಮನನ್ನು ಕಂಡು ಬಂದೆ." ಎನ್ನುವ ತನಕ ಗಂಪುವಿನ ಮನಸ್ಸು ಆತುರದಿಂದ ತುಂಬಿತ್ತು. ಆತಗೆ ಕುಕನೂರಿಂದ ಹೊರಡುವ ಮೊದಲೇನೆ-ಡಾಕ್ಟರ್ ಪುರಂಧರೆಯವರ ಕೇಳಿಕೆಯನ್ನು ಹೇಗೆ ನೆರವೇರಿಸುವುದು–ಎಂಬ ಯೋಚನೆ ಬಂದಿತ್ತು.

ಅವರೇನೋ ಮೋಟರ್ ಗಾಡಿಗೆ ದುಡ್ಡು ಕೊಡುತ್ತಾರೆ. ಅದು ಘತೋಟಿಯ ಬೆಲೆ. ತಾನು ತನ್ನ ವರ್ಚಸ್ಸಿನಿಂದ ಅದನ್ನು ದೊರಕಿಸಿ ಕೊಡಬೇಕು, ನಡುವೆ ತಿನ್ನಿಸುವವರಿಗೆ ತಿನ್ನಿಸಬೇಕು. ಅದಕ್ಕಾಗಿ ಕೊಲ್ಲಾಪುರಕ್ಕೆ ಹೋಗಿ, ಅಷ್ಟು ಕೆಲಸಮಾಡಿಕೊಂಡು, ಡಾಕ್ಟರರಿಗೆ ಕಾಗದ ಬರೆದು, ಅಲ್ಲಿಂದ ಊರಿಗೆ ಹೊರಟ. ಅವನ ಪಯಣವೆಂದರೆ ಅವನ ಮನೋಲಹರಿಯಂತೆ ವೇಗವಾದ ಹುಚ್ಚು ಪ್ರವಾಸ. ಬೆಳಿಗ್ಗೆ ಕೊಲ್ಲಾಪುರದಿಂದ ಹೊರಟವನು ರಾತ್ರಿಯ ಹದಿನೆರಡು ಗಂಟೆಗೆ ಕಾಳೂರನ್ನು ಸೇರಿದ. ಆಹಾರವಿಲ್ಲ, ವಿಶ್ರಾಂತಿಯಿಲ್ಲ. ಊರು ಸೇರಿದವನೇ ಡಾಕ್ಟರರ ಮನೆಯನ್ನು ಹೊಕ್ಕು, "ನಾನು ಬಂದಿದ್ದೇನೆ" ಎಂದು ಕದ ತಟ್ಟಿ, ಅವರನ್ನು ಎಚ್ಚರಿಸಿಯೂ ಆಯಿತು. ಡಾಕ್ಟರರು ಕದ ತೆರೆದರು, ಹೊರಕ್ಕೆ ಬಂದರು. "ಈಗ ಬಂದೆಯಾ?" ಎಂದು ಮಾತಿಗೆ ತೊಡಗಿದರು. ಅವರ ಮುಂದೆ ಇಂದಮ್ಮನ ಸ್ಥಿತಿ, ಪುರಂಧರೆಯವರ ಅಭಿಪ್ರಾಯ, ಮೂರನೆಯ ಶಸ್ತ್ರಚಿಕಿತ್ಸೆ-ಎಲ್ಲವನ್ನೂ ಕುರಿತು ಬಣ್ಣಿಸಿದ. ಅನಂತರ "ನಿಮ್ಮ ಗುಲಾಬಿ ಎಂದರೆ ಥೇಟು ಗುಲಾಬಿಯೇ, ಅವಳಿದ್ದುದಕ್ಕಾಯಿತು. ಅದೊಂದು ಊರೇ? ಪಾಪ; ಅವಳು ಆ ಹೊಟೇಲಿನ ಅನ್ನ ತಿಂದು ಅರ್ಧಕ್ಕರ್ಧವಾಗಿದ್ದಾಳೆ. ಕಂಡವರು, ಕಾಯಿಲೆ ಅವಳಿಗೇ ಅನ್ನಬೇಕು."

"ನಿನಗೆ ಡಾಕ್ಟರ್ ಪುರಂಧರೆಯವರು ಸ್ಪಷ್ಟವಾದ ಅಭಿಪ್ರಾಯ ಹೇಳಿದರೇ? ಅವರ ಗುರುತು, ಸ್ನೇಹ ಆಯಿತೇ?"

"ಮತ್ಯಾರ ಸುದ್ದಿ ಹೇಳಿದ್ದು ಈ ತನಕ. ಅವರನ್ನೇ ಕಂಡು, ಅವರದ್ದಷ್ಟು ಬಿಟ್ಟಿಮಾಡಿ ಬಂದೆ. ಮೂರನೆಯ ಒಪರೇಶನ್ ಮಾಡಿದ್ದೂ ಅವರೇನೆ. ಅವರು ಅಂಥ ಧೈರ್ಯವಾದ ಅಭಿಪ್ರಾಯ ಹೇಳುವುದಿಲ್ಲ. 'ನನ್ನ ಕೈಯಿಂದಾಗುವುದು ಎಷ್ಟಿದೆಯೋ ಅಷ್ಟನ್ನು ಮಾಡುತ್ತೇನೆ. ಮತ್ತೇನು ಮಾಡಲಿ?' ಅನ್ನುತ್ತಾರೆ"

"ಅದು ಹಾಗೆಯೇ ಸರಿ. ಎಲುಬಿನ ಶಸ್ತ್ರ ಚಿಕಿತ್ಸೆ ಕಷ್ಟದ್ದು. ಅವರು ಮಾಡಬಲ್ಲ ಬುದ್ಧಿವಂತರು. ಆದರೆ ಈ ಕಾಯಿಲೆಯ ಸ್ವಭಾವ ಅನಿರ್ದಿಷ್ಟ. ಅದು ಶರೀರದ ಯಾವ ಭಾಗದಲ್ಲಿ ಕಾಣಿಸಿಕೊಂಡೀತು ಎಂದು ಹೇಳಲು ಬರುವಂತಿಲ್ಲ. ಏನು ಮಾಡಬರುತ್ತದೆ? ನನಗೆ ಚಿಂತೆ ಮಾಡುವ ಯೋಗ, ಅವಳಿಗೆ ನರಳುವ ಯೋಗ . . . . ಹೋಗಲಿ; ನೀನೇನು ಮಾಡುತೀ? ಊಟವಾಗಿದೆಯೋ, ಇಲ್ಲವೆ!"

"ಈಗೇನು ಊಟ?"

"ಇಲ್ಲೇ ಮಲಗಿಕೊಳ್ಳು ಹಾಗಾದರೆ. ಇನ್ನು ನಿನ್ನ ಮನೆಗೆ ಹೋಗಿ ಅವರಿಗೆಲ್ಲ ಉಪದ್ರ ಕೊಡುವುದೇತಕ್ಕೆ?"

ಅಷ್ಟರಲ್ಲಿ ಶಿವಪ್ಪನವರಿಗೆ ಅಲ್ಲಿನ ಖರ್ಚುವೆಚ್ಚಗಳ ವಿಚಾರ ಕೇಳುವ ಮನಸ್ಸಾಯಿತು. ಕೇಳಿದರು. "ನಾನು ತಿಂಗಳಿಗೆ ನೂರೈವತ್ತರಂತೆ ಕಳುಹಿಸಿದ್ದೆ. ಹಣ ಹೆಚ್ಚಿಗೆ ಬೇಕಾದರೆ ಬರೆ ಎಂದು ಬರೆದಿದ್ದೆ. ಆ ವಿಚಾರವಲ್ಲಿ ಅವರ ಕಾಗದವೇ ಇಲ್ಲ. ಸಾಕಾಗುತ್ತದೆಯೆ ನೂರೈವತ್ತು?"

"ನೂರೈವತ್ತು ಎಲ್ಲಿಗೆ ಸಾಕು ಡಾಕ್ಟರರೆ? ಹಿಂದಿನ ಸಾರಿ ಹೋದಾಗ ನಾನೂ ಎಲ್ಲ ಮರೆತು ಬಂದಿದ್ದೆ. ನೀವೂ ಎಲ್ಲ ಮರೆತಿರಿ. ಈ ಸಾರಿ ಹೋದಾಗ ಅಲ್ಲಿನ ಸ್ಥಿತಿಗತಿಗಳನ್ನೆಲ್ಲ ವಿಚಾರಿಸಿದೆ–ಒಬ್ಬರು ಗುರುತಿನವರು ಸಿಕ್ಕಿದರು. ಅಲ್ಲಿ ಕುಳಿತದ್ದಕ್ಕೆ, ನಿಂತದ್ದಕ್ಕೆ, ನೋಡಿದ್ದಕ್ಕೆ, ಬಿಟ್ಟದ್ದಕ್ಕೆ ಪ್ರತಿಯೊಂದಕ್ಕೂ ದಕ್ಷಿಣೆ ತಾಗಿಸುವ ರೂಢಿ ಇದೆಯಂತೆ. ಗುಲಾಬಿಯ ಮಾತಿನಿಂದಲೂ ಹಾಗೆನಿಸಿತು. ಅದರಿಂದ ನಾನು ಬರುವಾಗ ಐನೂರು ರೂಪಾಯಿ ಕೊಟ್ಟು ಬಂದೆ. ಫಕ್ಕನೆ ದುಡ್ಡಿಲ್ಲದೆ ಸೋಲಬಾರದಲ್ಲ."

"ನೀನೇಕೆ ಕೊಟ್ಟೆ ಮಹಾರಾಯ."

"ನಾನು ಕೊಟ್ಟದ್ದರಿಂದೇನು ತಪ್ಪು? ತೆಗೆದುಕೊಳ್ಳುವುದಕ್ಕೆ ಬರುವುದಿಲ್ಲವೆ?" ಎಂದು ನುಡಿದು "ಮನೆಗೇನೆ ಹೋಗುತ್ತೇನೆ" ಎಂದು ಆತುರವಾಗಿ ಹೊರಟುಹೋದ.

* * * * *

ಇನ್ನೆರಡು ತಿಂಗಳ ಕಾಲ ಸರಿಯಿತು. ಶಿವಪ್ಪನವರಿಗೆ ಇಂದುವಿಲ್ಲದ ಮನೆ ಚಂದವಿಲ್ಲದ ಮನೆಯಾಗಿ ಕಾಣಿಸತೊಡಗಿತು. ಅಲ್ಲಿಂದೇನೋ ಪತ್ರ ಬರುತ್ತಲಿದೆ. ಆದರೆ ಭವಿಷ್ಯವನ್ನು ಕುರಿತು ಪೂರ್ಣ ನಿರಾಶೆಯಾಗುತ್ತ ಬಂದಿದೆ. ಮನಸ್ಸಿನಲ್ಲಿ ಗೆಲುವಿಲ್ಲದಾಗ ಮನೆಯಲ್ಲಿಯೂ ಗೆಲುವಿಲ್ಲ. ಮನೆಯ ಮಕ್ಕಳನ್ನು ಕಂಡಾಗ ತಾವು ಗೆಲುವಾಗಿದ್ದು, ಅವರನ್ನು ಹರ್ಷಗೊಳಿಸುವ ಪ್ರಯತ್ನ ವಿಫಲವಾಗುತ್ತದೆ. ದಿನದ ದುಡಿತದಿಂದ ಸಾಕಷ್ಟು ನುಗ್ಗು ನುರಿಯಾಗುತ್ತಿದ್ದಾರೆ. ಆಸ್ಪತ್ರೆಯ ಕೆಲಸಗಳಲ್ಲಿ ಸಹಾಯಕಳಾದ ಗುಲಾಬಿಯೂ ಇಲ್ಲ; ಮನೆ ತುಂಬಿಸುವುದರಲ್ಲಿ ನೆರವಾದ ಇಂದುಮತಿಯೂ ಇಲ್ಲ. ಏನೋ ಮುದ್ದು ಚಂದ್ರ ಕೈಗೆ ಬಂದಾಗ ಒಂದಿಷ್ಟು ಉಲ್ಲಾಸವಾಗುತ್ತದೆ. ಅವನ

ತೊದಲು ನುಡಿಗಳನ್ನು ಕೇಳಿ ನಗುತ್ತಾರೆ. ಆದರೆ ಆ ಮಗುವು ತಾಯಿಯನ್ನು ನೆನೆದು "ಅಮ್ಮ ಎಲ್ಲಿದ್ದಾಳೆ? ಯಾಕೆ ಬರುವುದಿಲ್ಲ?" ಎಂದು ಕೇಳಿದಾಗ ಉತ್ತರ ಹೇಳುವುದು ಕಷ್ಟವಾಗುತ್ತದೆ. 'ಇಂದು ಬಂದಾಳು, ನಾಳೆ ಬಂದಾಳು' ಎಂದು ಎಷ್ಟು ದಿನಗಳ ತನಕ ಹೇಳಬಹುದು.

ಆ ಕೂಸನ್ನು ಜತೆಯಲ್ಲಿ ಮಲಗಿಸಿಕೊಂಡು ಅದರ ಮೈಯನ್ನು ತಟ್ಟುತ್ತ, ನಿದ್ದೆ ಬರುವ ತನಕವೂ ಕಾದಿದ್ದು, ಅನಂತರ ಮಲಗಿಕೊಂಡರೆ ನಿದ್ದೆಯೂ ಬಹು ಹೊತ್ತಿನ ತನಕ ಬರುವುದಿಲ್ಲ. "ಈ ಮಕ್ಕಳು ತಿರುಗಿ ತಮ್ಮ ತಾಯೊಡನೆ ನಲಿದಾಡುವ ಅದೃಷ್ಟವುಂಟೇ" ಎಂಬ ಕಳವಳವು ಮನಸ್ಸಿನಲ್ಲುಂಟಾಗುತ್ತದೆ. ಇಂದುವನ್ನು ಕುಕನೂರಿನಲ್ಲಿ ಬಿಟ್ಟು ಬಂದ ದಿನದಿಂದ ಅವರು ಹೆಚ್ಚಿನ ಆಸೆ ತಾಳಿದವರಲ್ಲ; ಮಾಡುವ ಕರ್ತವ್ಯ ಮಾಡುತ್ತಿದ್ದೇನೆ ಎಂದಿಷ್ಟೇ ಸಮಾಧಾನ ಅವರಿಗೆ. ಗುಲಾಬಿಯ ಪತ್ರಗಳಿಗಾಗಿ ಆಗಾಗ ಕಾಯುತ್ತಿದ್ದ ಅವರು, ಕಾಗದದಲ್ಲಿ ಬರೆದುದಕ್ಕಿಂತ ಹೆಚ್ಚಾದ ಅರ್ಥವನ್ನು ಊಹಿಸುವುದಕ್ಕೆ ಪ್ರಯತ್ನಿಸುತ್ತಾರೆ. ಆಸೆ ತಂದುಕೊಳ್ಳುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ತೀರ ಮೊನ್ನೆ ಬಂದ ಒಂದು ಕಾಗದದಲ್ಲಿ "ಇನ್ನು ಪಾರಾದಂತೆಯೋ ಏನೋ. ಮೂರನೆಯ ಶಸ್ತ್ರ ಚಿಕಿತ್ಸೆಯಾದ ಬಳಿಕ ತಗ್ಗಿದ ಟೆಂಪರೇಚರ್ ತಿರುಗಿ ಏರಿಲ್ಲ. ಎರಡು ತಿಂಗಳಾಯಿತಲ್ಲ. ಅವರ ಮುಖವೂ ತುಂಬಿ ಬರುತ್ತಿದೆ. ಪ್ಲೆಸ್ಟರ್ ಕವಚ ತೆಗೆಯುವ ದಿವಸ ಕಾಯುತಿದ್ದಾರೆ. ಅನಂತರ ನಾಲ್ಕಾರು ದಿನ ಅವರಾಗಿ ಮಗ್ಗಲು ಮಗುಚುವುದಕ್ಕೆ, ಕುಳಿತೇಳುವುದಕ್ಕೆ ಅಭ್ಯಾಸಮಾಡಬೇಕಾದೀತು" ಎಂದು ಬರೆದಿದ್ದಳು. ಅದನ್ನು ಕಂಡಾಗ ಎಷ್ಟೋ ಧೈರ್ಯವಾಯಿತು. ಮಕ್ಕಳನ್ನು ಕರೆದರು; "ನಿಮ್ಮ ಅಮ್ಮನಿಗೆ ಹುಷಾರಾಗಿದೆಯಂತೆ. ಇನ್ನು ಸ್ವಲ್ಪ ದಿವಸಗಳಲ್ಲಿ ಹೋಗಿ ಕರೆದುಕೊಂಡು ಬರುವ" ಎಂದರು.

ಇನ್ನೊಂದು ಹದಿನೈದು ದಿನಗಳಲ್ಲಿ ಮತ್ತೊಂದು ಪತ್ರ ಬಂದಿತು. ಅದರಲ್ಲಿ ಪ್ಲೆಸ್ಟರ್ ಕವಚ ತೆಗೆದ ಸುದ್ದಿಯನ್ನು ಹೇಳಿದುದರ ಜತೆಗೆ "ಬೆನ್ನೆಲುಬಿಗೆ ತೀರ ಸಮೀಪವಾಗಿ ಮತ್ತೊಂದು ಕುರುವಾಗಿದೆ. ಅದರಿಂದಾಗಿ ಇಂದಮ್ಮನವರಿಗೆ ತೀರ ಧೈರ್ಯ ಕುಗ್ಗಿದೆ. "ಏನೂ ಇರಲಿ, ಇಲ್ಲಿ ಕೊಳೆಯುವುದು ಬೇಡ. ಮಕ್ಕಳಿಂದ ಎಷ್ಟು ಕಾಲ ದೂರವಿದ್ದೇನು? ಅವುಗಳನ್ನು ಕಂಡು ಸಾಯುವ ಭಾಗ್ಯವಾದರೂ ಇರಲಿ. ನಿಮ್ಮೆಲ್ಲರಿಂದ ದೂರವಿರುವ ಶಿಕ್ಷೆ

ವಿಧಿಸಬೇಡಿ" ಎನ್ನುತ್ತಾರೆ ಎಂದು ಅವಳ ಮಾತುಗಳನ್ನು ತಿಳಿಸಿ, ತನ್ನ ಅಭಿಪ್ರಾಯವನ್ನು ಸೂಚಿಸಿದ್ದಳು. "ಬಂದು ಐದು ತಿಂಗಳ ಮೇಲಾಯಿತು. ಅವರಿಗೆ ಧೈರ್ಯಕೊಡುತ್ತಲೆ ಇದ್ದೇನೆ. ಆದರೆ ಅವರ ಮನಸ್ಸಿನಲ್ಲಿ ತಮಗುಳಿದ ದಿನ ಬಹುಕಡಿಮೆ. ಅದು ನಾಲ್ಕೇ ಇರಲಿ, ತಿಂಗಳೇ ಇರಲಿ, ಆರು ತಿಂಗಳಿರಲಿ ನಿಮ್ಮೊಡನಿರಬೇಕೆಂದು ಬಯಸುತ್ತಾರೆ. ನಿಮಗೇನು ಬರೆಯುವುದು, ಅವರಿಗೇನು ಹೇಳುವುದು, ಯಾವುದೂ ನನಗೆ ಗೊತ್ತಾಗುವುದಿಲ್ಲ.

"ನನಗೆ ತೋಚಿದರೀತಿಯಾಗಿ ಹೀಗೆ ಬರೆಯುತಿದ್ದೇನೆ. ಅವರ ಅಭಿಪ್ರಾಯವೇ ನನ್ನ ಅಭಿಪ್ರಾಯ—ಎಂದು ತಿಳಿಯಬೇಡಿ. ದೇವರು ನನ್ನ ಜೀವವನ್ನು ತೆಗೆದುಕೊಂಡು ಅವರದ್ದನ್ನು ಉಳಿಸುವಂತಿದ್ದರೆ ಖಂಡಿತವಾಗಿಯೂ ಕೊಡುತ್ತಿದ್ದೆ. ನನಗಂತೂ ಇದು ಎಲ್ಲರ ಕೈಯನ್ನೂ ಮೀರಿದ ಕೆಲಸವೆಂದು ಕಾಣುತ್ತದೆ" ಎಂದು ಬರೆದಿದ್ದಳು.

ಆ ಪತ್ರಬಂದ ದಿವಸ ಅವರ ಮನಸ್ಸು ತೀರ ಕಲ್ಲಾಯಿತು. ಯೋಚನೆಗಳು ಹರಿಯಲಾರದೆ ಹೆಪ್ಪುಗಟ್ಟಿದುವು. ಕಾಗದವನ್ನೋದಿದವರು ಸ್ನಾನ ಮಾಡಲಿಲ್ಲ, ಊಟ ಮಾಡಲಿಲ್ಲ. ತಮ್ಮ ಮಕ್ಕಳ ಮುಖವನ್ನು ಕಂಡಾಗಲಂತು ಎಲ್ಲಿಲ್ಲದ ನಿರಾಶೆಯಾಯಿತು. ಗಂಪುವಿಗೆ ಹೇಳಿ ಕಳುಹಿಸಿದರು. ಆತ ಕಾರವಾರಕ್ಕೆ ಹೋಗಿದ್ದ. ಆದರೆ ತಮ್ಮಮಟ್ಟಿಗೆ "ಹೊರಡುವುದು ಒಳ್ಳೆಯದು. ಏನೂ ಇರಲಿ, ಅವಳ ಕೊನೆಯ ದಿವಸಗಳನ್ನು ಸುಖಮಯವಾಗಿ ಮಾಡಬೇಕು; ಆಪ್ತರಿಂದ ಅವಳನ್ನು ಕಡಿದು ಮನಸ್ಸನ್ನು ನೋಯಿಸಬಾರದು" ಎಂದು ನಿರ್ಧರಿಸಿಕೊಂಡರು. ಮೂರು ನಾಲ್ಕು ದಿನಗಳ ಮಟ್ಟಿಗೆ ದವಾಖಾನೆ, ಮನೆಗಳನ್ನು ನೋಡುವ ಏರ್ಪಾಟುಮಾಡಿ, ಗಂಪುವಿಗಾಗಿ ಕಾದು ಕುಳಿತರು. ಆತ ಮರುದಿನ ಬಂದವನೇ ಅವರನ್ನು ಕಂಡು "ಏನು? ಕುಕನೂರಿನಿಂದ ಕಾಗದವಿದೆಯೆ? ಅಮ್ಮ ಹೇಗಿದ್ದಾರೆ? ಕಳೆದಾವರ್ತಿಗಿಂತ ಚೆನ್ನಾಗಿರಬೇಕು ಅಲ್ಲವೆ?" ಎಂದು ಕೇಳಿದನು.

"ಕಾಗದ ಬಂದಿದೆ" ಎಂದು ಅದನ್ನು ತೆಗೆದು ಅವನ ಕೈಗೆ ಕೊಟ್ಟರು. ಅವನ ಮುಖವೂ ಸಪ್ಪೆಯಾಯಿತು. "ಹಾಗಿದ್ದರೆ ದೇವರು ಹಣೆಯಮೇಲೆ ಬರೆದಂತಾಗುತ್ತದೆ. ಅವರನ್ನು ಕರೆದು ತರುವುದು ಒಳ್ಳೆಯದು. ನೀವೂ ಮಕ್ಕಳೂ ಸಮೀಪವಿದ್ದರೆ ಇರುವ ನಾಲ್ಕು ದಿನ ಸುಖವಾಗಿ ಇದ್ದಾರು. ಎಂದು ಹೊರಡಬೇಕನ್ನುತ್ತೀರಿ?"

“ಎಷ್ಟು ಬೇಗನಾದರೆ ಅಷ್ಟು. ಇವತ್ತೇನೆ ಹೊರಟು ಬಿಡುವ. ನಿನ್ನ ಕಾರಿಗೆ ಬಿಡುವಿದೆಯಲ್ಲ. ಹೋಗುವಾಗ ಕಾರ್ ಆಗಬಹುದು. ಅದರಲ್ಲಿ ಅವಳನ್ನು ಕರೆತರುವುದಕ್ಕಾಗುತ್ತದೆಯೋ ಎಂದು ಗೊತ್ತಿಲ್ಲ. ಆದರೆ ಹುಬ್ಬಳ್ಳಿ ಧಾರವಾಡದಿಂದಲಾದರೂ ವೇನ್ ಬೇಕೇ ಆಗುತ್ತದೆ. ಈಗ ನನಗೆ ಒಂದೆರಡು ವಿಸಿಟುಗಳು ಇವೆ. ಮುಗಿಸಿ ಬರುತ್ತೇನೆ” ಎಂದಾಗ, ಗಂಪು ಅವರನ್ನು ಕೂಡಿಕೊಂಡು ಅವರ ರೋಗಿಗಳ ಮನೆಗೆ ಕರೆದುಕೊಂಡು ಹೋದ. ರೋಗಿಗಳನ್ನು ವಿಚಾರಿಸಿ ‘ನಾಲ್ಕು ದಿನ ನಾನಿಲ್ಲ, ಆತುರಪಡಬೇಕಾಗಿಲ್ಲ’ ಎಂಬ ಭರವಸೆ ಹೇಳಿ, ಮನೆಗೆ ಮರಳಿದರು. ಆ ಮಧ್ಯಾಹ್ನವೇ ಊಟ ಮುಗಿಸಿ, ಹೊರಟೂ ಆಯಿತು. ರಾತ್ರಿ ಬೆಳಗಾಗುವುದರೊಳಗೆ ಅವರಿಬ್ಬರೂ ಬೆಳಗಾಂವಿಯನ್ನು ಸೇರಿದರು. ಅಲ್ಲಿ ಗಂಪು ತನ್ನ ಮಿತ್ರರನ್ನು ಕಂಡು, ರೋಗಿಯನ್ನು ಸಾಗಿಸುವುದಕ್ಕೆ ಅನುಕೂಲವಾದ ವೇನ್ ಹೊರಡಿಸಿಕೊಂಡು ಕುಕನೂರನ್ನು ಸೇರಿದ. ಸೇರಿದ ಬಳಿಕ--ತಾವು ಬಂದುದು ಒಳಿತಾಯಿತು; ನಿರ್ಧಾರವನ್ನು ಬದಲಿಸಬೇಕಿಲ್ಲ ಎಂಬ ಅಭಿಪ್ರಾಯವನ್ನು ಅವರು ಮಾಡಿದರು. ಆಸ್ಪತ್ರೆಯ ಸುಪರಿಂಡೆಂಟರು ಸಹ ಹಾಗೆಯೇ ಹೇಳಿದರು. ಅಲ್ಲಿನ ಪರಿಚಿತರನ್ನು ಕಂಡು, ಇಂದುವನ್ನು ಒಯ್ದಿದ್ದ ವೇನ್‌ನಲ್ಲಿ ಮಲಗಿಸಿ, ಅವರೆಲ್ಲ ಹೊರಟೂ ಆಯಿತು.

ಹೋಗುವ ದಾರಿಯನ್ನು ಲಂಬಿಸಬಾರದೆಂದು, ಧಾರವಾಡಕ್ಕೆ ಇಂದುಮತಿಯನ್ನು ಕರೆದೊಯ್ದು, ಆಕೆಯ ದಣಿವನ್ನು ಹೆಚ್ಚಿಸಬಾರದೆಂದು ಆ ದಾರಿಯನ್ನು ಬಿಟ್ಟು, ಸೂಫೆಯ ಮಾರ್ಗವಾಗಿ ಊರನ್ನು ಸೇರುವ ನಿರ್ಧಾರ ಮಾಡಿದರು. ಮರಳುವ ಪಯಣವು ರೋಗಿಗೆ ದಣಿವಾಗದ ರೀತಿಯಲ್ಲಿ ಅಲ್ಲಲ್ಲಿ ನಿಂತು, ವಿಶ್ರಾಂತಿ ಕೊಟ್ಟು, ಮೆಲುನಡೆಯಿಂದ ಸಾಗಬೇಕಾಯಿತು. ಇಂದುಮತಿಗೆ ಪಯಣದ ಆಯಾಸವು ಮನಸ್ಸಿನ ಸಂತೋಷದಲ್ಲಿ ಮುಳುಗಿ ಹೋಗಿತ್ತು. ಆಸ್ಪತ್ರೆಯಲ್ಲಿ ಗಂಡನ ಮುಖ ನೋಡಿದಾಗ ದುಃಖ ಮಿಶ್ರಿತ ಸುಖ ಬಾಷ್ಪ ಸುರಿಸಿದ್ದಳು. ‘ನಿಜಕ್ಕೂ ಕರೆದೊಯ್ಯಲು ಬಂದಿದ್ದಾರೆ’ ಎಂದು ಕಂಡು ಅವಳಿಗೆ ಹೆಚ್ಚಿನ ಆನಂದವಾಯಿತು. ತಾನು, ತನ್ನ ಮಕ್ಕಳನ್ನು ಸೇರುತ್ತೇನೆ ಎಂಬ ಸಂತೋಷ ಎಣೆಯಿಲ್ಲದ್ದು. ಅವಳ ಒಂದು ಮಗ್ಗುಲಲ್ಲಿ ಶಿವಪ್ಪನವರು ಕುಳಿತಿರುತಿದ್ದರು. ಇನ್ನೊಂದು ಕಡೆ ಗುಲಾಬಿ ಕುಳಿತಿದ್ದಳು. ಮೋಟರು ಗಾಡಿಯನ್ನು ಎಚ್ಚರವಾಗಿ ನಡೆಸಬೇಕೆಂದು ಗಂಪುವೇ ಸ್ಟಿಯ

ರಿಂಗ್ ಹಿಡಿದಿದ್ದ. ಆ ಪಯಣದ ವೇಳೆಯಲ್ಲೂ ದಣಿವಿನ ಎಡೆಯಲ್ಲೂ ಆನಂದ ತುಂಬಿದ್ದ ಇಂದುಮತಿಯು ಆಗಾಗ ಮಾತಾಡುತ್ತಾಳೆ: "ಗುಲಾಬಿ ಬಾರದಿರುತಿದ್ದರೋ—ನೀವು ನನ್ನನ್ನು ಹೀಗೆ ಒಯ್ಯುವುದಕ್ಕಿತ್ತೆ? ನನ್ನ ಹೆಣ ವನ್ನೇ ಸಾಗಿಸಬೇಕಿತ್ತು" ಎಂದು ಅವಳು ನಕ್ಕು ಹೇಳಿದಾಗ, ಶಿವಪ್ಪನವರ ಮನಸ್ಸಿನಲ್ಲಿ, ತಾನು ಅವಳನ್ನು ಅಷ್ಟು ದಿನ ದೂರ ಇರಿಸಿದ್ದೇ ತಪ್ಪು ಎಂಬ ಭಾವನೆ ಮೂಡುವಂತಾಯಿತು.

ಹೊರಟ ಮಾರನೆಯ ದಿವಸ ಸಂಜೆಯೊಳಗೆ ಇಂದುಮತಿಯು ತನ್ನ ಮನೆಯನ್ನು ಸೇರಿದಳು. ಅವಳ ಮೂವರು ಮಕ್ಕಳೂ 'ಅಮ್ಮ ಬಂದಳು' ಎಂದು ಕುಣಿದಾಡಿದ ಸಂತೋಷಕ್ಕೆ ಮಿತಿಯಿಲ್ಲ. ಕಿರಿಯ ಚಂದ್ರನನ್ನು ಅವಳು ಮೈ ಬಗ್ಗಿಸಿ ಎತ್ತಬಾರದೆಂದು, ಶಿವಪ್ಪನವರು ಎತ್ತಿ ಅವಳ ಮುಖಕ್ಕೆ ಹಿಡಿದರು. ಬಿಸಿ ಮುತ್ತುಗಳೊಡನೆ, ಬಿಸಿ ಕಂಬನಿಯ ಕಾಣಿಕೆಯು ಆತನ ಕಪೋಲಗಳಿಗೆ ಸಂದಿತು. ಈ ಎಲ್ಲ ನೋಟವನ್ನು ಬೆರಗು, ಸಂತೋಷ, ದುಃಖಗಳ ಸಮ್ಮಿಶ್ರಣದಿಂದ ನೋಡುತಿದ್ದ ಕೂಸು—ಎಂಟು ವರ್ಷದ ರತ್ನಾಕರ. ಅವನಿಗಿಂತ ಎಂಟು ತಿಂಗಳಿಗೆ ದೊಡ್ಡವನಾದ ಪ್ರಭಾಕರನೂ ಅಲ್ಲಿದ್ದ. ಮೂಕನಂತೆ ರತ್ನ ಎಲ್ಲವನ್ನೂ ನೋಡುತ್ತ, ತನ್ನ ತಾಯಿಯ ಸೆರಗಿಗೆ ಗಂಟು ಬಿದ್ದ.

ಅವಳನ್ನು ಕೊಠಡಿಗೆ ಕರೆದುಕೊಂಡು ಹೋಗಿ ಮಲಗಿಸಿಯಾಯಿತು. ಹಾಸಿಗೆಯ ಮಗ್ಗುಲ ಗೋಡೆಯಲ್ಲಿ ಆಕೆ ಮತ್ತು ಶಿವಪ್ಪನವರ ಲಗ್ನದ ದಿನ ತೆಗೆದ ಮದುವಣಿಗರ ಚಿತ್ರ ತೂಗುತ್ತಿದೆ. ಒಂದಷ್ಟು ಹೊತ್ತು ಇಂದು ಸುತ್ತ ನೆರೆದ ತನ್ನವರನ್ನು ಕಂಡು ಮಾತನ್ನೇ ಆಡಲಿಲ್ಲ. ಕಿರಿಯ ಚಂದ್ರನಿಗೆ-"ಅದು ತನ್ನ ತಾಯಿ ಅಹುದೇ, ಅಲ್ಲವೇ" ಎಂಬ ವಿಸ್ಮೃತಿ. "ಅಮ್ಮ ಅಲ್ಲ" ಎಂದೆನ್ನುತ್ತಾನೆ ಆತ. ಬಹು ಹೊತ್ತಿನ ಬಳಿಕ, ಅವರೆಲ್ಲರು ಹೇಳಿದ ಮೇಲೆ, ತಾಯಿಯ ಧ್ವನಿಯನ್ನು ಗುರುತಿಸಿ, ಅವಳಿಂದ ಮೈ ಸವರಿಸಿಕೊಂಡ ಮೇಲೆ, ಅವನಿಗೆ ಪರಿಚಯ ಹತ್ತಿತು. "ನೀ, ಬಂದೆಯಲ್ಲ ನನ್ನನ್ನು ಕಾಣಲಿಕ್ಕೆ. ದೂರದ ಅಜ್ಜಿ ಮನೆಗೆ ಹೋಗಿದ್ದಿಯಂತೆ. ಆದು ಜೋರಿನ ಅಜ್ಜಿ. ಇಷ್ಟು ದಿನ ನಿನ್ನನ್ನು ಬರಲಿಕ್ಕೆ, ಬಿಡಲಿಲ್ಲ. ಕೆಟ್ಟ ಅಜ್ಜಿ" ಎಂದಾಗ, ಎಲ್ಲರೂ ನಕ್ಕು, ನಕ್ಕು ನಗುವಿನಲ್ಲಿ ತೇಲಿದರು.

ಇಂದುಮತಿ ಆ ಮಾತನ್ನು ಕೇಳಿ "ಗುಲಾಬಿ, ಮನೆ ಬಿಟ್ಟು ಆರು

ತಿಂಗಳಾಯಿತಲ್ಲವೆ? ಅಲ್ಲಿ ಒಂದು ದಿನ ಒಂದು ಯುಗವಾಗಿ ಕಾಣುತ್ತಿತ್ತು. ಇವರನ್ನೆಲ್ಲ ಬಿಟ್ಟು ಆರು ತಿಂಗಳಿದ್ದೆ ನಾನಲ್ಲಿ, ಎಂದರೆ ನನಗೇ ಆಶ್ಚರ್ಯವಾಗುತ್ತದೆ" ಎಂದು ವಿಸ್ಮಯ ಪಟ್ಟಳು. ಅನಂತರ "ನಿನ್ನ ಪ್ರಭಾಕರನಿಗೆ ಎಷ್ಟು ಬೇಸರವಾಗಿರಬಹುದೋ, ಗುಲಾಬಿ ನನಗೆ ದೇವರು ವಿಧಿಸಿದ ಶಿಕ್ಷೆಯನ್ನು ನಾನು ನಿಮಗೆಲ್ಲರಿಗೂ ಹಂಚಿ ಹಾಕಿದ ಹಾಗಾಯಿತು" ಎಂದಳು. ಈ ಮಾತನ್ನು ಆಡುವಾಗ ಶಿವಪ್ಪನವರು ಅಲ್ಲಿಯೇ ಇದ್ದರು. "ಎಷ್ಟು ಮಾತನಾಡುತ್ತೀ ಇಂದು, ದಣಿದು ಬಂದಿದ್ದೀ; ಮಲಗಿಕೋ" ಎಂದರು.

ಗುಲಾಬಿ "ಯಾರಿಗೂ ಏನೂ ಆಗಲಿಲ್ಲ. ಪ್ರಭಾಕರ ದೊಡ್ಡವನಾಗಲಿಲ್ಲವೆ? ರತ್ನಾಕರನೊಂದಿಗೆ ಆಡುತ್ತ ಸುಖವಾಗಿದ್ದ. ಈಗೇನಿನ್ನು? ಎಲ್ಲರೂ ಬಂದಾಯಿತಲ್ಲ" ಎಂದು ಸಮಾಧಾನವನ್ನು ಹೇಳಿ, ಅವಳಿಗೆ ಕುಡಿಯಲು ಹಣ್ಣುಗಳ ರಸವನ್ನು ಕೊಟ್ಟಳು. ಆ ರಾತ್ರಿ ಒಂದು ಕ್ಷಣ ತನ್ನ ಮನೆಗೆಹೋಗಿ ಬಂದಳು. ಮರುದಿನದಿಂದ ತನ್ನ ಬಿಡಾರದಲ್ಲಿ ವಾಸಮಾಡತೊಡಗಿದಳು.

ಹವೆ ಬದಲಿಸಿದ್ದರಿಂದ, ಮನೆಗೆ ಬಂದುದರಿಂದ, ತನ್ನವರ ಧ್ವನಿ ಅಡಿಗಡಿಗೆ ಕಿವಿಯ ಮೇಲೆ ಬೀಳುತಿದ್ದುದರಿಂದ,ಇಂದುಮತಿಯ ಮನಸ್ಸು ಉಲ್ಲಸಿತ ಗೊಂಡಂತೆ ಶರೀರವೂ ಸಾಕಷ್ಟು ಚೇತನಗೊಳ್ಳುತ್ತ ಬಂದಿತು. ಬೆನ್ನಲ್ಲಿ ಹುಟ್ಟಿದ ನಾಲ್ಕನೆಯ ಕುರುವು ಒಡೆದು ಕೀವು ಬರತೊಡಗಿತು. ಅದು ವಿಷಮಿಸಬಾರದೆಂದು ಏನೇನೋ ಮದ್ದು ತರಿಸಿ, ಶಿವಪ್ಪನವರೇ ಚಿಕಿತ್ಸೆ ನಡೆಸತೊಡಗಿದರು. ಕುರವಾದ ಸ್ಥಳ ಮಾತ್ರ ಶಸ್ತ್ರ ಚಿಕಿತ್ಸೆಗೆ ಅನಾನುಕೂಲವಾದ ಸ್ಥಳ-ಎಂಬುದರಿಂದ, ಅದನ್ನು ಮುಟ್ಟದೆ ಬರಿದೆ ದಿನ ಕಳೆಯಬೇಕಾಯಿತು. ಅದು ಬೆಳೆದು ಒಳಗಿನ ನರಕ್ಕೆ ಸಂಪರ್ಕಗೊಳ್ಳದಷ್ಟು ಕಾಲ ಭಯಪಡಬೇಕಾದ ಕಾರಣವಿರಲಿಲ್ಲ—ಎಂದು ಊಹಿಸಿ ನಿತ್ಯೋಪಚಾರ ಮಾಡತೊಡಗಿದರು. "ಕೀವು ತೆಗೆಯುವ ಕೆಲಸ, ಹುಣ್ಣಿನ ಆರೈಕೆಗಳನ್ನು ಅಲ್ಲಿ ಮಾಡುತಿದ್ದವಳು ನಾನೇ. ನೀವೇನು ಮುಟ್ಟಬೇಕಾಗಿಲ್ಲ" ಎಂದು ಗುಲಾಬಿಯೇ, ಹೂವನ್ನು ಹಿಡಿಯುವಷ್ಟು ಜಾಗ್ರತೆಯಿಂದ ನಡೆಸುತಿದ್ದಳು.

ಶಿವಪ್ಪನವರು ಆಗಾಗ ಆಕೆಯ ಮಂಚದ ಬಳಿಗೆ ಬಂದು ಕುಳಿತಿರುತ್ತಾರೆ. ಅಂಥ ವೇಳೆ, ಗುಲಾಬಿ ಏನಾದರೂ ನೆಪ ಹೇಳಿ ಹೊರಟು ಹೋಗುತ್ತಾಳೆ. ಅವಳ ಮನಸ್ಸಿಗೆ "ಈ ಗಂಡ ಹೆಂಡಿರ ಸಲ್ಲಾಪಕ್ಕೆ ತಾನು ಅಡ್ಡನಾಗಬಾರದು. ಇರುವ ನಾಲ್ಕು ದಿನ ಇಂದಮ್ಮ ಪತಿಯೊಡನೆ ಆಡಬಯ

ಸುವ ಮಾತುಗಳನ್ನು ಆಡಲಿ—ಪಾಪ!" ಎಂದು ಸರಿದು ಹೋಗುತ್ತಾಳೆ. ಪ್ರತಿ ಬಾರಿಯೂ ಶಿವಪ್ಪನವರು ಅಲ್ಲಿಗೆ ಬಂದಾಗ ಅವಳು ಎದ್ದು ಹೋಗುವು ದನ್ನು ಕಂಡ ಇಂದುಮತಿಯು "ಯಾಕೆ ಏಳುತ್ತೀ ಗುಲಾಬಿ? ನೀನು ಬೇರೆ, ನಾವು ಬೇರೆಯೆ? ನಮ್ಮ ಹತ್ತಿರ ಏನು ಗುಟ್ಟಿನ ಮಾತಿದೆ? ಅಷ್ಟು ದಿನ ಆಸ್ಪತ್ರೆಯಲ್ಲಿ ನೀನೇ ನನಗೆ ಬೇಕಾಯಿತು; ಈಗೇನು ಬೇಡವೇ?" ಎಂದಂ ದರೂ ಆಕೆ ಅಲ್ಲಿ ನಿಂತಿರುವುದಿಲ್ಲ. ಕೆಲಸಮಾಡುವ ಆಸೆಯಾದರೆ ಆಸ್ಪತ್ರೆಗೆ ಹೋಗುತ್ತಾಳೆ. ವಿರಮಿಸುವ ಆಸೆಯಾದರೆ ಮುದ್ದು ಚಂದ್ರಶೇಖರನನ್ನು ಹೊತ್ತುಕೊಂಡು ಅಲೆದಾಡುತ್ತಾಳೆ. ಮಲಗಿದಲ್ಲಿಂದ, ಬರಿಯ ಮಾತಿಂದ ಉಪಚರಿಸಬಲ್ಲ ತನ್ನ ತಾಯಿಗಿಂತ, ಎತ್ತಿ ಆಡಬಲ್ಲ, ಓಡಾಡ ಬಲ್ಲ, ತಲೆಯ ಮೇಲೆ ಕುಳ್ಳಿರಿಸಿಕೊಳ್ಳ ಬಲ್ಲ ಗುಲಾಬಿಯೊಡನೆ ಚಂದ್ರನ ಸರಸ, ಚಕ್ಕಂದ ಹೆಚ್ಚು.

ಹೀಗೆ ಕೆಲವು ದಿನ ಸರಿದು ಒಂದು ದಿನ ಇಂದುಮತಿ ಶಿವಪ್ಪನವರೊ ಡನೆ "ತುಂಬ ಹಣ ವೆಚ್ಚವಾಗಿರಬೇಕು--ಯಾಕೂ ಬೇಡದೆ" ಎಂದಳು.

"ಏನು ಮಾತು! ಹಣವೇನು ದೊಡ್ಡದು? ಇಂಥ ಕಷ್ಟಕ್ಕೆ ಒದಗದ್ದು ಇನ್ನೇತಕ್ಕೆ ಒದಗಬೇಕಂತೆ? ಗಂಪುವಿಗೂ ತುಂಬ ಕೊಡಬೇಕಾಗುತ್ತದೆ. ಅಲ್ಲಿನ ಡಾಕ್ಟರರಿಗೆ ತನ್ನ ಮೋಟರು ಕೊಟ್ಟು ತಾನೊಂದು ಹಾಳು ಮೋಟರು ಕೊಳ್ಳಬೇಕಾಯಿತು. ಅಲ್ಲದೆ ಅಲ್ಲಿಯೂ ಆತ ತುಂಬ ಖರ್ಚುಮಾಡಿರಬೇಕು. ಎಷ್ಟು, ಏನು, ಎಂದು ಕೇಳಿದರೆ ಹೇಳುವುದಿಲ್ಲ." ಎಂದಾಗ ಇಂದುಮತಿ ಗೇನನ್ನೋ ಹೇಳುವ ಆಸೆಯಾಯಿತು.

"ಗುಲಾಬಿ ಇದ್ದಾಳೆಯೇ ನೋಡಿ"

"ಇಲ್ಲ"

"ನೋಡಿ"

ಶಿವಪ್ಪನವರು ಹೊರಕ್ಕೆ ಹೋದರು. ಆಕೆ ಮಗುವಿನೊಂದಿಗೆ ಹಿತ್ತಿ ಲಿನ ತುದಿಯಲ್ಲಿ ಆಡುತಿದ್ದಾಳೆಂಬುದನ್ನು ಕಂಡು, ಮರಳಿ ಬಂದು "ನನ್ನ ಪೆಟ್ಟಿಗೆಯಲ್ಲೆಷ್ಟು ಹಣವಿತ್ತು? ಏನಾದರೂ ಇರಿಸಿದ್ದಿರಾ?"

"ಇಲ್ಲ. ಅವಳ ಕೈಯಲ್ಲಿ ಹೊರಡುವಾಗ ನೂರು ಕೊಟ್ಟಿದ್ದೆ. ತಿಂಗಳು ತಿಂಗಳು ನೂರೈವತ್ತರಂತೆ ಕಳುಹಿಸುತಿದ್ದೆ."

"ಯಾಕೆ? ಸಾಲದಾಯಿತೇ? ತೊಂದರೆಯಾಯಿತೇ? ಹಣದ ಸುದ್ದಿ

ಕೇಳಿದರೆ ಅವಳು ಒಂದು ಮಾತನ್ನೂ ಬರೆಯುತ್ತಿರಲಿಲ್ಲ. ನೀನು ಬರೆಯಿಸ ಬಹುದಿತ್ತಲ್ಲ?"

"ಹಾಗಲ್ಲ ಕೇಳಿ–ಅವಳ ಚಿನ್ನ, ಸಾಮಾನುಗಳು–ನನ್ನ ಮಂಚದ ಬಳಿ ಯಲ್ಲಿರುವ ಪೆಟ್ಟಿಗೆಯಲ್ಲಿರುತಿತ್ತು. ಅದನ್ನು ತೆರೆಯುವಾಗ ನನಗೆ ಬೆನ್ನು ಹಾಕಿ ತೆರೆಯುತಿದ್ದಳು. ತಿಳಿಯಬಾರದೆಂದೋ ಏನೋ. ಒಂದೆರಡು ಸಾರಿ ಓರೆಗಣ್ಣಿಂದ ಮಲಗಿದ್ದಲ್ಲಿಂದಲೇ ನಾನು ನೋಡಿದಾಗ–ನೋಟುಗಳ ಕಟ್ಟು ಕಾಣಿಸಿತು. ಅವಳು ಬರುವಾಗ ಏನೇನೋ ಮಾಡಿ ತುಂಬ ಹಣ ತೆಗೆದು ಕೊಂಡು ಬಂದಿರಬೇಕು. ನನಗೂ ಆಚೀಚಿನ ಮಾತುಗಳಿಂದ ಅಲ್ಲಿ ಖರ್ಚಿಗೆ ತುಂಬ ಹಣ ಬೇಕಾಗಬಹುದು ಎಂದು ತೋರುತಿತ್ತು."

"ಹಾಗೋ. ಹೊರಡುವಾಗ ತನ್ನ ಚಿನ್ನ ಬೇಕು ಎಂದು ಕೇಳಿದ್ದಳು. ಡಬ್ಬಿಯನ್ನು ತೆಗೆದು ಕೊಟ್ಟೆ. ಏನೋ ಸ್ವಲ್ಪ ಚಿನ್ನ ತೆಗೆದುಕೊಂಡು ಕೊರ ಳಿಗೆ ಹಾಕಿಕೊಂಡದ್ದನ್ನು ನೋಡಿದೆ. ಬರುವಾಗ ಅವಳ ಮೈ ಮೇಲೆ ಏನೂ ಇರಲಿಲ್ಲ ಅಲ್ಲವೆ?"

"ಬರುವಾಗಲೂ ಇಲ್ಲ; ಅಲ್ಲಿಯೂ ಅವಳು ಚಿನ್ನ ಹಾಕಿಕೊಂಡ ದ್ದೆಂಬುದಿಲ್ಲ. ನನಗೆ ಆಗಲೇನೆ ಅನುಮಾನ ಬಂದಿತ್ತು. ತನ್ನ ಮೈಯ ಮೇಲಿನ ಚಿನ್ನ, ಇಲ್ಲಿಂದ ಕೊಂಡುಹೋದ ಚಿನ್ನ, ಯಾವುದೋ, ಅಂತೂ ಎಲ್ಲ ಮಾರಾಟ ಮಾಡಿ ಖರ್ಚುಮಾಡಿರಬೇಕು. ನಾನು ಹೋದ ನಾಲ್ಕು ದಿನ ಜನರಲ್ ವಾರ್ಡಿನಲ್ಲಿದ್ದೆ. ಅಲ್ಲಿಂದ ಇವಳೇನೆ ಹಟ ಹಿಡಿದು, ನನಗೆ ಬೇಸರವಾಗುತಿದ್ದುದನ್ನು ಕಂಡು, ಸ್ಪೆಶಲ್ ವಾರ್ಡ್ ಮಾಡಿಸಿ ಕೊಟ್ಟಳು. ಅದಕ್ಕೆ ದಿನಕ್ಕೆ ಹತ್ತು ರೂಪಾಯಿ ಚಾರ್ಜು ಎಂದು ಯಾರೋ ಹೇಳಿದರು. ಆರು ತಿಂಗಳಿಗೆಷ್ಟು ಬೇಡ? ಇನ್ನು ಕೆಲಸದವರಿಗೆ, ಲೇಡಿ ಡಾಕ್ಟರಿಗೆ ಎಷ್ಟೆಲ್ಲ ದಂಡ ತೆತ್ತಿದ್ದಾಳೋ. ನಮ್ಮ ಹಣ ಖರ್ಚಾಗಬೇಕಾದದ್ದು ನ್ಯಾಯ. ಅವಳು ತನ್ನ ಚಿನ್ನವನ್ನು ಮಾರಿ ನನಗೋಸ್ಕರ ದಂಡ ತೆರುವುದರಲ್ಲಿ ಏನು ನ್ಯಾಯ? ಯಾರ ಕಷ್ಟ ಯಾರಿಗೆ ಹೊರೆ? ಅವಳು ನನ್ನ ಚಾಕರಿ ಮಾಡಿದ್ದು ಸಾಲದೇ?"

ಶಿವಪ್ಪನವರು ಆ ಸಂಗತಿಯನ್ನು ಕೇಳಿದಾಗ ತೀರ ತಬ್ಬಿಬ್ಬಾದರು. ತಾನೆಂತಹ ಮೂರ್ಖ! ಆಸ್ಪತ್ರೆಗೆ ಹೆಂಡತಿಯನ್ನು ಸೇರಿಸುವ ಅವಸರದಲ್ಲಿ ಅಲ್ಲಿನ ಖರ್ಚು, ವೆಚ್ಚ, ಇವುಗಳೊಂದನ್ನೂ ವಿಚಾರಿಸದೆ ಬಡ ಹೆಂಗಸೊ ಬ್ಬಳ ಮೇಲೆ ಯಾವತ್ತು ಹೊರೆ ಹೊರಿಸಿ ಬಂದೆನಲ್ಲ!–ಎಂದು ತೋರಿತು.

ಮನಸ್ಸು ತಡೆಯಲಾರದೆ "ಗುಲಾಬೀ" ಎಂದು ಕೂಗಿ ಕರೆದರು.

ಅವಳಿಗೆ ಕೇಳಿಸಿತು. ಅವಸರದಿಂದ ಬಂದಳು.

"ಗುಲಾಬಿ"

"ಏನು?"

"ಸತ್ಯಹೇಳು. ನೀನು ಅಲ್ಲಿದ್ದಾಗ 'ಇವಳಿಗಾಗಿ ಎಷ್ಟು ಹಣ ಖರ್ಚು ಮಾಡಿದೆ. ನಾನು ಕೊಟ್ಟದ್ದು ನೂರು, ಆ ಮೇಲೆ ಕಳುಹಿಸಿದ್ದು ನೂರೈವತ್ತ ರಂತೆ; ಗಂಪು ಬಂದು ಐನೂರು ಕೊಟ್ಟಿರಬೇಕು "

"ಖರ್ಚು ಮಾಡಬಾರದೇ?"

"ಹಾಗೆ ಕೇಳುವುದೇ? ಎಷ್ಟು ಮಾಡಿದಿಯೆಂದು ಹೇಳು."

"ನೀವಾ ಮಾತನ್ನು ಕೇಳಬಾರದು."

"ಹೇಳುವುದಿಲ್ಲವೆ ಹಾಗಾದರೆ?" ಎಂದು ಶಿವಪ್ಪನವರು ಮುಖ ಗಂಟಿಕ್ಕಿದರು.

ಗುಲಾಬಿಯ ಕಣ್ಣುಗಳಲ್ಲಿ ನೀರು ಹರಿಯ ತೊಡಗಿತು. "ನಾನು ಮಾಡಿದ್ದೇನು ತಪ್ಪು? ಖರ್ಚುಮಾಡಿದ್ದೇನೆ. ಎಷ್ಟೇ ಇರಲಿ, ನನಗಾಗಿ ಮಾಡಿದ್ದೇನೆ. ನನ್ನ ಮನಸ್ಸಿನ ತೃಪ್ತಿಗಾಗಿ. ನೀವು ನನ್ನನ್ನು, ನನ್ನ ಮಗುವನ್ನು ಅಂದು ಉಳಿಸದೆ ಹೋಗಿದ್ದರೆ ಅಷ್ಟನ್ನು ನಾನು ಮಾಡುತ್ತಿರಲಿಲ್ಲ. ಅನಂತರ ಮನೆ ಕಟ್ಟಿ, ಆಸ್ಪತ್ರೆ ಮಾಡಿ, ಸಾಲವಾಗಿ ತೆಗೆದುಕೊಳ್ಳಿ-ಎಂದು ಬೇಡಿದರೂ ಹಣ ಮುಟ್ಟಲಿಲ್ಲ. ನಾನು ನರ್ಸಿಂಗ್ ಕಲಿಯುವಾಗ ಹೇಳಿದ ಮಾತುಗಳು ನೆನಪಿದೆಯೆ? ನನ್ನ ಮಾತು ನಾನು ನಡೆಸಿದೆ. ನಿಮ್ಮದನ್ನು ನೀವು ನಡೆಸಲಿಲ್ಲ. ನಿಮಗೆ ಅಲ್ಲಿನ ಸ್ಥಿತಿ ತಿಳಿಯದಿರಲಾರದು; ನನಗೂ ಗೊತ್ತಿರಲಿಲ್ಲ. ಆದರೆ ಹೊರಡುವ ಗಳಿಗೆಯಲ್ಲಿ ದೇವರು ಬುದ್ಧಿ ಕೊಟ್ಟದ್ದರಿಂದ ನಮ್ಮಮ್ಮನ ಚಿನ್ನವನ್ನು ಕೇಳಿ ತೆಗೆದುಕೊಂಡೆ."

"ತೆಗೆದುಕೊಂಡು ಹೋದೆ, ಖರ್ಚು ಮಾಡಿದೆ, ಮಾಡಿ ಆರು ತಿಂಗಳು ನನ್ನ ಇಂದುವನ್ನು ತಾಯಿಯ ಹಾಗೆ ಸಾಕಿದೆ. ಅದನ್ನು ಮರೆಯುವುದಿಲ್ಲ ನಾನು. ಆದರೆ ಹಣವೆಷ್ಟು ಖರ್ಚು ಮಾಡಿದ್ದೀ ಹೇಳು. ಚಿನ್ನವನ್ನೆಲ್ಲ ಮಾರಿದೆಯೋ, ಇಲ್ಲವೊ?"

"ಮಾರದೆ ಹೋದರೆ ಆ ಊರಲ್ಲಿ ದಿನ ತೆಗೆಯಲಿಕ್ಕೆ ಸಾಧ್ಯವೇ? ನಿಮಗಿರುವ ಚಿಂತೆ ಸಾಲದೆಂದು, ನಾನು 'ಹಣ ಹಣ' ಎಂದು ಪ್ರತಿ ಕಾಗದದಲ್ಲೂ

ಬರೆಯ ಬೇಕಿತ್ತೆ? ಆ ಮೇಲಿನ ಲೆಕ್ಕಾಚಾರ ನಾವು ಪುರುಸೊತ್ತಿನಲ್ಲಿ ನೋಡಿ ಕೊಳ್ಳಬಾರದೇ? ನನ್ನ ಚಿನ್ನ, ಅಮ್ಮನ ಚಿನ್ನವೆಂದು ಒಟ್ಟು ಒಂದು ನಾಲ್ಕು ಸಾವಿರ ರೂಪಾಯಿ......ಅಷ್ಟಾಗದು.

"ನಾಲ್ಕು ಸಾವಿರ ಬೇಕಾದೀತು.ನಾರ್ಡಿಗೆ ಎರಡು ಸಾವಿರವಾಯಿತಲ್ಲ, ಹೋಗಲಿ. ನೀನು ಕೊಟ್ಟು ಅಷ್ಟು ಉಪಕಾರ ಮಾಡಿದೆ...ಇವತ್ತು ನಾನು ಕೊಡುವುದಿಲ್ಲ; ನನಲ್ಲಿಲ್ಲ. ಆದರೆ ನಾನು ಕೊಟ್ಟರೆ ತಕ್ಕೊಳ್ಳುತ್ತೀಯಲ್ಲ? ಅಷ್ಟಾದರೂ ಹೇಳು."

"ನೀವು ಹೀಗೆಂದರೆ ನಾನೇನು ಅನ್ನಬೇಕು. ನನ್ನ ಪ್ರೀತಿಗಾಗಿ ನಾನೇನೋ ಖರ್ಚು ಮಾಡಿದರೆ......"

"ಎಲ್ಲದಕ್ಕೂ ಒಂದು ಮಿತಿಯಿದೆ; ಪ್ರೀತಿ, ಸ್ನೇಹಕ್ಕೂ ಒಂದು ಮಿತಿ ಯಿದೆ. ನಿನಗೇನು ಭೂಮಿಯೇ, ಕಾಣಿಕೆಯೆ? ನಿನ್ನ ಚಿನ್ನ, ನಿನ್ನ ತಾಯಿಯ ಚಿನ್ನ, ಆಪತ್ತಿನ ಗಳಿಗೆಯಲ್ಲಿ ಬೇಕಾಗುವಂಥ ಒಂದು ನಿಧಿ. ನೀನೆನ್ನುವ ಹಾಗೆ, ನಿನ್ನ ಮಗನ ವಿದ್ಯಾಭ್ಯಾಸಕ್ಕೆ ಬೇಕಾಗುವ ಹಣ. ಅದನ್ನೆಲ್ಲ ದಾನ ಧರ್ಮ ಮಾಡುವುದೆಂದರೆ ಅರ್ಥವೇನು?"

"ನಿಮಗಿಷ್ಟ ಕಂಡಾಗ ಕೊಡಿ. ನೀವು ಪ್ರಭಾಕರನ ಸಾಕು ತಂದೆ ಯೆಂದು ಅವನು ಹುಟ್ಟಿದ ದಿನದಿಂದ ನಾನು ತಿಳಿದಿದ್ದೇನೆ. ಆ ಋಣ ಭಾರ ದಿಂದ, ವಿಶ್ವಾಸದಿಂದ ನಿಮ್ಮ ನೆರಳಲ್ಲಿ ಬಂದು ಸೇರಿದ್ದೇನೆ."

ಗುಲಾಬಿಯ ಬಾಯಿಂದ ಅಂಥ ಮಾತುಗಳು ಬಂದಾಕ್ಷಣ ಆ ಗಂಡ, ಹೆಂಡಿರ ಮುಖದಿಂದ ಬೇರೆ ಮಾತು ಹೊರಡಲಿಲ್ಲ. ಅವರಿಬ್ಬರ ಅಂತರಂಗ ದಲ್ಲೂ ತಮ್ಮ ಬದುಕಿನ ಸುತ್ತ ಹೆಣೆದುಕೊಂಡು ಬಂದ, ಈ ಅವ್ಯಕ್ತ ಬಾಂಧ ವ್ಯದ ನೆನಪೊಡೆದು ಕೃತಜ್ಞತೆಯ ರೂಪವನ್ನು ತಾಳಿತ್ತು. ಅವರೆದುರಿಗೆ ಯಾವುದೋ ವ್ಯಥೆಯ ಮನಸ್ಸಿನಿಂದ ಗುಲಾಬಿ ಮಾತ್ರ ಅಳುವುದು ಕಾಣಿ ಸಿತು. "ನನ್ನ ಕಾಣಿಕೆಯನ್ನು ಸ್ವೀಕರಿಸುವುದಿಲ್ಲವೆ" ಎಂಬ ಪ್ರಶ್ನೆಯನ್ನು ಅವಳ ಕಂಬನಿಯ ಪ್ರತಿಯೊಂದು ತೊಟ್ಟೂ ಆ ಗಂಡ ಹೆಂಡಿರನ್ನು ಪ್ರಶ್ನಿಸು ತ್ತಿರುವಂತೆ ಕಂಡಿತು.

ಇಂದುಮತಿ ಆ ಗಳಿಗೆಯಲ್ಲಿ ಗುಲಾಬಿಗೆ ದುಃಖವಾದುದನ್ನು ಕಂಡು "ಬೇಡ, ಈಗ ಅವಳನ್ನು ಗೋಳಿಡಿಸ ಬೇಡಿ. ಅವಳ ಆತ್ಮಕ್ಕೆ ತೃಪ್ತಿಯಾ ದುದನ್ನು ಮಾಡಲಿ. ದೇವರು ನಿಮಗೂ ಬುದ್ಧಿ ಕೊಟ್ಟಿದ್ದಾನೆ, ಅವಳಿಗೂ

ಕೊಟ್ಟಿದ್ದಾನೆ" ಎಂದು ನುಡಿದು, ತನಗೂ ದುಃಖದಿಂದ ಒತ್ತಿ ಬಂದ ಕಣ್ಣೀರನ್ನೂ ಒರಸಿಕೊಂಡಳು. ಶಿವಪ್ಪನವರ ಮನಸ್ಸು ಮಾತ್ರ ಬಹು ದಿನಗಳ ತನಕ ಇದರಿಂದ ಚೇತರಿಸಲಿಲ್ಲ. 'ಗಂಪುವಾದರೆ ಸ್ವಭಾವತಃ ದರ್ಬಾರಿ. ಬೇಕಷ್ಟು ದುಡಿಯುತ್ತಿದ್ದಾನೆ; ದಾನ ಮಾಡುತ್ತಿದ್ದಾನೆ. ಅವನು ನೋವಿಲ್ಲದೆಯೂ ಹಣ ಚೆಲ್ಲಬಲ್ಲ; ಹಣವನ್ನು ಕೇಳದೆಯೂ ಚೆಲ್ಲಬಲ್ಲ. ಅವನಂತೆಯೆ ಗುಲಾಬಿ ಮಾಡುವುದಕ್ಕೆ ಹೊರಟರೆ ಹೇಗೆ? ಮಾಡಿದ ಬಗೆಯಾದರೂ ಎಂಥದು! ನನಗೇ ಪೂರ್ವಯೋಚನೆಯಿಲ್ಲದೆ ಹೋಯಿತು. ಅವಳು ಮುಂದಿನ ಖರ್ಚುವೆಚ್ಚ ನೆನೆದು, ಅಷ್ಟೆಲ್ಲ ಖರ್ಚು ಮಾಡಿದವಳಲ್ಲ. ನನ್ನ ಇಂದುವಿನ ಸೇವೆಗಾಗಿ ನೀರಿನಂತೆ ಹಣ ವ್ಯಯಿಸಿದಳು. ತನಗೆ ಬೇರೊಂದು ನೆರವಿಲ್ಲದ ಸ್ಥಿತಿಯಲ್ಲಿ ಹಾಗೆ ತ್ಯಾಗ ಮಾಡಿದರೆ ಹೇಗೆ? ನಾವು ಒತ್ತಾಯದಿಂದ ಅವಳಿಗೆ ಹಣ ಕೊಡುವಂತಿಲ್ಲ. ಕೊಟ್ಟರೆ ಅವಳು ಅಂತರಂಗದಲ್ಲಿ ಬೇಯುತ್ತಾಳೆ. ಕೊಡದಿದ್ದರೆ ನಾನು ಬೇಯುವುದಾಯಿತು!'ಎಂಬ ವಿಚಾರದ ಸುಳಿವು ಅವರನ್ನು ಬಾಧಿಸತೊಡಗಿತು. ಆ ವಿಚಾರದ ಕೊರಗು ಕೊರಗಾಗಿಯೇ ಉಳಿಯಿತು ಹೊರತು ಮನಸ್ಸಿಗೆ ಶಾಂತಿಯನ್ನು ತಂದುಕೊಡಲಿಲ್ಲ.

ಇಂದುಮತಿಯು ಊರಿಗೆ ಬಂದು ಹಾಸುಗೆಯಲ್ಲೊರಗಿದವಳಿಗೆ ಇನ್ನೂ ಸಮನಾಗಿ ಕುಳಿತೇಳುವುದಕ್ಕೆ ಆಗುತ್ತಲಿಲ್ಲ. ಶರೀರದ ಸ್ಥಿತಿ ಒಂದೇ ತೆರನಾಗಿದೆ. ಆದರೆ ಅವಳ ಮುಖ ಮಾತ್ರ ನಗುವನ್ನು ತಳೆದಿತ್ತು. 'ತನ್ನ ಮನೆಗೆ ಬಂದಿದ್ದೇನೆ, ತನ್ನ ಮಕ್ಕಳೊಡನಿದ್ದೇನೆ, ತನ್ನ ಪತಿಯೊಡನೆ ಶೇಷಾಯುಷ್ಯವನ್ನು ಕಳೆಯುತ್ತಿದ್ದೇನೆ' ಎಂಬ ಆನಂದ ತುಂಬಿಕೊಂಡಿದೆ. ಯಾವುದೋ ಒಂದು ಬಗೆಯ ಹಿಗ್ಗು ಅವಳ ಮನಸ್ಸಿಗೆ ತೃಪ್ತಿಕೊಡುವಂತಿದೆ. ಅದು ಅವಳ ನಾಲಗೆಯಿಂದೊಡೆದು ಬರುವುದೂ ಉಂಟು. ಕೆಲವೊಮ್ಮೆ ಗುಲಾಬಿಯನ್ನು ಕರೆದು "ಈ ಡಾಕ್ಟರಿಕೆ ತುಂಬ ಒಳ್ಳೆಯ ಉದ್ಯೋಗವಲ್ಲವೆ? ಎಷ್ಟೊಂದು ಪಾಪದ ಜೀವಿಗಳ ಸಾವು, ನೋವು ತಪ್ಪಿಸಲು ಬರುತ್ತದೆ" ಎನ್ನುತ್ತಾಳೆ.

"ಹೌದು, ಎಲ್ಲ ಸರಿಯೆ; ಆದರೆ ನಿಮ್ಮದನ್ನಿನ್ನೂ ತಪ್ಪಿಸಲಿಕ್ಕಾಗಲಿಲ್ಲ."

"ಅದಕ್ಕವರೇ ಹೇಳುತ್ತಾರಲ್ಲ–ಡಾಕ್ಟರರೇ ಇರಲಿ, ಯಾರೇ ಇರಲಿ ಅವರೊಂದು ನೆಪ. 'ದೇವರು ಆಗಲಿ ಎಂದರೆ ನಮ್ಮಿಂದ ಆಗುತ್ತದೆ' ಎಂದು ಅವರು ಹೇಳುವ ಮಾತು ನಿಜ."

"ಅದೇನೋ ನನಗೆ ತಿಳಿಯದು. ಆದರೆ ನನಗೆ ಕಾಣುತ್ತದೆ–ದೇವರಲ್ಲಿ ಒಂದು ನ್ಯಾಯವಿದ್ದರೆ ಶಿವಪ್ಪನವರು, ಈ ಊರಿಗೆ ಸಲ್ಲಿಸಿದ ಇಷ್ಟೆಲ್ಲ ಉಪ ಕಾರಕ್ಕೆ ಪ್ರತಿಯಾಗಿ ನಿಮಗೆ ಎಂದೋ ಗುಣವಾಗಬೇಕಿತ್ತು; ಹಾಗೆ ಕೇಳಿ ದರೆ ಈ ಕಾಯಿಲೆಯನ್ನು ಅವನು ನಿಮಗೆ ಕೊಟ್ಟದ್ದೇ ತಪ್ಪು."

"ಹೌದು ಗುಲಾಬಿ, ಅದು ನನ್ನ, ನಿನ್ನ ಲೆಕ್ಕಾಚಾರ. ಅವನ ಲೆಕ್ಕಾ ಚಾರ ಎಂಥಾದ್ದೋ, ಯಾರಿಗೆ ಗೊತ್ತು? ನನ್ನ ಕರ್ಮಫಲವೂ ಒಂದಿದೆಯಲ್ಲ, ಪೂರ್ವ ಜನ್ಮದ್ದು. ಹಿಂದಣ ಜನ್ಮದಲ್ಲಿ ನಾನೇನಾದರೂ ಮಾಡಿರಬಹುದು. ಅದಕ್ಕಾಗಿ ಈ ಕಾಯಿಲೆ ಕೊಟ್ಟಿದ್ದಾನೆ. ಹೆಚ್ಚು ನರಳದೆ ನಾನು ಸಾಯು ವಂತಾದರೆ ಸಾಕು."

ಸಾವಿನ ಸುದ್ದಿಯು ಬರುತ್ತಲೆ ಗುಲಾಬಿ ಸ್ವಾಭಾವಿಕವಾಗಿ ಅಂಥ ವಿಚಾರಗಳನ್ನು ಅವಳ ಮನಸ್ಸಿನಿಂದ ಕಿತ್ತೊಗೆಯುವುದಕ್ಕೆ ಪ್ರಯತ್ನಿಸು ತ್ತಾಳೆ. "ದೇವರು ಹಾಗೇನೂ ಮಾಡಲಾರನು. ನಿಮಗೆ ಗುಣವಾಗುತ್ತದೆ" ಎಂದು ಈಗಲೂ ಭರವಸೆ ಹೇಳಿದಳು.

"ಗುಲಾಬಿ, ನೀನು ಸುಮ್ಮನೆ ನನಗೆ ಆಸೆ ಹುಟ್ಟಿಸಬೇಕಾಗಿಲ್ಲ. ಸಾಯುವುದು ಸಾಯುವುದೇ; ಇವತ್ತಲ್ಲ, ನಾಳೆ. ನನಗದರಲ್ಲಿ ಬೇಸರವೂ ಇಲ್ಲ. ಕೆಲವು ಸಮಯ ಅಂಥ ಹೆದರಿಕೆ ನನಗಿತ್ತು ನಿಜ. ಈಗ ಇಲ್ಲ. ಈ ಕೆಲಸಕ್ಕೆ ಬಾರದ ಶರೀರ ತೆಗೆದುಕೊಂಡು ಬದುಕಿದರೆ ನನಗೇನು ಸುಖ? ಯಾರಿಗೇನು ಉಪಯೋಗ? ಅದೊಂದು ಹೊರೆ ಅಲ್ಲವೆ?" ಎಂದಳು.

ಒಂದು ವಾರ ಕಾಲ ಸರಿಯಿತು. ಇಂದುಮತಿಯ ಮೈಯ್ಯ ಜ್ವರ ತುಸು ವಾಗಿ ಇನ್ನೊಮ್ಮೆ ಏರುತ್ತ ಬಂದಿತು. ಶಿವಪ್ಪನವರು ಅವಳ ಕೈಯನ್ನು ಹಿಡಿದು ನೋಡಿದರು, ಥರ್ಮಾಮಿಟರ್ ಇಟ್ಟು ನೋಡಿದರು. "ಜ್ವರ ಸ್ವಲ್ಪ ಹೆಚ್ಚೇ ಕಾಣುತ್ತದಲ್ಲ!" ಎಂದು ವಿಸ್ಮಿತರಾದರು.

"ಜ್ವರ ಏರಲಿ. ಏರದೆ ಅದೆಲ್ಲಿಗೆ ಹೋಗಬೇಕು? ನೋಡಿ, ಮಕ್ಕಳು ಶಾಲೆಗೆ ಹೋಗದೆ ಇವತ್ತು."

"ಯಾಕೆ ಇಂದು? ಮನೆಯಲ್ಲಿದ್ದರೆ ತುಂಬ ಗದ್ದಲ ಮಾಡುತ್ತವೆ. ನಿನ್ನ ನಿದ್ರೆಗೂ ಕರಕರೆ."

"ಆ ಕರಕರೆಯನ್ನೇ ಕೇಳುವ ಆಸೆಯಾಗಿದೆ. ನನಗೋಸ್ಕರ ನೀವು, ಮಕ್ಕಳು, ಬಾಯಿಮುಚ್ಚಿ ಅಡಗಿ ಕುಳಿತು ಮಾತನಾಡಬೇಕೆ? ನನ್ನ ನಾಟಕ

ಇಂದೋ, ನಾಳೆಯೋ . . ದೇವರು ಮಾಡಿದ ಆಟ ಕಣ್ತುಂಬ ನೋಡಿ ಹೋಗುತ್ತೇನೆ. ತಾಯಿಯಾಗಿ ಹುಟ್ಟಿದ ನನಗೆ ಆ ಭಾಗ್ಯವಾದರೂ ಬೇಡವೆ?" ಎಂದಳು. ಅವಳ ಎರಡೂ ಕಣ್ಣುಗಳಿಂದ ಕಂಬನಿ ಸುರಿಯ ತೊಡಗಿತು. ಶಿವಪ್ಪನವರು 'ಆಗಲಿ' ಎಂದು ನುಡಿದರು. ಅನಂತರ ಮಕ್ಕಳನ್ನು ಕರೆದು "ಅಮ್ಮ ಹೇಳುತ್ತಾಳೆ, ಇವತ್ತು ಶಾಲೆಗೆ ಹೋಗುವುದುಬೇಡ. ಇಲ್ಲಿಯೇ ಆಡುತ್ತಾ ಇರಬೇಕಂತೆ, ಕಣ್ಮುಂದೆ. ತುಂಬ ಕರಕರಿಮಾಡಬೇಡಿ, ಜಗಳ ಮಾಡಬೇಡಿ. ಚಂದವಾಗಿ ಆಡಿ." ಎಂದರು.

ಹಿರಿಯ ರತ್ನಾಕರನಿಗೆ ಆ ಮಾತುಗಳು ವಿಚಿತ್ರವಾಗಿ ಕೇಳಿಸಿದುವು. ಬಂದ ಮಕ್ಕಳನ್ನು ಕರೆದು "ರತ್ನಾ, ಅಮ್ಮನ ಹತ್ತಿರವೇ ಕೂತಿರಿ. ಅಲ್ಲಿಯೇ ಆಡಿ ಕೊಂಡಿರಿ." ಎಂದು ಇನ್ನೊಮ್ಮೆ ಹೇಳಿ ಅವರು ದವಾಖಾನೆಗೆ ಹೊರಟು ಹೋದರು.

ಮಧ್ಯಾಹ್ನ ಬರುವಾಗ ಮಕ್ಕಳು ಒಳ ಕೋಣೆಯಲ್ಲಿ ಆಡುತ್ತಿದ್ದರು. ಇಂದುಮತಿಯು ಕುತೂಹಲದ ಕಣ್ಣುಗಳಿಂದ ಆ ಮಕ್ಕಳ ಆಟಗಳನ್ನೆಲ್ಲ ನೋಡುತ್ತ "ಇದಕ್ಕಿಂತ ಹೆಚ್ಚಿನ ಸಂತೋಷ ಇನ್ನೇನು ಬೇಕು?" ಎಂಬ ತೃಪ್ತಿಯಿಂದ ಮಲಗಿದ್ದಂತೆ ಕಂಡಿತು. ಡಾಕ್ಟರರು ನೋಡಿಕೊಂಡು ಹೊರಗೆ ಬಂದರು. ತಿರುಗಿ ದವಾಖಾನೆಯ ಕೆಲಸಕ್ಕೆ ಹೊರಟು ಹೋದರು. ಅಲ್ಲಿಗೆ ಗಂಪು ಬಂದಿದ್ದ. "ಡಾಕ್ಟರರೆ, ಕಾರವಾರಕ್ಕೆ ಹೋಗಿ ಬರಬೇಕಿತ್ತು; ಹೋಗಿ ಬರುತ್ತೇನೆ" ಎಂದ.

"ಪ್ರಯಾಣ ಮುಂದುವರಿಸಲು ಬರಲಿಕ್ಕಿಲ್ಲವೆ?"

"ಏನು ಸಂಗತಿ? ಬೇಡವಾದರೆ ಬೇಡ. ನಾಳೆ ಹೊಗುತ್ತೇನೆ."

ಅದಕ್ಕೆ ಶಿವಪ್ಪನವರು, ಇಂದುಮತಿ ಆ ದಿನ ಬೆಳಗ್ಗೆ ತಮ್ಮೊಡನೆ ಆಡಿದ ಮಾತುಗಳನ್ನು ನೆನೆದು, ಅದೇನೋ ಪೂರ್ವ ಸೂಚನೆ ಎಂಬ ಭಯದಿಂ ಗಂಪುವಿಗೂ ಆ ಸಂಗತಿಯನ್ನು ತಿಳಿಸಿದರು. ತಾವು ಉದಾಸೀನಚಿತ್ತರಾಗಿ ಆಸ್ಪತ್ರೆಯ ಕೆಲಸ ಸಾಗಿಸಿದರು. ಗುಲಾಬಿ ಇಂದುಮತಿಯ ಬಳಿಯಲ್ಲಿ ಕಾವಲು ಕುಳಿತಿದ್ದಳು. ಇಂದುವಿಗೆ ನಿದ್ರೆ ತೂಕಡಿಸುವಂತೆ ಕಂಡಿತು. ಅವಳಾಗಿ 'ಗುಲಾಬಿ, ನಿದ್ದೆ ಬರುವ ಹಾಗಿದೆ. ಅವರು ಇದ್ದಾರೆಯೆ?" ಎಂದು ಕೇಳಿದಳು.

"ಇಲ್ಲ, ಕರೆಯುತ್ತೇನೆ" ಎಂದು ಗುಲಾಬಿ ಅವರನ್ನು ಕರೆಯುವುದಕ್ಕೆ ಹೋದಳು. ಅಷ್ಟರಲ್ಲಿ ಇಂದುಮತಿ ತನ್ನ ಒಂದೊಂದು ಮಗುವನ್ನೂ ಕರೆದು

ಮುದ್ದಿಸಿ "ಇನ್ನು ಆಚೆ ಕೋಣೆಯಲ್ಲಿ ಆಡಿ. ನಿದ್ದೆ ಬರುತ್ತದೆ, ಮಲಗುತ್ತೇನೆ; ಮತ್ತೆ ಕರೆಯುತ್ತೇನೆ" ಎಂದು ಮಕ್ಕಳನ್ನು ಕಳುಹಿಸಿ ಕೊಟ್ಟಾಗಲಷ್ಟೆ ಗಂಪು, ಶಿವಪ್ಪನವರು ಇಬ್ಬರೂ ಬಂದರು. ಶಿವಪ್ಪನವರು "ಏನು ಇಂದೂ" ಎಂದು ಕೇಳಿದರು. "ಬನ್ನಿ ಸಮೀಪ" ಎಂದಳು ಆಕೆ.

ಶಿವಪ್ಪನವರು ಮಂಚದ ಮೇಲೆ ಕುಳಿತು, ಅವಳ ಕೈಯನ್ನು ಹಿಡಿದು ತಲೆತಗ್ಗಿಸಿ ಹಣೆಯನ್ನೊಮ್ಮೆ ಮುದ್ದಿಸಿದರು.

"ನನಗೆ ಇನ್ನೇನೂ ಆಸೆಯಿಲ್ಲ. ನನ್ನ ಋಣವನ್ನೆಲ್ಲ ತೀರಿಸಿದ್ದೀರಿ. ಹಾಗೆಯೆ ಲೋಕದ ಋಣವನ್ನು ತೀರಿಸುತ್ತಿರಿ."

ಒಂದು ಗಳಿಗೆಕಾಲ ಶಿವಪ್ಪನವರು ಮಾತಿಲ್ಲದೆ ನಡುಗಿದರು. ಅಲ್ಲಿಯೆ ಇಂದುವಿನ ಮಗ್ಗುಲ ಬಳಿಯಲ್ಲಿ ಕುಳಿತು ಅಳತೊಡಗಿದರು. ಕಂಬಕ್ಕೆ ಒರಗಿ ನಿಂತಿದ್ದ ಗಂಪು ಮೂಕನಾಗಿದ್ದ. ಗುಲಾಬಿ ಚಕಿತಳಾಗಿದ್ದಳು. ಗುಲಾಬಿಯನ್ನು ಕರೆದು 'ಮಕ್ಕಳು ಹೊರಗೆ ಗದ್ದಲಮಾಡದೆ ಇರಲಿ' ಎಂದರು. ನಿದ್ರೆಯಲ್ಲಿರುವ ಇಂದುವಿನ ನಾಡಿಯನ್ನು ಹಿಡಿದರು. ವ್ಯತ್ಯಾಸವಿಲ್ಲದೆಯೇ ಅದು ಬಡಿಯುತ್ತಲಿತ್ತು. 'ಏನೂ ಆಗುವಂತಿಲ್ಲ. ಅಂಥ ಅಪಾಯ ಕಾಣುವುದಿಲ್ಲ' ಎಂದು ನಾಡಿಯ ಬಡಿತ ಹೇಳುತಿತ್ತು. ಅವಳ ಮಾತೊಂದಲ್ಲದಿದ್ದರೆ ಅಪಾಯದ ಪೂರ್ವ ಸೂಚನೆ ಬೇರೆ ಯಾವುದೂ ಇಲ್ಲ. ಹಾಗೆಯೆ ಎದ್ದುನಿಂತರು. ನಿಂತಿದ್ದ ಗಂಪು "ಜೋರಿದೆಯೇ ಜ್ವರ; ನಾಡಿ ಹೇಗಿದೆ?" ಎಂದು ಕೇಳಿದ.

"ಜ್ವರ ಸ್ವಲ್ಪ ಹೆಚ್ಚಿಗಿದೆ. ನಾಡಿಯ ಬಡಿತ ಸಾಮಾನ್ಯವಾಗಿದೆ, ಕ್ಷೀಣವಾಗಿಲ್ಲ. ಆದರೆ ಅವಳೇ ಮನಸ್ಸಿನಲ್ಲಿ ಏನೋ ನಿರ್ಣಯಿಸಿಕೊಂಡ ಹಾಗೆ ಇದೆ." ಇಬ್ಬರೂ ಅವಳ ಮುಖವನ್ನೇ ನೋಡುತ್ತ ನಿಂತಾಗ ಇಂದುಮತಿಯ ಉಸಿರು ನಿಡಿದಾಗುತ್ತ ಬರುವುದು ಕಂಡಿತು. ಇನ್ನೊಮ್ಮೆ ನಾಡಿ ಹಿಡಿದರು.

ಅಷ್ಟರಲ್ಲಿ ಹೊರಗಿಂದ ಕಂಪೌಂಡರ್ ಬಂದು 'ಡಾಕ್ಟರರೆ' ಎಂದ.

"ಯಾರು?"

"ನಾನು"

"ಬಾ"

"ಅಲ್ಲ, ಯಾವುದೋ ಒಬ್ಬ ಹುಡುಗನನ್ನು ಹೊತ್ತುಕೊಂಡು ತಂದಿದ್ದಾರೆ ದೂರದಿಂದ. ಮರಹತ್ತಿ ಬಿದ್ದನಂತೆ. ಗೆಲ್ಲೊ, ಕೊಂಬೆಯೊ, ಕತ್ತಿಯೋ ತಾಗಿ ರಕ್ತಸುರಿಯುತ್ತಿದೆ. ಕೊಲೆಪ್ಸಿಂಗ್ ಸ್ಟೇಜ್ ಎಂದು ಕಾಣು

ತ್ತದೆ. ಸರಕಾರಿ ಆಸ್ಪತ್ರೆಗೆ ಕಳುಹಿಸಲೆ?"

"ನಾನ್‌ಸೆನ್ಸ್" ಎಂದು ನುಡಿದು, ಚಕಿತರಾಗಿ ಧಾವಿಸಿದರು. ದಾರಿಯಲ್ಲಿ ಸಿಕ್ಕಿದ ಗುಲಾಬಿಯನ್ನು ಕರೆದು "ನೀನು ಬರಬೇಕಿಲ್ಲ. ಇಂದುವಿನ ಹತ್ತಿರ ಇರು" ಎಂದು ಹೇಳಿ ನಡೆದರು.

ಶಿವಪ್ಪನವರು ಆ ಹುಡುಗನನ್ನು ಪರಿಶೀಲಿಸಿದರು. ಬಂದವರ ಗಾಬರಿ ಕೂಗುಗಳನ್ನು ಬಣ್ಣಿಸಬೇಕಾಗಿಲ್ಲ. ಹುಡುಗನಿಗೆ ಸ್ಮೃತಿ ಹೋಗಿತ್ತು. ಕೈಯೆಲುಬು ತುಂಡಾಗಿರಲೂ ಬಹುದು. ಕಾಲಿನ ಮುಗ್ಗುಲ ರಕ್ತನಾಳವೊಂದು ಕತ್ತರಿಸಿ ತುಂಬ ರಕ್ತಸ್ರಾವವಾಗಿತ್ತು. ಗಾಯವನ್ನು ಹೊಲಿದರು. ಅತಿಸ್ರಾವದಿಂದ ಕಂಗಾಲಾದ ಹುಡುಗನಿಗೆ ಸೆಲಾಯಿನ್ ಪಾನಕವನ್ನು ಚುಚ್ಚಿ ತುಂಬಿಸಿದರು. ಗ್ಲುಕೋಸ್ ಕೊಟ್ಟರು. ಅನಂತರ ಕಂಪೌಂಡರನನ್ನು ಕರೆದು ರಕ್ತ ತೊಳೆಯುವುದಕ್ಕೆ ಹೇಳಿದರು. ಅವನನ್ನು ಮಂಚದಲ್ಲಿ ಮಲಗಿಸುವುದಕ್ಕೆ ಹೇಳಿ "ಕೈಯ್ಯ ಫ್ರೆಕ್ಚರನ್ನು ಈಗ ಬಂದು ನೋಡುತ್ತೇನಪ್ಪ; ಒಂದು ಹತ್ತು ನಿಮಿಷ ಕಾದಿರು" ಎಂದು, ಆ ಹುಡುಗನ ಬಂಧುಗಳಿಗೆ ಸಮಾಧಾನ ಹೇಳಿ, ಇಂದುವಿನ ಬಳಿಗೆ ಧಾವಿಸಿದರು.

ತಮ್ಮ ಮಡದಿಯ ಮಂಚವನ್ನು ಸಮೀಪಿಸಿದರು. ಇಂದುಮತಿಯ ಅಂತಿಮ ಯಾತ್ರೆ ನಡೆದಿತ್ತು. ಶಿವಪ್ಪನವರು ಧಾವಿಸಿಹೋಗಿ ಅವಳ ತೋಳುಗಳನ್ನು ಹಿಡಿದು, ಹಣೆಯನ್ನು ಮುದ್ದಿಸುವಾಗ ಅದರ ಕಾವು ಆರಿರಲಿಲ್ಲ.

— — — — — -